# ಶೈವಾನುಭವ.

## ಸಂಪುಟ-2



1927.

# ಶಿವಾನುಭವ

( ತ್ರೈಮಾಸಿಕವು. )




ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ.

ಬಿ.ಎ. ಎಲ್ ಎಲ್.ಬಿ.



ವಿಜಾಪುರ.

೫ ನೇ ಸಂಚಿಕೆ

ಮಾರ್ಚ. ೧೯೨೭

# ವಿಷಯಾನುಕ್ರಮಣಿಕೆ.


| ವಿಷಯಗಳು. | ಲೇಖಕರ ಹೆಸರುಗಳು. | ಪುಟ. |
|---|---|---|
| ೧. ಶಿವಾನುಭವದ ಸತ್ಯಮಾರ್ಗ | ಶ್ರೀ ಸಂಗನಬಸವಸ್ವಾಮಿಗಳು ಮು॥ ಬಂಥನಾಳ ತಾ॥ ಇಂಡಿ ಜಿ॥ ವಿಜಾಪುರ | ೧-೧೪ |
| ೨. ಅಲ್ಲಹುದು ಎಲ್ಲ ನಾನೇ | ಶ್ರೀ ಸಚ್ಚಿದಾನಂದ ಅನ್ನದಾನಿ ಸ್ವಾಮಿಗಳು ಮು॥ ಆಂಬೂರ ಜಿ॥ ನಾರ್ಥಅರ್ಕಾಟ | ೧೫-೨೬ |
| ೩. ವೀರಶೈವಧರ್ಮವೂ ಆಂಧ್ರ ವಾಙ್ಮಯವೂ | (ಶಿವಸುತ) | ೨೪-೩ |
| ೪. ಶೈವ ಧರ್ಮಗಳು | ಶ್ರೀ ಎಸ್. ಸಿ. ನಂದೀಮಠ ಎಮ್. ಎ. ಕನ್ನಡ ಪ್ರೊಫೆಸರ ರಾಜಾರಾಮ ಕಾಲೇಜ ಕೊಲ್ಲಾಪುರ | ೩೬-೪ |
| ೫. ಶ್ರೀಕರ ಭಾಷ್ಯ | ಸಂಪಾದಕ | ೪೬-೫ |
| ೬. ಆತ್ಮಲಿಂಗ ಪೂಜೆ | ರಾ॥ ಗಂಗಾಧರಪ್ಪ ಸಾಬೋಜಿ ಬೆಳಗಾವ | ೫೬-೬ |
| ೭. ಬಸವೇಶ್ವರನ ಜನ್ಮಕಾಲ | ರಾ॥ ವೀರಪ್ಪ ಚನಬಸಪ್ಪ ಯುಗಟಿ ಬಿ.ಎ. ಹೊಸರಿತ್ತಿ | ೬೧-೬ |
| ೮. ಬಿಳಗಿ ರಾಜ್ಯಚರಿತ್ರೆ | ಶ್ರೀ. ಬಿ. ಶಿವಮೂರ್ತಿ ಶಾಸ್ತ್ರಿ ಹುಲಕುಂಟೇ ಮಠ ತುಮಕೂರ | ೬೬-೭ |
| ೯. ಬಿಳಗಿ ಸಂಸ್ಥಾನ (ಕವಿತೆ) | ,, | ೭೮-೭ |
| ೧೦. ಅಗಸ್ತ್ಯ ಮತ್ತು ರೇಣುಕ | ರಾ॥ ಸಾ॥ ಫ. ಗು. ಹಳಕಟ್ಟಿ ವಿಜಾಪುರ | ೭೯-೯ |
| ೧೧. ರೇಣುಕ ಸ್ತೋತ್ರ (ಕವಿತೆ) | ಶ್ರೀ. ಬಿ. ಶಿವಮೂರ್ತಿ ಶಾಸ್ತ್ರಿ ಹುಲಕುಂಟೇ ಮಠ ತುಮಕೂರ | ೯೫-೯ |
| ೧೨. ಸ್ಫುಟ ವಿಷಯಗಳು. | | ೯೬-೧೦ |
| ೧೩. ಸಂಗನ ಬಸವೇಶ್ವರನ ವಚನ (ಅಪೂರ್ಣ) | | ೧೦೯- |
| ೧೪. ಏಕೋತ್ತರ ಶತಸ್ಥಲ (ಅಪೂರ್ಣ) | | ೯-೧ |


## ಶಿವಾನುಭವದ ವರ್ಗಣೀ ದರ.

**ಪೋಷಕರು.** ೧೦ ರೂ. ೮ ಆ. **ಆಶ್ರಯದಾತರು.** ೫ ರೂ. ೮ ಆ. **ವರ್ಗಣೀದಾರರು.** ೩ ರೂ. ೮ ಆ. **ಬಿಡಿಸಂಚಿಕೆಗೆ.** ೧ ರೂ. ೪ ಆ. ವ್ಹಿ. ಪಿ. ಚಾರ್ಜ ಬೇರೆ.

**ವಿಜಾಪುರ.** **ಮ್ಯಾನೇಜರ ಶಿವಾನುಭವ.**


ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತ ತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪ ಬುರಜದ ಹತ್ತರ ತಮ್ಮ ೧೬೨೦ (ಅ) ನೇ ಮನೆಯಲ್ಲಿ ಪ್ರಕಟಿಸಿದರು.



ಕೈ. ವಾ. ಧರ್ಮವೀರ ಶಂಕರಣ್ಣ

ಯಾದಗಿರಿ.

( ಪುಟ ೧೦೩ ನೋಡಬೇಕು.)

# ಶಿವಾನುಭವ.

ಸಂಪುಟ. ೨ ಮಾರ್ಚ ೧೯೨೭ ಸಂಚಿಕೆ. ೫

## ಶಿವಾನುಭವದ ಸತ್ಯ ಮಾರ್ಗ.

ಲೇಖಕಃ—ಶ್ರೀ ಸಂಗನಬಸವ ಸ್ವಾಮಿಗಳು ಸಾ॥ ಬಂಥನಾಳ ತಾ॥ ಇಂಡಿ ಜಿ॥ ವಿಜಾಪುರ.



**ಹುತ್ತು ಬಡಿದೊಡೆ ಹಾವು ಸಾಯು ಬಹುದೇನಯ್ಯ, ಅಘೋರತಪವ ಮಾಡಿದಡೇನು, ಅಂತರಂಗದ ಆತ್ಮ ಶುದ್ಧಿಯಿಲ್ಲದವರನೆಂತು ನಂಬುವನಯ್ಯ ಕೂಡಲ ಸಂಗಮ ದೇವ? ( ಶ್ರೀಮದ್ಬಸವೇಶ.)**

ಸನಾತನವಾದ ವೈದಿಕ ಧರ್ಮಾನುಸಾರವಾಗಿ ಪ್ರತಿ ಒಬ್ಬನಿಗೆ ಆತ್ಮ ಸಾಕ್ಷಾತ್ಕಾರವಾಗಬೇಕಾದರೆ, ಅಥವಾ ನಮ್ಮ ವೀರಶೈವ ಮತಾನುಸಾರವಾಗಿ ಶಿವಾನುಭವವು ಪ್ರಾಪ್ತವಾಗಬೇಕಾದರೆ, ಅರ್ಥಾತ್ ಈ ಜೀವನು ಶಿವನಾಗಬೇಕಾದರೆ, ಕೇವಲ ಬಾಹ್ಯಾಚಾರಗಳೇ ಸಾಕಾಗದೆ ಅವುಗಳ ಜೊತೆಗೆ ಅಂತರಂಗದ ಶುದ್ಧತೆಯೂ ಅಗತ್ಯವಿರುತ್ತದೆಂದು ಕಂಡು ಬರುತ್ತದೆ. ಒಬ್ಬನು ತ್ರಿಕಾಲ ಷೋಡಶೋಪಚಾರಗಳಿಂದ ದೇವತಾರ್ಚನೆ ಮಾಡಬಹುದು. ಒಬ್ಬನು ಸದಾ ಭಸ್ಮ ರುದ್ರಾಕ್ಷಾದ್ಯಷ್ಟಾವರಣಾನ್ವಿತನಿರಬಹುದು. ಮತ್ತೊಬ್ಬನು ಸದಾ ಜಪಮಾಲಾ ಹಿಡಿದಿರಬಹುದು. ಪರಂತು ಸರ್ವ ಕರ್ಮಗಳಿಗೆ ಆಧಾರಭೂತವಾದಂಥ ಹೃದಯ ಪವಿತ್ರತೆಯೊಂದಿರದಿದ್ದರೆ ಮಾತ್ರ ಆತನಿಗೆ ಶಿವಾನುಭವ ಸುಖವು ಎಂದಿಗೂ ದೊರೆಯದು. ನಮ್ಮ ಪ್ರಾಚೀನ ಮಹರ್ಷಿಗಳು ಮಹಾನುಭಾವರಾದ ಪ್ರಮಥರು ಅಂತರಂಗ ಪರಿಶುದ್ಧರೂ ಭಾವನಾ ಪ್ರಾಧಾನ್ಯರೂ ಇದ್ದದರಿಂದಲೇ ಚಿದ್ಘನ ಮೂರ್ತಿಯು ಅವರ ಶುದ್ಧ ಹೃದಯದಲ್ಲಿ ವಿರಾಜಿಸಿ

ದನು. ಜಗತ್ತಿನೊಳಗಿನ ಯಾವ ಧರ್ಮ ಗ್ರಂಥಾವಲೋಕನ ಮಾಡಿದರೂ ಭಾವನಾ ರಹಿತವಾದ ಕರ್ಮಗಳಿಗೆ ಬೆಲೆಯೇ ಇರುವದಿಲ್ಲವೆಂದು ಸ್ಪಷ್ಟವಾಗಿ ಕಾಣುತ್ತದೆ. ಸೊನ್ನೆಗೆ ಹಿಂದೆ ಅಂಕಿಯೇ ಇರದಿದ್ದರೆ ಹ್ಯಾಗೆ ಅದಕ್ಕೆ ಎಣಿಕೆಯೇ ಆಗುವದಿಲ್ಲವೋ ಹಾಗೆಯೇ ಕರ್ಮಗಳಿಗೆ ಅಂತಃಕರಣದ ಅರ್ಥಾತ್ ಭಾವನೆಯ ಆಶ್ರಯವಿದ್ದ ಹೊರ್ತು ಬೆಲೆಯೇ ಇರುವದಿಲ್ಲ. ಪ್ರಯುಕ್ತ ನಾವು ಶಿವಾನು ಭಾವಿಗಳಾಗಬೇಕಾದರೆ ಕೇವಲ ಬಹಿರಂಗಾಚರಣೆಗಳೇ ಸಾಕಾಗದೆ, ಅವುಗಳ ಜೊತೆಗೆ ಅಥವಾ ಅವುಗಳ ಸಾರ್ಥಕತೆಗೆ ಅಂತರಂಗದ ಪಾವಿತ್ರತೆಯೂ ಅಗತ್ಯವೆಂಬುದು ನಿರ್ವಿವಾದ ಸಂಗತಿಯು.

ಲಕ್ಷಾಂತರ ಜೀವ ಕೋಟಿಯೊಳಗೆ ಮಿಗಿಲೆಂದೆನಿಸುವ ಈ ಮನುಷ್ಯನು ಉದ್ಧಾರ ವಾಗಬೇಕಾದರೆ ಮಿಕ್ಕಾದ ಪ್ರಾಣಿಗಳಂತೆ ವಿಷಯಲೋಲುಪ್ತನಾಗದೆ ಧರ್ಮಾವಲಂಬಿಯಾದ ಹೊರ್ತು ಗತ್ಯಂತರವಿಲ್ಲ. ಯಾಕಂದರೆ ನೈಜವಾದ ಶಾಂತಿಯು ವಿಷಯಗಳಲ್ಲಿರದೆ ಧರ್ಮದಲ್ಲಿಯೇ ಅಡಕವಾಗಿರುವದು. ನಾವು ಈ ಜಗತ್ತಿನ ಕಡೆಗೆ ಲಕ್ಷ ಪೂರ್ವಕ ನೋಡಿದರೆ ಅರಸು ಮೊದಲು ಮಾಡಿಕೊಂಡು ಒಬ್ಬ ಆಳಿನವರೆಗೂ ಪ್ರತಿ ಒಬ್ಬನು ಸುಖೇಚ್ಛೆಯುಳ್ಳವನಿದ್ದರೂ, ದುಃಖ ಸ್ಥಿತಿಯೊಳಗೆ ಇದ್ದದ್ದೇ ಕಂಡು ಬರುತ್ತದೆ. ಇಂದ್ರಿಯಜನ್ಯ ಸುಖವು ಸತ್ಯ ಸುಖವಾಗದೆ ಸುಖದಾಭಾಸಮಾತ್ರವಾಗಿರುವದು. ನಿಜವಾದ ಶಾಂತಿಯು ಇಂದ್ರಿಯಾತೀತವಾಗಿರುವದು. ಅಂತೆಯೇ "ಸುಖಮಾತ್ಯಂತಿಕಂ ಯತತ್ ಬುದ್ಧಿಗ್ರಾಹ್ಯಮತೀಂದ್ರಿಯಂ" ಎಂಬದಾಗಿ ಭಗವದ್ಗೀತೆಯಲ್ಲಿ ಹೇಳಿದೆ. ಸುಖದ ಕಲ್ಪನೆಯಿಂದ ವಿಷಯಗಳ ಬೆನ್ನು ಹತ್ತಿ ಅದು ದೊರೆಯುವ ಸಲುವಾಗಿ ಎಷ್ಟು ಶ್ರಮ ವಹಿಸಿದರೂ ಕಡೆಗೆ ನೋಡಲಾಗಿ ಸುಖವು ಎಲ್ಲಿಯೂ ಇರುವದಿಲ್ಲ. ಆ ಸುಖವು ನಮ್ಮ ಕೈಯ್ಯಲ್ಲಿರುವದೆಂದು ಗ್ರಹಿಸುವಷ್ಟರಲ್ಲಿಯೇ ಕೈಯೊಳಗಿಂದ ಹೊರಟು ಹೋಗಿರುತ್ತದೆ. ಇಂಥ ಅನೇಕ ಅನುಭವಗಳು ಒಂದರ ಹಿಂದೆ ಒಂದು ಬಂದು ಹೋಗುತ್ತಿದ್ದರೂ, ನಾವು ಬುದ್ಧಿವಂತರಾಗದೆ ಸುಖದ ಕಲ್ಪನೆಯ ಬೆನ್ನು ಹತ್ತುವದನ್ನು ಬಿಡದೆ, ಪುನಃ ಪುನಃ ಅದರ ಹಿಂದೆಯೇ ಓಡುತ್ತಿರುತ್ತೇವೆ. ಎತ್ತು ತೀವ್ರ ನಡೆಯಬೇಕೆಂಬ ಉದ್ದೇಶದಿಂದ ಒಬ್ಬ ಗಾಣಿಗನು ಒಂದು ಚಮತ್ಕಾರವಾದ ಯುಕ್ತಿಯನ್ನು ಯೋಚಿಸಿದನು. ಎತ್ತಿನ ಹೆಗಲ ಮೇಲೆ ಇರುವ ನೊಗಕ್ಕೆ ಒಂದು ಅಡ್ಡ ಕೋಲನ್ನು ಕಟ್ಟಿ ಅದರ ತುದಿಗೆ

ತುಸು ಹುಲ್ಲಿನ ಪೆಂಡಿಯನ್ನು ಕಟ್ಟಿದ್ದನು. ಆದ ಕಾರಣ ಆ ಹುಲ್ಲಿನ ಪೆಂಡಿಯು ಯಾವಾಗಲೂ ಆ ಎತ್ತಿನ ಕಣ್ಣು ಮುಂದೆಯೇ ಇರುತ್ತಿದ್ದಿತು. ನನಗೂ ಹುಲ್ಲಿಗೂ ಅಂತರ ಒಂದು ಮೊಳ ವಿರುವದರಿಂದ, ಆ ಅಂತರ ಕಡಿಮೆಯಾಗಿ ನನಗೆ ಹುಲ್ಲು ತಿನ್ನಲಿಕ್ಕೆ ಸಿಗುವದೆಂದು ಆ ಎತ್ತು ಭಾವಿಸಿ ಅತಿ ತೀವ್ರದಿಂದ ಓಡಲಿಕ್ಕೆ ಹತ್ತಿತು. ಪರಂತು ಎಷ್ಟು ತಾಸು ಓಡಿದರೂ, ಒಂದು ಮೊಳದ ಅಂತರವಲ್ಲಿ ಸ್ವಲ್ಪವೂ ಕಡಿಮೆಯಾಗಲಿಲ್ಲ. ಆ ಹುಲ್ಲು ಅದಕ್ಕೆ ದೊರೆಯಲಿಲ್ಲ ಮನುಷ್ಯರಾದ ನಮ್ಮಗಳ ಸ್ಥಿತಿಯೂ ಕೂಡಾ ಹಾಗೆಯೇ ಸರಿ. ಇಂದ್ರಿಯಜನ್ಯ ಸುಖದ ಗುಲಾಮರಾಗಿ ಎಷ್ಟೋ ಕಾಲ ಕನಕ ಕಾಮಿನಿ ಮೊದಲಾದ ವಿಷಯಗಳ ಬೆನ್ನು ಹತ್ತಿ ಓಡುತ್ತಿರುವೆವು. ಅನಂತ ಜನ್ಮಗಳನ್ನು ತಿರುಗಿದರೂ ಈ ಹೊತ್ತು ನಾವು ಪುನಃ ಮೊದಲಿನ ಸ್ಥಾನದಲ್ಲಿಯೇ ಇರುತ್ತೇವೆ. ಸುಖ ಮತ್ತು ನಾವು ಇವುಗಳ ನಡುವಿನ ಮೊಳದ ಅಂತರ ಈಗಲೂ ಕಡಿಮೆಯಾಗಿಲ್ಲ. ಪ್ರೇಮ ಪ್ರೇಮವೆಂದು ನಾವು ಭ್ರಮಿಷ್ಠರಾಗಿ ತಿರಗುತ್ತಿರುತ್ತೇವೆ. ಪ್ರೇಮ ಪ್ರೇಮವೆಂದು ನಾವು ಹೆಂಡರ ಮಕ್ಕಳ ಕುತ್ತಿಗೆಗೆ ಕತ್ತರಗೈ ಹಾಕಲು ಹೋಗುತ್ತೇವೆ. ಮತ್ತು ಪುನಃ ಅವರು ಪ್ರತಿಯಾಗಿ ಕುತ್ತಿಗೆಗೆ ಕೈ ಹಾಕಲಿಕ್ಕೆ ಹಾತೊರೆಯುತ್ತಾರೆ. ಒಬ್ಬರ ಬಲೆಯೊಳಗೆ ಒಬ್ಬರು ಸಿಲ್ಕಿ ಒದ್ದಾಡುವ ನಮ್ಮ ಈ ಸುಖದ ಕಲ್ಪನೆಯು ಅನಂತ ಕಾಲದಿಂದ ಬೆನ್ನು ಹತ್ತಿ ಬಂದಿರುತ್ತದೆ. ನಾವು ಸದಾ ಸುಖಿಯಾಗಿರಬೇಕು ಮತ್ತು ದುಃಖವು ನಮ್ಮ ಸುತ್ತ ಮುತ್ತಲು ಸಹ ಸುಳಿಯಬಾರದೆಂದು ಇಚ್ಛಿಸುತ್ತೇವೆ. ಈ ಇಚ್ಛೆಯಿಂದ ಪ್ರೇರಿತರಾಗಿ ಕುರುಡರಂತೆ ತಿರುಗಲಿಕ್ಕೆ ಹತ್ತಿರುತ್ತೇವೆ. ಮಧ್ಯದಲ್ಲಿ ಎಲ್ಲಿಯಾದರೂ ಸುಖದ ಭಾಸವಾಗಿ ಅದಕ್ಕೆ ಅಪ್ಪಿ ಕೊಳ್ಳಲಿಕ್ಕೆ ಹೋಗುವದಾಗುವದು. ಆದು ಮುಳ್ಳು ಗಿಡವಾಗಿ ಕೈಗೆ ನಡಲಿಕ್ಕೆ ಹತ್ತುವದು. ಅನಂತ ಕಾಲದಿಂದ ಈ ಜಗತ್ತು ಹೀಗೆಯೇ ನಡೆದಿರುವದು.

ಮುಮುಕ್ಷುಗಳೇ, ತಾವು ತಮ್ಮ ಇಲ್ಲಿಯವರೆಗಿನ ಆಯುಷ್ಯಕ್ರಮದ ವಿಚಾರ ಮಾಡಿದರೆ, ನಮಗೆ ನಿರಾಮಯ ಸುಖದ ಪ್ರಾಪ್ತಿಯು ಕ್ಷಣ ಸಹ ಎಂದೂ ಪ್ರಾಪ್ತವಾಗಿಲ್ಲವೆಂದು ನಿಶ್ಚಯವಾಗಿ ಕಂಡು ಬರುತ್ತದೆ. ಯಾವ ಸಂಗತಿಯು ನಮ್ಮ ಇಲ್ಲಿಯವರೆಗಿನ ಆಯುಷ್ಯದಲ್ಲಿ ಪ್ರಾಪ್ತವಾಗಿಲ್ಲವೋ, ಅದು ಉಳಿದ ಆಯುಷ್ಯದಲ್ಲಿ ಲಭ್ಯವಾಗುವದೆಂದು ಯಾರು ಎದೆತಟ್ಟಿ ಹೇಳುವರು? ಈ ಮೃಗಜಲದ ಬೆನ್ನುಹತ್ತಿ ಓಡಿ ಓಡಿ ನಮ್ಮ ನೀರಡಿಕೆಯು

ದನು. ಜಗತ್ತಿನೊಳಗಿನ ಯಾವ ಧರ್ಮ ಗ್ರಂಥಾವಲೋಕನ ಮಾಡಿದರೂ ಭಾವನಾ ರಹಿತವಾದ ಕರ್ಮಗಳಿಗೆ ಬೆಲೆಯೇ ಇರುವದಿಲ್ಲವೆಂದು ಸ್ಪಷ್ಟವಾಗಿ ಕಾಣುತ್ತದೆ. ಸುನ್ನೆಗೆ ಹಿಂದೆ ಅಂಕಿಯೇ ಇರದಿದ್ದರೆ ಹ್ಯಾಗೆ ಆದಕ್ಕೆ ಎಣಿಕೆಯೇ ಆಗುವದಿಲ್ಲವೋ ಹಾಗೆಯೇ ಕರ್ಮಗಳಿಗೆ ಅಂತಃಕರಣದ ಅರ್ಥಾತ್ ಭಾವನೆಯ ಆಶ್ರಯವಿದ್ದ ಹೊರ್ತು ಬೆಲೆಯೇ ಇರುವದಿಲ್ಲ. ಪ್ರಯುಕ್ತ ನಾವು ಶಿವಾನು ಭಾವಿಗಳಾಗಬೇಕಾದರೆ ಕೇವಲ ಬಹಿರಂಗಾಚರಣೆಗಳೇ ಸಾಕಾಗದೆ, ಅವುಗಳ ಜೊತೆಗೆ ಅಥವಾ ಅವುಗಳ ಸಾರ್ಥಕತೆಗೆ ಅಂತರಂಗದ ಪಾವಿತ್ರತೆಯೂ ಅಗತ್ಯವೆಂಬುದು ನಿರ್ವಿವಾದ ಸಂಗತಿಯು.

ಲಕ್ಷಾಂತರ ಜೀವ ಕೋಟಿಯೊಳಗೆ ಮಿಗಿಲೆಂದೆನಿಸುವ ಈ ಮನುಷ್ಯನು ಉದ್ಧಾರ ವಾಗಬೇಕಾದರೆ ಮಿಕ್ಕಾದ ಪ್ರಾಣಿಗಳಂತೆ ವಿಷಯಲೋಲುಪ್ತನಾಗದೆ ಧರ್ಮಾವಲಂಬಿಯಾದ ಹೊರ್ತು ಗತ್ಯಂತರವಿಲ್ಲ. ಯಾಕಂದರೆ ನೈಜವಾದ ಶಾಂತಿಯು ವಿಷಯುಗಳಲ್ಲಿರದೆ ಧರ್ಮದಲ್ಲಿಯೇ ಅಡಕವಾಗಿರುವದು. ನಾವು ಈ ಜಗತ್ತಿನ ಕಡೆಗೆ ಲಕ್ಷ್ಯಪೂರ್ವಕ ನೋಡಿದರೆ ಅರಸು ಮೊದಲು ಮಾಡಿಕೊಂಡು ಒಬ್ಬ ಆಳಿನವರೆಗೂ ಪ್ರತಿ ಒಬ್ಬನು ಸುಖೇಚ್ಛೆಯುಳ್ಳವನಿದ್ದರೂ, ದುಃಖ ಸ್ಥಿತಿಯೊಳಗೆ ಇದ್ದದ್ದೇ ಕಂಡು ಬರುತ್ತದೆ. ಇಂದ್ರಿಯಜನ್ಯ ಸುಖವು ಸತ್ಯ ಸುಖವಾಗದೆ ಸುಖದಾಭಾಸಮಾತ್ರವಾಗಿರುವದು. ನಿಜವಾದ ಶಾಂತಿಯು ಇಂದ್ರಿಯಾತೀತವಾಗಿರುವದು. ಅಂತೆಯೇ "ಸುಖಮಾತ್ಯಂತಿಕಂ ಯತತ್ ಬುದ್ಧಿಗ್ರಾಹ್ಯಮತೀಂದ್ರಿಯಂ" ಎಂಬದಾಗಿ ಭಗವದ್ಗೀತೆಯಲ್ಲಿ ಹೇಳಿದೆ. ಸುಖದ ಕಲ್ಪನೆಯಿಂದ ವಿಷಯಗಳ ಬೆನ್ನು ಹತ್ತಿ ಅದು ದೊರೆಯುವ ಸಲುವಾಗಿ ಎಷ್ಟು ಶ್ರಮ ವಹಿಸಿದರೂ ಕಡೆಗೆ ನೋಡಲಾಗಿ ಸುಖವು ಎಲ್ಲಿಯೂ ಇರುವದಿಲ್ಲ. ಆ ಸುಖವು ನಮ್ಮ ಕೈಯ್ಯಲ್ಲಿರುವದೆಂದು ಗ್ರಹಿಸುವಷ್ಟರಲ್ಲಿಯೇ ಕೈಯೊಳಗಿಂದ ಹೊರಟು ಹೋಗಿರುತ್ತದೆ. ಇಂಥ ಅನೇಕ ಅನುಭವಗಳು ಒಂದರ ಹಿಂದೆ ಒಂದು ಬಂದು ಹೋಗುತ್ತಿದ್ದರೂ, ನಾವು ಬುದ್ಧಿವಂತರಾಗದೆ ಸುಖದ ಕಲ್ಪನೆಯ ಬೆನ್ನು ಹತ್ತುವದನ್ನು ಬಿಡದೆ, ಪುನಃ ಪುನಃ ಅದರ ಹಿಂದೆಯೇ ಓಡುತ್ತಿರುತ್ತೇವೆ. ಎತ್ತು ತೀವ್ರ ನಡೆಯಬೇಕೆಂಬ ಉದ್ದೇಶದಿಂದ ಒಬ್ಬ ಗಾಣಿಗನು ಒಂದು ಚಮತ್ಕಾರವಾದ ಯುಕ್ತಿಯನ್ನು ಯೋಚಿಸಿದನು. ಎತ್ತಿನ ಹೆಗಲ ಮೇಲೆ ಇರುವ ನೊಗಕ್ಕೆ ಒಂದು ಅಡ್ಡ ಕೋಲನ್ನು ಕಟ್ಟಿ ಆದರ ತುದಿಗೆ

ತುಸು ಹುಲ್ಲಿನ ಪೆಂಡಿಯನ್ನು ಕಟ್ಟಿದ್ದನು. ಆದ ಕಾರಣ ಆ ಹುಲ್ಲಿನ ಪೆಂಡಿಯು ಯಾವಾಗಲೂ ಆ ಎತ್ತಿನ ಕಣ್ಣ ಮುಂದೆಯೇ ಇರುತ್ತಿದ್ದಿತು. ನನಗೂ ಹುಲ್ಲಿಗೂ ಅಂತರ ಒಂದು ಮೊಳ ವಿರುವದರಿಂದ, ಆ ಅಂತರ ಕಡಿಮೆಯಾಗಿ ನನಗೆ ಹುಲ್ಲು ತಿನ್ನಲಿಕ್ಕೆ ಸಿಗುವದೆಂದು ಆ ಎತ್ತು ಭಾವಿಸಿ ಅತಿ ತೀವ್ರದಿಂದ ಓಡಲಿಕ್ಕೆ ಹತ್ತಿತು. ಪರಂತು ಎಷ್ಟು ತಾಸು ಓಡಿದರೂ, ಒಂದು ಮೊಳದ ಅಂತರದಲ್ಲಿ ಸ್ವಲ್ಪವೂ ಕಡಿಮೆಯಾಗಲಿಲ್ಲ. ಆ ಹುಲ್ಲು ಅದಕ್ಕೆ ದೊರೆಯಲಿಲ್ಲ. ಮನುಷ್ಯರಾದ ನಮ್ಮಗಳ ಸ್ಥಿತಿಯೂ ಕೂಡಾ ಹಾಗೆಯೇ ಸರಿ. ಇಂದ್ರಿಯಜನ್ಯ ಸುಖದ ಗುಲಾಮರಾಗಿ ಎಷ್ಟೋ ಕಾಲ ಕನಕ ಕಾಮಿನಿ ಮೊದಲಾದ ವಿಷಯಗಳ ಬೆನ್ನು ಹತ್ತಿ ಓಡುತ್ತಿರುವೆವು. ಅನಂತ ಜನ್ಮಗಳನ್ನು ತಿರುಗಿದರೂ ಈ ಹೊತ್ತು ನಾವು ಪುನಃ ಮೊದಲಿನ ಸ್ಥಾನದಲ್ಲಿಯೇ ಇರುತ್ತೇವೆ. ಸುಖ ಮತ್ತು ನಾವು ಇವುಗಳ ನಡುವಿನ ಮೊಳದ ಅಂತರ ಈಗಲೂ ಕಡಿಮೆಯಾಗಿಲ್ಲ. ಪ್ರೇಮ ಪ್ರೇಮವೆಂದು ನಾವು ಭ್ರಮಿಷ್ಠರಾಗಿ ತಿರಗುತ್ತಿರುತ್ತೇವೆ. ಪ್ರೇಮ ಪ್ರೇಮವೆಂದು ನಾವು ಹೆಂಡರ ಮಕ್ಕಳ ಕುತ್ತಿಗೆಗೆ ಕತ್ತರಗ್ಯೆ ಹಾಕಲು ಹೋಗುತ್ತೇವೆ. ಮತ್ತು ಪುನಃ ಅವರು ಪ್ರತಿಯಾಗಿ ಕುತ್ತಿಗೆಗೆ ಕೈ ಹಾಕಲಿಕ್ಕೆ ಹಾತೊರೆಯುತ್ತಾರೆ. ಒಬ್ಬರ ಬಲೆಯೊಳಗೆ ಒಬ್ಬರು ಸಿಕ್ಕಿ ಒದ್ದಾಡುವ ನಮ್ಮ ಈ ಸುಖದ ಕಲ್ಪನೆಯು ಅನಂತ ಕಾಲದಿಂದ ಬೆನ್ನು ಹತ್ತಿ ಬಂದಿರುತ್ತದೆ. ನಾವು ಸದಾ ಸುಖಿಯಾಗಿರಬೇಕು ಮತ್ತು ದುಃಖವು ನಮ್ಮ ಸುತ್ತ ಮುತ್ತಲು ಸಹ ಸುಳಿಯಬಾರದೆಂದು ಇಚ್ಛಿಸುತ್ತೇವೆ. ಈ ಇಚ್ಛೆಯಿಂದ ಪ್ರೇರಿತರಾಗಿ ಕುರುಡರಂತೆ ತಿರುಗಲಿಕ್ಕೆ ಹತ್ತಿರುತ್ತೇವೆ. ಮಧ್ಯದಲ್ಲಿ ಎಲ್ಲಿಯಾದರೂ ಸುಖದ ಭಾಸವಾಗಿ ಅದಕ್ಕೆ ಅಪ್ಪಿ ಕೊಳ್ಳಲಿಕ್ಕೆ ಹೋಗುವದಾಗುವದು. ಅದು ಮುಳ್ಳು ಗಿಡವಾಗಿ ಕೈಗೆ ನಡಲಿಕ್ಕೆ ಹತ್ತುವದು. ಅನಂತ ಕಾಲದಿಂದ ಈ ಜಗತ್ತು ಹೀಗೆಯೇ ನಡೆದಿರುವದು.

ಮುಮುಕ್ಷುಗಳೇ, ತಾವು ತಮ್ಮ ಇಲ್ಲಿಯವರೆಗಿನ ಆಯುಷ್ಯಕ್ರಮದ ವಿಚಾರ ಮಾಡಿದರೆ, ನಮಗೆ ನಿರಾಮಯ ಸುಖದ ಪ್ರಾಪ್ತಿಯು ಕ್ಷಣ ಸಹ ಎಂದೂ ಪ್ರಾಪ್ತವಾಗಿಲ್ಲವೆಂದು ನಿಶ್ಚಯವಾಗಿ ಕಂಡು ಬರುತ್ತದೆ. ಯಾವ ಸಂಗತಿಯು ನಮ್ಮ ಇಲ್ಲಿಯವರೆಗಿನ ಆಯುಷ್ಯದಲ್ಲಿ ಪ್ರಾಪ್ತವಾಗಿಲ್ಲವೋ, ಅದು ಉಳಿದ ಆಯುಷ್ಯದಲ್ಲಿ ಲಭ್ಯವಾಗುವದೆಂದು ಯಾರು ಎದೆತಟ್ಟಿ ಹೇಳುವರು? ಈ ಮೃಗಜಲದ ಬೆನ್ನುಹತ್ತಿ ಓಡಿ ಓಡಿ ನಮ್ಮ ನೀರಡಿಕೆಯು

ಮಾತ್ರ ಅಧಿಕವಾಗುತ್ತದೆ. ಇಂದ್ರಿಯಜನ್ಯ ಸುಖದ ಬೆನ್ನು ಹತ್ತಿ ನಾವು ವಿಷಯಗಳ ದಾಸಾನುದಾಸರಾಗಿರುತ್ತೇವೆ. ನಮ್ಮ ಸ್ಥಿತಿಯು ಎಷ್ಟು ನಿರಾಶಾಜನಕವಿದ್ದರೂ, ಅದರಲ್ಲಿಯೇ ಆಶೆಯ ಸ್ಥಾನವನ್ನು ಹುಡುಕುತ್ತಿರುತ್ತೇವೆ. ಒಂದಿಲ್ಲ ಒಂದು ಕಾಲದಲ್ಲಿ ಸುಖ ಪ್ರಾಪ್ತಿಯಾಗುವದೆಂಬ ಆಶೆಯು ಅದ್ಯಾಪಿ ಬಿಟ್ಟುಕೊಟ್ಟಿರುವದಿಲ್ಲ. ಧರ್ಮ ಮೂರ್ತಿಯಾದ ಯುಧಿಷ್ಠಿರನು ವನವಾಸದಲ್ಲಿದ್ದಾಗ್ಗೆ ಶಾಪ ರೂಪದಲ್ಲಿದ್ದ ಯಕ್ಷನು, ರಾಜಾ, ಈ ಜಗತ್ತಿನಲ್ಲಿ ಚಮತ್ಕಾರ ಯಾವದೆಂದು ಕೇಳಿದ್ದಕ್ಕೆ ಧರ್ಮನು "ಅಹನ್ಯಾನಿ ಭೂತಾನಿ ಪ್ರವಿಶಂತಿ ಯಮಾಲಯಂ ॥ ಶೇಷಾಃಸ್ಥಾವರ ಮಿಚ್ಛಂತಿ ಕಿಮಾಶ್ಚರ್ಯಂ ಇತಃಪರಂ" ಎಂಬದಾಗಿ ಉತ್ತರ ಹೇಳಿದ್ದಾನೆ. ಅಂದರೆ ನಮ್ಮ ಸುತ್ತ ಮುತ್ತಲು ಅನಂತ ಪ್ರಕಾರದ ದುಃಖ ಪ್ರಸರಿಸಿದ್ದರೂ ನಾವು ಸುಖದ ಆಶೆಯನ್ನು ಮಾಡುತ್ತೇವೆ. ಮೃತ್ಯುವಿನ ಅವಿರತವಾದ ಸಾಮ್ರಾಜ್ಯವನ್ನು ನೋಡುತ್ತಿದ್ದರೂ ನಾವು ಚಿರಂಜೀವಿಗಳೆಂಬ ಅಪೇಕ್ಷೆ ಮಾಡುತ್ತೇವೆ. ಇದರ ಹೊರ್ತು ಈ ವಿಶ್ವದಲ್ಲಿ ಇನ್ನೊಂದು ಚಮತ್ಕಾರವೇ ಇಲ್ಲ. ಇದೇ ವಿಷಯವಾಗಿ ಶ್ರೀ ಜಗದ್ಗುರು ಪ್ರಭುದೇವರು ಸಹ "ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಿವಲ್ಲವಯ್ಯಾ. ಹೆಣ್ಣು ಮಾಯೆ ಯೆಂಬರು, ಹೆಣ್ಣು ಮಾಯೆಯುಲ್ಲವಯ್ಯಾ. ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲವಯ್ಯಾ. ಮನದ ಕೊನೆಯೊಳಗಿರುವ ಆಶೆಯೇ ಮಾಯೆ ಕಾಣಾ ಗುಹೇಶ್ವರಾ."

ಎಂದು ಆಶೆಯ ನಿಜಸ್ವರೂಪವನ್ನು ಹೇಳಿದ್ದಾರೆ. ನಮ್ಮ ಮೇಲೆ ಒಮ್ಮೆಲ್ಲ ಒಮ್ಮೆ ದುಃಖದ ಪ್ರಸಂಗ ಬಂದೀತು ಅಥವಾ ಎಂದಾದರೊಮ್ಮೆ ಮೃತ್ಯುವಿನ ಬಾಯಿಗೆ ತುತ್ತಾಗುವೆವು ಎಂಬ ತಿಳವಳಿಕೆಯು ಎಂದೂ ನಮ್ಮ ಮನಸ್ಸಿನಲ್ಲಿ ಬರುವದಿಲ್ಲ.

ಸದ್ಯ ಸ್ಥಿತಿಯಲ್ಲಿ ಸುಖಪ್ರಾಪ್ತಿಯ ಪ್ರಸಂಗವು ಯತ್ಕಿಂಚಿತ್ತಾದರೂ ಇಲ್ಲವೆಂದು ಪ್ರತ್ಯಕ್ಷ ಅನುಭವದಿಂದ ಸಿದ್ಧವಾದರೂ, ನಮಗೆ ಬೋಧವಾಗುವದಿಲ್ಲ. ನಮ್ಮ ಸುತ್ತಲು ನಿಜವಾದ ಸುಖ ಪುರುಷನು ಒಬ್ಬನೂ ಇಲ್ಲ. ಒಬ್ಬನು ಶ್ರೀಮಂತನಿದ್ದು ಉಣ್ಣಲಿಕ್ಕೂ ಉಡಲಿಕ್ಕೂ ಯಥೇಚ್ಛವಾಗಿ ಇದ್ದರೂ, ಆತನಿಗೆ ಬದ್ಧ ಕೋಷ್ಠತೆಯ ವಿಕಾರವಿರುತ್ತದೆ. ಒಂದಿಷ್ಟು ಉಣ್ಣುವ ಪದಾರ್ಥದ ಕಡೆಗೆ ದೃಷ್ಟಿ ಬಿದ್ದರೇನೇ ಆತನಿಗೆ ವಾಂತಿ ಯಾಗುವಂತೆ ಅಸಹ್ಯ ತೋರುತ್ತದೆ. ಒಬ್ಬನಿಗೆ ಹಸಿವೆಯು ಅತ್ಯಂತ ವಿದ್ದರೂ,

ಆತನಿಗೆ ತುತ್ತಿನಷ್ಟು ಸಹ ಅನ್ನ ದೊರೆಯುವದೂ ಕೂಡಾ ಅತಿ ಪ್ರಯಾಸ. ಒಬ್ಬ ಶ್ರೀಮಂತನು ಮಕ್ಕಳಿಲ್ಲವೆಂದು ದುಃಖ ಮಾಡುತ್ತಾನೆ. ಆದರೆ ಮತ್ತೊಬ್ಬ ದರಿದ್ರನಿಗೆ ಮಕ್ಕಳದೊಂದು ತಂಡವೇ ಇರುತ್ತದೆ. ಇಷ್ಟು ಮಕ್ಕಳಿಗೆ ತಿನ್ನಲಿಕ್ಕೆ ಏನು ಹಾಕಲಿ, ಎಂಬ ವಿಚಾರದಲ್ಲಿಯೇ ಆತನು ಮುಳುಗಿ ಹೋಗಿರುತ್ತಾನೆ. ಹೀಗೆ ಯಾಕೆ ಇರುತ್ತದೆಂದರೆ, ಸುಖ ಮತ್ತು ದುಃಖ ಇವು ಒಂದೇ ನಾಣ್ಯದ ಎರಡು ಮಗ್ಗಲುಗಳಂತೆ ಇರುತ್ತವೆ. ನಾಣ್ಯವು ಬೇಕಾದರೆ ಹೇಗೆ ರಾಜನ ಮುಖದೊಡನೆಯೇ ಎರಡನೇ ಮಗ್ಗಲಿನ ಮುದ್ರೆಯನ್ನು ತೆಗೆದು ಕೊಳ್ಳಲಿಕ್ಕೆ ಬೇಕಾಗುತ್ತದೆಯೋ, ಹಾಗೆಯೇ ಸುಖ ಪ್ರಾಪ್ತಿಯಾಗ ಬೇಕಾಗಿದ್ದರೆ ದುಃಖವನ್ನು ಅನುಭೋಗಿಸಲಿಕ್ಕೆ ಸಿದ್ಧವಿರಲೇ ಬೇಕು. ಆದರೆ ಈ ತಿಳವಳಿಕೆಯು ನಮಗೆ ಸರಿ ಬೀಳುವದಿಲ್ಲವಾದ್ದರಿಂದ, ಸತ್ಯ ಸುಖದ ಇಚ್ಛೆಯನ್ನು ಮಾತ್ರ ಮಾಡಿ, ಇಂದ್ರಿಯಗಳ ಜಾಲದೊಳಗೆ ಸಿಕ್ಕಿ ಬೀಳುತ್ತೇವೆ. ನಮ್ಮ ಸ್ವಾತಂತ್ರ್ಯದ ಹಕ್ಕು ಹೋಗಿ ಗುಲಾಮಗಿರಿಯು ಮಾತ್ರ ನಮ್ಮ ಹಣೆಯ ಬರಹಕ್ಕೆ ಬರುತ್ತದೆ. ಈ ಜಗತ್ತಿನೊಳಗಿನ ಸುಖ ದುಃಖಗಳ ಕಲ್ಪನೆಗಳಲ್ಲಿ ನೈಜವಾದ ತಥ್ಯವು ಎಷ್ಟಿರುತ್ತದೆಂಬುದನ್ನು ವಿಚಾರಿಸಿದರೆ, ಇಂದ್ರಿಯಜನ್ಯ ಸುಖದ ಗುಲಾಮರಾಗಿರುವದು ನಮಗೆ ಎಷ್ಟು ಮಾತ್ರವೂ ಯೋಗ್ಯ ವಾದುದಲ್ಲ. ಯಾರಾದರೂ ಎರಡು ಸವಿಮಾತುಗಳನ್ನಾಡಿದರೆ ನಮಗೆ ಆನಂದ ವಾಗಬೇಕು ಮತ್ತು ಎರಡು ಕೆಟ್ಟ ಶಬ್ದಗಳನ್ನಾಡಿದರೆ ನಮಗೆ ದುಃಖವಾಗಬೇಕು ಈ ಸ್ಥಿತಿಯು ನಿಜವಾಗಿಯೂ ಲಜ್ಜಾಸ್ಪದವಾದುದು. ನಮ್ಮ ಸರ್ವ ಆಯುಷ್ಯ ಕ್ರಮದ ವಿಚಾರ ಮಾಡಿದರೆ, ಅದರಲ್ಲಿ ಗುಲಾಮಗಿರಿಯ ಹೊರ್ತು ಎರಡನೆಯದೇನೂ ತೋರುವದಿಲ್ಲ. ನಾವು ಹೊಟ್ಟೆಯ ಗುಲಾಮರು ಮತ್ತು ಉಡುಪು ತೊಡುಪುಗಳ ಗುಲಾಮರು ನಾವು ನಮ್ಮ ದೇಶದ ಹಾಗೂ ದೇಶಾಭಿಮಾನದ ಗುಲಾಮರು ಮತ್ತು ಕೀರ್ತಿಯ ದೊಡ್ಡ ಹೆಸರಿನ ಗುಲಾಮರು. ಈ ಪ್ರಕಾರವಾದ ಅನೇಕ ಗುಲಾಮಗಿರಿಗಳಿಂದ ನಮ್ಮ ಈಶ್ವರತ್ವವು ಮುಚ್ಚಿಕೊಂಡು ಹೋಗಿರುವದು. ನಾವು ನಮ್ಮ ಕೈಯ್ಯಿಂದಲೇ ಅದಕ್ಕೆ ಈ ಆವರಣವನ್ನು ಕೊಟ್ಟಿರುತ್ತೇವೆ. ಇಂದಿಗೂ ಈ ಶೃಂಖಲೆಯು ನಮಗೆ ಪಂಜರದೊಳಗಿನ ಗಿಳಿಗೆ ಯಾವ ಪ್ರಕಾರ ಕಾಲು ಗಗ್ಗರೆಯು ಭೂಷಣಪ್ರದವಾಗಿ ತೋರುವದೋ, ಹಾಗೆಯೇ ಇದು ನಮಗೆ ಆನಂದದಾಯಕವಾಗಿ ತೋರುತ್ತದೆ. ಈ ಗುಲಾಮಗಿರಿಯ ಸ್ವರೂಪದ ನಿಶ್ಚಿತ ತಿಳುವಳಿಕೆಯು ತಿಳಿಯ

ಲಿಕ್ಕೆ ಹತ್ತಿದರೆ, ಸದದ ಸುಖೋತ್ಪಾದಕ ವಸ್ತುಗಳ ನಿಜ ಸ್ವರೂಪವು ನಮಗೆ ಕಾಣಲಿಕ್ಕೆ ಹತ್ತುವದು ಮತ್ತು ಇದರೊಳಗಿಂದ ಪಾರಾಗುವ ಉತ್ಕಟೇಚ್ಛೆಯು ಉತ್ಪನ್ನವಾಗುವದು. ಪ್ರಖರವಾದಂಥ ಬೆಂಕಿಯ ಕೆಂಡ ವನ್ನು ಯಾರಾದರೂ ನಮ್ಮ ಮಸ್ತಕದ ಮೇಲೆ ಇಟ್ಟರೆ ಅದನ್ನು ತೆಗೆದು ಹಾಕುವದರ ಸಲುವಾಗಿ ನಾವು ಎಷ್ಟು ಆತುರ ಪಡುತ್ತೇವೆಯೋ ಅಷ್ಟು ಆತುರತೆಯಿಂದ ಈ ಇಂದ್ರಿಯಜನ್ಯ ಸುಖ ದುಃಖಗಳ ಆಚೆಗೆ ಹೋಗುವ ಅವಿಶ್ರಾಂತ ಪ್ರಯತ್ನವನ್ನು ನಾವು ಮಾಡುವೆವೋ, ಇದಕ್ಕೇನೇ ಶಿವಾನು ಭವ ಅಥವಾ ಶಿವಯೋಗಾನು ಸಂಧಾನವೆನ್ನುವರು.

ಶಿವಾನುಭವಿಯಾಗುವವನು ಯಾವಾಗಲೂ ನಿತ್ಯಾನಿತ್ಯ ವಸ್ತುವಿನ ವಿಚಾರ ಮಾಡಬೇಕು. ಈ ಜಗತ್ತಿನಲ್ಲಿ ಸತ್ಯ ವಸ್ತು ಯಾವದು, ಅಸತ್ಯ ವಸ್ತು ಯಾವದು, ಚಿರಕಾಲ ಇರುವ ಪದಾರ್ಥ ಯಾವದು, ಕ್ಷಣಭಂಗುರ ವಾದ ಪಧಾರ್ಥ ಯಾವದು, ಇದರ ವಿಚಾರ ನಿತ್ಯ ಮಾಡುತ್ತಿರಬೇಕು. ಪರಮಾತ್ಮನ ಹೊರತು ಸರ್ವ ವಸ್ತುಗಳು ಅಸತ್ಯವಾದಂಥವುಗಳು ಮತ್ತು ಕ್ಷಣ ಭಂಗುರವಾದವುಗಳು ಎಂಬದನ್ನು ಶಿವಾನುಭವಿಯಾಗುವವನು ತನ್ನ ಮನಸ್ಸಿನಲ್ಲಿ ನಿಶ್ಚಿಯಿಸಿರ ಬೇಕು. ಈ ಪ್ರಪಂಚದಲ್ಲಿಯ ಸರ್ವ ಪದಾರ್ಥ ಗಳ ಸ್ಥಿತಿಗಳಿಗೆ ಅಂತ್ಯಕಾಲವಿರುತ್ತದೆ. ಪಶು ಪಕ್ಷಿ ಮನುಷ್ಯ ಮೊದ ಲಾದ ಸಕಲ ಪ್ರಾಣಿಗಳೂ ಮರಣಾಧೀನವಾದವುಗಳೇ ಇರುತ್ತವೆ. ಸೂರ್ಯ ಚಂದ್ರ ಮತ್ತು ಇತರ ಖಗೋಲ ಪದಾರ್ಥಗಳಿಗೆ ಅಂತ್ಯಕಾಲ ವಿರುತ್ತದೆ. ಇವುಗಳಲ್ಲಿಯ ಪ್ರತ್ಯೇಕ ವಸ್ತುವಿಗೆ ಯಾವಾಗಲೂ ರೂಪಾಂತರ ವಾಗುತ್ತಿರುತ್ತದೆ. ಈ ಹೊತ್ತು ಎತ್ತರವಾದ ಯಾವ ಪರ್ವತವನ್ನು ನೋಡುತ್ತಿರುವೆವೋ ಅದು ನಾಳೆ ತಗ್ಗಾದ ಸಮುದ್ರವಾಗ ಬಹುದು. ತಗ್ಗಾದ ಕೊಳ್ಳವು ಎತ್ತರವಾದ ಪರ್ವತವಾಗ ಬಹುದು. ಈ ಸಂಸಾರದ ಲ್ಲಿಯ ಯಾವತ್ತು ಪದಾರ್ಥಗಳು ಕ್ಷಣ ಕ್ಷಣಕ್ಕೆ ಬದಲಾವಣೆಯಾಗುತ್ತಿರು ತ್ತವೆ. ಆದರೆ ಯಾರಿಗೆ ಯಾರ ಯಾವತರದ ರೂಪಾಂತರವು ಗೊತ್ತಿಲ್ಲವೋ ಅಂಥವನು ಒಬ್ಬ ಪರಮಾತ್ಮನು ಮಾತ್ರ ಇದ್ದಾನೆ. ನಾವು ಪ್ರತಿಕ್ಷಣ ಬದ ಲಾವಣೆಯಾಗುತ್ತಿರುತ್ತೇವೆ. ಪರಂತು ನಾವು ಹ್ಯಾಗೆ ಹ್ಯಾಗೆ ಪರಮಾತ್ಮನ ಸಮೀಪಕ್ಕೆ ಹೋಗುತ್ತೇವೆಯೋ ಹಾಗೆ ಹಾಗೆ ನಮ್ಮಲ್ಲಿಯ ರೂಪಾಂತರ ಕ್ರಮವು ಕಡಿಮೆಯಾಗುತ್ತದೆ. ಯಾವ ಪ್ರಕೃತಿಯ ನಿಯಮದ ಸ್ವಾಧೀನ ನಾಗಿ ಈ ಹೊತ್ತು ನಾವು ಗುಲಾಮರಾಗಿ ಕೆಲಸ ಮಾಡುತ್ತಿರುತ್ತೇವೆಯೋ,

ಆ ಪ್ರಕೃತಿಯು ತನ್ನ ಅಧಿಕಾರವನ್ನು ಸಾವಕಾಶ ನಡೆಯಿಸುವದು ನಾವು ಪರಮೇಶ್ವರನಲ್ಲಿ ಸಮರಸವಾದರೆ ನಮ್ಮ ಗುಲಾಮಗಿರಿಯು ಮುಗಿದು, ನಾವು ಈಶ್ವರನಿಯಮದ ಯಜಮಾನರಾಗುತ್ತೇವೆ. ಈ ಗುಲಾಮಗಿರಿಯಿಂದ ಹೊರಟು ಯಜಮಾನತ್ವದ ಕಡೆಗೆ ಹೋಗುವ ಮಾರ್ಗವೇ ಶಿವಾನುಭವದ ಸತ್ಯ ಮಾರ್ಗವು

ಸರ್ವ ಪ್ರಪಂಚದಲ್ಲಿ ಚೈತನ್ಯರೂಪದಿಂದ ವ್ಯಾಪಿಸಿದ ಸತ್ ಚಿತ್ ಆನಂದರೂಪನಾದ ಪರಬ್ರಹ್ಮನನ್ನ ಪ್ರಾಪ್ತಮಾಡಿಕೊಳ್ಳುವದರ ಸಲುವಾಗಿ ನಮ್ಮ ಆಯುಷ್ಯದ ಪ್ರತಿ ನಿಮಿಷವನ್ನು ಯೋಗ್ಯರೀತಿಯಿಂದ ಉಪಯೋಗ ಮಾಡಿಕೊಳ್ಳಲಿಕ್ಕೇಬೇಕು. ಪ್ರತಿಕ್ಷಣ ನಿತ್ಯ ನಿತ್ಯ ವಸ್ತುವಿನ ವಿಚಾರವನ್ನು ಮಾಡಲೇಬೇಕು. ಧರ್ಮಜ್ಞಾನದ ಸಲುವಾಗಿ ಅಥವಾ ಶಿವಾನುಭವದ ಸಲುವಾಗಿ ಇಷ್ಟ ಬಂಧನದ ಅವಶ್ಯಕತೆ ಏನು? ಎಂದು ಯಾರಾದರೂ ವಿಚಾರಿಸಿದರೆ, ಅವರಿಗೆ ಉತ್ತರ ವಿಷ್ಟೇ. ಪರಮೇಶ್ವರನ ಪ್ರಾಪ್ತಿಯು ಮಾರ್ಗವು ಅನುಭವ ಜನ್ಯವಾದುದು. ಅದು ಬುದ್ಧಿಗಮ್ಯ ಮಾರ್ಗವಲ್ಲ. ಇದನ್ನು ಯಾವಾಗಲೂ ಲಕ್ಷದಲ್ಲಿಟ್ಟಿರಬೇಕು. ಇಂದ್ರಿಯ ಗಮ್ಯ ಮಾರ್ಗದಿಂದ ಶಿವನು ಪ್ರಾಪ್ತಿಯಾಗುವದು ಶಕ್ಯವಿಲ್ಲ. ನಾವು ಎಷ್ಟು ಧರ್ಮಗ್ರಂಥಗಳ ಪಾರಾಯಣ ಮಾಡಿದರೂ, ಜಗತ್ತಿನೊಳಗಿನ ಸರ್ವ ಧರ್ಮಗಳ ಪುಸ್ತಕಗಳನ್ನು ಓದಿದರೂ, ಸತ್ಯವಾದ ಧರ್ಮಜ್ಞಾನದ ಒಂದು ಶಬ್ದವು ಕೂಡ ನಮಗೆ ಬೋಧವಾಗುವದಿಲ್ಲ. ಅದಕ್ಕಾಗಿಯೇ "ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣಕಾರಣಂ" ಎಂಬದಾಗಿ ಆದಿ ಶಂಕರಾಚಾರ್ಯರು ಹೇಳಿದ್ದಾರೆ. ನಾವು ಸರ್ವ ಆಯುಷ್ಯವನ್ನೆಲ್ಲ ವಾದವಿವಾದದಲ್ಲಿಯೇ ಕಳೆದರೂ, ಪರಮೇಶ್ವರನ ಪ್ರಾಪ್ತಿಯಾಗುವದಿಲ್ಲ. ಈ ಬುದ್ಧಿಜಾಗ್ರತೆಯು ಗೊಂದಲದಲ್ಲಿ ಬೀಳೋಣದರಿಂದ ಈ ಶಿವಾನುಭವದ ವಿಷಯವು ಅಧಿಕ ದುಸ್ತರವಾಗುತ್ತದೆ. ಇಡೀ ಪ್ರಪಂಚದಲ್ಲಿಯೇ ಪ್ರಬುದ್ಧರಾಗುವದರ ಸಲುವಾಗಿ ನಾವು ಎಷ್ಟು ಬುದ್ಧಿ ಸಾಮರ್ಥ್ಯವನ್ನು ಸಂಪಾದಿಸಿದರೂ, ಶಿವಯೋಗಾನುಭವದ ಮಾರ್ಗದಲ್ಲಿ ಒಂದು ಹೆಜ್ಜೆಯನ್ನು ಸಹ ಮುಂದೆ ಇಟ್ಟಂತಾಗಲಾರದು. ಯಾವವಸ್ತುವು ಬುದ್ಧಿ ಮತ್ತು ಮನಗಳಿಗೆ ನಿಲುಕದಿರುವದೊ, ಅದನ್ನು ಬುದ್ಧಿಯಾದರೂ ಮುಟ್ಟುವದೆಂತು? ನಮ್ಮ ಈಗಿನ ಸರ್ವ ಶಿಕ್ಷಣಗಳ ಧೋರಣವನ್ನು ನೋಡಿದರೆ, ಕೇವಲ ಬುದ್ಧಿಯನ್ನು ಪ್ರಜ್ವಲಿತ ಮಾಡುವದರ ಕಡೆಗೆ ಅದೆಯೇವಿನಹ,

ಲಿಕ್ಕೆ ಹತ್ತಿದರೆ, ಸದ ವ ಸುಖೋತ್ಪಾದಕ ವಸ್ತುಗಳ ನಿಜ ಸ್ವರೂಪವು ನಮಗೆ ಕಾಣಲಿಕ್ಕೆ ಹತ್ತುವದು; ಮತ್ತು ಇದರೊಳಗಿಂದ ಪಾರಾಗುವ ಉತ್ಕಟೇಚ್ಛೆಯು ಉತ್ಪನ್ನವಾಗುವದು. ಪ್ರಖರವಾದಂಥ ಬೆಂಕಿಯ ಕೆಂಡ ವನ್ನು ಯಾರಾದರೂ ನಮ್ಮ ಮಸ್ತಕದ ಮೇಲೆ ಇಟ್ಟರೆ ಅದನ್ನು ತೆಗೆದು ಹಾಕುವದರ ಸಲುವಾಗಿ ನಾವು ಎಷ್ಟು ಆತುರ ಪಡುತ್ತೇವೆಯೋ ಅಷ್ಟು ಆತುರತೆಯಿಂದ ಈ ಇಂದ್ರಿಯಜನ್ಯ ಸುಖ ದುಃಖಗಳ ಆಚೆಗೆ ಹೋಗುವ ಅವಿಶ್ರಾಂತ ಪ್ರಯತ್ನವನ್ನು ನಾವು ಮಾಡುವೆವೋ, ಇದಕ್ಕೇನೇ ಶಿವಾನುಭವ ಅಥವಾ ಶಿವಯೋಗಾನು ಸಂಧಾನವೆನ್ನುವರು.

ಶಿವಾನುಭವಿಯಾಗುವವನು ಯಾವಾಗಲೂ ನಿತ್ಯಾನಿತ್ಯ ವಸ್ತುವಿನ ವಿಚಾರ ಮಾಡಬೇಕು. ಈ ಜಗತ್ತಿನಲ್ಲಿ ಸತ್ಯ ವಸ್ತು ಯಾವದು, ಅಸತ್ಯ ವಸ್ತು ಯಾವದು, ಚಿರಕಾಲ ಇರುವ ಪದಾರ್ಥ ಯಾವದು, ಕ್ಷಣಭಂಗುರ ವಾದ ಪಧಾರ್ಥ ಯಾವದು, ಇದರ ವಿಚಾರ ನಿತ್ಯ ಮಾಡುತ್ತಿರಬೇಕು. ಪರಮಾತ್ಮನ ಹೊರತು ಸರ್ವ ವಸ್ತುಗಳು ಅಸತ್ಯವಾದಂಥವುಗಳು ಮತ್ತು ಕ್ಷಣ ಭಂಗುರವಾದವುಗಳು ಎಂಬದನ್ನು ಶಿವಾನುಭವಿಯಾಗುವವನು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿರ ಬೇಕು. ಈ ಪ್ರಪಂಚದಲ್ಲಿಯ ಸರ್ವ ಪದಾರ್ಥ ಗಳ ಸ್ಥಿತಿಗಳಿಗೆ ಅಂತ್ಯಕಾಲವಿರುತ್ತದೆ. ಪಶು ಪಕ್ಷಿ ಮನುಷ್ಯ ಮೊದ ಲಾದ ಸಕಲ ಪ್ರಾಣಿಗಳೂ ಮರಣಾಧೀನವಾದವುಗಳೇ ಇರುತ್ತವೆ. ಸೂರ್ಯ ಚಂದ್ರ ಮತ್ತು ಇತರ ಖಗೋಲ ಪದಾರ್ಥಗಳಿಗೆ ಅಂತ್ಯಕಾಲ ವಿರುತ್ತದೆ. ಇವುಗಳಲ್ಲಿಯ ಪ್ರತ್ಯೇಕ ವಸ್ತುವಿಗೆ ಯಾವಾಗಲೂ ರೂಪಾಂತರ ವಾಗುತ್ತಿರುತ್ತದೆ. ಈ ಹೊತ್ತು ಎತ್ತರವಾದ ಯಾವ ಪರ್ವತವನ್ನು ನೋಡುತ್ತಿರುವೆವೋ ಅದು ನಾಳೆ ತಗ್ಗಾದ ಸಮುದ್ರವಾಗ ಬಹುದು. ತಗ್ಗಾದ ಕೊಳ್ಳವು ಎತ್ತರವಾದ ಪರ್ವತವಾಗ ಬಹುದು. ಈ ಸಂಸಾರದ ಲ್ಲಿಯ ಯಾವತ್ತು ಪದಾರ್ಥಗಳು ಕ್ಷಣ ಕ್ಷಣಕ್ಕೆ ಬದಲಾವಣೆಯಾಗುತ್ತಿರು ತ್ತವೆ. ಆದರೆ ಯಾರಿಗೆ ಯಾರ ಯಾವತರದ ರೂಪಾಂತರವು ಗೊತ್ತಿಲ್ಲವೋ ಅಂಥವನು ಒಬ್ಬ ಪರಮಾತ್ಮನು ಮಾತ್ರ ಇದ್ದಾನೆ. ನಾವು ಪ್ರತಿಕ್ಷಣ ಬದ ಲಾವಣೆಯಾಗುತ್ತಿರುತ್ತೇವೆ. ಪರಂತು ನಾವು ಹ್ಯಾಗೆ ಹ್ಯಾಗೆ ಪರಮಾತ್ಮನ ಸಮೀಪಕ್ಕೆ ಹೋಗುತ್ತೇವೆಯೋ ಹಾಗೆ ಹಾಗೆ ನಮ್ಮಲ್ಲಿಯ ರೂಪಾಂತರ ಕ್ರಮವು ಕಡಿಮೆಯಾಗುತ್ತದೆ. ಯಾವ ಪ್ರಕೃತಿಯ ನಿಯಮದ ಸ್ವಾಧೀನ ನಾಗಿ ಈ ಹೊತ್ತು ನಾವು ಗುಲಾಮರಾಗಿ ಕೆಲಸ ಮಾಡುತ್ತಿರುತ್ತೇವೆಯೋ,

ಆ ಪ್ರಕೃತಿಯು ತನ್ನ ಅಧಿಕಾರವನ್ನು ಸಾವಕಾಶ ನಡೆಯಿಸುವದು ನಾವು ಪರಮೇಶ್ವರನಲ್ಲಿ ಸಮರಸವಾದರೆ ನಮ್ಮ ಗುಲಾಮಗಿರಿಯು ಮುಗಿದು, ನಾವು ಈಶ್ವರನಿಯಮದ ಯಜಮಾನರಾಗುತ್ತೇವೆ. ಈ ಗುಲಾಮಗಿರಿಯಿಂದ ಹೊರಟು ಯಜಮಾನತ್ವದ ಕಡೆಗೆ ಹೋಗುವ ಮಾರ್ಗವೇ ಶಿವಾನುಭವದ ಸತ್ಯ ಮಾರ್ಗವು

ಸರ್ವ ಪ್ರಪಂಚದಲ್ಲಿ ಚೈತನ್ಯರೂಪದಿಂದ ವ್ಯಾಪಿಸಿದ ಸತ್ ಚಿತ್ ಆನಂದರೂಪನಾದ ಪರಬ್ರಹ್ಮನನ್ನ ಪ್ರಾಪ್ತಮಾಡಿಕೊಳ್ಳುವದರ ಸಲುವಾಗಿ ನಮ್ಮ ಆಯುಷ್ಯದ ಪ್ರತಿ ನಿಮಿಷವನ್ನು ಯೋಗ್ಯರೀತಿಯಿಂದ ಉಪಯೋಗ ಮಾಡಿಕೊಳ್ಳಲಿಕ್ಕೇಬೇಕು. ಪ್ರತಿಕ್ಷಣ ನಿತ್ಯ ನಿತ್ಯ ವಸ್ತುವಿನ ವಿಚಾರವನ್ನು ಮಾಡಲೇಬೇಕು. ಧರ್ಮಜ್ಞಾನದ ಸಲುವಾಗಿ ಅಥವಾ ಶಿವಾನುಭವದ ಸಲುವಾಗಿ ಇಷ್ಟ ಬಂಧನದ ಅವಶ್ಯಕತೆ ಏನು? ಎಂದು ಯಾರಾದರೂ ವಿಚಾರಿಸಿದರೆ, ಅವರಿಗೆ ಉತ್ತರ ವಿಷ್ಟೇ. ಪರಮೇಶ್ವರನ ಪ್ರಾಪ್ತಿಯ ಮಾರ್ಗವು ಅನುಭವ ಜನ್ಯವಾದುದು. ಅದು ಬುದ್ಧಿಗಮ್ಯ ಮಾರ್ಗವಲ್ಲ. ಇದನ್ನು ಯಾವಾಗಲೂ ಲಕ್ಷದಲ್ಲಿಟ್ಟಿರಬೇಕು. ಇಂದ್ರಿಯ ಗಮ್ಯ ಮಾರ್ಗದಿಂದ ಶಿವನು ಪ್ರಾಪ್ತಿಯಾಗುವದು ಶಕ್ಯವಿಲ್ಲ. ನಾವು ಎಷ್ಟು ಧರ್ಮಗ್ರಂಥಗಳ ಪಾರಾಯಣ ಮಾಡಿದರೂ, ಜಗತ್ತಿನೊಳಗಿನ ಸರ್ವ ಧರ್ಮಗಳ ಪುಸ್ತಕಗಳನ್ನು ಓದಿದರೂ, ಸತ್ಯವಾದ ಧರ್ಮಜ್ಞಾನದ ಒಂದು ಶಬ್ದವು ಕೂಡ ನಮಗೆ ಬೋಧವಾಗುವದಿಲ್ಲ. ಅದಕ್ಕಾಗಿಯೇ "ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣ ಕಾರಣಂ" ಎಂಬದಾಗಿ ಆದಿ ಶಂಕರಾಚಾರ್ಯರು ಹೇಳಿದ್ದಾರೆ. ನಾವು ಸರ್ವ ಆಯುಷ್ಯವನ್ನೆಲ್ಲ ವಾದವಿವಾದದಲ್ಲಿಯೇ ಕಳೆದರೂ, ಪರಮೇಶ್ವರನ ಪ್ರಾಪ್ತಿಯಾಗುವದಿಲ್ಲ. ಈ ಬುದ್ಧಿ ಜಾಗ್ರತೆಯು ಗೊಂದಲದಲ್ಲಿ ಬೀಳೋಣದರಿಂದ ಈ ಶಿವಾನುಭವದ ವಿಷಯುವು ಅಧಿಕ ದುಸ್ತರವಾಗುತ್ತದೆ. ಇಡೀ ಪ್ರಪಂಚದಲ್ಲಿಯೇ ಪ್ರಬುದ್ಧರಾಗುವದರ ಸಲುವಾಗಿ ನಾವು ಎಷ್ಟು ಬುದ್ಧಿ ಸಾಮರ್ಥ್ಯವನ್ನು ಸಂಪಾದಿಸಿದರೂ, ಶಿವಯೋಗಾನುಭವದ ಮಾರ್ಗದಲ್ಲಿ ಒಂದು ಹೆಜ್ಜೆಯನ್ನು ಸಹ ಮುಂದೆ ಇಟ್ಟಂತಾಗಲಾರದು. ಯಾವವಸ್ತುವು ಬುದ್ಧಿ ಮತ್ತು ಮನಗಳಿಗೆ ನಿಲುಕದಿರುವದೊ, ಅದನ್ನು ಬುದ್ಧಿಯಾದರೂ ಮುಟ್ಟುವದೆಂತು? ನಮ್ಮ ಈಗಿನ ಸರ್ವ ಶಿಕ್ಷಣಗಳ ಧೋರಣವನ್ನು ನೋಡಿದರೆ, ಕೇವಲ ಬುದ್ಧಿಯನ್ನು ಪ್ರಜ್ವಲಿತ ಮಾಡುವದರ ಕಡೆಗೆ ಅದೆಯೇವಿನಹ,

ಅಂತಃಕರಣದ ಸಾತ್ವಿಕ ವೃತ್ತಿಯನ್ನು ಜಾಗ್ರತ ಮಾಡುವದರ ಕಡೆಗಿರುವದಿಲ್ಲ. ಇದಕ್ಕಾಗಿ ನಾವು ಈಗ ಪೂರ್ಣ ಲಕ್ಷ ಕೊಡಬೇಕಾಗಿರುವದು ಇಲ್ಲದಿದ್ದರೆ ನಾವು ಪೂರ್ವದಕ್ಕಿಂತಲೂ ಹತ್ತು ಪಟ್ಟು ಸ್ವಾರ್ಥಸಾಧುಗಳಾಗಿ ಹೋಗುವೆವು. ಈ ಸ್ವಾರ್ಥವು ಇಂದಿಲ್ಲ ನಾಳೆಯಾದರೂ ನಿಶ್ಚಿತವಾಗಿ ನಮ್ಮನ್ನು ಅವನತೆಗೀಡು ಮಾಡುತ್ತದೆ. ಈ ಕಾರಣದ ಸಲುವಾಗಿ ನಮ್ಮ ಅಂತಃಕರಣದ ಸಾತ್ವಿಕ ವೃತ್ತಿಯು ಸದೋದಿತ ಜಾಗ್ರತವಾಗಿರುವಂಥ ಉಪಾಯವನ್ನೇ ಯೋಚಿಸಬೇಕು. ಎಲ್ಲಿ ಅಂತಃಕರಣ ಮತ್ತು ಬುದ್ಧಿ ಇವುಗಳ ಮಾರ್ಗ ಭೇದವಿರುತ್ತದೆ.ಯೋ ಅಲ್ಲಿ ಬುದ್ಧಿಗಮ್ಯ ಮಾರ್ಗ ಬಿಟ್ಟು ಅಂತಃಕರಣ ದರ್ಶಿತ ಮಾರ್ಗದಿಂದ ಹೋಗುವದು ಪರಿಣಾಮದಲ್ಲಿ ಅಧಿಕ ಸುಖ ಕೊಡುವದಾಗಿರುತ್ತದೆ. ಒಂದು ಸತ್ಕಾರ್ಯ ಮಾಡಬೇಕೆಂಬ ಇಚ್ಛೆಯುಂಟಾದರೆ, ನಮ್ಮ ಬುದ್ಧಿಯು ಜಾಗ್ರತವಾಗಿ ಪ್ರಥಕ್ಕರಣ ಮಾಡಲಿಕ್ಕೆ ಹತ್ತುತ್ತದೆ. ಅದರಲ್ಲಿ ಸ್ವಾರ್ಥ ಪ್ರಬಲವಾದರೆ, ಅಂತಃಕರಣದ ಸಾತ್ವಿಕ ವೃತ್ತಿಯು ಸಂಪುಟಕ್ಕೆ ಬಂದಿತೆಂತಲೇ ತಿಳಿಯಬೇಕು. ಒಬ್ಬ ಸೋಮಾರಿಯಾದ ಮನುಷ್ಯನಿಗೆ ಸಹಾಯ ಮಾಡುವ ಇಚ್ಛೆಯು ನಮಗಾದರೆ, ಬುದ್ಧಿಯು ಹೀಗೆ ಹೇಳುತ್ತದೆ, ಈತನು ಉದ್ಯೋಗ ಯಾಕೆ ಮಾಡುವದಿಲ್ಲ? ಆಲಸ್ಯವುಳ್ಳವನೇಕೆ ಆದನು? ಇಂಥ ಮನುಷ್ಯನಿಗೆ ಸಹಾಯ ಯಾಕೆ ಮಾಡಬೇಕು? ಇದರಿಂದ ಜಗತ್ತಿನಲ್ಲಿ ಆಲಸ್ಯತನವು ಬೆಳೆಯುವದರಿಂದ ನಾವು ಉದ್ಯೋಗವನ್ನು ಹೆಚ್ಚಿಸಬೇಕಲ್ಲವೆ? ಆದಕಾರಣ ಈ ಮನುಷ್ಯನು ಸಹಾಯ ಹೊಂದಲಿಕ್ಕೆ ಯೋಗ್ಯನಲ್ಲ, ಇಂಥ ವಿಚಾರಗಳಿಂದ ಅಂತಃಕರಣದಲ್ಲಿ ಆ ಮನುಷ್ಯನನ್ನು ನೋಡಿ ಉದ್ಭವವಾದ ದಯೆಯು ಪ್ರಾಣವೇ ಹೋಗುತ್ತದೆ. ಶಿವಾನುಭವ ವಾಚಕರೇ, ಇಂಥ ಪ್ರಸಂಗದಲ್ಲಿ ತಾವು ಬುದ್ಧಿಯ ಬೆನ್ನುಹತ್ತಿ ಮೋಸ ಹೋಗಬೇಡಿರಿ. ಯುಕ್ತಿಕಲ್ಪಿತವಾದ ಸ್ವಾರ್ಥದ ಬಲೆಗೆ ಬಿದ್ದು ದಯೆಯ ಅರ್ಥಾತ್ ಅಂತಃಕರಣದ ಕೊಲೆಯನ್ನು ಮಾಡುವದು ಯುಕ್ತವಲ್ಲ. ಅಗಾಧ ಬುದ್ಧಿಶಾಲಿಗೂ ಕೂಡಾ ಸ್ವಪ್ನದಲ್ಲಿ ಸಹ ಕಾಣಲಾರದಂಥ ಸ್ಥಾನಕ್ಕೆ ಮುಟ್ಟಿಸುವ ಸಾಮರ್ಥ್ಯವು ಅಂತಃಕರಣಕ್ಕೆ ಮಾತ್ರ ಇರುತ್ತದೆ. ಎಲ್ಲಿ ಪರಮಾತ್ಮನಿಗೂ ನಮಗೂ ಸಂದರ್ಶನವಾಗುತ್ತದೆಯೋ ಆ ಸ್ಥಾನಕ್ಕೆ ಬುದ್ಧಿಯು ಎಂದಿಗೂ ಹೋಗಿ ಮುಟ್ಟುವದಿಲ್ಲ. ಆ ಅಧಿಕಾರವು ಕೇವಲ ಅಂತಃಕರಣಕ್ಕೆ ಮಾತ್ರ ಇರುತ್ತದೆ. ಅಂತಃಕರಣದ ಬೆಳವಣಿಗೆಯು ಉತ್ತಮ

ರೀತಿಯಿಂದ ಸಾಗಿದರೆ, ಆತನು ಅತೀಂದ್ರಿಯ ಜ್ಞಾನವುಳ್ಳವನಾಗುವನು. ಬುದ್ಧಿಯಿಂದ ಭ್ರಮೆಯು ಬೆಳೆಯುತ್ತದೆ. ಅಂತಃಕರಣದಿಂದ ಜ್ಞಾನವು ಜಾಗ್ರತವಾಗುತ್ತದೆ. ನಾವು ನಮ್ಮವರೆನ್ನುವವರಿಗೆ ಅತ್ಯಂತ ಪ್ರೇಮದ ಮಾತುಗಳನ್ನು ಹೇಳುತ್ತೇವೆ. ಆಗ ಬುದ್ಧಿಯು ಎಲ್ಲಿ ಇರುತ್ತದೆ? ಯಾರ ಮೇಲೆ ನಮ್ಮ ನಿಜವಾದ ಪ್ರೇಮವಿರುತ್ತದೆಯೋ ಅವರಲ್ಲಿ ಇಂಥಾದ್ದು ಹೇಳಬೇಕು, ಇಂಥಾದ್ದು ಹೇಳಬಾರದು ಎಂಬ ವಿಚಾರವನ್ನು ನಾವು ಎಂದಿಗೂ ಮಾಡುವದಿಲ್ಲ. ಎಲ್ಲಿ ಬುದ್ಧಿ ಜಾಗ್ರತವಾಯಿತೋ ಅಲ್ಲಿ ಅದು ಪ್ರೇಮವನ್ನು ಛೇದಿಸುವ ಆಯುಧವೇ ಸರಿ. ಬುದ್ಧಿಯ ಕೆಲಸವು ಕೇವಲ ಕಾರ್ಯದ ನಿಶ್ಚಯವನ್ನು ಮಾಡುವದಾಗಿದೆ. ಅಂತಃಕರಣದ ಕೆಲಸವಾದರೋ, ಬುದ್ಧಿಯ ಆಚೇಕಡೆಗೆ ಹೋಗಿ ಪರಮೇಶ್ವರನ ದರ್ಶನ ಹೊಂದುವದಿರುತ್ತದೆ. ಬುದ್ಧಿಯ ತೇಜವು ನಮ್ಮ ನಿದರ್ಶನಕ್ಕೆ ಬರುವಂತೆ ಅಂತಃಕರಣದ ತೇಜವು ಬರುವದಿಲ್ಲ. ಏಕೆಂದರೆ ಬುದ್ಧಿಯು ರಜೋಗುಣ ಪ್ರಧಾನವಿರುವದರಿಂದ ಅದರ ತೇಜವು ಅಧಿಕ ಸ್ಪಷ್ಟವಾಗಿ ತೋರುತ್ತದೆ. ಅಂತಃಕರಣವು ಸಾತ್ವಿಕ ಇರೋಣದರಿಂದ ಅದು ಅಂತರ್ಯವೃತ್ತಿಯುಳ್ಳದ್ದಿರುತ್ತದೆ. ಅಂತಃಕರಣದ ಬಾಲ್ಯಸ್ಥಿತಿಯಲ್ಲಿ ಅದರ ಗುಣವು ಮುಚ್ಚಿದಂತೆ ತೋರಿದರೂ, ಅದೇ ಅಂತಃಕರಣವು ಪೂರ್ಣ ತೇಜದಿಂದ ಪ್ರಕಾಶಿಸಲಿಕ್ಕೆ ಹತ್ತಿತೆಂದರೆ, ನಮಗೆ ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳಲಿಕ್ಕೆ ಹತ್ತುತ್ತದೆ. ಇಲ್ಲಿಯವರೆಗೆ ಹೋದ ಸಾಧು ಸಂತ ಶರಣರನ್ನು ನೋಡಿದರೆ, ಅವರಲ್ಲಿ ಬುದ್ಧಿತೇಜಕ್ಕಿಂತಲೂ ಅಂತಃಕರಣದ ತೇಜವುಳ್ಳವರೇ ಅಧಿಕರಾಗಿದ್ದಾರೆಂದು ಸ್ಪಷ್ಟ ಕಂಡುಬರುತ್ತದೆ. ಇಡೀ ಜಗತ್ತನ್ನು ಯಾರು ಪ್ರಕಾಶವುಳ್ಳದ್ದನ್ನಾಗಿಮಾಡಿದರೋ, ಅವರು ಬುದ್ಧಿಬಲದ ಮೇಲೆ ಮಾಡಿದರೋ, ಅಥವಾ ಅಂತಃಕರಣದ ಬಲದ ಮೇಲೆ ಮಾಡಿದರೋ, ತಾವೇ ವಿಚಾರ ಮಾಡಬೇಕು. ಬುದ್ಧಿ ಶಾಲಿಯು ಒಂದು ಭಯಂಕರ ಕೆಲಸ ಮಾಡಲಿಕ್ಕೆ ಹಿಂದೆ ಮುಂದೆ ನೋಡಲಿಕ್ಕಿಲ್ಲ. ಪರಂತು ಅಂತಃಕರಣದ ಜಾಗ್ರತಿ ಹೊಂದಿದವರಾರಿರುವರೋ, ಅವರ ಕೈಯ್ಯಿಂದ ಯಾವ ಭಯಂಕರ ಕಾರ್ಯವು ಇಂದಿನವರಿಗೂ ಆಗಿಲ್ಲ. ಮುಂದೆ ಆಗುವದು ಶಕ್ಯವಿಲ್ಲ. ಪ್ರಯುಕ್ತಾ ಪರಮೇಶ್ವರನ ಪ್ರಾಪ್ತಿಯು ನಮಗೆ ಬೇಕಾಗಿದ್ದರೆ ಬುದ್ಧಿ ಬೆಳಯುವದರ ಕಡೆಗೆ ನಾವು ಹೆಚ್ಚು ಲಕ್ಷ ಕೊಡದೆ ಅಂತಃಕರಣದ ಬೆಳವಣಿಗೆಯ ಕಡೆಗೆ ಪೂರ್ಣ ಲಕ್ಷ ಕೊಡಬೇಕು. ನಾವು ಅಂತ್ಯ

ವಲ್ಲಿ ಯಾವ ಸ್ಥಿತಿಯನ್ನು ಹೊಂದಬೇಕಾಗಿರುವದೋ ಅದು ಬುದ್ಧಿಯಿಂದ ಸಾಧ್ಯವಾಗುವಂತಿಲ್ಲ. ಅಂತಃಕರಣದಿಂದಲೇ ದೊರೆಯಬೇಕಾಗಿದೆ. ಇದನ್ನು ಸದಾ ಲಕ್ಷದಲ್ಲಿಡಬೇಕು. ಪರಮೇಶ್ವರನ ಪ್ರಾಪ್ತಿಯ ಸಲುವಾಗಿ ಯಾವ ತರದ ಬೌದ್ಧಿಕ ಶಿಕ್ಷಣದ ಅಗತ್ಯವಿಲ್ಲ. ಶಿವನಿಗೆ ನಮ್ಮ ವಿದ್ವತ್ತದ ಅಪೇಕ್ಷೆ ಇರದೆ ಶುದ್ಧಾಂತಃಕರಣದ ಅಪೇಕ್ಷೆಯೇ ಇರುತ್ತದೆ. ಒಬ್ಬ ಸತ್ಪುರುಷನು ಹೇಳುವದೇನಂದರೆ, ಎರಡನೆಯವರ ಕೊಲೆ ಮಾಡುವದರ ಸಲುವಾಗಿ ಬಂದೂಕ ಹತ್ಯಾರ ಮೊದಲಾದ ಆಯುಧಗಳ ಅಪೇಕ್ಷೆ ಮಾಡಬೇಕಾಗುತ್ತದೆ. ಪರಂತು ಆತ್ಮಹತ್ಯ ಮಾಡಿಕೊಳ್ಳಬೇಕಾದರೆ ಒಂದು ಸೂಜಿಯು ಕೂಡಾ ಸಾಕಾಗುತ್ತದೆ. ಅದೇ ಪ್ರಕಾರವಾಗಿ ಯಾರಿಗೆ ಜಗತ್ತನ್ನು ಸುಧಾರಿಸುವದಿರುವದೋ ಅವರಿಗೆ ಬುದ್ಧಿ ಮೊದಲಾದ ಆಯುಧವನ್ನು ಹಿಡಿಯಬೇಕಾಗುತ್ತದೆ. ಆದರೆ ಸ್ವತಃ ಜ್ಞಾನಿಯಾಗಲಿಕ್ಕೆ ಅತಏವ ಶಿವಾನುಭವಿಯಾಗಲಿಕ್ಕೆ ಬುದ್ಧಿಯ ಸಹಾಯವೇನೂ ಬೇಕಾಗುವದಿಲ್ಲ. ಯಾರ ಅಂತಃಕರಣವು ಪವಿತ್ರವಿರುವದೋ ಅವರೇ ಧನ್ಯರು, ಅವರೇ ಲಿಂಗಾಂಗ ಸಮರಸಜ್ಞಾನ ಉಳ್ಳವರು. ಅವರಿಗೆ ಶಿವನ ಪ್ರತ್ಯಕ್ಷ ದರ್ಶನವಾಗುವದು. ನಮ್ಮ ಅಂತಃಕರಣವು ಜಾಗ್ರತವಿಲ್ಲದಿದ್ದರೆ ಲೋಕದಲ್ಲಿ ನಿರ್ಮಾಣವಾದ ಸಕಲ ಶಾಸ್ತ್ರಗಳು ನಮ್ಮ ನಾಲಿಗೆಯ ಮೇಲೆ ಕುಣಿಯುತ್ತಿದ್ದರೂ, ನಮಗೆ ಮುಕ್ತಿ ರಾಜ್ಯದ ಸೀಮೆಯು ಸಹ ಕಾಣುವದಿಲ್ಲ. ಜಗತ್ತಿನೊಳಗಿನ ಸರ್ವ ಗ್ರಂಥಗಳನ್ನು ಗುಂಪು ಮಾಡಿ ಅದರಲ್ಲಿ ನಮ್ಮನ್ನು ಹೂಳಿದರೂ ಅದರಿಂದ ನಮಗೆ ಸ್ವಲ್ಪವೂ ಕೂಡಾ ಲಾಭವಿಲ್ಲ. ಅಂತಃಕರಣ ತೋರಿಸಿದ ಮಾರ್ಗದಿಂದ ನಾವು ನಡೆವದ್ದಾದರೆ, ಯೋಗ್ಯಸ್ಥಾನವನ್ನು ಸರಳ ರೀತಿಯಿಂದ ನಾವು ಮುಟ್ಟುತ್ತೇವೆ. ಬುದ್ಧಿಗೆ ಸ್ವಪ್ನದಲ್ಲಿ ಸಹ ಕಾಣಲಾರದ ವಸ್ತುವು ಅಂತಃಕರಣಕ್ಕೆ ಕಾಣಿಸುತ್ತದೆ. ಯಾವ ವಿಚಾರವು ಅಂತಃಕರಣಕ್ಕೆ ಸರಿದೋರುವದೋ, ಅದನ್ನು ಯಾರ ಅಂಜಿಕೆಯಿಲ್ಲದೆಯೂ ಮಾಡುತ್ತ ಹೋಗಬೇಕು. ಹೀಗೆ ಮಾಡಲಿಕ್ಕೆ ಬುದ್ಧಿಯು ಅಡ್ಡಬಂದರೆ, ಅದರ ಬೆನ್ನು ಹತ್ತಬಾರದು ಒಂದು ಸತ್ಕಾರ್ಯ ಮಾಡಬೇಕೆಂದು ಅಂತಃಕರಣ ಪೂರ್ವಕ ಇಚ್ಛೆಯಾದರೆ, ಬುದ್ಧಿಯು ಒಂದು ವೇಳೆ ಅಡ್ಡ ಬರಬಹುದು- ಹೀಗೆ ಮಾಡೋಣದರಿಂದ, ಇವರು ಸಿಟ್ಟಿಗೆ ಬರುತ್ತಾರೆ, ಅವರು ಮುನಿಸುಗೊಳ್ಳುತ್ತಾರೆ, ಮತ್ತೊಬ್ಬರಿಗೆ ಬೇಸರವಾಗುತ್ತದೆ, ಈ ಮೊದಲಾದ ವಿಚಾರಗಳನ್ನು ಬುದ್ಧಿಯು ನಮಗೆ ಹೇಳಲಿಕ್ಕೆ ಹತ್ತುತ್ತದೆ. ಇಂಥ

ಪ್ರಸಂಗದಲ್ಲಿ ನಾವು ನಮ್ಮ ಕಿವಿಗಳನ್ನು ಕಿವುಡು ಮಾಡಲಿಕ್ಕೇಬೇಕು. ಅಂತಃಕರಣ ದರ್ಶಿತವಾದ ಮಾರ್ಗದಿಂದ ನಾವು ಹೋದದ್ದಾದರೆ, ನಮ್ಮ ಕೈಯಿಂದ ತಪ್ಪುಗಳು ಬಹಳ ಕಡಿಮೆಯಾಗುತ್ತವೆ. ಪವಿತ್ರ ಹೃದಯವು ಸ್ವಚ್ಛವಾದ ಕನ್ನಡಿಯಂತಿದೆ. ನಿರ್ಮಲವಾದ ಕನ್ನಡಿಯಲ್ಲಿ ಯಾವ ವಸ್ತುವಿನದಾದರೂ ಯೋಗ್ಯ ಪ್ರತಿಬಿಂಬವು ಹ್ಯಾಗೆ ಬೀಳುತ್ತದೆಯೋ, ಹಾಗೆಯೇ ಶುದ್ಧ ಅಂತಃಕರಣದಲ್ಲಿ ಪರಮೇಶ್ವರನ ಪ್ರತಿಬಿಂಬವು ಯಥಾಸ್ಥಿತವಾಗಿ ಬೀಳುತ್ತದೆ.ಎಷ್ಟೇ ಬಾಹ್ಯಾಚಾರಗಳನ್ನು ಎಷ್ಟೇ ಧೃಢವಾಗಿ ಮಾಡಿದರೂ , ಅವೆಲ್ಲವುಗಳು ಅಂತಃಕರಣದ ಶುದ್ಧಿಯ ಸಲುವಾಗಿಯೇ ಇರುತ್ತವೆ. ಚಿತ್ತವು ಶುದ್ಧವಾಯಿತೆಂದರೆ ಪರಮಾತ್ಮನ ಸ್ವರೂಪವು ತೋರಲನುವಾಗುತ್ತದೆ. ಜಗತ್ತಿನಲ್ಲಿ ಸತ್ಯಸ್ವರೂಪವೆಂದು ಯಾವದಿರುವದೋ ಆ ವಸ್ತುವು ತೀವ್ರವಾಗಿ ಶುದ್ಧಾಂತಃಕರಣದಲ್ಲಿ ಕಾಣಿಸಿಕೊಳ್ಳುತ್ತದೆ.

ಈ ಜಗತ್ತಿನೊಳಗಿನ ವಸ್ತುಗಳು ಯಾವ ಅಣುಪರಮಾಣುಗಳಿಂದ ಉಂಟಾಗಿರುತ್ತವೆಯೋ, ಅದರ ಶೋಧ ಎಷ್ಟೋ ಯುಗಗಳ ಪೂರ್ವದಲ್ಲಿ ಯಾರು ಗೊತ್ತು ಹಚ್ಚಿದ್ದಾರೆಯೋ, ಆ ಮಹಾತ್ಮರು ಈಗಿನವರಂತೆ ಸೂಕ್ಷ್ಮದರ್ಶಕ ಯಂತ್ರ ದುರ್ಬೀನು ಮೊದಲಾದವುಗಳಿಂದ ಹಚ್ಚಿರುವರೇ? ಅವರು ಅವುಗಳನ್ನು ಕಣ್ಣಿನಿಂದ ಸಹ ನೋಡಿರುವದಿಲ್ಲ. ರಸಾಯನ ಶಾಲೆ ಎಂದರೇನು? ಎಂಬುದು ಅವರಿಗೆ ಸ್ವಪ್ನದಲ್ಲಿ ಕೂಡಾ ಗೊತ್ತಿರಲಿಲ್ಲ. ಹೀಗಿದ್ದರೂ ಆ ಮಹನೀಯರು ಈ ಸರ್ವ ಜಗತ್ತಿನ ಶೋಧವನ್ನು ಯಾವದರ ಆಶ್ರಯದಿಂದ ಕಂಡು ಹಿಡಿದರು? ಆದರೆ ಅವರ ಶುದ್ಧಾಂತಃಕರಣದಲ್ಲಿ ಪರಶಿವನು ಉದಯವಾದ್ದರಿಂದ, ಅವರಿಗೆ ಆಗಮ್ಯವಾದಂಥಾದ್ದು ಯಾವದೂ ಉಳಿಯಲಿಲ್ಲ. ಅವರು ತಮ್ಮ ಹೃದಯವನ್ನು ನಿರ್ಮಲ ಮಾಡಿದವರಿದ್ದರು. ಆ ಮಹರ್ಷಿಗಳಂತೆ ಮತ್ತು ಮಹಾನುಭಾವರಾದ ಪ್ರಮಥರಂತೆ ಹೃದಯ ಶುದ್ಧತೆ ಮಾಡುವದು ನಮಗೆ ಅಶಕ್ಯವದೆಯೋ?

ಪ್ರಪಂಚದಲ್ಲಿ ಸುಖದ ದಿವಸಗಳು ಎಂದಾದರೂ ಪ್ರಾದುರ್ಭವಿಸುವವಿದ್ದರೆ ಅವು ಬುದ್ಧಿವರ್ಧನದಿಂದ ಎಂದೂ ಉತ್ಪನ್ನವಾಗುವದಿಲ್ಲ. ಶುದ್ಧಾಂತಃಕರಣದಿಂದಲೇ ಉತ್ಪನ್ನವಾಗುವವಿರುತ್ತವೆ. ಬುದ್ಧಿಯು ಎಷ್ಟು ವಿಶಾಲವಾದರೂ, ಅದು ಮನುಷ್ಯನ ಅಂಕಿತವಾದುದು. ಅಂತಃಕರಣ ವಿಸ್ತಾ

ರವಾದರೆ, ಅದು ಶಿವನ ಅಂಕಿತವು. ಮನುಷ್ಯನಲ್ಲಿ ಮತ್ತು ಪರಮೇಶ್ವರನಲ್ಲಿ ಎಷ್ಟು ಹೆಚ್ಚುಕಡಿಮೆ ಇರುವದೋ ಅಷ್ಟು ಹೆಚ್ಚುಕಡಿಮೆಯು ಬುದ್ಧಿ ಮತ್ತು ಅಂತಃಕರಣಗಳಲ್ಲಿರುತ್ತದೆ. ಮಾನವ ಜನ್ಮದ ಕರ್ತವ್ಯವಾದ ಈ ಶಿವಾನುಭವದ ವಿಚಾರ ಮಾಡುವದು ಅಥವಾ ಇದರ ಗೋಷ್ಠಿಯನ್ನಾಡುವದು ಅತಿಶಯ ಆದರ ಬುದ್ಧಿಯಿಂದುಂಟಾಗಿರಬೇಕು. ಪವಿತ್ರ ಮತ್ತು ಸಾದರ ಅಂತಃಕರಣದಿಂದ ಯಾರು ಸತ್ಯದ ಶೋಧ ಮಾಡುವರೋ ಅವರಿಗೆ ಸತ್ಯಸ್ವರೂಪನಾದ ಪರಶಿವನ ಸಾಕ್ಷಾತ್ಕಾರವಾಗುವದು. ಶಿವಾನುಭವವೆಂದರೆ ಚೇಷ್ಟೆಯು ಮತ್ತು ಮೌಜಿನ ಮಾತಲ್ಲ. ಸದಾ ಅತ್ಯಂತ ಪರಿಶ್ರಮದಿಂದ ಸಾಧನೆ ಮಾಡಿದರೆ, ಮತ್ತು ಪೂರ್ಣ ಆದರ ಬುದ್ಧಿಯಿಂದ ಪ್ರಯತ್ನ ನಡಿಸಿದರೆ ಶಿವಾನುಭವ ಮಂಟಪದಲ್ಲಿ ಸೇರಲು ಅಧಿಕಾರ ಬರುತ್ತದೆ. ವಿದ್ಯೆಯ ಬಲವತ್ತರದಿಂದ ಅದನ್ನು ಸೇರಬೇಕೆಂದರೆ ಪೂರ್ಣ ಮೋಸ ಹೋದಂತೆಯೇ ಸರಿ.

ಕೇವಲ ಬುದ್ಧಿಯ ಬಲದಿಂದ ನಾವು ಶಿವಾನುಭವ ಸುಖ ಪಡೆಯುವ ಹಟ ತೊಟ್ಟರೆ ಏನಾಗುವದು? ಅಂದರೆ ಬುದ್ಧಿಗೆ ಸ್ವಲ್ಪ ವ್ಯಾಯಾಮವಾದಂತಾಗಿ ಧಾರ್ಮಿಕ ಬೋಧದಿಂದ ಜನರನ್ನು ಆಶ್ಚರ್ಯಗೊಳಿಸಬಹುದು. ಜನರಾದರೋ, ಅಹಾ! ಈತನ ಜ್ಞಾನವೆಂಥದೋ, ಎಂದು ಅನ್ನಬಹುದು. ಪರಂತು ಶ್ರೀ ಆದಿ ಶಂಕರಾಚಾರ್ಯರರು'' ವಾಗ್ ವೈಖರೀ ಶಬ್ದಝುರೀ ಶಾಸ್ತ್ರ ವ್ಯಾಖ್ಯಾನ ಕೌಶಲಂ। ವೈದುಷ್ಯಾವಿದುಷಾಂತವದ್ ಭುಕ್ತಯೇನತು ಮುಕ್ತಯೇ|| ಎಂದು ಹೇಳಿದಂತೆ, ಅದೆಲ್ಲವೂ ಹೊಟ್ಟೆಬಟ್ಟೆಗಾಗಿರುತ್ತದಲ್ಲದೆ ನೆತ್ತಿಗಾಗಿರುವದಿಲ್ಲ. ಶರೀರ ವ್ಯಾಯಾಮದಿಂದ ಕ್ಷಣಮಾತ್ರ ಹ್ಯಾಗೆ ಉತ್ಸಾಹ ಉಂಟಾಗುತ್ತದೆಯೋ, ಅದರಂತೆ ನಮಗೆ ಸ್ವಲ್ಪ ಬೌದ್ಧಿಕ ಉತ್ಸಾಹ ಉಂಟಾದೀತು. ಇದಕ್ಕಿಂತಲೂ ಮುಂದೆ ನಮ್ಮ ಹೆಜ್ಜೆಯು ಹೋಗುವದಿಲ್ಲ. ಸತ್ಯವು ಸ್ವತಃಸಿದ್ಧವಸ್ತುವು. ಸೂರ್ಯನನ್ನು ತೋರಿಸಲಿಕ್ಕೆ ದೀವಟಿಗೆಯ ಉಪಯೋಗವು ಎಂದಿಗಾದರೂ ಬೀಳುತ್ತದೆಯೋ? ಈ ಸಂಬಂಧವಾದ ವಿವಾದವಾದರೂ ಉಂಟಾಗುತ್ತದೆಯೋ? ಇಲ್ಲ. ಸೂರ್ಯನ ಅಸ್ತಿತ್ವದ ಬಗ್ಗೆ ಬೆರಳು ಮಾಡಿ ತೋರಿಸುವದೇ ಸಾಕಾಗಿದೆ. ಅಲ್ಲಿ ವಾದ ವಿವಾದ ಬೇಡ. ಬುದ್ಧಿ ಚಾತುರ್ಯವೂ ಬೇಡ. ಪರಮಾತ್ಮನು ಸ್ವತಃಸಿದ್ಧನಿರೋಣದರಿಂದ, ಆತನ ದರ್ಶನವಾದುದೇ ಶಿವಾನುಭವದ ಸಿದ್ಧಿಯು. ಶುದ್ಧ ಮತ್ತು ಪವಿತ್ರ ಅಂತಃಕರಣ ಮತ್ತು ಉತ್ಕಟ ಪ್ರೇಮ

ಇವುಗಳ ದೀಪ ಹೊತ್ತಿಸಿ, ನಾವು ಮಾರ್ಗಸ್ಥರಾದರೆ, ನಮ್ಮ ಹೃದಯವು ನಮಗೆ ಶಿವಾನುಭವದ ಸರಳ ಮಾರ್ಗವನ್ನು ತೋರಿಸಿ ಶಿವನೊಳಗೆ ಸಾಮರಸ್ಯ ಮಾಡಿಸುತ್ತದೆ.

ಶಿವಾನುಭವವು ಇಂದ್ರಿಯಗಳ ಆಚೆಕಡೆಗದೆ. ಮತ್ತು ನಮ್ಮ ಅತ್ಯಂತವಿಶಾಲವಾದ ಕಲ್ಪನೆಯ ಹೊರಗಿರುತ್ತದೆ. ಇಂದ್ರಿಯಗಳ ದ್ವಾರಾ ಪರಮಾತ್ಮನ ದರ್ಶನ ತಕ್ಕೊಳ್ಳುವದು ಅಶಕ್ಯವದೆ. ಪರಮೇಶ್ವರನನ್ನು ಯಾರೂ ಈ ಚರ್ಮ ಚಕ್ಷುವಿನಿಂದ ನೋಡಿರುವದಿಲ್ಲ ಇನ್ನು ಮುಂದೆಯಾದರೂ ಯಾರೂ ಕಾಣಲು ಶಕ್ಯವಿಲ್ಲ. ನಮ್ಮ ಕಲ್ಪನೆಯನ್ನು ಎಷ್ಟು ವಿಸ್ತಾರ ಮಾಡಿದರೂ, ಅದರಲ್ಲಿ ಜಗತ್ತಿನ ಕಲ್ಪನೆಯು ಇದ್ದೇ ಇರುತ್ತದೆ. ಇದು ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೆ ವಿಶ್ವದ ಆಚೆಯ ಕಡೆಗೆ ಇರುವ ಪರಶಿವನ ದರ್ಶನವಾಗುವದು ಹೇಗೆ? ಶ್ರುತಿ ಮಾತೆಯ ವಚನಾನು ಸಾರವಾಗಿ "ಯತೋವಾಚೋನಿವರ್ತಂತೆ ಅಪ್ರಾಪ್ಯ ಮನಸಃಸಹ" ಅಂದರೆ ಪರಶಿವನು ಇಂದ್ರಿಯಾತೀತನು, ಕಲ್ಪನಾತೀತನು. ಯಾವ ಪ್ರಕಾರ ನಾವು ಇಂದ್ರಿಯ ದ್ವಾರಾ ಬಾಹ್ಯಕರ್ಮಗಳನ್ನು ಮಾಡುತ್ತೇವೆಯೋ, ಹಾಗೆಯೇ ಮನೋಮಯಾದಿ ಕೋಶಗಳಿಂದ ಅಂತಃಕರ್ಮ ಮಾಡುತ್ತಿರುತ್ತೇವೆ. ಪರಶಿವನು ಸರ್ವಕರ್ಮಗಳ ಆಚೆಯ ಕಡೆಗೆ ಇರೋಣದರಿಂದ ಮನೋಮಯಾದಿ ಕೋಶಗಳನ್ನು ದಾಟಲಿಕ್ಕೇಬೇಕು. ಇದರ ವಿನಹಾ ಶಿವಾನುಭವದ ಅನ್ಯ ಮಾರ್ಗವೇ ಇಲ್ಲ. ಇಲ್ಲಿಯವರೆಗೂ ಸಹಸ್ರಗಟ್ಟಲೆ ಜನರು ಆ ಪರಶಿವನ ಪ್ರತ್ಯಕ್ಷ ದರ್ಶನವನ್ನು ಹೊಂದಿದ್ದಾರೆ. ಈಗಲೂ ಯಾರಿಗೆ ಆ ಪರಶಿವನ ದರ್ಶನವಾಗುವ ಇಚ್ಛೆ ಇರುವದೋ, ಅವರಿಗೂ ಸಂದರ್ಶಿಸುತ್ತಾನೆ. ಪರಂತು ಆತನ ದರ್ಶನವಾಗುವದಕ್ಕೆ ನಮ್ಮ ಇಂದ್ರಿಯಗಳೂ ಹಾಗೂ ಮನೋಮಯಾದಿ ಕೋಶಗಳೂ ಎಂದೂ ಉಪಯೋಗ ಬೀಳುವದಿಲ್ಲ. ಈ ಎಲ್ಲವುಗಳನ್ನು ದಾಟಿ ಆಚೆಯ ಕಡೆಗೆ ಹೋಗಬೇಕಾಗಿರುತ್ತದೆ.

ಇಲ್ಲಿಯವರೆಗೂ ಯುಗಾನುಯುಗದಿಂದ ನಾವು ಯಾವ ಕರ್ಮಗಳನ್ನು ಮಾಡುತ್ತ ಬಂದಿರುವೆವೋ, ಅವು ನಮಗೆ ಪಾಶರೂಪವಾಗಿ ಆಸಚ್ಚಿದಾನಂದ ಸ್ವರೂಪನಾದ ಪರಶಿವನಿಂದ ದೂರ ಇರಿಸಲ್ಪಟ್ಟಿರುವದಾಗಿರುವವು. ಪ್ರಯುಕ್ತ ಇಲ್ಲಿಯವರೆಗೂ ಮಾಡಿದ ವಿವೇಚನೆಯಂತೆ, ನಾವು ನಡಿಯಲಿಕ್ಕೆ ಹತ್ತಿದರೆ ಈ ಪಾಶವು ಸಾವಕಾಶವಾಗಿ ಬಿಚ್ಚಲು ಪ್ರಾರಂಭ

ವಾಗಿ ಕಡೆಗೆ ಕಳಚಿ ಬಿದ್ದು ಹೋಗುವದು. ಅನಂತರ ನಾವು ಯಾವ ಸ್ಥಾನವನ್ನು ಮತ್ತು ಯಾವ ಸ್ಥಿತಿಯನ್ನು ಹೊಂದುತ್ತೇವೆಯೋ, ಆ ಸ್ಥಾನ ಆ ಸ್ಥಿತಿಗಳು ಇಲ್ಲಿಯವರೆಗೂ ಯಾರು ಜಾಗ್ರದವಸ್ಥೆಯಲ್ಲಿಯಾಗಲೀ ಸ್ವಪ್ನಾವಸ್ಥೆಯಲ್ಲಿಯಾಗಲೀ ಅತಏವ ಸುಷುಪ್ತಾವಸ್ಥೆಯಲ್ಲಾಗಲೀ ಕಾಣಲಾರದಂಥವುಗಳೇ ಇರುವವು. ಆ ನಮ್ಮ ಸ್ಥಿತಿಯು ಈ ಅವಸ್ಥಾತ್ರಯದ ಆಚೆಯ ಕಡೆಗಿದೆ. ಆಗ ನಮ್ಮ ಸ್ಥಿತಿಯೇ ಬೇರೆಯಾಗುವದು. ನಮ್ಮ ಭಾಷೆರೀತಿ ನಡಾವಳಿಗಳೂ ಸಹ ವಿಚಿತ್ರ ತರವಾದವುಗಳಾಗುವವು. ಆಗ ಜಗತ್ತು ನಮಗೆ ಹುಚ್ಚನೆಂದು ಸಂಬೋಧಿಸಬಹುದು. ಕಲ್ಪನಾತೀತ ವಸ್ತುವಿನ ಕಲ್ಪನೆಯು ಪ್ರಪಂಚದ ಪ್ರಾಣಿಗಳಿಗೆ ಇರಲು ಹ್ಯಾಗೆ ಶಕ್ಯವಾದೀತು? ಕಲ್ಪನಾತೀತ ಮನುಷ್ಯನು ಜಗತ್ತಿನ ದೃಷ್ಟಿಯಿಂದ ಹುಚ್ಚನಾಗಿ ಕಾಣಬಹುದು. ಇದರಲ್ಲಿ ಸಂಶಯವೇನು? ಆದ್ದರಿಂದಲೇ ಇಲ್ಲಿಯವರೆಗೆ ಆದ ಶಿವಶರಣರ ಚರಿತ್ರೆಗಳು ಅತಿ ವಿಚಿತ್ರತಮವಾಗಿರುವವು. ಇಂಥ ವಿಚಿತ್ರತಮವಾದ ಮತ್ತು ಸಕಲ ಸುಖಗಳ ನಿಧಿಯಾದ ಶಿವಾನುಭವವನ್ನು ಪಡೆಯುವದೇ ಪ್ರತಿ ಒಬ್ಬನ ಕರ್ತವ್ಯವಾಗಿದೆ. ಅದರೊಳಗೆ ವೀರಶೈವನಂತೂ ಶಿವಾನುಭವದ ಅನ್ವಯಾರ್ಥಕನೇ ಇದ್ದಾನೆ. ತನ್ನ ಅಂಗದ ಪ್ರತಿ ಒಂದು ಅವಯವವನ್ನು ಬಾಹ್ಯಾಂತರ ಇಂದ್ರಿಯಗಳನ್ನು ಲಿಂಗರೂಪವಾಗಿಯೇ ಕಂಡು ತಾನೂ ಲಿಂಗರೂಪನಾಗಿ ಲಿಂಗ ಭೋಗೋಪಭೋಗಿಯಾಗಿ ಕಡೆಗೆ ಅಪರತರ ಪರಂಜ್ಯೋತಿಸ್ವರೂಪನಾದ ನಿರಂಜನ ಮಹಾಪ್ರಭುವಾಗುವದೇ ಶಿವಾನುಭವವು. ಇದನ್ನು ಮೇಲೆ ಹೇಳಿದ ಶುದ್ಧಾಂತಃಕರಣದಿಂದ ಸಾಧಿಸುವದೇ ಶಿವಾನುಭವದ ಸತ್ಯ ಸತ್ಯ ಮಾರ್ಗವು.

ಓಂ ಶಾಂತಿಃ! ಓಂ ಶಾಂತಿಃ!! ಓಂ ಶಾಂತಿಃ!!!

ಲಿಂಗಸಹಿತ ನಡೆ ಲಿಂಗಸಹಿತ ನುಡಿ. ಲಿಂಗಸಹಿತ ಸರ್ವೇಂದ್ರಿಯ ಮುಖವು॥ ಲಿಂಗಾಲಿಂಗಿತವಾಗಿಹ ಇಂಥಾ ಲಿಂಗಾಂಗಿಯೇ ಸಹಜ ||೧॥



# ಅಲ್ಲಹುದು ಎಲ್ಲ ನಾನೇ.

ಲೇಖಕ-ಶ್ರೀ ಸಚ್ಚಿದಾನಂದ ಅನ್ನದಾನಿ ಸ್ವಾಮಿಗಳು ಮು. ಅಂಬೂರ
ಜಿ. ನಾರ್ಥ ಅರ್ಕಾಟ ಇಲಾಖಾ ಮದ್ರಾಸ.



ಮೂರು ವರ್ಷದ ಹುಡುಗನಿಗೆ ನೂರು ವರ್ಷದ ಮುದಿಕೆಯನ್ನು ಮದುವೆ ಮಾಡಿದಂತೆ, ಮಂಡುಕ ಒಂದು ಸರ್ಪನನ್ನು ಕೊಂದು ನುಂಗಿದಂತೆ, ನಿನ್ನೆ ಹುಟ್ಟಿದವ ನಾಳೆ ಹುಟ್ಟತಕ್ಕವನ ಕೂಡ ಮೊನ್ನಿನ ದಿನ ಜಗಳಾಡಿದಂತೆ, ಹೀಗೆ ಪ್ರಪಂಚಕ್ಕೆ ವ್ಯತ್ಯಾಸವಾಗಿರುವದು ಹ್ಯಾಗೆ ಸರಿಬಾರದೋ, ಹಾಗೆ ಎಲ್ಲವೂ ನಾನೇ ಎಂಬ ವಾಕ್ಯವು ಹ್ಯಾಗೆ ಸರಿಗಾಣುವದು? ಹುಲಿ, ಕರಡಿ, ಸಿಂಹ, ಆನೆ, ಎಮ್ಮೆ, ಕಾಗೆ, ನೊಣ, ಇರಿವೆ, ಮೀನ, ಮೊಸಳೆ, ಮರ, ಗಿಡ, ಮನುಷ್ಯ, ದೇವ, ದಾನವ ಮೊದಲಾದ ಯಾವತ್ತು ಒಂದೇ ಆದರೆ, ಹುಲಿ ಹಾವುಗಳಿಂದು ಭಯ ಪಡುವದೇತಕ್ಕೆ? ಸರ್ವತ್ರದಲ್ಲಿಯೂ ಉಳ್ಳ ನನ್ನನ್ನೆ ಇವು ಕೊಲ್ಲುವದಕ್ಕೆ ಕಾರಣವೇನು? ಎಂಬೀ ಪ್ರಶ್ನಗಳು ಉದ್ಭವಿಸಿದಲ್ಲಿ ಇವುಗಳನ್ನು ವಿಚಾರಿಸುವಾ.

ಮನುಷ್ಯನ ಸ್ಥಿತಿಯು ಹ್ಯಾಗೆ ಒಂದು ಶುನಕನು ನಾಲ್ಕು ದಿಕ್ಕುಗಳಲ್ಲಿ ನಿಲುವುಗನ್ನಡಿಗಳು ಸಾವಿರಾರು ವರ್ಣಿಸಿ ಇಡಲ್ಪಟ್ಟ ಒಂದು ಅಲಂಕಾರ ಮಂಟಪದಲ್ಲಿ ಪ್ರವೇಶಿಸಿದ ಕೂಡಲೇ ತನ್ನ ಸ್ವರೂಪವ ಆ ಕನ್ನಡಿಗಳಲ್ಲಿ ಅನೇಕವುಗಳನ್ನು ಕಂಡು, ಅವು ಜಗಳಕ್ಕೆ ಬರುವವೆಂದು ಎಣಿಸಿ ದಿಗಿಲುಗೊಂಡು ಪ್ರಾಣವನ್ನು ಬಿಡುವದೋ, ಹಾಗೆಯೇ ಇರುತ್ತದೆ. ಎನ್ನ ಪ್ರಿಯರುಗಳೇ, ಶಾಪದಿಂದ ವರಾಹರೂಪವನ್ನು ತಾಳಿದ ದೇವನನ್ನು ದೇವತೆಗಳು ಆಶ್ರಯಿಸಿ ಪುರಂದರನಾದಂಥ ನೀನು ಹಂದಿ ರೂಪವನ್ನು ಬಿಟ್ಟು ದೇವಲೋಕಕ್ಕೆ ಬರಬೇಕೆಂದು ಬೇಡಿ ಕೊಳ್ಳಲು, ತನ್ನ ಮರಿಗಳ ಮೇಲಣ, ತನ್ನ ಪ್ರಾಣದ ಮೇಲಣ ಆಶೆಯಿಂದ ಆ ಸಮಯದಲ್ಲಿ ಹಂದಿ ಜನ್ಮವೇ ಶ್ರೇಷ್ಠವೆಂದು ನೆನಿಸುವ ದೇವರಾಯನಂತೆಯೂ, ತಾಯಿಯಾದ ಸಿಂಹವು ಸತ್ತ ಕೂಡಲೆ ನರಿಗಳ ಕೂಟದಲ್ಲಿ ಬೆಳೆದು ತಾನು ಒಂದು ನರಿಯೇ ಎಂದು ಬಹು ದಿವಸ ನೆನಿಸುವದರಿಂದ ಆನೆ ಮೊದಲಾದ ಮೃಗಗಳನ್ನು ಕಂಡಾಕ್ಷಣವೇ ಮೇಲ್ಬಿದ್ದು ಕೊಲ್ಲುವ ಪರಾಕ್ರಮವು ಇದ್ದರೂ, ನರಿಗಳ ಕೂಟದಲ್ಲಿ ಶೇರಿ ಓಡಿ ಹೋಗುವ ಅಭ್ಯಾಸ ಮಾಡಿ

ಕೊಂಡು ಇರುವ ಸಿಂಹನ ಮರಿಯಂತೆಯೂ, ತನ್ನ ಸ್ವಪ್ನದಲ್ಲಿ ರಾಜ್ಯ ವನ್ನೂ ಹೆಂಡರು ಮಕ್ಕಳನ್ನೂ ಕಳೆದು ಕೊಂಡು ಪರರಿಗೆ ದತ್ತ ಸೇವಕ ನಾಗಿ ತಾನು ನಿಜವಾಗಿ ರಾಜನಾಗಿರುವ ಸ್ಥಿತಿಯನ್ನು ಪೂರ್ಣವಾಗಿ ಮರೆ ತವನಾಗಿ ಕಷ್ಟಗಳನ್ನು ವಹಿಸಿ ವ್ಯಸನ ಪಡುವ ರಾಜನಂತೆಯೂ, ಭ್ರಾಂತಿ ಕಲ್ಪಿತ ಮಿಥ್ಯಾ ಜಗತ್ತನ್ನು ಸತ್ಯವೆಂದು ನಂಬಿ, ಛಾಯಾಶರೀರ, ಪ್ರತಿ ಬಿಂಬ ದೇಹ, ಸ್ವಪ್ನ ಶರೀರ ಮನೋರಾಜ್ಯ ಕಾಯ ಇವುಗಳಂತಿರುವ ಈ ಅನಿತ್ಯವಾದ ಬಾಳ್ವೆ ಶಾಶ್ವತವೆಂದು ನಂಬಿ, ನಿರ್ನಾಮ, ನಿರೂಪ ನಿರ್ಗುಣ, ನಿರ್ಭೇದ್ಯ, ನಿರ್ವಿಕಾರ, ನಿಶ್ಚಲ, ನಿತ್ಯ, ನಿಷ್ಕಳ, ನಿರಂಜನ, ನಿರುಪಮ, ನಿರ್ವಿಕಲ್ಪ, ನಿತ್ಯಮುಕ್ತ, ಅದ್ವಯ, ಅನಾದಿಶುದ್ಧ, ಪರಾ ತ್ಪರ, ಪ್ರತ್ಯಕ್ಷ, ಅಖಂಡ, ಪರಿಪೂರ್ಣ, ಸತ್ಯಜ್ಞಾನ, ಘನಾನಂದ, ಏಕೋ ಬ್ರಹ್ಮ, ಪರಮಾತ್ಮನಾದ ತನ್ನನ್ನು ತಾ ಮರೆತಿರ್ದ ಕೇವಲವಾದ ಅಜ್ಞಾನ ಬೇರುಂಟೆ? ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳಿ, ಸೀಸ, ಹಯ ಮಣ್ಣಾ ದಿಯಾಗಿ ಬೇರೆ ಬೇರೆ ವಸ್ತುಗಳಲ್ಲಿ ಮಾಡಲ್ಪಟ್ಟ ಲಕ್ಷಾವಧಿಗಳಾದ ನೀರು ಕೊಡಗಳಲ್ಲಿಯೂ ಪ್ರತಿ ಬಿಂಬಿಸಿ ಪ್ರಕಾಶಿಸುವ ಸೂರ್ಯನಂತೆ ಎಲ್ಲೆಲ್ಲಿ ನೋಡಿದರೂ ಜೀವ ಜಂತುಗಳಿಗೆ ಜೀವನಾಗಿ ತೋರುತ್ತಲಿರುವ ಏಕ ಪರಾತ್ಪರ ವಸ್ತುವಿದ್ದರೂ, ಆ ವಸ್ತುವು ನಾನು ಅವನು ಅವಳು ಅದು ಇದು ಎಂದು ವಿಂಗಡಿಸಿ ಹೇಳುವಂಥಾದ್ದು ಚಿತ್ತವೃತ್ತಿಯಿಂದ ಉಂಟಾದ ಕೇಡಲ್ಲವೇ? ಬುದ್ಧಿ ದೋಷದಿಂದ ಹುಟ್ಟುವ ಇಂಥ ಕಲ್ಪಿತ ವಿಕಲ್ಪಿತಗಳು ಸಮಾಧಿ ಕಾಲದಲ್ಲಿ ತೋರುವದಿಲ್ಲ. ಆದರೆ ಮನುಷ್ಯನು ಎಡೆಬಿಡದೆ ಭೃಂಗವನ್ನು ಧ್ಯಾನಿಸಿ ಭೃಂಗವೆ ಯಾಗುವ ಕೀಟದಂತೆ ಸದಾ ಸಮಾಧಿ ನಿಷ್ಠಾಪರನಾಗಿ ಸರ್ವ ಉಪಾಧಿಗಳನ್ನು ಬಿಟ್ಟು ಬ್ರಹ್ಮಾನುಸಂಧಾನ ಬಲದಿಂದ ಪರಮಾತ್ಮ ಸ್ವರೂಪನೇ ತಾನಾಗುತ್ತಾನೆ.

ಆದರೆ ಈ ಬ್ರಹ್ಮಾನು ಸಂಧಾನ ಬಲವು ಪ್ರಪಂಚ ವ್ಯಾಮೋಹದಲ್ಲಿ ರುವ ಮನುಷ್ಯನಿಗೆ ಕಷ್ಟಕರವಾದದ್ದು. ಸಮುದ್ರದ ಉದ್ದಳತೆಯನ್ನು ಮಂಡುಕನೆಂಬ ಕಪ್ಪೆ ಬಲ್ಲುದೆ? ಮೇರುಗಿರಿಯ ಉದ್ದಳತೆಯನ್ನು ಒಂದು ಸಣ್ಣ ಕೀಟಕ ವರಿಯುವದೇ? ಕಲ್ಲಸಕ್ಕರೆಯ ರುಚಿಯನ್ನು ಎಷ್ಟು ವೆಗ್ಗಳ ವಾಗಿ ಪ್ರಸಂಗ ಮಾಡಿದರೂ ಅದನ್ನು ತಿನ್ನದವನು ರುಚಿಯ ಅರಿಯಲಾ ದೀತೇ? ಏ. ಬಿ. ಸಿ. ಅರಿಯದವನು ಎಮ್. ಏ. ಪರೀಕ್ಷೆಯಲ್ಲಿ ಜಯಶಾಲಿ ಯಾಗುವನೇ? ಎಂದಿಗೂ ಆಗಲಾರನು- ಹಾಗೆ ದೇಹಾಬಿಮಾನವನ್ನು

ತೊರೆಯುದವನು ಆತ್ಮಜ್ಞಾನವನ್ನು ತಿಳಿಯುವದು ಹ್ಯಾಗೆ? ಇವತ್ತೋ ನಾಳೆಯೋ ಅಥವಾ ಬಹು ಜಾಗ್ರತೆಯಲ್ಲಿಯೋ ಮರಣವಾಗುವ ದೇಹವನೆ ಶಾಶ್ವತವೆಂದು ನೆನೆಯುವವನು ಸರ್ವತ್ರದಲ್ಲಿ ಪರಿಪೂರ್ಣವಾಗಿ ತುಂಬಿರುವ ಏಕ ಪರವಸ್ತುವನ್ನು ಈ ಭೂಮಂಡಲದ ಮೇಲೆ ೯॥ ಕೋಟಿ ಮೈಲುಗಳಿಗತ್ತತ್ತಲಿದ್ದು ನಮ್ಮಗಳಿಗೆ ಉಷ್ಣವನ್ನೂ ಪ್ರಕಾಶವನ್ನೂ ಕೊಡುವಂಥ ಸೂರ್ಯನು ಸ್ವಲ್ಪ ಹೆಚ್ಚು ಕಡಿಮೆ ೩೦ ಕೋಟಿ ಚದರ ಮೈಲು ವಿಸ್ತೀರ್ಣವುಳ್ಳ ನಮ್ಮ ಭೂಮಿ ಅಲ್ಲದೆ, ಈ ಭುವನಕ್ಕಿಂತಲೂ ದೊಡ್ಡವಾದ ಗ್ರಹಂಗಳೂ ಹಲವು ತನ್ನ ಸುತ್ತಿ ಬರಲು ಅವುಗಳನ್ನು ಪ್ರಕಾಶಿಸಿ ತಾನು ನಡುಮಧ್ಯದಲ್ಲಿ ಇರುವದನ್ನು ತಿಳಿಯದಂಥ ನಮ್ಮಗಳಲ್ಲಿ ಅನೇಕರು ಆದಿತ್ಯನೇ ಸುತ್ತಿ ಬರುತ್ತಾನೆಂತಲೂ ಈ ಭೂಲೋಕವಗಲಕ್ಕಿಂತಲೂ ಸೂರ್ಯನು ಎಷ್ಟೋ ಭಾಗ ಚಿಕ್ಕವನೆಂತಲೂ ಎಣಿಕೆ ಗೊಳ್ಳುವದಿಲ್ಲವೇ? ಅಖಂಡ ಬಯಲಿನಲ್ಲಿ ಕಾಣುವಂಥ ಕೋಟಿ ಲೆಕ್ಕಕ್ಕೆ ಮೀರಿ ಕಾಣುವ ನಕ್ಷತ್ರಗಳು ಅನೇಕ ಭಾನುವಿನಂತೆ ಎಷ್ಟೋ ದೊಡ್ಡವಾಗಿ ಇದ್ದರೂ ಅವುಗಳು ಬುಳಬುಳುಕೆ ಹುಳಗಳಂತೆ ಕಾಣುವದಿಲ್ಲವೇ? ಹಾಗೆ ಅಲ್ಲಲ್ಲಿರುವ ಜೀವ ಕೋಟಿಗಳ ಮೊತ್ತವನ್ನು ಉಂಟುಮಾಡಿ ಸಲಹಿ ಲಯ ಮಾಡುವ ಕರ್ತನಾದ ಜಗದಾರಾಧ್ಯನನ್ನು ತಿಳಿಯುವದು ಅಲ್ಪ ಮನುಷ್ಯನಿಗೆ ಆಳವೆ? ಅಣು ಮೊದಲುಗೊಂಡು ಅಖಂಡ ಕೋಟಿಗಳಲ್ಲಿ ಉಳ್ಳ ಸರ್ವತ್ರದಲ್ಲಿ ತುಂಬಿ ಗಣಿಸಲಳವಲ್ಲದ ಆ ತೇಜೋಮಯ ಸ್ವರೂಪವನ್ನು ಮನೋವಾಕ್ಕಿನಲ್ಲಿ ತಿಳಿಯುವದು ಸುಲಭವೇ? ಸ್ಫಟಿಕಂಗಳು ತನ್ನ ಸುತ್ತಮುತ್ತಲು ಮುಚ್ಚಿಕೊಂಡಿರುವ ಅನೇಕ ವರ್ಣಗಳ ಪ್ರಕಾರ ಕೆಂಪು ಹಳದಿ ಹಸರು ಹಲವಾಗಿ ಕಂಡುಬಂದರೂ ಒಳಗಿರುವ ದೀಪ ಒಂದೇ ಅಲ್ಲವೇ? ಜಾತ್ರೆ ಪರಸೆಗಳಲ್ಲಿ ಹೊರಗೆ ಬರುವ ಭೂತ ಗಾರುಡಿ ಗೊಂಬೆಗಳು ತಾವೇ ನಡೆದು ಬರುವದಾಗಿ ತೋರಿದರೂ ಅವುಗಳನ್ನು ನಿಜವಾಗಿ ಹೊತ್ತುಕೊಂಡು ಬರುವದರೊಳಗಿರುವವನು ಜಾಣ ಮನುಷ್ಯನಲ್ಲವೇ? ದೇಹದ ಭೇದಗಳು ಲಕ್ಷವಿದ್ದರೂ ಸರ್ವ ಶರೀರದಲ್ಲಿಯೂ ಒಳಮುಟ್ಟಿ ಮುಟ್ಟಿದಂತೆ ಇದ್ದು ಅವುಗಳ ಆಟದಲ್ಲಿ ತಕ್ಕದಾಗಿ ಇರುವ ಆತ್ಮ ಸ್ವರೂಪವೇ ಶೃತಿಭೋಧ ಗುರುವಾಕ್ಯಯುಕ್ತಿ ಅನುಭವ ಇವುಗಳಿಂದ ತಿಳಕೊಳ್ಳುವದೆಂದರೆ ಅತಿ ಆಳವಾದ ನೆಲೆಯುಳ್ಳ ಸಮುದ್ರವನ್ನು ದಾಂಟಿ ಹೋಗಲು ಪ್ರಯತ್ನ ಮಾಡುವ ಕಾಗೆಯಂತೆ, ಮತ್ತು ಮೇರು ಪರ್ವತ ಶಿಖರವನ್ನು

ಏರಿ ನೋಡುವೆನೆಂಬ ಕುಷ್ಠ ರೋಗಿಯಂತೆಯೇ ಸರಿ. ಆದರೆ ಯಾವನು ಮಣ್ಣು ಹೆಣ್ಣಾದಿ ಆಶೆಗಳನ್ನು ತೊರೆದು ಬ್ರಹ್ಮಾನು ಸಂಧಾನದಲ್ಲಿ ತೊಡಗುವನೋ ಅವನಿಗೆ ಮೋಕ್ಷಪದ ಲಭ್ಯವಾಗುವದು ಸಹಜವಾಗಿರುತ್ತದೆ.

ಹೀಗೆ ಮೋಕ್ಷ ಕಾಂಕ್ಷಿಗಳಾಗಿ ಯಾರು ಸುವೃತ್ತಿಯುಳ್ಳವರಾಗಿ ಆಚರಿಸುತ್ತಾರೋ ಅವರೇ ಮಹಾತ್ಮರು ನಿಜವಾದ ಜ್ಞಾನಿಗಳು. ಸೂರ್ಯನಕಿರಣ, ಬೆಂಕಿಯಕಿಡಿ, ಸಮುದ್ರದ ಅಲೆಗಳಂತೆ ಬ್ರಹ್ಮದಲ್ಲಿ ಜೀವನಿರುವದನ್ನು ತಿಳಿಯುವಂಥ ಈ ಜ್ಞಾನಿಗಳು ದೇಹವಾಸನೆಯು ಬಿಟ್ಟು ಭೇದ ಬುದ್ಧಿಯು ತೊಲಗಿ ಸರ್ವದಲ್ಲಿಯೂ ತಮ್ಮನ್ನೇ ಕಾಣುತ್ತಾರೆ. ಇದರಿಂದ ಅನ್ಯ ಜೀವ ಜಂತುಗಳು ಅವರಿಗೆ ಯಾವಪ್ರಕಾರವೂ ಕೇಡನ್ನು ಮಾಡಲರಿಯವು. ಸತ್ಪುರಷರಕಂಡ ಮಾತ್ರದಲ್ಲಿಯೇ ಮೂಢನಾದರೂ ಕೂಡ ಶಾಂತರೂಪಿಯಾಗುವನು. ಸರ್ವಸಂಗ ಪರಿತ್ಯಾಗ ಸಚ್ಚಿದಾನಂದ ಕೇವಲ ಬ್ರಹ್ಮಸ್ವರೂಪಪೆಯಾಗಿ ನಿಂತಂಥ ಮಹಾ ಜ್ಞಾನಿಗಳ ಮುಂದೆ ಪಶುವು, ಹುಲಿ, ಆನೆ, ಮುಂಗಲಿ, ಸರ್ಪ, ವಿರೋಧವಿಲ್ಲದಂತೆ ಕೆಲದಾಡುತ್ತಲಿರುವವು. ಅತಿ ಮೂರ್ಖ ಮೃಗಂಗಳು ಇಂಥ ಮಹಾತ್ಮರ ಸನ್ನಿಧಾನದಲ್ಲಿ .ರಾಜನಲ್ಲಿಗೆ ತಪ್ಪು ಮಾಡಿದ ಕಳ್ಳನಂತೆ ತಮ್ಮ ಸ್ವಭಾವದ ದುಷ್ಟ ಗುಣಂಗಳನ್ನು ಕಳೆದು ಕೊಂಡು ಕೆಡಕು ಮಾಡದಂತೆ ಇರುವವು. ಇದು ಐಕ್ಯಭಾವ ತಿಳಿದ ಜ್ಞಾನಿಗಳ ಅರಹು ಪ್ರಭಾವದಿಂದಲ್ಲವೆ? ಸೂರ್ಯನನ್ನು ಗೂಗೆ ನೋಳ್ಪುದೆ? ಗರುಡ ಪಕ್ಷಿಯನ್ನು ಸರ್ಪ ಕಚ್ಚುವದೆ? ಪತಿವ್ರತೆಯನ್ನು ಕೆಡಿಸುವ ಪಾತಕಿಯು ಉಳಿದು ಬಾಳ್ವನೆ? ದಮಯಂತಿಯನ್ನು ಕೆಟ್ಟ ಗುಣದಿಂದ ಮುಟ್ಟಿದ ಬೇಡನು ಸುಟ್ಟು ಬೂದಿಯಾಗಲಿಲ್ಲವೆ? ಸೂರ್ಯನ ಪ್ರಕಾಶಕ್ಕಿಂತಲೂ ಹೆಚ್ಚಾಗಿರುವ ಅಹಿಂಸಾ ಯಂತ್ರದಿಂದ ಸುತ್ತಲ್ಪಟ್ಟ ಜ್ಞಾನಿಗಳನ್ನು ಸಮೀಪಿಸಿದಂಥ ರೋಷವೂ ವಿಷವೂ ಹೆಚ್ಚಿದಂಥ ಯಾವ ಪ್ರಾಣಿಗಾದರೂ ಯಾವದೊಂದೂ ಕೆಡಕು ಮಾಡುವದಕ್ಕೆ ಆದೀತೆ? ಏನು ಮಾಡಲರಿಯದು. ಮುಂದೊಂದು ಕಾಲದಲ್ಲಿ ಕಣ್ಣು ಕಿವಿ ಕೈಕಾಲು ಬಾಯಿ ಮೂಗು ಮೊದಲಾದವುಗಳೊಂದು ಸೇರಿ ಒಂದಾದರೂ ಕೆಲಸ ಮಾಡದೆ ಮಧ್ಯದಲ್ಲಿ ನಿಂದು ತಮ್ಮ ಕಷ್ಟಾರ್ಜಿತದಿಂದ ಜೀವಿಸುವ ಹೊಟ್ಟೆಯ ಮೇಲೆ ಕೋಪವನ್ನು ಮಾಡಿ ಅದನ್ನು ಉಪವಾಸ ವಿಟ್ಟು, ತಾವೂ ಬಲಗುಂದಿ ಬಾಡುವದನ್ನು ಕಂಡು, ತಾವು ಬೇರೆ ಒಡಲು ಬೇರೆ ಎಂಬ ಭಾವವು ದೂರಾದಂತೆ ಸರ್ವ ಜೀವಕೋಟಿಗಳಲ್ಲಿಯೂ ಭೇದ ಭಾವವನ್ನು

ಜ್ಞಾನಿಯು ಮಾಡಲಾರನು. ಅವನು ಏಕಾತ್ಮ ಜ್ಞಾನವನ್ನು ಪಿಡಿದು ಹಲ್ಲು ಕೀಳಿದ ಸರ್ಪದಂತೆ ತನ್ನ ದುರ್ಗುಣಂಗಳನ್ನು ನಾಶ ಪಡಿಸಿ, ಪತಿ ಸೇವಾ ತತ್ಪರಳಾದ ಪತಿವ್ರತೆಯಂತೆ, ಶಿಸುವನ್ನು ಸಲಹುವಾ ತಾಯಿಯಂತೆ, ಸರ್ವಾತ್ಮರುಗಳಲ್ಲಿಯೂ ತನ್ನ ಸ್ವರೂಪದಂತೆಯೇ ಭಾವಿಸುತ್ತಾನೆ.

ಈ ನಾಮರೂಪು ಪ್ರಪಂಚದಲ್ಲಿ ತೋರುವಂಥ ಸರ್ವವೂ ಕೆಟ್ಟುನಾಶ ಹೊಂದಿ ಮತ್ತೆ ತೋರುವಂಥವುಗಳೇ ಹುಟ್ಟಿ ಸಾಯುವ ವಸ್ತುಗಳಾಗಿ ಹೀಗೆ ಉದ್ಭವ ನಾಶಕ್ಕೆ ಅತೀತವಾಗಿರುವ ವಸ್ತುವು ಆತ್ಮ ಒಂದೇ ಇರುವದು. ಅವನು, ಅವಳು, ಅದು, ಇದು ಎಂಬುದಕ್ಕೆ ಅತೀತವಾದ ಮನೋವಾಕ್ಯ ಗಳಿಗೆ ತಿಳಿಯದಂಥ ಆ ಆತ್ಮನು ನಾನೇ ಇರುವೆನು. ಅಂದಬಳಿಕ ಅದು ಇದು, ಅಲ್ಲಿ ಇಲ್ಲಿ, ಅಂದು ಇಂದು, ಎಂದು ಎಣಿಸುವ ಭೇದ ನನಗೆಲ್ಲಿ ಯದು? ಅಣು ಮಹತ್ತು ಕಾಲದೇಶ, ಕಾರಣ ಕಾರ್ಯ ಎಂಬುವ ಪದಗ ಳಿಗೆ ವಸ್ತುಯಾವುದು? ಎಲ್ಲಿಯೂ ತುಂಬಿದ ಎಲ್ಲ ಕಡೆಗೂ ಇರುವ ತನ್ನ ತಾನೆ ವಸ್ತುವಾಗಿ ತನ್ನ ಬಿಟ್ಟು ಒಂದು ವಸ್ತುವುಂಟೇ? ಗ್ರಾಮದಲ್ಲಿರುವ ಮನೆಗಳಲ್ಲೆಲ್ಲ ಪ್ರಕಾಶಿಸುವ ಚಂದ್ರ ಒಂದೇಯಲ್ಲದೆ ಬೇರೆಬೇರೆ ಇರುವನೇ? ಅಣ್ಣ, ತಮ್ಮ, ಹುಡುಗ, ತಾತ, ಅಪ್ಪ, ಮುತ್ತ್ಯನೆಂದು ಹಲವರು ಹಲವಿಧ ವಾಗಿ ಒಬ್ಬ ಮನುಷ್ಯನನ್ನೇ ಕರೆಯುವದಿಲ್ಲವೆ? ಪ್ರಾಣ ಹೋದಬಳಿಕ ಈ ಮಾಯಾ ಬಂಧಂಗಳು ಮರೆತು ಬಿಡುವದಿಲ್ಲವೆ? ಮೇಘಗಳ ಸಮೂಹ ಸೂರ್ಯನನ್ನು ಮರೆ ಮುಸುಕಿದಂತೆ ಸಚ್ಚಿದಾನಂದ ಮೂರ್ತಿಯಾದ ನನ್ನನೆ ಎನ್ನಾವರಣ ಮರೆಯಾಗಿ ವಿಕ್ಷೇಪ ವಿಸ್ತರಣ ಶಕ್ತಿಗಳಿಂದ ಮರವೆಗೊಳಿಸಿ ಒಬ್ಬನಾದ ನನ್ನನೇ ಹಲವಾಗಿ ತೋರಿ ಅನಿತ್ಯ ದೇಹದಾಶೆಯನ್ನುಂಟು ಮಾಡಿ ರಜ್ಜು ಸರ್ಪನಂತೆ ಕಾಣುವ ತೆರನಂತೆ ಭ್ರಾಂತಿ ಮೋಹದಲ್ಲಿ ಕಟ್ಟಿ ರುವದು ಆಶ್ಚರ್ಯದಲ್ಲಿ ಆಶ್ಚರ್ಯವಲ್ಲವೇ? ಪಾಸೆ ಮುಚ್ಚಿದ ಮುಸುಕ ವನ್ನು ದಬ್ಬಿ ಶುದ್ಧವಾದ ಜಲವನ್ನು ಕುಡಿಯುವ ಪುರುಷನಂತೆ ಅಜ್ಞಾನ ಕಲ್ಪಿತ ನಾಮರೂಪಂಗಳನ್ನು ಬಿಟ್ಟು, ಚಿದಾನಂದ ಸ್ವರೂಪನಾದ ನನ್ನನೇ ಎಲ್ಲೆಲ್ಲಿಯೂ ಒಬ್ಬನಾಗಿ ಸ್ವಯಂಭುವಾಗಿ ಕಂಡಾಕ್ಷಣವೆ ಸರ್ವಕಾಲ ಭೇದಂಗಳೆಂಬ ವಾಕ್ಯಕ್ಕೆ ಪ್ರಾಣವೆಲ್ಲಿಯದು? ಒಂದು ಅಲಂಕಾರವಾದ ಮಂಟಪದಲ್ಲಿ ವರ್ಣಿಸಿರುವ ಸಾವಿರಾರು ರಸಗನ್ನಡಿಗಳಲ್ಲಿಯೂ ತನ್ನ ಮುಖವೇ ತೋರಲ್ಪಟ್ಟಂತೆ, ಹುಲಿ, ಕರಡಿ, ನಾಯಿ, ನರಿ, ಸಿಂಹ, ಆನೆ, ಮಹಿಷ, ಇರುವೆ, ನೊಣ, ಹುಳ, ಕ್ರಿಮಿ, ಹುಲ್ಲಕಡ್ಡಿ, ಗಿಡಗಂಟೆ, ವೃಕ್ಷ

ಪಕ್ಷಿಗಳು, ಮನುಷ್ಯ, ದೇವ, ದೈತ್ಯ ಮೊದಲಾಗಿ ಬೇರೆ ಬೇರೆ ಯಾಗಿ ತೋರುವ ಸರ್ವ ಪ್ರಾಣಿಗಳಲ್ಲಿಯೂ ಇದ್ದು ಸತ್ಯ ಜ್ಞಾನ ಆನಂದ, ಏಕ ನಿತ್ಯ, ನಿರಂತರ, ಶುದ್ಧ, ಪ್ರತ್ಯಕ್ಷ ಅಭಿನ್ನ, ಬ್ರಹ್ಮನಾದ ನನ್ನ ಪ್ರತಿಬಿಂಬವೆ ಯಾಗಿ, ಸ್ಫಟಿಕದಲ್ಲಿ ಶುದ್ಧ ಸ್ವಚ್ಛವಾದ ರೂಪು ಒಂದು ಸಮಯದಲ್ಲಿ ಕಿಂಚಿತ್ ಭೇದಪಟ್ಟು ಕಾಣುವಂತೆ, ಸರ್ವ ಸಾಕ್ಷಿಭೂತನಾದ ಆತ್ಮನಲ್ಲಿ ಪ್ರತಿ ಬಿಂಬವು ಅವಿದ್ಯಾ ಕಾಮ, ಕರ್ಮಾದಿ ರೂಪವಾದ ಪಾಶ ಬಂಧ ದಿಂದ ಕುಂದು ಕೊರತೆಗಳುಳ್ಳವಾದ ಅರಿವು ಶಕ್ತಿಗಳಿಗೆ ತಕ್ಕಂತೆ ಬೇರೆ ಬೇರೆ ಜೀವರಾಶಿಗಳಾಗಿ ಹೇಳಿದರೂ ಯಾವತ್ತು ಸ್ವಪ್ನ ಜಗತ್ತಿನಂತೆ ಸುಳ್ಳೇ ಅನಿತ್ಯವಾದುದು. ಕೆಲ ನಾಟಕ ಶಾಲೆಯಲ್ಲಿ ರಾಜ ವೇಷ ಹಾಕುವಂಥ ವನೇ ಮತ್ತೆ ಕಳ್ಳನ ವೇಷ ನಟಿಸುವ ಹಾಗೆ, ನಿದ್ರೆಮಾಡಿ ಎಚ್ಚತ್ತ ಬಳಿಕ ಸ್ವಪ್ನಾವಸ್ಥೆಯ ಸಮಯದಲ್ಲಿ ತೋರುವ ಸರ್ವವೂ ತನಗೆ ಬೇರೆಯಾಗಿ ಎಣಿಕೆಗೊಂಡಿರುವ ಹಾಗೆ, ಕಲ್ಪಿತ ಸಂಸಾರ ಸಾಗರವಾಗಿರುವೀ ಬಿಸಿಲ್ಗ ಮರೆ ನೀರಿನ ಭ್ರಮೆ ಇರುವ ಸ್ಥಿತಿಯು ಹಾಗೆ ಸರ್ಪ, ಹುಲಿ, ಬೆಕ್ಕು, ಇಲಿ, ಇರುವೆ, ನೊಣ, ಚಿಕ್ಕಾಡು, ಮೀನು, ಪಕ್ಷಿ, ವೃಕ್ಷ, ಗಿಡಗಂಟೆ, ಮನುಷ್ಯ, ದೇವ ದೈತ್ಯಾದಿ, ಆಸ್ತಿಕ, ನಾಸ್ತಿಕ, ಕರಿ ಬಿಳಿ, ಮ್ಲೇಂಚ್ಛ, ಇಂಡಿಯ, ಅಮೇರಿಕಾ, ಸ್ತ್ರೀ ಪುರುಷ ಸರ್ವ ಭೇದಂಗಳು ನಿಜವಾಗಿ ಶಾಶ್ವತವಾಗಿ ಭಾವಿಸಿ ಕೊಂಡಿರುವದು ಸಹಜವಲ್ಲವು. ಗುಬ್ಬಿ ಕಾಗೆ ಗಿಳಿ ಹುಲಿ ಬೆಕ್ಕು, ನಾಯಿ ಮೊದಲಾದ ಪಕ್ಷಿ ಮೃಗಾದಿಗಳಂತೆ ಕೂಗುವ ಶಕ್ತಿಯುಳ್ಳ ಮನು ಷ್ಯನು ಒಬ್ಬನೆಯಲ್ಲವೆ? ಪರೀಕ್ಷೆ ಗೋಸ್ಕರ ಸಾವಿರಾರು ರೂಪವನ್ನು ಧರಿ ಸಿದ ಮಹಾ ವಿಷ್ಣುವು ಒಬ್ಬನಲ್ಲವೇ? ಹಲವು ದ್ರವ, ನೊರೆ, ತೆರೆಗಳು ಅಲೆ ಯುವಂಥ ಸಮುದ್ರವು ಒಂದೆಯಲ್ಲವೇ? ಕುಂಬಾರನ ಗ್ರಹದ ಗಡಿಗೆ, ಮಡಿಕೆ, ಮುಚ್ಚಳ, ಬಿಂದಿಗಿ, ಕೊಡ, ಮಿಳ್ಳಿ ಗುಳ್ಳಿಗಳು ಹಲವು ವಿಧವಾಗಿ ಮಾಡಿ ಇಡಲ್ಪಟ್ಟರೂ ಒಂದೇ ಮಣ್ಣಿನಲ್ಲಿ ಮಾಡಿದಂತೆ ದೀಪದ ಪ್ರಕಾಶ ದಿಂದ ಭ್ರಾಂತಿ ತೊಲಗಿ, ಇದು ರಜ್ಜು ಸರ್ಪವಲ್ಲ ಎಂದು ತೋರುವಪ ರಿಂದ ಈ ಜಗತ್ತು ಆತ್ಮನಲ್ಲಿ ಭಿನ್ನವಾಗಿ ತೋರಲರಿಯದು.

ಏಕನಾಗಿರುವಂಥ ನನ್ನ ಬಿಟ್ಟು ಬೇರೊಂದು ಇಲ್ಲವೆಂಬುವದನ್ನು ತಿಳಿಯುವದು ಅತಿ ಉನ್ನತವಾದ ಬ್ರಹ್ಮಜ್ಞಾನವೇ ಬೇಕೆಂಬುವದಿಲ್ಲ. ಕಿಂಚಿತ್ ಅರಿವಿನಿಂದಲೂ ತಿಳಿಯ ಬಹುದು. ದೃಶ್ಯದಂತೆ ಕಾಣುವ ಸರ್ವವು ನೆನವಿಲ್ಲಿ ತೋರುವದಿಲ್ಲ. ದೃಶ್ಯವಾದ ಜಗತ್ತುಗಳನ್ನು ಬಿಟ್ಟು

ನೆನವೇ ನೋಡಲಾಗಿ ನೆನವಾಮುದು ಒಂದು ಪ್ರತ್ಯೇಕ ವಸ್ತುವಾಗಿ ಕಾಣ ಬರುವದಿಲ್ಲ. ಆವಕಾರಣ ಕಲ್ಪನಂತೆ ತೋರಿದ್ದು ಸ್ಥಾಣುವಾಗಲ್ಪಟ್ಟಂತೆ ನಿಜವಾಗಿ ತೋರುವ ನಾಮರೂಪು ಜಗವು ನನ್ನಲ್ಲಿರುವ ನೆನವೆ ಆಗಿರುವದು. ನನ್ನ ಬಿಟ್ಟು ನೆನಪು ಯಾವದೆಂದು ನೋಡಲಾಗಿ ನೆನವೆಂಬುವದೇ ಇಲ್ಲ. ನೆನವು ಬಿಟ್ಟು ನಾನಾರೆಂದು ನೋಡಲಾಗಿ ನಾನು ಪ್ರಕಾಶವಾಗಿ ನಿಂತಿರುವೆನು. ಆದ್ದರಿಂದ ಬ್ರಹ್ಮದಲ್ಲಿ ಮಾಯೆ, ಚಿನ್ನದಲ್ಲಿ ಆಭರಣ, ಮಣ್ಣಿನಲ್ಲಿ ಕೊಡ, ಸಮುದ್ರದಲ್ಲಿ ಅಲೆಯಂತೆ, ನನ್ನ ನೆನಪು ನನ್ನ ಬಿಟು ಬೇರಾಗಲಿಲ್ಲ. ನನ್ನಲ್ಲಿಯೇ ಕಲ್ಪಿತವಾದ್ದರಿಂದ ಇಲ್ಲಿ ಬೇರೆ ಬೇರಾಗಿ ನಿಜದಂತೆ ತೋರುವುದು. ಸರ್ವ ಜಗಜೀವಾದಿಗಳು ನಾನೇ ಆಗಿರುವೆ. ನನ್ನ ಬಿಟ್ಟು ಬೇರೊಂದು ತೋರದ ಕಾರಣ ನನಗೆ ವಿಚಾರ ಏಸಿರುವದು. ರಜ್ಜುವಿನಲ್ಲಿ ಸರ್ಪ ಸ್ಥಾಣುವಿನಲ್ಲಿ ಚೋರ ಒಮ್ಮೆಯಾದರು ಇಲ್ಲದ ಕಾರಣ ಜಗವು ಜೀವದೇವಶೆಂಬುವದು ಮಿಥ್ಯಾ ವ್ಯತ್ಯಾಸಗಳು ಪೊಚ್ಚನಾದ ನನ್ನಲ್ಲಿ ಯಾವಾಗಲು ಇಲ್ಲ. ಮಾಯಾಕಲ್ಪಿತ ಜನ್ಮ ಜರಾಮರಣ ಸಂಸಾರ ಸ್ವಪ್ನದಲ್ಲಿ ಭ್ರಮಿಸಿ ಆರೋಪಿತ ಪ್ರಪಂಚವನ್ನು ಅಧಿಷ್ಠಾನ ಬ್ರಹ್ಮವಾದ ನನ್ನಿಂದ ಬೇರಾಗಿ ಭಾವಿಸಿ ಬರುವದರಿಂದಲೇ ಜನನ ಮರಣಾದಿ ದುಃಖವನ್ನು ನಿಜವಾಗಿರುವಂತೆ ತೋರಿ ಕಷ್ಟ ಪಡುವ ವಾಧ್ಯಿಯುಸ್ತಔಷಧ ನಾಮ ಸ್ಮರಣೆ ಮಾಡುವದರಿಂದಲೇ ವ್ಯಾಧಿ ಸೊಸ್ತವಾದಿತೇನು ?

ಆದರೆ ಈ ತೆರದ ನಾನೇ ಬ್ರಹ್ಮನೆಂಬದರ ಅರಿವು ನೆನದಾಕ್ಷಣವೇ ಬಾರದು. ವಿವಾಹ ಮಾಡಿಕೊಳ್ಳುವದನ್ನು ನೆನಿಸಿದ ನಿಮಿಷಮಾತ್ರದಲ್ಲಿಯೇ ಕೂಸು ಹುಟ್ಟುನದೇ? ಶಿವೋಹಂ ಅಹಂಬ್ರಹ್ಮಸ್ಮಿ ಯೆಂದು ವಾಕ್ಕಿನಿಂದ ವುಚ್ಚರಿಸಿದರೆ, ಅನುಭವ ಜ್ಞಾನ ಇಲ್ಲದವರಿಗೆ ಆತ್ಮಜ್ಞಾನ ತಿಳಿಯಬಂದೀತೆ? ವಾಕ್ಕಿನಲ್ಲಿ ಮಾತ್ರ ವೇದಾಂತನುಡಿದು ತಾನು ಬ್ರಹ್ಮಜ್ಞಾನ ಪಡೆಯುವೆನೆಂಬವನು ಮಣ್ಣಿ ಕುದುರೆಯನೇರಿ ಸಮುದ್ರವನ್ನು ದಾಟುವನಂತೆ ಆಗುವದು. ದೊಡ್ಡ ಹೆಸರು ಪಡೆಯಬೇಕೆಂದು ಕಾಲುಗಳು ಅಲ್ಲಿಗಲ್ಲಿಗೆ ನಡೆದು, ಕಣ್ಣುಗಳು ನೋಡಿ, ಕೈಗಳು ಕೆಲಸವನ್ನು ಮಾಡಿ ತಮ್ಮ ಮರೆದು ಪರೋಪಕಾರಾರ್ಥ ಕಷ್ಟ ಪಡುವದರಿಂದಲೆ ಅವೆಲ್ಲವೂ ಸುಖದಲ್ಲಿರುತ್ತಿರುವವು. ಕಳೆದ ಜನ್ಮದಲ್ಲಿ ಮಾಡಿದ ಸತ್ಕರ್ಮಂಗಳ ಫಲದಿಂದ ಬಹಳ ದ್ರವ್ಯ ಪಡಕೊಂಡಿರುವ ಮೇಲೆ ಆ ದ್ರವ್ಯವನ್ನು ಕೊಡಿಡಲು ನೆನಿಸದೆ ಬಡ ಪ್ರಾಣಿಗಳಿಗೆ ಉದರ ಪೋಷಣೆ ಮಾಡಲು ತೊಡಗಿದರೆ,

ಅಂಥವರು ಸಾವಿರಾರು ಜನ್ಮಂಗಳಿಗತ್ತಲಾದರೂ ಆತ್ಮ ಜ್ಞಾನವನ್ನು ಪಡಿಯಲಾದೀತು. ಪುರಾತನ ಮುನಿಗಳು ಅಲ್ಪ ಸುಖವನ್ನು ಕೊಟ್ಟು ಆದಿಮೂಲವನ್ನು ಮರೆಯುವಂತೆ ಮಾಡುವ ದ್ರವ್ಯಾದಿಗಳು ತಮಗೆ ಬೇಡೆಂದೆನ್ನುವರು. ಹಾಗೆ ಕಲ್ಯಾಣದ ಬಸವೇಶ್ವರರು ಶರಣಸಂಕುಳದಲ್ಲಿ ಮೋಳಿಗಿ ಕಾಯಕವ ಮಾಡಿ ಗುರುಲಿಂಗಜಂಗಮಕ್ಕೆ ತೃಪ್ತಿಪಡಿಸುವ ದಂಪತಿಗಳ ತಾಪತ್ರಯಕ್ಕೆ ಕನಿಕರ ಬಟ್ಟು ಅವರ ಗೃಹಕ್ಕೆ ಬಿಜಯಂಗೈಸಿ ಶಿವಾರ್ಚನೆಗೈದು ಹೊನ್ನು ತುಂಬಿದ ಚೀಲವನ್ನು ಅಲ್ಲಿರಿಸಿ ಬರಲಿತ್ತ ಮೋಳಿಗಿ ಮಾರಯ್ಯಗಳು ಬರಲು ಇದೇನೆಂದು ಕೇಳಿ ಅದಕ್ಕೆ ಕೈಕಾಲುಗಳು ಸೋಂಕದಂತೆ ಎಳೆದು ತಿಪ್ಪೆಗೆ ಚೆಲ್ಲೆಂದರು. ನಿದ್ರೆಯಲ್ಲಿರುವ ಶ್ರೀ ರಾಮಕೃಷ್ಣ ಪರಮಹಂಸರು ಭಂಗಾರ ಬೆಳ್ಳಿ ಅಥವಾ ತಾಮ್ರದ ಪೈಸಗಳು ಸಹ ಕೈ ತಾಕಿದರೆ ನಡುನಡಗಿ ಸಾವೆನೆಂಬರು. ನಮ್ಮ ಜನರು ಆಯುಷ್ಯವರಿವಿಗು ಅಲ್ಪ ಸುಖಂಗಳಲ್ಲಿಯೇ ಕಾಲಕಳೆದು ಬಿಟ್ಟು ಪ್ರಾಣ ಪ್ರಯಾಣ ಸಮಯದಲ್ಲಿ ಮಾತ್ರ ನಾರಾಯಣಾ, ಮಾಧವಾ, ಗೋವಿಂದಾ, ಶಂಭೋ, ಮಹಾದೇವ, ಸಾಂಬಾ, ಸದಾಶಿವಾ ಎಂದು ಮಹಾ ಹೆಸರುಗಳನ್ನು ಯಾವದಾದರೊಂದು ದೃಢವಾಗಿ ನೆನೆಯುವದನ್ನು ಬೋಧಿಸಿದರೆ ಅದು ಸಾಧ್ಯವಾದೀತೆ? ಆಗಲರಿಯದು. ಹತ್ತು ವರುಷ ನಾಶೀಪುಡಿ ಹಾಕುವಂಥ ಅಭ್ಯಾಸಿಯು ತೀವ್ರವೇ ಅದನ್ನು ಬಿಡುವುದಾದೀತೆ? ಆಯುಷ್ಯದ ವರೆಗು ಮಾಡಿದ ಕೃತ್ಯಗಳ ನೆನಪುಗಳ ಬಲವು ಅಸಾಧ್ಯವದೆ. ಹ್ಯಾಗಂದರೆ ಸೂಜಿಕಾಂತವು ಕಬ್ಬಿಣವನ್ನು ಸೆಳೆಯುವಂತೆ, ಮನವನ್ನು ವಶಮಾಡಿಕೊಳ್ಳುವದು ಯಾವದೋ, ಅದುವೇ ಮರಣಕಾಲದಲ್ಲಿ ಮುಂದರಿದು ನಿಲ್ಲುವದು. ಸಮೀಪದಲ್ಲಿ ಇರುವಂಥವರು ಉಪದೇಶಮಾಡುವ ನಾರಾಯಣಾ, ಮಹಾದೇವಾ ಎಂದು ಹೇಳುವ ವಾಕ್ಯಗಳು ಕರ್ಣದಲ್ಲಿ ಏರುವದಿಲ್ಲ. ಇದರಂತೆ ಮಹತ್ತಾದ ಸ್ಮರಣೆ ಪ್ರಾಣ ಪ್ರಯಾಣದಲ್ಲಿ ಪಡಕೊಳ್ಳುವದು ಬಹಳ ದುರ್ಲಭವಾದ ಕಾರಣ ಈ ದೇಹದ ಹೊದಿಕೆ ಬಿಚ್ಚುವವರೆಗೂ ಇತರ ಜೀವಿಗಳಲ್ಲಿ ಅಂತಃಕರುಣವನ್ನು ವಹಿಸಿ ಭ್ರಾಂತಿಯಿಂದ ಬೇರೆ ಬೇರೆ ಕಾಣುವ ಈ ಸರ್ವವು ನಾನೆ ಎಂದು ಅಖಂಡ ಆನಂದ ಏಕಾತ್ಮ ನೆಲೆಯಲ್ಲಿ ಬ್ರಹ್ಮಾತ್ಮೈಕ್ಯಜ್ಞಾನವುಳ್ಳವರಾದರೆ ಯಾವ ಜಾತಿ ಕುಲಗೋತ್ರವಾಶ್ರಮಂಗಳಲ್ಲಿ ಸೇರಿದವರಾದರೂ ಕೂಡ ಶಾಶ್ವತವಾದ ಆನಂದವನ್ನು ಪಡೆದುಕೊಳ್ಳುವರು. ಇದರಲ್ಲಿ ಏನೂ ಸಂದೇಹವಿಲ್ಲ.

ಓ ಎನ್ನ ಪ್ರಿಯರುಗಳೇ, ಇದೆಲ್ಲ ನಿಜ. ಪರಂತು ಶಾಸ್ತ್ರ ಪುರಾಣ ವೇದಾಂತವನ್ನು ಇತರರಿಗೆ ಚನ್ನಾಗಿ ಹೇಳಲಿಕ್ಕೆ ಬರುತ್ತದೆ ಹೊರ್ತು ಆದರಂತೆ ತಾನು ನಡೆಯುವದು ಕಷ್ಟವಾಗಿರುವದು. ನಡೆನುಡಿ ಶುದ್ಧವಾಗಿರುವದೇ ಶರಣರ ಮತವೆಂದು ತಿಳಿದು ಮನೋಸಂಕಲ್ಪವಳಿದು ದ್ವಂದ್ವಾತೀತನಾಗಿ ಈ ಪ್ರಪಂಚವನ್ನು ಕಡೆಹಾಯ್ದು ಹೋಗಲಿಕ್ಕೆ ಒಂದು ಉಪಾಯವಿದೆ. ಅದು ಯಾವದು? ತ್ರಿಕರಣ ಶುದ್ಧವಾಗಿ ನಡೆ ನುಡಿ ಒಂದಾಗಿ ನಡೆಯುವದು. ಹೊನ್ನು ಹೆಣ್ಣು ಮಣ್ಣಾದಿ ಮಲತ್ರಯದಾಶೆಯನ್ನು ಬಿಡುವದು. ಅರುಹು ಕರದಲ್ಲಿ ಹಿಡಿಯುವದು. ಅಂತಹ ಕರದಲ್ಲಿ ಇಷ್ಟಲಿಂಗವನ್ನು ಹಿಡಿಯುವದು. ತ್ರಿಕಾಲದಲ್ಲಿ ಅದನ್ನು ಪೂಜಿಸುವದು. ತನ್ನಲ್ಲಿ ಕಾಮಕ್ರೋಧಾದಿ ದಶೇಂದ್ರಿಯ ಮನ ಬುದ್ಧಿ ಚಿತ್ತ ಅಹಂಕಾರಾದಿಗಳು ತನ್ನ ಆಜ್ಞೆಗೆ ಮಿಕ್ಕಿ ನಡೆಯದಂತೆ ಅವುಗಳನ್ನು ಇಡುವದು. ಇವೇ ಇರುವವು. ಆದರೆ ಮನುಷ್ಯನು ಹೀಗೆ ನಡೆಯದೆ ಅನ್ಯರಿಗೆ ಉಪದ್ರವ ದುಃಖಾದಿನೋವುಗಳನ್ನು ಮಾಡುತ್ತ ಅನ್ಯರ ಮನೆಮಂದಿಗಳನ್ನು ಹೊಡೆದು ಬೈದಾಡುತ್ತ ಹೀಗೆ ವ್ಯವಹರಿಸಿದರೆ ಬೊಬ್ಬಾಟ ಕೂಗಾಟ ಬಡಿದಾಟ ಜನರ ಕೂಟ ಚೀಪಾಟ ಸರಕಾರು ತಿಳಿಯಲಾಟ, ಹಿಡಿಪಾಟ ಹೆಡೆಮುಡಿ ಕಟ್ಟುವಾಟ ಇವೇ ತಪ್ಪಿಗೆ ತಕ್ಕ ಶಿಕ್ಷೆಯಾಗುವವು.

ತಾತನು ನನ್ನ ತಂದೆಯನ್ನು ಹಡೆದು ಮದುವೆಮಾಡಿ ತನ್ನ ದಾರಿಯೇ ತೋರಿ ಹೋದನು. ನನ್ನ ತಂದೆ ನನ್ನನ್ನು ಹೆತ್ತು ಓದುಬರಹವನ್ನು ಕಲಿಸಿ ಒಂದು ಹೆಣ್ಣು ಜೋಡು ಮಾಡಿ ಸತ್ತು ಮಣ್ಣಾಗಿ ಹೋದನು. ಇದು ನನ್ನ ಹಿರಿಯರು ತೋರಿತೋರಿ ಕೊಟ್ಟ ಸರಳಹಾದಿ. ಪ್ರಪಂಚ ಸುಖಕ್ಕೆ ಮಿಕ್ಕಿನ ಸುಖವೇ ಇಲ್ಲವೆಂದು ಈ ಹಾದಿಯನೇ ಹಿಡಿದಿರುವೆನಲ್ಲ! ಹೀಗೆ ಪ್ರಪಂಚ ಅನೇಕ ಯುಗಯುಗಂಗಳಿಂದ ಬೆಳೆಯುತ್ತ ನಡೆದದೆ. ಛೀ, ಛೀ, ಈ ಊನವಾದ ನೇತ್ರದಿಂದೆ ನೋಡಿ ಮರುಳಾದೆ. ಜ್ಞಾನನೇತ್ರದಿಂದೆ ಈಕ್ಷಿಸಿ ನೋಡಲಾಗಿ ಅದ್ಭುತವಾದ ಅಹಂಕಾರ. ಆಹಾ! ಮಾಯಾ ಪ್ರಪಂಚವನು ಸಂಸಾರಸಾಗರವನು ಕಡೆಹಾಯ್ದು ತಡೆ ಸೇರುವದು ಶಿವನೇ ಬಲ್ಲನಲ್ಲದೆ. ಮಂದಮತಿ ಪಶುನೇತ್ರಗಳಿಗೆ ಎಂದಿಗೂ ಗೋಚರವಾಗದು. ಪ್ರಿಯರುಗಳೇ, ಜ್ಞಾನನೇತ್ರ ಅರಳಿಸಲು ದಾರಿಯಾವುದು? ಗುರುಹಿರಿಯರುಗಳಲ್ಲಿ ಭಯ, ಭಕ್ತಿ, ಪರೋಪಕಾರ, ಜೀವಕಾರುಣ್ಯ, ಪರಸ್ತ್ರೀ ಪರದ್ರವ್ಯ ಬಯಸದಿರುವಿಕೆ, ಸರ್ವವಿಷಯಾದಿ ವಸ್ತುಗಳಲ್ಲಿ ನಿರ್ಮೋಹ, ಸರ್ವರಲ್ಲಿ

ಹಿತವಾಕ್ಯವನ್ನೇ ಆಡುವದು. ಸ್ವಾರ್ಜಿತ ಕಾಯಕವ ಮಾಡಿ ಪರರಿಗೆ ಹಿತ ಮಾಡುವದು. ಕಾಮ ಕ್ರೋಧಾದಿಗಳನ್ನು ಬಿಡುವದು. ಶಮೆದಮೆಶಾಂತಿಗಳನ್ನು ಹೊಂದಿ, ನಾಮರೂಪ ದೇಹಾದಿಗಳು ನಾನಲ್ಲವೆಂದು ತಿಳಿಯುವದು, ಅಜ್ಞಾನದಿಂದ ಬಂದ ಈ ಶರೀರವನ್ನು ಸುಜ್ಞಾನದಿಂದೆ ಸಿರ್ಮಲ ಮಾಡಿಕೊಳ್ಳುವದು, ಇವೇ ಯುಕ್ತಿ, ವಿರಕ್ತಿ ನಿಜವು.

**ಶಿವೋಹಂ, ಶಿವೋಹಂ, ಸೋಹಂ ಸೋಹಂ**

---

# ವೀರಶೈವ ಧರ್ಮವೂ ಆಂಧ್ರ ವಾಙ್ಮಯವೂ

ಲೇಖಕಃ- "ಶಿವಸುತ"

## (ಲೇಖಾಂಕ ೧)

## ಮುನ್ನುಡಿ.

ಸನಾತನವಾದ ವೀರಶೈವ ಧರ್ಮವು ಪೂರ್ವ ಮತ್ತು ಮಧ್ಯ ಯುಗಗಳಲ್ಲಿ ಬರೇ ಕರ್ನಾಟಕಪ್ರಾಂತದಲ್ಲಲ್ಲದೇ ಆಂಧ್ರ ಮತ್ತು ದ್ರಾವಿಡ ಮಂಡಲಗಳಲ್ಲಿ ಸಹಾ ವ್ಯಾಪ್ತವಾಗಿದ್ದು ಮಹೋನ್ನತ ವೈಭವ ಶಿಖರವನ್ನಲಂಕರಿಸಿದ್ದಿತೆಂಬುದಕ್ಕೆ ಆಯಾ ಪ್ರಾಂತಗಳ ವಾಙ್ಮಯವೇ ಸಾಕ್ಷಿಯಾಗಿರುತ್ತದೆ. ಪೂರ್ವದ ವೀರಶೈವ ಪಂಡಿತರೂ, ಕವಿಗಳೂ ಮತ್ತು ತತ್ವಜ್ಞರೂ ಕೇವಲ ಒಂದೇ ಭಾಷೆಯಲ್ಲಿ ಮಾತ್ರವಲ್ಲದೆ ಅನೇಕ ಭಾಷೆಗಳಲ್ಲಿ ಅಪ್ರತಿಮಾನವಾದ ಪಾಂಡಿತ್ಯವನ್ನು ಸಂಪಾದಿಸಿಕೊಂಡಿದ್ದು ತನ್ಮೂಲಕ ಧರ್ಮ ಪ್ರಸಾರದ ಮಹತ್ಕಾರ್ಯವನ್ನು ಜರುಗಿಸುತ್ತಿದ್ದರು. ಘನಶಿವಯೋಗಿಗಳೂ, ಅದ್ವಿತೀಯ ವಿದ್ವನ್ಮಣಿಗಳೂ, ಅತುಲಿತ ಕವಿತಾ ದುರಂಧರರೂ ಆದ ಶ್ರೀಪಾಲ್ಕುರಿಕೆ ಸೋಮನಾಥರು ಸಂಸ್ಕೃತ, ಕನ್ನಡ, ತೆಲಗು, ತಮಿಳು, ಮತ್ತು ಮರಾಠಿ ಭಾಷೆಗಳನ್ನರಿತವರಾಗಿದ್ದು ಸಂಸ್ಕೃತಾಂಧ್ರ ಕರ್ನಾಟಕ ಭಾಷೆಗಳಲ್ಲಿ ಅನೇಕ ಉದ್ಗ್ರಂಥಗಳನ್ನು ರಚಿಸಿರುವರಲ್ಲದೇ; ಈ ೫ ಭಾಷೆಗಳಲ್ಲೂ ತಮ್ಮ ಉಪಾಸ್ಯ ಮೂರ್ತಿಯಾದ ಬಸವೇಶ್ವರನನ್ನು ಸ್ತುತಿಸಿರುವರು. ಇದಲ್ಲದೆ ತದಿತರಾಂಧ್ರ ಕವಿಗಳಾದ ಶ್ರೀನಾಥ, ಪಿಡುಪರ್ತಿ ಸೋಮಕವಿ, ಪಿಡು

ಪರ್ತಿ ಬಸವಕವಿ, ಧೂರ್ಜಟಿ ಮುಂತಾದವರು ಕನ್ನಡವನ್ನು ಚೆನ್ನಾಗಿ ಬಲ್ಲವರಾಗಿದ್ದರೆಂಬುದಕ್ಕೆ ತತ್ಕೃತಕಾವ್ಯಗಳಿಂದ ಸ್ಪಷ್ಟವಾಗುವುದು. ಇನ್ನು ಕನ್ನಡದಲ್ಲಿ ಷಡಕ್ಷರಿದೇವರು ತಮಿಳು ಕಾವ್ಯದ ಅನುವರ್ತನವಾಗಿ ತಮ್ಮ "ರಾಜಶೇಖರ ವಿಳಾಸ" ವನ್ನು ಬರೆದಿರುತ್ತಾರೆ. ಶ್ರೀ ತೋಂಟದಾರ್ಯರು ಸೋಮನಾಥನ ಕಾವ್ಯಗಳನ್ನೆಲ್ಲಾ ಮನನ ಮಾಡಿಕೊಂಡಿದ್ದರಲ್ಲದೆ ಆತನ ಜೀವಿತ ಚರಿತ್ರೆಯನ್ನು ಸಹಾ ಬರೆದಿರುವರಾದಕಾರಣ ಅವರು ಆಂಧ್ರ ಭಾಷಾ ಪ್ರವೀಣರಾಗಿದ್ದಿರಬೇಕು. ಭೀಮಕವಿಯು ಬಸವ ಪುರಾಣವೂ, ಚಾಮರಸನ ಪ್ರಭುಲಿಂಗಲೀಲೆಯೂ, ಗುರುರಾಜ ಕವಿಯು ಪಂಡಿತಾರಾಧ್ಯ ಚರಿತ್ರೆಯೂ, ನೀಲಕಂಠಾಚಾರ್ಯರ "ಆರಾಧ್ಯ" ಚರಿತ್ರೆಯೂ, ಸಿದ್ಧನಂಜೇಶನ ಗುರುರಾಜ ಚರಿತ್ರೆಯೂ ಪಾಲ್ಕುರಿಕೆ ಸೋಮನಾಥ ಕೃತ ಗ್ರಂಥಗಳ ಆಧಾರದಿಂದಲೇ ಬರೆಯಲ್ಪಟ್ಟಿವೆ. ದ್ರಾವಿಡ ವಾಙ್ಮಯದಲ್ಲಿ ಪ್ರಸಿದ್ಧರಾದ ಶಿವಪ್ರಕಾಶ ಸ್ವಾಮಿಗಳ ಗ್ರಂಥಗಳನ್ನವಲೋಕಿಸಿದಲ್ಲಿ ಅವರು ಆಂಧ್ರ ಕರ್ನಾಟಕ ಭಾಷೆಗಳನ್ನು ತಿಳಿದವರಾಗಿದ್ದರೆಂದು ವ್ಯಕ್ತವಾಗುತ್ತದೆ. ಈ ರೀತಿ ಆಗಿನ ಕಾಲದಲ್ಲಿ ವೀರಶೈವ ವಾಙ್ಮಯ ಮಹಾಪ್ರವಾಹವು ಗೀರ್ವಾಣ ಪರ್ವತಸಾನು ಪ್ರದೇಶದಲ್ಲಿ ಆವಿರ್ಭವಿಸಿ, ತೆಲಗು, ಕನ್ನಡ ಮತ್ತು ತಮಿಳು ಈ ಮೂರು ಉಪನದಿಗಳಿಂದ ಕೂಡಿಕೊಂಡು ವಿಜಯ ಘೋಷವನ್ನು ಮಾಡುತ್ತಾ ಸಮಸ್ತದೇಶಗಳಲ್ಲಿ ಶಿವಜ್ಞಾನಾಮೃತ ಧಾರೆಯನ್ನೆರೆಯುತ್ತಾ ಪ್ರವಹಿಸುತ್ತಿದ್ದಿತು. ಅದುಕಾರಣ ವೀರಶೈವಗ್ರಂಥ ಪರಿಶೋಧಕರು ದ್ರಾವಿಡಾಂಧ್ರ ವಾಙ್ಮಯ ಕ್ಷೇತ್ರಗಳನ್ನು ಮರೆಯಬಾರದಾಗಿ ಈ ಲೇಖಕನ ವಿನಂತಿ.

## ವೀರಶೈವರೂ ಆಂಧ್ರದೇಶವೂ.

ಮದರಾಸು ಪ್ರಾಂತದ ಪೂರ್ವೋತ್ತರ ದಿಗ್ಭಾಗದಲ್ಲಿ ಒರಿಸ್ಸಾ ದೇಶದಿಂದ ನೆಲ್ಲೂರು ಮಂಡಲದ ವರೆಗೂ ಪಶ್ಚಿಮಕ್ಕೆ ಅನಂತಪುರ ಮಂಡಲದ ವರೆಗೂ ವ್ಯಾಪಿಸಿರುವ ದೇಶಕ್ಕೆ ಆಂಧ್ರ ದೇಶವೆಂತಲೂ, ತೆಲುಗು (ತೆನುಗು) ದೇಶವೆಂತಲೂ ಕರೆಯುವರು. ಆಂಧ್ರವಂಶದ ರಾಜರುಗಳ ವಶವಾಗಿದ್ದ ಈ ದೇಶಕ್ಕೆ ಆ ಹೆಸರುಂಟಾಯಿತು. "ತೆಲಗು" ಎಂಬ ಶಬ್ದವು "ತ್ರಿಲಿಂಗ" ಶಬ್ದದ ರೂಪಾಂತರವು. ವೀರಶೈವರ ವಶದಲ್ಲಿರುವ ಪವಿತ್ರ ಭೂಮಿಗಳ ಸುತ್ತಲೂ ಲಿಂಗಮುದ್ರೆಯುಳ್ಳ ಕಲ್ಲುಗಳಿರುವಂತೆ ಈ ದೇಶದ

ಉತ್ತರ ಭಾಗದಲ್ಲಿ ದ್ರಾಕ್ಷಾರಾಮದ ಭೀಮೇಶ್ವರ ಲಿಂಗವೂ, ಪಶ್ಚಿಮದಲ್ಲಿ ಶ್ರೀಶೈಲ ಕ್ಷೇತ್ರದ ಮಲ್ಲಿಕಾರ್ಜುನ ಲಿಂಗವೂ, ದಕ್ಷಿಣ ದಿಗ್ಭಾಗದಲ್ಲಿ ಕಾಳಹಸ್ತೀಶ್ವರ ಲಿಂಗವೂ ವಿರಾಜಿಸುತ್ತಿರುವುದರಿಂದ ಈ ದೇಶಕ್ಕೆ ತ್ರಿಲಿಂಗ ಅಥವಾ ತೆಲುಗು ದೇಶವೆಂದು ಹೆಸರುಂಟಾಯಿತು. ಹೆಸರಿಗೆ ತಕ್ಕಂತೆ ಇಲ್ಲಿ ಪೂರ್ವದಿಂದಲೂ ಶೈವಮತ ಪ್ರಾಬಲ್ಯವೇ ವಿಶೇಷವಾಗಿದ್ದು, ಈ ದೇಶದಲ್ಲಿ ಶಂಕರಾಚಾರ್ಯ ಪ್ರತಿಪಾದಿತ ವೈದಿಕ ಸ್ಮಾರ್ತಮತವೂ ವೈದಿಕ ತಾಂತ್ರಿಕ ವೀರಶೈವಮತವೂ ಮತ್ತು ಕೇವಲ ತಾಂತ್ರಿಕವಾದ ಪಾಶುಪತ ಮತವೂ ವಿಶೇಷವಾಗಿ ಹಬ್ಬಿ ಇಲ್ಲಿ ಮೊದಲು ಅಲ್ಲಲ್ಲಿ ಕಾಣ ಬರುತ್ತಿದ್ದ ಜೈನ, ಬೌದ್ಧ ಮತಗಳನ್ನು ನಿರ್ನಾಮಗೊಳಿಸಿದವು. ಧಾರ್ಮಿಕ ಸಹಕಾರತೆಯು ಆಂಧ್ರ ದೇಶೀಯರಲ್ಲಿ ಗಾಢವಾಗಿ ನೆಲೆಗೊಂಡಿರುವದರಿಂದ ಕರ್ನಾಟಕ ಮತ್ತು ದ್ರಾವಿಡ ದೇಶಗಳಲ್ಲಿ ಸಂಭವಿಸಿದಂಥಾ ಭಯಂಕರಧಾರ್ಮಿಕಾಂದೋಳನಗಳು ಆಂಧ್ರ ದೇಶದಲ್ಲಿ ಯಾವ ಕಾಲದಲ್ಲೂ ಜರಿಗಿದಂತೆ ತೋರುವದಿಲ್ಲ. ಇದಕ್ಕೆ ಅದ್ವೈತ ತತ್ವ ಪ್ರಸಾರದ ವಿಶೇಷತೆಯೇ ಕಾರಣವಾಗಿರಬಹುದೆಂದೂಹಿಸಬೇಕಾಗಿದೆ.

ಆಂಧ್ರದೇಶದಲ್ಲಿ ನೆಲೆಗೊಂಡಿದ್ದ ವೀರಶೈವ ಧರ್ಮದ ಚರಿತ್ರೆಯನ್ನು ನಾಲ್ಕು ಭಾಗಗಳಾಗಿ ಸ್ಥೂಲವಾಗಿ ವಿಭಾಗಿಸಬಹುದು.

(೧) ಬಸವೇಶ್ವರನ ಕಾಲಕ್ಕಿಂತಲೂ ಹಿಂದಿನ ಯುಗವು
(೧೦ ನೇ ಶತಮಾನದಿಂದ ೧೨ನೆ ಶ|| ವರಿಗೆ)
(೨) ಬಸವೇಶ್ವರನ ಯುಗವು. (೧೨ ನೇ ಶತಮಾನದಿಂದ ೧೪ನೆ ಶ|| ವರಿಗೆ)
(೩) ಮಧ್ಯ ಯುಗವು.
(೪) ಆಧುನಿಕ ಯುಗವು.

## ೧. ಬಸವೇಶ್ವರನ ಕಾಲಕ್ಕಿಂತಲೂ ಹಿಂದಿನ ಯುಗವು.

ಆಂಧ್ರ ಭಾಷೆಯ ಪ್ರಾಚೀನತೆಯ ಬಗ್ಗೆ ಅನಂತ ಭಿನ್ನಾಭಿಪ್ರಾಯಗಳಿದ್ದರೂ ಆಂಧ್ರವಾಙ್ಮಯವು ಕ್ರಮವಾಗಿ ಚಿರಪ್ರಸಿದ್ಧನಾದ ನನ್ನಯ ಭಟ್ಟಾರಕನಿಂದಲೇ ಪ್ರಾರಂಭವಾಯಿತೆಂದು ಹೇಳಬಹುದು. ಕ್ರೀ. ಶ. ಹತ್ತನೆ ಶತಮಾನಕ್ಕಿಂತಲೂ ಪೂರ್ವದಲ್ಲಿ ಹುಟ್ಟಿದ ಹಲಕೆಲವು ತೆಲುಗು ಭಾಷೆಯ ಗ್ರಂಥಗಳು ದೊರೆತಿರುವವಾದರೂ ಅವು ನಮ್ಮ ಕೆಲಸಕ್ಕೆ ಪ್ರಯೋಜನಕಾರಿಗಳಾಗುವದಿಲ್ಲ. ಅದು ಕಾರಣ ಬಸವೇಶ್ವರನಿಗಿಂತಲೂ ಪೂರ್ವದಲ್ಲಿ

ಆಂಧ್ರ ದೇಶದಲ್ಲಿ ನಮ್ಮ ಧರ್ಮದ ಸ್ವರೂಪವು ಹೇಗಿದ್ದಿತೆಂಬುದನ್ನು ಅರಿಯುವದಕ್ಕೆ ಆಂಧ್ರ ವಾಙ್ಮಯವು ನಮಗೆ ಸಹಾಯಕಾರಿಯಾಗಲರಿಯದು. ಆದರೂ ಈ ಕೆಳಗೆ ಕಂಡ ಅಂಶಗಳಿಂದ ಈ ಯುಗದಲ್ಲಿ ಸಹಾ ಆಂಧ್ರದೇಶದಲ್ಲಿ ಪ್ರಸಿದ್ಧ ವೀರಶೈವಕವಿಗಳೂ, ಮಠಾಧಿಪತಿಗಳೂ, ಶಿವಶರಣರೂ ಪ್ರಸಿದ್ಧರಾಗಿ ಹೋಗಿದ್ದರೆಂದು ವ್ಯಕ್ತವಾಗುತ್ತದೆ.

೧. ವೀರಶೈವ ಮಹಾಚಾರ್ಯ ಪಂಚಕದಲ್ಲೋರ್ವರು ಶ್ರೀದ್ರಾಕ್ಷಾರಾಮಲಿಂಗದಲ್ಲುದ್ಭವವಾದಂತೆ ಕೆಲವು ಗ್ರಂಥಗಳಿಂದ ವ್ಯಕ್ತವಾಗುತ್ತದೆ. ಒಂದಾನೊಂದು ಕಾಲದಲ್ಲಿ ದ್ರಾಕ್ಷಾರಾಮವು ವೀರಶೈವರಿಗೆ ಪರಮಪೂಜ್ಯ ಕ್ಷೇತ್ರವಾಗಿದ್ದು ಇದರಲ್ಲಿ ಪೂರ್ವದಲ್ಲಿ ಯಾರಾದರೊಬ್ಬ ಮಹನೀಯ ಗುರುವರ್ಯರು ವಾಸವಾಗಿದ್ದಿರಬೇಕು.

೨. ವೀರಶೈವ ಜಗದ್ಗುರುಗಳ ಪಂಚಮಹಾಪೀಠಗಳಲ್ಲಿ ಒಂದಾದ ಪರ್ವತ ಸಿಂಹಾಸನವು ಆಂಧ್ರದೇಶದಲ್ಲಿ ವಿರಾಜಿಸುತ್ತದೆ. ಒಂದಾನೊಂದು ಕಾಲದಲ್ಲಿ ಶ್ರೀಶೈಲ ಮಹಾ ಕ್ಷೇತ್ರದಲ್ಲಿದ್ದು ಶ್ರೀಶೈಲದ ಧರ್ಮಾಧಿಪತ್ಯವು ತತ್ಪೀಠಾಚಾರ್ಯ ಪರಂಪರೆಯ ವಶದಲ್ಲಿದ್ದಿತೆಂಬುದನ್ನು ನಾವು ಮರೆಯಬಾರದು. ಈ ಬಗ್ಗೆ ಅನೇಕ ಐತಿಹಾಸಿಕ ಆಧಾರಗಳಿದ್ದು ಏತದ್ವಿಷಯವಾಗಿ ಬರೆಯುತ್ತಾ ಹೋದರೆ ಅದೊಂದು ದೊಡ್ಡ ಉಪನ್ಯಾಸವೇ ಆಗುತ್ತದೆ. "**೧೧ ನೆಯ ಶತಮಾನದ ಆದಿ ಭಾಗದಲ್ಲಿ ಲಿಂಗಾಯಿತರ ಆಧೀನದಲ್ಲಿದ್ದ ದೇವಸ್ಥಾನವು ಹೇಗೆ ಬ್ರಾಹ್ಮಣರ ಕೈವಶವಾಯಿತೆಂಬುದನ್ನು ಹೇಳುವದು ಕಷ್ಟವಾಗಿದೆ**" ಎಂದು ರಾ. ಸಾ. ಹೆಚ್. ಕೃಷ್ಣಶಾಸ್ತ್ರಿ ಬಿ. ಎ. ಇವರು "ಸಂಸ್ಕೃತ ಸಂಶೋಧ" ಎಂಬ ಮಾಸಿಕ ಪುಸ್ತಕದಲ್ಲಿ ಬರೆದಿರುತ್ತಾರೆ. ಮತ್ತು ಓರಂಗಲ್ಲು. ಪ್ರತಾಪ ರುದ್ರದೇವನ ಕಾಲದ ಒಂದು ಶಿಲಾಲೇಖದಿಂದ, ಶ್ರೀಶೈಲದ ದೇವಸ್ಥಾನಕ್ಕಾಗಿ ಎಪ್ಪತ್ತು ಹಳ್ಳಿಗಳು ದಾನವಾಗಿ ಕೊಡಲ್ಪಟ್ಟಿರುವವೆಂದೂ ಅವುಗಳ ಯಾಜಮಾನ್ಯವನ್ನು ಅಂಕೀಯ ಮಠಾಧೀಶ್ವರರಾದ ಶ್ರೀ ಈಶ್ವರ ಶಿವಾಚಾರ್ಯರು ದೇವಸ್ಥಾನದ ಪಂಚರೊಡನೆ ವಹಿಸಿಕೊಂಡಿದ್ದರೆಂದೂ, ತಿಳಿದು ಬರುತ್ತದೆ. ಈ ಈಶ್ವರ ಶಿವಾಚಾರ್ಯರ ಪೂರ್ವದಲ್ಲಿ ಅನಂತ ಸ್ವಾಮಿಗಳು ಪ್ರಸಿದ್ಧರಾಗಿ ಹೋಗಿರುವರು. ಆಂಧ್ರ ದೇಶದಲ್ಲಿ ವೀರಶೈವ ಧರ್ಮಕ್ಕೆ ಮುಖ್ಯ ಆಶ್ರಯಸ್ಥಾನವಾಗಿರುವ ಈ ಶ್ರೀಶೈಲ ಕ್ಷೇತ್ರದ ಬಗ್ಗೆ ಮುಂದಿನ ಲೇಖಾಂಕಗಳಲ್ಲಿ ಸವಿಸ್ತಾರವಾಗಿ ಬರೆಯಲಾಗುವುದು.

೩. ಬಸವೇಶ್ವರನಿಗಿಂತಲೂ ಪೂರ್ವದಲ್ಲಿದ್ದ ಅನೇಕ ಶಿವಶರಣರಲ್ಲಿ ಕೆಲವರು ಆಂಧ್ರ ದೇಶೀಯರಾಗಿದ್ದರು. ಮತ್ತು ಅನೇಕ ಜಂಗಮರು ನಿತ್ಯ ಸಂಚಾರವಲ್ಲಿದ್ದುಕೊಂಡು ಧರ್ಮ ಪ್ರಸಾರವನ್ನು ಮಾಡುತ್ತಿದ್ದರೆಂದೂ, ಚಾತುರ್ವರ್ಣೀಯರಿಂದ ಪೂಜಾ ಪುನಸ್ಕಾರಗಳನ್ನು ಹೊಂದುತ್ತಿದ್ದರೆಂದೂ ಕಂಡು ಬರುತ್ತದೆ.

೪. ಬಸವೇಶ್ವರನು ಉತ್ತರದಲ್ಲೆಬ್ಬಿಸಿದ ಧರ್ಮಾಂದೋಳನದ ಸೋಂಕು ಆಂಧ್ರ ದೇಶಕ್ಕೆ ವ್ಯಾಪಿಸುವ ಪೂರ್ವದಲ್ಲೇ ಅನ್ನ ಮಾಮಾತ್ಯ, ಪಾಲ್ಕುರಿಕೆ ಸೋಮನಾರಾಧ್ಯ ಮುಂತಾದವರು ವೀರ ಶೈವಾಗಮೋಕ್ತ ೬೩ ಶೀಲಗಳನ್ನು ಆಚಾರದಲ್ಲಿ ತಂದಿದ್ದರೆಂದೂ ವೀರಶೈವ ವ್ರತವನ್ನು ನಿಶಿತ ನಿಷ್ಠೆಯಿಂದ ಪಾಲಿಸಿ ಪ್ರಸಿದ್ಧರಾಗಿದ್ದರೆಂದೂ ಅವರ ಚರಿತ್ರೆಗಳಿಂದಲೂ ಗ್ರಂಥ ಗಳಿಂದಲೂ ಕಂಡು ಬರುತ್ತದೆ.

೫. ಮೇಲೆ ಉದಾಹರಿಸಲ್ಪಟ್ಟ ಅನ್ನಮಾಮಾತ್ಯರು "ಸರ್ವೇಶ್ವರ ಶತಕ" ವೆಂಬ ಉದ್ಗ್ರಂಥವನ್ನು ರಚಿಸಿ ತನ್ಮೂಲಕ ವೀರಶೈವ ತತ್ತ್ವವನ್ನು ಪ್ರಕಟಗೊಳಿಸಿದರು. ಏತದ್ಗ್ರಂಥದಲ್ಲಿ ಬಸವೇಶ್ವರನ ಅಥವಾ ತದನುಯಾಯಿಗಳ ಪ್ರಸಂಗನೇ ಇಲ್ಲ. ಅನ್ನ ಮಾಮಾತ್ಯನು ಬಸವೇಶ್ವರನ ವಿಷಯವಾಗಿ ತಿಳಿದಿದ್ದರೆ, ಆ ಮಹನೀಯುನನ್ನು ಭಕ್ತಿ ಪ್ರಧಾನವಾದ ತನ್ನ ಗ್ರಂಥದಲ್ಲುದಹರಿಸಲೂ ಎಂದಿಗೂ ಬಿಡುತ್ತಿದ್ದಿಲ್ಲ. ಒಂದು ಪಕ್ಷ ಈ ಕವಿಯು ಬಸವೇಶ್ವರ ಯುಗದಲ್ಲಿ ಅಥವಾ ಅದರ ಇತ್ತೀಚಿಗೆ ಜೀವಿಸಿದ್ದರೂ ಈತನ ಕಾಲದಲ್ಲಿ ಬಸವೇಶ್ವರನೆಬ್ಬಿಸಿದ ಧರ್ಮಾಂದೋಳನವು ಗೋದಾವರಿಮಂಡಲದವರೆಗೂ ಇನ್ನೂ ವ್ಯಾಪಿಸಿರಲಿಕ್ಕಿಲ್ಲವೆಂದು ತೋರುತ್ತದೆ. ಸರ್ವೇಶ್ವರ ಶತಕದ ಒಂದಾನೊಂದು ಪದ್ಯದಿಂದ ಈ ಕವಿಯು ೧೧೬೪ರ ಶಕಾಬ್ದಕ್ಕೆ ಹಿಂದೆ ಜೀವಿಸಿರ ಬಹುದೆಂದೂ ಊಹಿಸಬೇಕಾಗಿದೆ. ಈ ಪ್ರಥಮಯುಗದಲ್ಲಿ ಹುಟ್ಟಿರಬಹುದಾದ ಗ್ರಂಥಗಳಲ್ಲಿ ಅನ್ನಮಾಮಾತ್ಯಕೃತವಾದ ಈ "ಸರ್ವೇಶ್ವರಶತಕ ಒಂದೇ" ನನ್ನ ಕಣ್ಣಿಗೆ ಬಿದ್ದಿರುವುದರಿಂದ ತದ್ಗ್ರಂಥದ ಪರಿಚಯವನ್ನು ವಾಚಕರಿಗೆ ಮಾಡಿಕೊಟ್ಟು ಮುಂದಿನ ಲೇಖಾಂಕದಲ್ಲಿ "ಬಸವೇಶ್ವರ ಯುಗದ" ವೀರಶೈವ ಧರ್ಮದ ಚರಿತ್ರೆಯನ್ನು ಬರೆಯುತ್ತೇನೆ.

## ಶ್ರೀ ಮದನ್ನ ಮಾಮಾತ್ಯ ಕೃತ ಸರ್ವೇಶ್ವರ ಶತಕವು.

ಆಂಧ್ರ ವಾಙ್ಮಯ ರತ್ನಾಕರನಗರ್ಭವನ್ನು ಪ್ರವೇಶಿಸಿ ಆಂಧ್ರ ಪರಿ

ಷತ್ಸಭೆಯವರು ಶೋಧಿಸಿ ತೆಗೆದ ಅಮೂಲ್ಯ ರತ್ನಗಳಲ್ಲಿ ಈ " ಸರ್ವೇಶ್ವರ ಶತಕ " ಒಂದಾಗಿದೆ. ಭಕ್ತಿರಸವೇ ಪ್ರಧಾನವಾಗಿರುವ ಈ ಶತಕ ರಾಜ ನನ್ನು ಭಕ್ತಿರಸ ಪ್ರಿಯನಾದೋರ್ವ ವೀರಶೈವ ಕವಿಯು ರಚಿಸಿದನೆಂದರೆ ಯಾವ ವೀರಶೈವನ ಹೃದಯಾಂಬೋಧಿಯು ಉಕ್ಕೇರಲಾರದು? ಇದು ಸ್ವತಂತ್ರ ಗ್ರಂಥಗಳಲ್ಲೊಂದಾಗಿದ್ದು ಇದರಲ್ಲಿ ವೀರಶೈವ ಮತದ ತತ್ವವು ಕಡು ಹೃದಯಂಗಮಯವಾಗಿ ವರ್ಣಿಸಲ್ಪಟ್ಟರೂ ಆಂಧ್ರ ಪರಿಷತ್ತಿನ ವರು ತಮಗೆ ದೊರಕಿರುವ ಮೂರು ಪ್ರತಿಗಳ ಸಾಹಾಯದಿಂದ ಈ ಗ್ರಂಥವನ್ನು ಕಿಂಚಿನ್ಮಾತ್ರವಾದರೂ ಸ್ಖಾಲಿತ್ಯಗಳಿಲ್ಲದೇ ಬಹು ಅಂದವಾಗಿ ಮುದ್ರಿಸಿರುವರು. ಇವರಲ್ಲಿ ಪಂಡಿತಾರಾಧ್ಯ ಚರಿತ್ರಾದ್ಯನೇಕ ಅಮುದ್ರಿತ ಗ್ರಂಥಗಳಿರುವವೆಂದೂ, ಅವುಗಳನ್ನು ಸ್ವಲ್ಪ ಕಾಲದಲ್ಲೇ ಮುದ್ರಿಸಲೂ ಏರ್ಪಾಟು ಮಾಡುವರೆಂದೂ ಕಂಡು ಬರುತ್ತದೆ. ಆಂಧ್ರ ಭಾಷಾಯೋಷಾ ಮಣಿಯ ಸೇವೆಯನ್ನು ನಿರ್ವಿಕಲ್ಪ ಬುದ್ಧಿಯಿಂದ ಮಾಡಲು ಬದ್ಧ ಕಂಕಣ ರಾಗಿರುವ ಆಂಧ್ರ ಪರಿಷತ್ತಿನವರ ಕೃತ್ಯವು ಸರ್ವ ಸಂಸ್ತುತ್ಯವು.

ವೀರಶೈವ ಮಾತೆಯ ಅನರ್ಘ್ಯ ರತ್ನಾಲಂಕಾರಗಳಲ್ಲಿ ಒಂದಾಗಿರಲೊ ಪ್ಪುವ ಈ " ಸರ್ವೇಶ್ವರಶತಕ ,, ವನ್ನು ಮುದ್ರಿಸಿ ಸರ್ವ ಸಂಗ್ರಾಹ್ಯವಾಗಿ ಮಾಡಿರುವ ಪರಿಷತ್ತಿನವರಿಗೂ, ಇದನ್ನು ಚೆನ್ನಾಗಿ ಶೋಧಿಸಿ, ಅಮೂಲ್ಯ ವಾದ ಪೀಠಿಕೆಯನ್ನೂ, ಪಾಠಾಂತರಾದಿಗಳನ್ನೂ ಬರೆದ ಸುಪ್ರಸಿದ್ಧ ಗ್ರಂಥ ಪರಿಶೋಧಕರೂ, ವಿದ್ವನ್ಮಣಿಗಳೂ ಆದ ಶ್ರೀಯುತ ಜಯಂತಿ ರಾಮಯ್ಯ ಪಂತುಲು ಇವರಿಗೂ ನಮ್ಮ ವೀರಶೈವ ಬಾಂಧವರು ಕೃತಜ್ಞರಾಗಿರಬೇಕು.

## ಗ್ರಂಥಸ್ವರೂಪ.

ಈ ಗ್ರಂಥವು ಸುಮಾರು ೧೩೮ ಶಾರ್ದೂಲ ವಿಕ್ರೀಡಿತ, ಮತ್ತೇಭವಿಕ್ರೀ ಡಿತ ಮುಂತಾದ ಪ್ರೌಢ ವೃತ್ತಗಳಿಂದ ಕೂಡಿದೆ. ಇದನ್ನೋದಿದ ಮಾತ್ರವೇ ಸಂಸ್ಕೃತ ದೊಳಗಿನ ಶಿವಮಹಿಮ್ನ ಸ್ತೋತ್ರ, ಶಿವಾನಂದ ಲಹರಿಗಳೂ, ಕನ್ನಡದೊಳಗಿನ ಸೋಮೇಶ್ವರ ಶತಕವೂ, ಶಿವಾಧವ ಶತಕಾದಿ ಶತಕತ್ರ ಯಗಳೂ, ತೆಲುಗಿನೊಳಗಿನ ಕಾಳಹಸ್ತೀಶ್ವರ ಶತಕವೂ ಜ್ಞಪ್ತಿಗೆ ಬರು ವವು. ಈ ಕಾವ್ಯ ಕ್ಷೇತ್ರದಲ್ಲಿ ಶಿವಭಕ್ತಿ ಶಿವಾನಂದ ರಸ ಪ್ರವಾಹವು ನಿರ ರ್ಗಳವಾಗಿ, ಮೃದುತರ ಮಂಜುಳ ಘೋಷದಿಂದ ಹರಿಯುತ್ತಿರುವುದು. ಓದಿದ ಹಾಗೆಲ್ಲಾ ಶಿವಭಕ್ತಿ ಸಮುದ್ರವು ಮೇರೆಮೀರಿ ದೇಹದಲ್ಲೆಲ್ಲಾ ಪುಲ

ಕಾಂಕುರವಾಗಿ, ಆನಂದ ಭಾಷ್ಪಗಳು ಸಂತತ ಧಾರೆಯಾಗಿ ಪ್ರವಹಿಸುವ ವೆಂಬುವಲ್ಲಿ ತಿಲಾಂಶವಾದರೂ ಸಂದೇಹವಿಲ್ಲ. ಸಾವಿರ ಮಾತುಗಳೇತಕ್ಕೆ? ವೀರಶೈವ ತತ್ವಕ್ಕಿದು ಮುಕುರ ಸ್ವರೂಪವಾಗಿದೆ ಎಂದರೆ ಅತಿಶಯೋಕ್ತಿ ಯಾಗಲಾರದು. ಮೊಟ್ಟ ಮೊದಲಿನ ಪದ್ಯದಲ್ಲೇ ವೀರ ವ್ರತವನ್ನು ಪರಿಪಾ ಲಿಸುವ ವೀರಶೈವನು ಹರ ಭಕ್ತಿಯನ್ನು ಬಿಟ್ಟು ತದಿತರವನ್ನು ಹೇಗೆ ಕಾಣುವನೆಂಬುದು ವರ್ಣಿತವಾಗಿರುವುದು. ಅದನ್ನು ಕನ್ನಡ ಕವನದಲ್ಲಿ ಪರಿವರ್ತಿಸಿ ಇಲ್ಲಿ ಕೊಟ್ಟಿರುವೆನು. ಕವಿಯ ಭಾವವನ್ನು ಕೆಡಿಸಿದ್ದಲ್ಲಿ ವಾಚ ಕರ ಕ್ಷಮೆಯನ್ನು ಬೇಡುವೆನು.

ಷ॥ ವರಶಚೀವಲ್ಲಭನ ಗಣ್ಯವಿಭವಾಳಿಯುಂ ।
ಸಿರಿಯೊಡೆಯ ನಾಹರಿಯ ಸಂಪದ್ವಿಶೇಷಮುಂ ।
ಪರಿಕಿಸಲು ವಿದ್ಯಾಸತೀನಾಥ, ಕಂಜಾತ ಜಾತನಾಧೀಸಂಪದಂ ॥
ಸರಸದಿಂ ಝಗಝಗಿಪ ಖಾರಕರನ ತೇಜಮುಂ ।
ಚಿರಮನೋಹರ ಕರಸ್ಮರನವರರೂಪಮುಂ ।
ಹರಭಕ್ತಿ ಸದ್ಭಾವ ಪುಣ್ಯಂಗೆ ತೃಣಸದೃಶ ಮಲ್ಲವೇ? ಸರ್ವೇಶ್ವರಾ ॥

## ಆಂಧ್ರ ವಾಙ್ಮಯದಲ್ಲಿದಕ್ಕಿರುವ ಸ್ಥಳವು.

ಆಂಗ್ಲೇಯ ಕವೀಶ್ವರರು "Personal" ಎಂದರೆ ಆತ್ಮೀಯ (ತಮ್ಮ ಮನಸ್ಸಿಗೆ ನೈಸರ್ಗಿಕವಾಗಿ ಹೊಳೆದ) ವಿಚಾರಗಳನ್ನು Ode, elegy, Sonnet ಮುಂತಾದ ಪದ್ಯಗಳ ಮೂಲಕ ವ್ಯಕ್ತ ಪಡಿಸುವರು. ಅದೇ ರೀತಿ ನಮ್ಮ ಕವಿಗಳು ಸ್ವಾನುಭವವನ್ನು "ಶತಕ" (ಅಂದರೆ ನೂರು ಪದ್ಯಗಳುಳ್ಳ ಒಂದು ಕಾವ್ಯವು) ದಲ್ಲಿ ಹೇಳಿಕೊಳ್ಳುವುದುಂಟು. ಸಾಧಾರ ಣವಾಗಿ ಇಂಥ ಶತಕಗಳಲ್ಲಿ ಭಕ್ತಿರಸವೇ ವಿಶೇಷವಾಗಿರುವುದು. ಇತ್ತೀ ಚಿಗೆ ಶತಕವು ನೀತಿ ಬೋಧನೆಗಾಗಿ ಉಪಯೋಗಿಸಲ್ಪಡುವುದು. ಆಂಧ್ರ ಭಾಷೆಯಲ್ಲಿ "ವೃಷಾಧಿಪ ಶತಕ" "ಕಾಳಹಸ್ತೀಶ್ವರ ಶತಕ "ಕುಕ್ಕುಟೇ ಶ್ವರ ಶತಕ" "ವೇಮನ ಶತಕ" ಮುಂತಾದ ಅನಂತಾನಂತ ಶತಕಗಳಿ ರುತ್ತವೆ. ಆದರೆ ಇವುಗಳಲ್ಲಿ ಪ್ರಥಮ ಶತಕಗಳಲ್ಲಿ ಹೆಸರ್ಗೊಂಡಿದ್ದು ಈ "ಸರ್ವೇಶ್ವರ ಶತಕವೇ." ಕನ್ನಡದಲ್ಲಿ ಷಟ್ಪದಿ, ರಗಳೆ, ವಚನ ಮುಂತಾದ ಕಾವ್ಯಾಂಗಗಳಲ್ಲಿ ವೀರಶೈವ ಕವಿಗಳೇ ಮಾರ್ಗದರ್ಶಿಗಳೆಂದು ಪ್ರಸಿದ್ಧಿ ಗೊಂಡಂತೆ ಆಂಧ್ರ ವಾಙ್ಮಯದಲ್ಲಿ ಶತಕ, ದ್ವಿಪದಿ, ರಗಡ ಮುಂತಾದವು ಗಳಲ್ಲಿ ಇವರೇ ಮೊದಲಿಗರು. ಇದಲ್ಲದೆ ನನ್ನಯ ಭಟ್ಟಾರಕನ ಮೊದ

ಟ್ಲ್ಗೊಂಡು ಲೆಕ್ಕನ ಸೋಮಯಾಜಿಯವರೆಗೂ ಇರುವ ವಾಙ್ಮಯ ಯುಗದಲ್ಲಿ ಹುಟ್ಟಿ ಸಲಕ್ಷಣಪ್ರೌಢ ಮತ್ತು ವ್ಯಾಕರಣ ಶುದ್ಧತೆಯಿಂದ ಕೂಡಿರುವ ಕಾವ್ಯ ರತ್ನಗಳಲ್ಲಿ ಈ ಶತಕವು ಅತಿ ಪ್ರೌಢವಾಗಿರುವುದು.

## ಕವಿಚರಿತ್ರೆ.

ಈ ಶತಕವನ್ನು ಬರೆದ ಕವಿಯು ವೀರನಿಯಮ ವ್ರತಾಚರಣೆಯುಳ ವೀರಶೈವನು. ಈ ಕವಿಯನ್ನೂ ಶತಕವನ್ನೂ ಕುರಿತು, ಪಲ್ನಾಡು ತಾಲೂಕಿನೊಳಗಿರುವ ಚೆರ್ಲಗುಡಿಯೆಂಬ ಗ್ರಾಮಕ್ಕೆ ಕುಲಕರ್ಣಿಯಾಗಿದ್ದ ಸೋಮರಾಜು ವೇಂಕಟ ಶಿವನೆಂಬಾತನು ಒಂದು ಸಂಗ್ರಹೋಪನ್ಯಾಸವನ್ನು ಬರೆದಿಟ್ಟಿರುವನು. ಈ ಶತಕದ ೧೩೮ನೇ ಪದ್ಯದಿಂದ ಈ ಶತಕ ಕರ್ತನು "ಅನ್ನಮಾರ್ಯನೆಂದೂ ಈತನ ವಂಶಸ್ಥರು ಯಥಾವಾಕ್ಕಿನವರೆಂದೂ ಪ್ರಸಿದ್ಧರಾಗಿದ್ದರೆಂದು ತಿಳಿಯ ಬರುತ್ತದೆ.

**ಮ॥ ಜಯಶಕ್ತಿನ್‌ರವಿಚಂದ್ರ ತಾರಕಮುಗಾ-ಜಲ್ಪೆನ್ ಯಥಾವಾಕ್ಕುಲಾ ಧ್ವಯ ಸಂಜಾತುಡು ನನ್ನಮಾರ್ಯುಡ ವನಿನ್-ವರ್ಣಿಂಟನೀ ಸತ್ಕಥಾ ॥ ಪ್ರಿಯ ಸಂಬೋಧನ ನೀದುಭಕ್ತಿನಿ ಮಹಾನಿರ್ಣೀತ ವಿಶ್ರಾಂತಿಗಾ॥ಭಯ ವಿಭ್ರಾಂತುಲು ಲೇಕ ಈಶತಕಮುಂ ಬ್ರಖ್ಯಾತಿ ಸರ್ವೇಶ್ವರಾ! ( ಸ॥ ಶ॥ ೧೩೮ )**

ವೆಂಕಟಶಿವಾರ್ಯನು ಬರೆದ ಅನ್ನಮಾಮಾತ್ಯನ ಚರಿತ್ರೆಗೆ ಆಧಾರಭೂತವಾಗಿರುವ "ಅನ್ನ ಮಯ್ಯನ ವಂಶಾವಳಿ" ಎಂಬ ಪ್ರಾಚೀನ ಗ್ರಂಥದಲ್ಲಿ ಈ ಕವಿಯು "ಶ್ರೀಮನಂತ ಸದ್ಗುಣ ಸುಶೀಲನೆಂದೂ, ಆತ್ಮ ವಿಹಾರಹಾರನೆಂದೂ, ಮದನಾಂತಕಾಂಘ್ರಿಯುಗಳಾಮೃತ ಪಾನರತಾಂತ ರಂಗನೆಂದೂ" ಮುಂತಾಗಿ ವರ್ಣಿಸಲ್ಪಟ್ಟಿರುವನು. ಅನೇಕರಿಗೂ ಈ ವರ್ಣನೆಯು ಉತ್ಪ್ರೇಕ್ಷಾಲಂಕಾರ ಸಮನ್ವಿತವಾಗಿದ್ದಂತೆ ಕಂಡು ಬಂದರೂ ಅನ್ನಮಾರ್ಯನು ಪರಮ ಪವಿತ್ರ ಚರಿತ್ರನೆಂಬುವುದಕ್ಕೆ ಆತನ ಸದುಪದೇಶಾಮೃತ ಧಾರೆಯೇ ಸಾಕ್ಷಿಯಾಗಿರುವದು. ಪ್ರತಿಯೊಂದು ಪದ್ಯವೂ, ಪ್ರತಿಯೊಂದು ವಾಕ್ಯವೂ ಕವಿಯ ಹೃದಯ ಸಿಂಹಾಸನವನ್ನಲಂಕರಿಸಿರುವ ಪರಮ ತತ್ವ ತೇಜೋದ್ದೀಪಿತನಾದ ಪರಮಾತ್ಮನ ಪ್ರತಿಬಿಂಬವಾಗಿರುವಂತೆ ಕಂಡು ಬರುತ್ತದೆ. ಈ ಕಾವ್ಯದೊಳಗಡಗಿರುವ ಅಸಾಧಾರಣಾಮೋಘ ತತ್ವವೇ ಕವಿಯು ಅನುಪಮ ತತ್ವವೇತ್ತನೆಂದು ಘಂಟಾಘೋಷವಾಗಿ ಸಾರುತ್ತಿರುವದು. ಈ ಶತಕದೊಳಗಿನ ಅನೇಕ ಪದ್ಯಗಳಿಂದ ಈ ಕವಿಯು

"ಲಿಂಗಾರಾಧನ ಜಂಗಮಾರ್ಚನಲೋಲನೆ" ಂದು ತಿಳಿಯ ಬರುತ್ತದೆ.

ಈ ಶತಕದಲ್ಲಿ ಬಸವೇಶ್ವರನ ವಿಷಯವಾಗಲಿ, ಆಗಿನ ಕಾಲದ ಶಿವಶರಣರ ವಿಷಯವಾಗಲಿ ಸ್ವಲ್ಪವಾದರೂ ವರ್ಣಿಸಲ್ಪಟ್ಟಿಲ್ಲ. ಬಸವ ಯುಗದ ಇತ್ತೀಚಿಗೆ ಬರೆಯಲ್ಪಟ್ಟ ಯಾವ ಕಾವ್ಯಗಳಲ್ಲೂ ಈ ವಿಶೇಷತೆ ಯು ಕಂಡು ಬರುವದಿಲ್ಲ. ಕವಿಯು ಬಸವೇಶ್ವರನೆಬ್ಬಿಸಿದ ಧಾರ್ಮಿಕ ವಿಪ್ಲ ವವನ್ನರಿಯದವನಾಗಿರಬೇಕು.

೧೨೪ ನೇ ಪದ್ಯದಲ್ಲಿ ಕವಿಯು ತಾನು ತನ್ನ ಗುರುವಾದ ದೂದಿ ಕೊಂಡ (ಕರ್ನೂಲು ಜಿಲ್ಲಾ) ಮಹನೀಯಾರಾಧ್ಯ ಸೋಮೇಶ್ವರನ ಕರು ಣವೆಂಬ ವಸಂತಾಗಮನದಿಂದ ಪ್ರಫುಲ್ಲಿತವಾದ ಸದ್ಭಾವಗಳೆಂಬ ಪುಷ್ಪಾವ ಳಿಯಿಂದ ಸರ್ವೇಶ್ವರನ ಪದಯುಗ್ಮಗಳನ್ನು ಪೂಜಿಸುವನೆಂದು ಬರೆದಿರುವ ನಾದ್ದರಿಂದ ಈತನ ಗುರುವು ದೂದಿಕೊಂಡ ಸೋಮೇಶ್ವರಾರಾಧ್ಯರೆಂದು ವ್ಯಕ್ತವಾಗುತ್ತದೆ.

೧೨೫ ನೇ ಪದ್ಯದಲ್ಲಿ ಅನ್ನವಾರಾಧ್ಯನು ತನ್ನ ಶತಕವು "ಭಕ್ತಜನಾ ನುರಂಜಕವಾಗಿಯೂ, ತತ್ವಪ್ರಕಾಶಕವಾಗಿಯೂ, ಚಿತ್ರಾರ್ಥಾಂಚಿತ ಶಬ್ದ ಬಂಧುರವಾಗಿಯೂ, ಸೇವ್ಯವಾಗಿಯೂ, ಶ್ರೋತ್ರಾನಂದಕರವಾಗಿಯೂ, ಶುಭಾನ್ವಿತವಾಗಿಯೂ" ಒಪ್ಪುತ್ತಿರುವುದೆಂದು ಬರೆದುಕೊಂಡಿರುವನು. ಈ ಶತಕವು ಮೇಲ್ಕಂಡ ವಿಶೇಷಣಗಳಿಗೆ ಅರ್ಹವಾಗಿದೆಯೋ ಇಲ್ಲವೋ ಎಂಬು ವದನ್ನು ಪರಿಶೀಲಿಸಲಿಚ್ಛೈಸುವವರು ತತ್ಕಾವ್ಯಾವಲೋಕನವನ್ನು ಮಾಡಲಿ.

ಈ ಶತಕ ರಚನೆಯ ವಿಷಯವಾಗಿ ವೆಂಕಟಶಿವಾಚಾರ್ಯನು ಭಕ್ತಿ ರಸರಂಜಿತವಾದ ಒಂದು ಕಥೆಯನ್ನು ಬರೆದಿರುವನು. ಈಗಿನ ನವೀನನಾ ಗರಿಕತೆಯಿಂದಂಥರಾದವರ ಭಾವನೆಗೆ ಅದು ಕಟ್ಟು ಕಥೆಯಾಗಿ ತೋರಿ ದರೂ ಅಸಾಧಾರಣ ನೀತಿ ಬೋಧಕವಾಗಿರುವದರಿಂದ ಅದರ ಸಾರಾಂಶ ವನ್ನು ಇಲ್ಲಿ ಬರೆಯುವೆನು.

ಅನ್ನಮಾರ್ಯನು ಗೋದಾವರೀತೀರವಾಸಿ. ರಾಜಮಹೇಂದ್ರಪುರದ ಸಮೀಪದಲ್ಲಿದ್ದ "ಪಟ್ಟಿಸ" ವೆಂಬದೊಂದು ಗ್ರಾಮದಲ್ಲಿ ವಿರಾಜಿಸುವ ವೀರ ಭದ್ರೇಶ್ವರ ಸ್ವಾಮಿಯೇ ಈತನ ಕುಲದೇವರು. ಈ ಮಹನೀಯನೊಂದು ಸಾರಿ ಶ್ರೀಶೈಲ ಯಾತ್ರೆಗೆ ಹೋಗಿ ಶ್ರೀ ಮಲ್ಲಿಕಾರ್ಜುನಲಿಂಗವನ್ನು ಸೇವಿಸಿತಿರಿಗಿ ಬರುತ್ತಾ ಪಲ್ನಾಡು ತಾಲೂಕಿನೊಳಗೆ ಕೃಷ್ಣಾನದೀ ತೀರದಲ್ಲಿ

ವಿಶ್ವಾಮಿತ್ರಾಶ್ರಮವೆಂಬುದೊಂದು ಪುಣ್ಯಸ್ಥಳದಲ್ಲಿಯೇ ಇದ್ದು ಶ್ರೀ ಮಲ್ಲಿಕೇಶ್ವರ ಸ್ವಾಮಿಯನ್ನು ಆರಾಧಿಸುತ್ತಲಿದ್ದನು.

ಮನೋಹರವಾದ ಕೃಷ್ಣಾತೀರವು! ಸುತ್ತಲೂ ಆಕಾಶವನ್ನು ಚುಂಬಿಸುತ್ತಿದ್ದ ವೃಕ್ಷಗಳು ಪರಮಾತ್ಮನ ಮಹಿಮೆಗೆ ತಲೆದೂಗುತ್ತಿರುವವೋ ಎಂಬಂತೆ ಕಂಗೊಳಿಸುತ್ತಲಿದ್ದವು. ಕೃಷ್ಣವೇಣಿಯಾದರೋ ಪರಮಾತ್ಮನ ನಾಮಸ್ಮರಣೆಯನ್ನು "ಜುಳು ಜುಳು" ಎಂಬ ಮಂಜುಳ ರವದಿಂದ ಹಾಡುತ್ತಾ ನಿಜನಾಥನನ್ನು ಸೇರ ಹೋಗುತ್ತಿದ್ದಳು. ಸರ್ವವೂ ಶಿವಮಯವು. ಸ್ಥಳವಾದರೋ ಪರಮ ಪವಿತ್ರ ಭೂಮಿಯಾದ ವಿಶ್ವಾಮಿತ್ರಾಶ್ರಮವು. ಇಂಥಾ ಶಿವಕರವಾದ ಸ್ಥಳದಲ್ಲಿ ಎಂಥವನಿಗಾದರೂ ಶಿವಭಕ್ತಿಯು ಆರೂಢವಾಗದೇ? ಮೇಲೆ ಅನ್ನಮಾಮಾತ್ಯನು ಕವಿತಾ ಸರೋವರದಲ್ಲಿ ವಿಹರಿಸುವ ಹಂಸನು. ಕೇಳುವದೇನು? ಕವಿತಾರಸವು ಆತನ ಹೃದಯದಲ್ಲಿ ಉಕ್ಕೇರ ಹತ್ತಲು ಆತನು ಶ್ರೀಮಲ್ಲಿಕಾರ್ಜುನ ಪಾದ ಪಯೋಜಗಳನ್ನು ಹೃದಯ ಸರೋವರದಲ್ಲಿರಿಸಿ ದುರಿತೌಘವಿನಿಶ್ಶೋಷಣವೂ, ಮಂಗಳತರ ಭಾಷಣವೂ, ವಿಬುಧಜನ ತೋಷಣವೂ ಆದ ಪರಶಿವನ ಗುಣಭಾಷಣವನ್ನು ಪದ್ಯ ರೂಪದಲ್ಲಿ ಬರೆಯಲುಪಕ್ರಮಿಸಿದನು. ಆದರೆ ಪ್ರತಿಯೊಂದು ತಾಳವಾಲೆ ಗರಿಯ ಮೇಲೆ ಒಂದೊಂದು ಪದ್ಯವನ್ನು ಬರೆದು ಕೃಷ್ಣಾನದಿಯಲ್ಲಿ ಹಾಕಿ ಅದು ಹೊಳೆಯ ಸೆಳವಿನೆದುರಿಗೆ ತೇಲಿಕೊಂಡು ಬಂದರೆ ಅದನ್ನು ತನ್ನ ಶತಕಕ್ಕೆ ಸೇರಿಸಿಕೊಳ್ಳುವೆನೆಂತಲೂ ಅದು ಹೊಳೆಯ ಶಳಿತಕ್ಕೆ ಹೊಡೆದುಕೊಂಡು ಹೋದರೆ ತನ್ನ ಶಿರವನ್ನು ಖಂಡಿಸಿಕೊಳ್ಳುವೆನೆಂತಲೂ ಭೀಷಣ ಪ್ರತಿಜ್ಞೆಯನ್ನು ಮಾಡಿ ಕೌಕ್ಷೇಯಧರನಾಗಿ ಹೊಳೆಯ ದಂಡೆಯ ಮೇಲೆ ಕುಳಿತುಕೊಂಡನಂತೆ. ಧನ್ಯ! ಅನ್ನಮಾರಾಧ್ಯನೇ ಧನ್ಯ!! ಇಂಥಾ ವೀರ ಪ್ರತಿಜ್ಞೆಯನ್ನು ಅವಿಚ್ಛಿನ್ನವಾಗಿ ಪಾಲಿಸಲೂ ಬದ್ಧಕಂಕಣನಾಗಿರುವನೇನೇ ಅಲ್ಲವೇ ನಿಜವಾದ ವೀರಶೈವನು?

ಅನ್ನಮಾರಾಧ್ಯನು ಬರೆದು ನದಿಯೊಳಗೆ ಹಾಕಿದ ಪ್ರತಿಯೊಂದು ಪದ್ಯವೂ ಹೊಳೆಯ ಎದುರ್ಮುಖವಾಗಿ ತೇಲಿಕೊಂಡು ಬಂದಿತು. ಆದರೆ

**ವೃ॥ ತರುಲಂಬುವ್ವುಲು ಪಿಂದಲೈಯಾದವಿ ತತ್ತಜ್ಜಾತಿತೋ ಪಂಡ್ಲಗುನ್।**
**ಹರಮೀಪಾದ ಪಯೋಜಪೂಜಿತಮುಲೈಯತ್ಯದ್ಭುತಂ ಬವ್ವಿರುಲ್॥**
**ಕರುಲೌ ನಕ್ಕಮುಲೌ ನನಘರ್ಮಮಣುಲೌ ಕರ್ಪೂರ ಪಾಹಾರಷಾ।**
**ತರುಣೀ ರತ್ನಮುಲೌ ಬಟೀರತರುಲೌ ತಥ್ಯಂಬು ಸರ್ವೇಶ್ವರಾ॥**

ಎಂಬುದೊಂದು ಪದ್ಯವನ್ನು ಬರೆದು ನದಿಯಲ್ಲಿ ಸೆಯಲು ಅದು ತೇಲಿಕೊಂಡು ಹೋಯಿತಂತೆ! ಈ ಪದ್ಯದ ಅರ್ಥವೇನೆಂದರೆ:—

"ಎಲೈ, ಸರ್ವೇಶ್ವರನೇ! ವೃಕ್ಷಗಳಲ್ಲಿರುವ ಪುಷ್ಪಗಳು ಕಾಲಾಂತರ ಆಯಾಯ ಜಾತಿಗಳ ಫಲಗಳಾಗಿ ಏರ್ಪಡುವುದು ನೈಸರ್ಗಿಕವು. ಆದರೆ ನಿನ್ನ ಪಾದವನ್ನಲಂಕರಿಸುವ ಕುಸುಮಗಳು ಗಜತುರಗಗಳೂ, ಅನರ್ಘ್ಯ ಮಣಿಗಳೂ, ಕರ್ಪೂರಾದಿ ಸುಗಂಧ ದ್ರವ್ಯಗಳೂ, ಹಾರಗಳೂ ತರುಣೀ ಮಣಿಗಳೂ ಆಗುವವು" ಅಂದರೆ ನಿನ್ನನ್ನು ಪುಷ್ಪಗಳಿಂದ ಅರ್ಚಿಸುವರೆಲ್ಲರೂ ಮೇಲ್ಕಂಡ ಭೋಗ್ಯವಸ್ತುಗಳನ್ನು ಹೊಂದುವರೆಂಬ ಭಾವಾರ್ಥವು. ಪರಮ ಯೋಗಾವತಂಸನೂ, ಅಲೌಕಿಕ ಜ್ಞಾನಸಂಶೋಭಿತ ಮಾನಸನೂ, ಆದ ಅನ್ನಮಾರಾಧ್ಯನ ದುರ್ಭೇದ್ಯವಾದ ಹೃದಯ ದುರ್ಗವನ್ನು ಕೇವಲ ಭೌತಿಕವಾದ ಈ ಅಭಿಪ್ರಾಯವು ಹೇಗೆ ದೂರಿತೆಂಬುದು ದುರೂಹ್ಯವು. ಮಾಯೆಯ ಮಾಯವು ವರ್ಣನಾತೀತವು!

ಈ ಪದ್ಯವು ಹೊಡೆದುಕೊಂಡು ಹೋಗುತ್ತಿರುವುದನ್ನು ನೋಡುತ್ತಿದ್ದ ಕವಿಯ ಶೀರ್ಷದ ಮೇಲೆ ನಿರ್ಘಾತ ಪಾತವಾದಂತಾಯಿತು. ಸರ್ವವೂ ಅಂಧಕಾರಮಯವಾದಂತಾಯಿತು. ತತ್ಕ್ಷಣವೇ ಆತನು ತನ್ನ ಶಿರಃಕಮಲವನ್ನು ಪರಮೇಶ್ವರನ ಪಾದಾರವಿಂದಕ್ಕೆ ಅರ್ಪಿಸ ಉದ್ಯುಕ್ತನಾದನು. ಆಹಾ! ಏನಾಘೋರ ಪ್ರತಿಜ್ಞಾ ನಿರ್ವಹಣ ಶಕ್ತಿಯು! ಅನಿಶ್ಚಲ ಭಾವವು!

ಅಷ್ಟರಲ್ಲೇ ಓರ್ವಗೋಪಾಲ ಬಾಲನು ಪತ್ರಹಸ್ತನಾಗಿ ಈ ಕವಿಯನ್ನು ಸಮೀಪಿಸಿ "ಸ್ವಾಮಿ! ನನಗೊಂದು ತಾಳೆಯಗರಿಯು ದೊರಕಿರುತ್ತದೆ. ಇದರ ಮೇಲೆ ಏನನ್ನೋ ಬರೆದಿದೆ, ನೋಡಿ"ರೆಂದು ಕೊಟ್ಟು ಅದೃಶ್ಯನಾದನು. ಅನ್ನಮಾರ್ಯನು ಆಶ್ಚರ್ಯ ಚಕಿತನಾಗಿ ಅದೇನೆಂದು ನೋಡಿದನು. ಅದರಲ್ಲಿ ತಾನು ಕಾಮ್ಯಾರ್ಥವಾಗಿ ರಚಿಸಿದ ಪದ್ಯದ ಬದಲು ಮೋಕ್ಷಾರ್ಥವಾಗಿ ರಚಿಸಲ್ಪಟ್ಟ ಈ ಕೆಳಕಂಡ ಪದ್ಯವು ಅಮಾನುಷ ಹಸ್ತದಿಂದ ಬರೆಯಲ್ಪಟ್ಟಂತೆ ಕಂಡು ಬಂದಿತು.

ಮ॥ ಒಕ ಪುಷ್ಪಂಬು ಭವತ್ಪದದ್ವಯ ಮುಪ್ಪೈ ನೊಪ್ಪಂಗ ಸದ್ಭಕ್ತಿರ೦ ।
ಜಕುಡ್ಡೈ ಪೆಟ್ಟಿನ ಪುಣ್ಯ ಮೂರ್ತಿಕಿ ಪುನರ್ಜನ್ಮಂಬು ಲೇದನ್ನಪಾ ॥
ಮಿಕ ಕಾಲತ್ರಿತಯೋಪಚಾರ ಮುಲ ನಿನ್ನರ್ಚಿಂಚುಚೋ ಬೆದ್ದನೈ ।
ಕೈಕಂಡ್ಡೈಯುಂಡೆಡು ಮಾಡು ನೀವಗುಟದಾ ಚಿತ್ರಂಬೆ ಸರ್ವೇಶ್ವರಾ!॥

ತಾ॥ ಎಲೈ, ಸರ್ವೇಶ್ವರನೇ! ಏಕ ಮಾತ್ರ ಪುಷ್ಪವನ್ನು ನಿನ್ನ ಚರ ಣಂಗಳಿಗೆ ಅರ್ಪಿಸಿದ ಪುಣ್ಯ ಮೂರ್ತಿಗೆ ಪುನರ್ಜನ್ಮವೇ ಇಲ್ಲವೆಂದ ಮೇಲೆ ಕಾಲ ತ್ರಿತಯೋಪಚಾರಗಳಿಂದ ಶುದ್ಧಾಂತಃಕರಣ ಪ್ರೇರಿತನಾಗಿ ಪೂಜಿ ಸುವ ನೈಷ್ಠಿಕನು ನೀನೇ ಆಗುವುದರಲ್ಲಿ ಸಂದೇಹವೇನು?

ಆಹಾ! ಇಲ್ಲಿಯೇ ಅಲ್ಲವೇ ಮೋಹ ಧ್ವಾಂತವನ್ನು ದಿಕ್ಕುಗೆಟ್ಟು ಓಡಿ ಹೋಗುವಂತೆ ಮಾಡಿ ಶಿವಯೋಗ ಪ್ರಚಂಡ ಮಾರ್ತಾಂಡನು ನಭೋ ಮಂಡಲದಲ್ಲಿ ಅಖಂಡಗತಿಯಿಂದ ದುರ್ನಿರೀಕ್ಷ್ಯನಾಗಿ ಪ್ರಕಾಶಿಸುತ್ತಿರು ವನು. ಬಾಲವೇಷದಿಂದ ಬಂದಿದ್ದವನು ಆ ಬಾಲಶಶಿಶೇಖರನೇಯೆಂದು ಬೇರೆ ಹೇಳಬೇಕಾಗಿಲ್ಲ. ಅನ್ನಮಯ್ಯನು ಆ ಪದ್ಯವನ್ನು ಓದಿ ಹರ್ಷ ನಿರ್ಭರನಾಗಿ ಅದನ್ನು ತನ್ನ ಶತಕದಲ್ಲಿ ಸೇರಿಸಿಕೊಂಡನಂತೆ.

ಈ ಗ್ರಂಥದ ಆದಿಯಿಂದ ಅಂತ್ಯದವರೆಗೂ ಶಿವಸ್ತವನವೇ! ಶಿವ ಮತಸ್ತವನವೇ! ಶಿವತತ್ವಸ್ತವನವೇ! ಶಿವಭಕ್ತಿಸ್ತವನವೇ! ಶಿವಾನಂದಲ ಹರಿಯು ನಿರರ್ಗಳವಾಗಿ ಪ್ರವಹಿಸುತ್ತಿರುವುದು. ಶೈಲಿಯು ನಿರ್ದುಷ್ಟವಾ ಗಿಯೂ, ಸುಕುಮಾರವಾಗಿಯೂ ಸುಲಲಿತವಾಗಿಯೂ, ಸುಜನ ಮನೋ ರಂಜಕವಾಗಿಯೂ ಒಪ್ಪುತ್ತಿರುವುದು. ಪದ್ಯಗಳು ಸುಶ್ರಾವ್ಯವಾಗಿ, ಸರಳತೆ ಯಲ್ಲಿ ಸೋಮೇಶ್ವರ ಶತಕದ ಪದ್ಯಗಳನ್ನು ಹೋಲುತ್ತಿರುವವು. ಶಿವಯೋ ಗಿಗಳ ಮಹಿಮಾ ವಿಶೇಷತೆಯನ್ನೂ, ಕರ್ಮ ನಿರಸನವನ್ನೂ, ಲಿಂಗಾಂಗ ಸಂಬಂಧ ವಿಚಾರವನ್ನೂ ಪ್ರತಿಪಾದಿಸುವ ಪದ್ಯಗಳು ಮಾಯಿದೇವರ ಶತಕ ತ್ರಯುವನ್ನು ಜ್ಞಪ್ತಿಗೆ ತರುವವು. ಈ ಗ್ರಂಥದ ವಿಷಯುವಾಗಿ ಆಂಧ್ರ ಪ್ರಸಿದ್ಧ ಪಂಡಿತರಾದ ಶ್ರೀಯುತ ಜಯಂತಿರಾಮಯ್ಯನವರ ಅಭಿಪ್ರಾಯ ವನ್ನು ಕೊಟ್ಟು ಈ ಲೇಖಾಂಕವನ್ನು ಮುಗಿಸುತ್ತೇನೆ.

"ಈ ಸರ್ವೇಶ್ವರ ಶತಕವು ವೀರಶೈವ ಮತ ಸಂಪ್ರದಾಯಾನುಸಾರವು ಭಕ್ತಿರಸ ಪ್ರಧಾನವು, ಧಾರೆಯು ಅನರ್ಗಳವು. ಓದುವವರಿಗೆ ಕಿಂಚಿದ್ಭಾ ಷಾಜ್ಞಾನ ವಿದ್ದರೆ ಸಾಕು. ಪದ್ಯಗಳೆಲ್ಲವೂ ಸುಲಭವಾಗಿಯೇ ಅರ್ಥವಾ ಗುವವು. ಪದ್ಯ ರಚನಾ ಶಿಲ್ಪಿಗೆ ಇದು ಮುಖ್ಯ ಲಕ್ಷಣವು. ಕೆಲಕೆಲವು ಕಲ್ಪನೆಗಳು ಮನೋಹರವಾಗಿಯೂ, ಪ್ರೌಢವಾಗಿಯೂ ಇರುವವು. ಸ್ಥಾಲೀ ಪುಲಾಕ ನ್ಯಾಯವಾಗಿ ೨೦, ೪೪, ೪೫, ೫೧, ೬೧, ನೇ ಪದ್ಯಗ ಳನ್ನು ನೋಡಬಹುದು. ಪದ್ಯಗಳ ಸ್ವರೂಪದ ಮೇಲೂ, ಕಲ್ಪನೆಗಳ ಮೇಲೂ ಈ ಶತಕವು ಕೆಲವು ಸ್ಥಳಗಳಲ್ಲಿ ಸಂಸ್ಕೃತದ "ಶಿವಮಹಿಮ್ನ

ಸ್ತೋತ್ರ"ವನ್ನೂ, ಕನ್ನಡದ "ಸೋಮೇಶ್ವರ ಶತಕ"ವನ್ನೂ, ತೆಲುಗಿನ "ಕಾಳಹಸ್ತೀಶ್ವರ ಶತಕ"ವನ್ನೂ ಜ್ಞಾಪ್ತಿಗೆ ತರುವುದು. **ಬಹುವಿಧಗಳಿಂದ ಈ ಗ್ರಂಥವು ಸಕಲಾಂಧ್ರಜನ ಪಠಣ ಯೋಗ್ಯವೆಂದು ನಮ್ಮ ಅಭಿಪ್ರಾಯವು.** '

ಶ್ರೀಯುತ **ಜಯಂತಿರಾಮಯ್ಯನವರ** ಮೇಲ್ಕಂಡ ವಿಮರ್ಶನೆಯು ಅಕ್ಷರಶಃ ನಿಜವಿರುತ್ತದೆ. ಮಧ್ಯ ಯುಗದಲ್ಲಿ ಹುಟ್ಟಿಯೂ ಬಸವೇಶ್ವರ ಯುಗಕ್ಕೆ ಸಂಬಂಧ ಪಡದೇಯಿದ್ದ ವೀರಶೈವ ಗ್ರಂಥವಾದ ಈ "ಸರ್ವೇಶ್ವರ ಶತಕವು" ಗ್ರಂಥ ಶೋಧಕರಿಗೂ, ಮತ್ತು ವೀರಶೈವ ಮತದ ಇತಿಹಾಸವನ್ನು ಬರೆಯುವವರಿಗೂ, ವಾಙ್ಮಯ ವಿಮರ್ಶಕರಿಗೂ ಬಹು ಪ್ರಯೋಜನಕಾರಿಯಾಗಿರುವದು. ಇಂಥಾ ಪ್ರೌಢ ಗ್ರಂಥದ ಆವಿರ್ಭಾವಕ್ಕೆ ಮುಂದು ಅನೇಕ ಧರ್ಮ ಗ್ರಂಥಗಳು ರಚಿತವಾಗಿರಲಿಕ್ಕೇಬೇಕು. ಅವುಗಳು ನಮ್ಮ ಸುದೈವದಿಂದ ಎಂದಿಗೆ ಪ್ರಕಾಶಕ್ಕೆ ತರಲ್ಪಡುವವೋ ನೋಡಬೇಕು.

ಓಂ ತತ್ಸತ್

---

# ಶೈವ ಧರ್ಮಗಳು.

## (ಲೇಖಾಂಕ. ೨)

**ಲೇಖಕ. ಶ್ರೀ. ಎಸ್. ಸಿ. ನಂದೀಮಠ ಎಮ್. ಎ, ಪ್ರೋಫೆಸರ. ರಾಜಾರಾಮ ಕಾಲೇಜ ಕೊಲ್ಹಾಪುರ.**

---

(ಈ ಲೇಖವು ಕೆಳಗೆ ಕಾಣಿಸಿದ ಗ್ರಂಥಗಳ ಆಧಾರದಿಂದ ಬರೆಯಲ್ಪಟ್ಟದೆ. Dr Farquhar's "an outline of Religious Literature of India" Sundaram Pillay's article in Indian Antiquary Vol 25 "Tamil Saivite Hymns." Heritage of India Series )

ಹಿಂದಿನ ಸಂಚಿಕೆಯಲ್ಲಿ ಕಾಶ್ಮೀರ ಶೈವಧರ್ಮವನ್ನು ವಿಹಗ ದೃಷ್ಟಿಯಿಂದ ಅವಲೋಕಿಸಿದೆವು. ಶೈವ ಧರ್ಮಗಳಲ್ಲಿ ಆರಾಧ್ಯರು ಕಾಶ್ಮೀರ

ಶೈವರು ದ್ರಾವಿಡ ಅಥವಾ ತಮಿಳ ಶೈವರು ಮತ್ತು ವೀರಶೈವರು ಆಗಮಗಳ ಪ್ರಾಮಾಣ್ಯವನ್ನು ಮನ್ನಿಸುವರೆಂಬುದು ಪ್ರಸಿದ್ಧವು. ಇನ್ನು ಈ ಸಂಚಿಕೆಯಲ್ಲಿ ಶಿವಾನುಭವದ ವಾಚಕರ ಸಂಗಡ ದ್ರಾವಿಡ ದೇಶದಲ್ಲಿ ಪ್ರಚಾರದಲ್ಲಿರುವ ಶೈವ ಧರ್ಮದೊಳಗೆ ವಿಹಗ ಗಮನದಿಂದ ಸಂಚರಿಸುವಾ.

## ದ್ರಾವಿಡ ಅಥವಾ ತಮಿಳ ಶೈವಧರ್ಮವು.

ಈ ಧರ್ಮದ ಅನುಯಾಯಿಗಳು ವೇದ ಪ್ರಾಮಾಣ್ಯವನ್ನು ಮನ್ನಿಸುವರು. ಆದರೆ ಉಪನಿಷತ್ತುಗಳನ್ನೂ ಯಜುರ್ವೇದದಲ್ಲಿಯ ಶೈವ ತತ್ವಗಳನ್ನು ಪ್ರತಿಪಾದಿಸುವ ಭಾಗಗಳನ್ನೂ ವಿಶೇಷವಾಗಿ ಏಕಾದಶ ರುದ್ರ ಸೂಕ್ತಗಳನ್ನೂ ಬಳಿಕೆಯಲ್ಲಿ ಉಪಯೋಗಿಸುವರು. ಭಗವದ್ಗೀತೆಯು ವೈಷ್ಣವ ಧರ್ಮ ಗ್ರಂಥವೆಂದು ಅವರ ನಂಬುಗೆ ಇರುವದರಿಂದ ಅದನ್ನು ಉಪಯೋಗಿಸುವದಿಲ್ಲ. ಅವರಿಗೆ ಆಧ್ಯಾತ್ಮಿಕ ಉನ್ನತಿಯನ್ನುಂಟು ಮಾಡಿಕೊಡುವ ಗ್ರಂಥಗಳೆಲ್ಲವೂ ತಮಿಳುಭಾಷೆಯಲ್ಲಿರುವವು. ಅವನ್ನೇ ವಿಶೇಷವಾಗಿ ಜನರು ಓದುತ್ತಿರುವರು. ದ್ರಾವಿಡ ದೇಶದಲ್ಲಿ ಶೈವಮತವು ಬಹು ಪ್ರಾಚೀನ ಕಾಲದಿಂದ ಪ್ರಚಾರದಲ್ಲಿತ್ತೆಂದೂ, ಅದು ಹೊರಗಿನಿಂದ ಬಂದದ್ದಲ್ಲವೆಂದೂ ಪುರಾಣದ ಕಥೆಗಳಲ್ಲಿರುವ ತಿರುಳನ್ನು ಹುಡುಕಿ ನೋಡಿದರೆ ಕಂಡುಬರುವದು. ದಕ್ಷಿಣದಲ್ಲಿಯೇ ಶೈವ ಧರ್ಮದ ಉಗಮವಾಗಿರಬಹುದೆಂದು ಕೆಲವು ಪಂಡಿತರು ತರ್ಕಿಸುವರು. ಅವರ ತರ್ಕದ ಸತ್ಯಾಸತ್ಯತೆಯನ್ನು ಮತ್ತೊಮ್ಮೆ ವಿಚಾರಿಸುವಾ! ಆದರೆ ದಕ್ಷಿಣದಲ್ಲಿ ಶೈವಧರ್ಮ ಗ್ರಂಥಗಳು ಬಹಳ ಮೊದಲಿನಿಂದ ಹುಟ್ಟುತ್ತ ಬಂದಿವೆ ಎಂಬುದು ಸತ್ಯವಾದುದು. ಕಾಶ್ಮೀರ ಶೈವಧರ್ಮದ ಮೊದಲನೆಯ ಉಪದೇಶಕನಾದ ವಸುಗುಪ್ತಾಚಾರ್ಯನ ಕಾಲವನ್ನು ಒಂಬತ್ತನೆಯ ಶತಮಾನವೆಂದು ಐತಿಹಾಸಿಕಆಧಾರಗಳ ಮೇಲಿಂದ ಪಂಡಿತರು ಗೊತ್ತು ಮಾಡಿರುವರೆಂದು ಹಿಂದಿನ ಸಂಚಿಕೆಯಲ್ಲಿ ಹೇಳಿದ್ದು ವಾಚಕರ ಸ್ಮರಣೆಯಲ್ಲಿರಬಹುದು. ಈ ಲೇಖದಿಂದ ದ್ರಾವಿಡ ದೇಶದಲ್ಲಿ ಶೈವಮತವು ಅದಕ್ಕೂ ಎಷ್ಟೋ ಶತಮಾನ ಮೊದಲು ಪ್ರಚಾರದಲ್ಲಿತ್ತೆಂಬುದು ಕಂಡು ಬರುವದು.

ವೀರಶೈವ ಧರ್ಮದ ಮೇಲೆ ತಮಿಳ ಶೈವಮತದ ಪ್ರಭಾವವು ಬಹಳವಾಗಿ ಆಗಿರುವದೆನ್ನಲು ಅಡ್ಡಿ ಇಲ್ಲ. ಏಕೆಂದರೆ ವೀರಶೈವರು ಪೂಜ್ಯರೆಂದು

ತಿಳಿಯುವ ಅರುವತ್ತು ಮೂರು ಮಂದಿ ಪುರಾತನರು* ತಮಿಳು ಶೈವ ಧರ್ಮೋದ್ಧಾರಕರಾದ ತಮಿಳು ಋಷಿಗಳು. ಬಸವ ಪುರಾಣದಲ್ಲಿ ಅನೇಕ ತಮಿಳು ಶರಣರ ಪ್ರಸ್ತಾಪವದೆ. * ವೀರಶೈವ ಪುರಾಣ ಕರ್ತರು ತಮಿಳು ಶಿವಶರಣರನ್ನು ಒಳ್ಳೇ ಭಕ್ತಿಯಿಂದ ಸ್ಮರಿಸುವರೆಂಬ ವಿಷಯದಲ್ಲಿ ಸ್ವಲ್ಪವೂ ಸಂಶಯವಿಲ್ಲ. ಅರವತ್ತುಮೂವರು ಪುರಾತನರ ಹೆಸರನ್ನು ನಿತ್ಯ ಪಾರಾಯಣ ಮಾಡುವಂಥವರು ವೀರಶೈವರಲ್ಲೆಷ್ಟೋ ಜನರಿರುವರು.

**ಗ್ರಂಥಗಳು:–** ತಮಿಳ ಶೈವರು ವೇದಗಳ ಪ್ರಾಮಾಣ್ಯವನ್ನು ಒಪ್ಪಿ, ಆಗಮಗಳನ್ನು ಅನುಸರಿಸುವರೆಂದು ಮೇಲೆ ಹೇಳಿದೆ. ಆದರೆ ಅವರ ಭಾಷೆಯಲ್ಲಿಯೇ ವೇದ ಶಾಸ್ತ್ರ ಪುರಾಣಗಳನ್ನು ಸರಿಗಟ್ಟುವ ಅನೇಕ ಗ್ರಂಥಗಳುಂಟು. ಸಂಸ್ಕೃತ ಧಾರ್ಮಿಕ ಸಾಹಿತ್ಯದಲ್ಲಿ ವೇದ (ಪೂರ್ವಕಾಂಡ) ಉಪನಿಷತ್ತು (ಉತ್ತರ ಕಾಂಡ) ಬ್ರಹ್ಮಸೂತ್ರ (ವೇದಾಂತಶಾಸ್ತ್ರ) ಗಳು ಒಳ್ಳೇ ಮಹತ್ವದ ಸ್ಥಾನವನ್ನಾಕ್ರಮಿಸಿರುವಂತೆ ತಮಿಳುಸಾಹಿತ್ಯದಲ್ಲಿ ಅಂಥ ಸ್ಥಾನವನ್ನೇ ತಮಿಳು ಶರಣರ ಕೃತಿಗಳು ಆಕ್ರಮಿಸಿವೆ. ಹತ್ತನೆಯ ಶತಮಾನದ ಅಂತ್ಯದಲ್ಲಿ ಅಥವಾ ಹನ್ನೊಂದನೆಯ ಶತಮಾನದ ಆದಿಯಲ್ಲಿದ್ದ **ನಂಬಿ ಆಂಡರ್ ನಂಬಿಯು** ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಶೈವ ಸೂಕ್ತಗಳನ್ನು ಸಂಗ್ರಹಿಸಿ ಹನ್ನೊಂದು ಪುಸ್ತಕಗಳನ್ನು ಮಾಡಿರುವನು. ಇವು ನಿಜವಾಗಿ ತಮಿಳು ವೇದಗಳಾಗಿವೆ. ಇವುಗಳಲ್ಲಿ ಮೊದಲಿನ ಏಳು ಪುಸ್ತಕಗಳಿಗೆ **ದೇವಾರಮ್** ಅಥವಾ **ಅಡಂಗಲ್ಮುರೈ**ಯೆಂದು ಅನ್ನುವರು. ಇವುಗಳಲ್ಲಿ ಮೊದಲಿನ ಮೂರು ಪುಸ್ತಕಗಳಲ್ಲಿ **ಸಂಬಂಧರ** ಸೂಕ್ತಗಳಿವೆ. ನಾಲ್ಕರಿಂದ ಆರು ಪುಸ್ತಕಗಳಲ್ಲಿ **ಅಪ್ಪರ್** ಅಥವಾ **ತಿರುಣಾವಕ್ಕರಸರ** ಕೃತಿಗಳಿವೆ. ಏಳನೆಯದು **ಸುಂದರ**ರ ಹಾಸ್ಯ ಪ್ರಧಾನವಾದ ಸೂಕ್ತಗಳಿಂದ ಕೂಡಿದೆ. ಇವು ದೇವತೆಗಳ ಸ್ತುತಿಗಳೂ ಪ್ರಾರ್ಥನೆಗಳೂ ಉಳ್ಳ ವೇದಗಳ ಪೂರ್ವಭಾಗವನ್ನು ಹೋಲುವವು. ಇವುಗಳೊಳಗಿನ ಪದ್ಯಗಳನ್ನು ಪುಣ್ಯಕಾರ್ಯಗಳಲ್ಲಿ ವೇದಮಂತ್ರಗಳ ಬದಲು ಉಪಯೋಗಿಸುವರು. ಓದುವಾರಾ ಎಂದು ಕರೆಯಲ್ಪಡುವ ವೇಳಾಳ ಪೂಜಾರಿಗಳಿಂದ ಪೂಜೆಯು ತೀರಿದ ನಂತರ ಪ್ರತಿಯೊಂದು ಗುಡಿಯಲ್ಲಿ ಇವುಗಳನ್ನು ಪಠಿಸುವ ಸಂಪ್ರದಾಯವುಂಟು.

* ಅರವತ್ತುಮೂರು ಮಂದಿ ಪುರಾತನರ ಹೆಸರನ್ನೂ ಬಸವ ಪುರಾಣದಲ್ಲಿರುವ ಶರಣರಹೆಸರುಗಳನ್ನೂ ತುಲನಾತ್ಮಕ ದೃಷ್ಟಿಯಿಂದ ನೋಡಬೇಕೆಂದು ವಾಚಕರಿಗೆ ಬಿನ್ನಹ. ಸ್ಥಳ ಸಂಕೋಚದ ಮೂಲಕ ಅವರೆಲ್ಲರ ಹೆಸರನ್ನು ಇಲ್ಲಿ ಕೊಟ್ಟಿಲ್ಲ.

ಅರ್ಥ ತಿಳಿಯದಿದ್ದರೂ ಇವುಗಳ ಪಾರಾಯಣದಿಂದ ಪುಣ್ಯ ಬರುವದೆಂದು ತಮಿಳು ಶೈವರ ನಂಬುಗೆ. **ಮಾಣಿಕ ವಾಸಹರ** ತಿರುವಾಸಗವ್ ಎಂಬ ಗ್ರಂಥವು ಎಂಟನೆಯ ಪುಸ್ತಕ (ತಿರುಮುರೈ)ದ ಭಾಗವಾಗಿದೆ. ಇದು ಉಪ ನಿಷತ್ತುಗಳನ್ನು ಹೋಲುವದು. ತಮಿಳು ಭಾಷೆಯಲ್ಲಿ ಇದರಂಥ ಗ್ರಂಥ ಗಳೇ ಇಲ್ಲವಂತೆ. ಈ ಗ್ರಂಥದ ವಿಷಯಕ್ಕೆ ತಮಿಳ ಪಂಡಿತರೊಬ್ಬರು ಹೀಗೆ ಅಂದಿರುವರು.

There are indeed but few Poems in any language that can surpass the 'Tiruvasagam' or the holy word of Manikka-vasagar in profundity of thought, in earnestness of feeling or in that simple child-like trust, in which the struggling human soul with its burdens of intellectual and moral puzzles finally finds shelter (Ind. Ant. vol 25 1896)

ಒಂಬತ್ತನೆಯ ಪುಸ್ತಕದಲ್ಲಿ ಒಂಬತ್ತು ಜನರ ಪದ್ಯಗಳಿವೆ. ಅವು **ದೇವಾರವ್**ದ ಪದ್ಯಗಳನ್ನನುಸರಿಸಿ ಬರೆದಿರುವವು. **ತಿರುಮೂಲ ಯೋಗಿಗಳ** ಪದ್ಯಗಳಿಂದ ಹತ್ತನೆಯ ಪುಸ್ತಕವಾಗಿದೆ. ಹನ್ನೊಂದನೆಯ ಪುಸ್ತಕದಲ್ಲಿ **ನಂಬಿ ಆಂಡರ್ ನಂಬಿ** ಮೊದಲಾದ ಆ ಕಾಲದ ಶರಣರ ಕೃತಿ ಗಳಿವೆ. **ಶಕ್ಕೀರರ್** ಎಂಬವನು ಪೆರಿಯ ಪುರಾಣವನ್ನು ಬರೆದಿರುವನು. ಇದು ೭೨ ಸರ್ಗಗಳಲ್ಲಿ ೬೩ ಮಂದಿ ಪುರಾತನರ ಚರಿತ್ರವನ್ನು ವಿವರಿಸು ವದು **ಸಂತಾನಾಚಾರ್ಯರ** ಹದಿನಾಲ್ಕು ಶೈವ ಸಿದ್ಧಾಂತ ಶಾಸ್ತ್ರಗಳನ್ನು ವೇದಾಂತ ಸೂತ್ರಗಳಿಗೆ ಹೋಲಿಸುವರು. ಹನ್ನೊಂದು ತಿರುಮುರೈ ಸಂತಾ ನಾಚಾರ್ಯರ ಗ್ರಂಥಗಳು, ಪೆರಿಯ ಪುರಾಣ, ಇವೆಲ್ಲವು ಕೂಡಿ ತಮಿಳು ಶೈವರ ಧಾರ್ಮಿಕ ಗ್ರಂಥಗಳಾಗಿರುವವು.

## ಆಚಾರ್ಯರು.

**ತಿರುಜ್ಞಾನ ಸಂಬಂಧರ್**:-ಪಿಳ್ಳೆ ನೈನಾರೆಂದು ಮತ್ತೊಂದು ಹೆಸರು ರೂಢಿಯಲ್ಲಿರುವದು. ಬೌದ್ಧ ಜೈನ ಮತಗಳು ಒಳ್ಳೇ ಪ್ರಬಲಾವಸ್ಥೆಯಲ್ಲಿದ್ದ ಕಾಲಕ್ಕೆ ದಕ್ಷಿಣದಲ್ಲಿ ಕೆಲವು ಶೈವ ಮತಾನುಯಾಯಿಗಳು ಅಲ್ಲಲ್ಲಿ ಕಣ್ಣಿಗೆ ಬೀಳುತ್ತಿದ್ದರು. ಅಂಥವರೊಳಗೆ ತಂಜಾವರ ಪ್ರಾಂತದಲ್ಲಿ ಈಗ **ಶಿಯಾಲಿ** ಯೆಂದು ಕರೆಯಲ್ಪಡುವ ಊರಲ್ಲಿ ಶಿವಪಾದಹೃದಯನೆಂಬ ಶರಣನು ವಾಸಿ

ಸುತ್ತಿದ್ದನು. ದೇವರಲ್ಲಿ ನಂಬುಗೆಯಿಲ್ಲದ ಜನರ ಅಜ್ಞಾನಾಂಧಕಾರವನ್ನು ದೂರ ಮಾಡಿ ಅವರನ್ನು ಶಿವಭಕ್ತಿಯು ಕಡೆಗೆ ಎಳೆತರಲು ಶಕ್ತನಾದೋರ್ವ ಮಗನನ್ನು ದಯಪಾಲಿಸಬೇಕೆಂದು ಆತನು ಶಿಯಾಲಿಯಧೀಶನಾದ ಶಂಕರನನ್ನು ಆವಾಗಲೂ ಪ್ರಾರ್ಥಿಸುತ್ತಿದ್ದನು. ಈಶ್ವರನು ಈತನ ಪ್ರಾರ್ಥನೆಯನ್ನು ಮನ್ನಿಸಿದನೋ ಏನೋ ಎಂಬಂತೆ ಈತನಿಗೋರ್ವ ಮಗನು ಹುಟ್ಟಿದನು. ಈತನೇ **ಪಿಳ್ಳೆ ನೈನಾರ.** ಈತನು ಮೂರುವರುಷ ವಯಸ್ಸಿನವನಿದ್ದಾಗ ಸಾಕ್ಷಾಜ್ಜಗದಂಬೆಯು ಮೊಲೆಯಹಾಲನ್ನು ಕುಡಿಯಲಿಕ್ಕೆ ಕೊಟ್ಟಳೆಂದೂ, ಅಂದಿನಿಂದ ಈತನಿಗೆ ಪರಾಜ್ಞಾನವುಂಟಾಯಿತೆಂದೂ, ಈತನು ಸಾಕ್ಷಾತ್ ಷಣ್ಮುಖನ ಅವತಾರವೆಂದೂ ಶೈವ ಪುರಾಣಗಳಲ್ಲಿ ಹೇಳಿದೆ. ಈತನು ದಕ್ಷಿಣ ಹಿಂದುಸ್ತಾನದಲ್ಲಿರುವ ಶಿವಕ್ಷೇತ್ರಗಳನ್ನೆಲ್ಲ ಕಂಡಿರುವನು. ಹೋದ ಹೋದಲ್ಲಿ ಶಿವಲೀಲಾ ವರ್ಣನೆಗಳುಳ್ಳ ಶಿವ ಭಕ್ತಿಯನ್ನುಂಟು ಮಾಡುವ ಶಿವಮಹಿಮೆಗಳನೊಳಕೊಂಡ ಹಾಡುಗಳನ್ನು ಕಟ್ಟಿ ಹಾಡುತ್ತಿದ್ದನು. ಯಾತ್ರಿಕರ ಮನಸ್ಸಿನ ಮೇಲೆ ಅವುಗಳ ಪರಿಣಾಮವು ಚನ್ನಾಗಿ ಆಗುತ್ತಿತ್ತು. ಈತನು ಹೋದ ಹೋದಲ್ಲಿ ಪರಮತಾನುಯಾಯಿಗಳನ್ನು ವಾದದಲ್ಲಿ ಸೋಲಿಸಿ ಶಿವಮತಕ್ಕೆ ಸೇರಿಸಿಕೊಳ್ಳುತ್ತಿದ್ದನು. **ತಿರುವಾಲವಾ ತಿರುಮರಕ್ಕಡೆ** ಯೆಂಬ ಪಟ್ಟಣಗಳಲ್ಲಿಯೂ **ಇನಕುಲೋತ್ತುಂಗಚೋಳ**ನ ಸಭೆಯಲ್ಲಿಯೂ **ಮಧುರೆಯ ಪಾಂಡ್ಯನ** ಸಭೆಯಲ್ಲಿಯೂ ವಾದಿಸಿ ಪರಮತಗಳನ್ನು ಜಯಿಸಿದಂತೆ ಭೀಮಕವಿಯು ಬಸವಪುರಾಣದಲ್ಲಿ ಹೇಳಿರುವನು. **ಮಧುರೆಯ ಪಾಂಡ್ಯನು** ಶೈವ ಧರ್ಮವನ್ನು ತ್ಯಜಿಸಿ ಜೈನಮತವನ್ನು ಸ್ವೀಕರಿಸಲು ಆತನ ಪಟ್ಟದರಸಿಯಾದ **ಮಂಗೈಯರಕ್ಕರಸಿಯು** ಆತನ ಮುಖ್ಯ ಮಂತ್ರಿಯಾದ **ಕುಲಚ್ಚರೈ** ಯೆಂಬವನ ಆಮಂತ್ರಣವನ್ನು ಸ್ವೀಕರಿಸಿ ಮಧುರೆಗೆ ಬಂದು, ವಾದಿಸಿ, **ಕೂನಪಾಂಡ್ಯನನ್ನು** ಶೈವಮತಕ್ಕೆ ತಿರುಗಿ ಸೇರಿಸಿಕೊಂಡನೆಂದು ತಮಿಳ ಮತ್ತು ಕನ್ನಡ ಗ್ರಂಥಗಳಲ್ಲಿ ಹೇಳಿದೆ.

ಈತನು ಒಳ್ಳೇ ಪ್ರಸಿದ್ಧ ತಮಿಳ ಋಷಿಯಾಗಿರುವದಲ್ಲದೆ ಅತ್ಯುತ್ತಮ ತಮಿಳ ಕವಿಯಾಗಿರುವನು. ಇವನು ಮಾಡಿದ ತಮಿಳ ಭಾಷಾ ಸೇವೆಯು ಅಪಾರವಾದುದು. ಈತನ ಕವಿತ್ವದ ವಿಷಯಕ್ಕೋರ್ವ ತಮಿಳ ಪಂಡಿತರು ಹೀಗೆ ಅಂದಿರುವರು.

Even as poet Sambandhar has more than ordinary claims to be remembered. His hymns of which 384 padigams or

more thau I9000 lines are now extant are models of pure and elevated diction generally earnest and touching but always melodious and tuned. Most of them appear to have been uttered impromptu and all of them beinge -yrical are se tto music. (Ind. Ant. vol 25)

ಈತನ ಹಾಡುಗಳು ಪಂಡಿತ ಪಾಮರರಿಗೂ ಪ್ರಿಯವಾಗಿರುವವಿಷ್ಟೇ ಅಲ್ಲ, ಆದರೆ ಸಂಸ್ಕೃತದಲ್ಲಿ ವೇದಗಳಿಗಿರುವಷ್ಟು ಮನ್ನಣೆಯು ತಮಿಳು ಭಾಷೆಯಲ್ಲಿ ಇವುಗಳಿಗಿರುವದೆಂದು ಹೇಳಬಹುದು. ತಮಿಳು ವೇದಗಳೆಂದು ಹೇಳಿಸಿಕೊಳ್ಳುವ **ತೇವಾರಮ್** ಅಥವಾ **ದೇವಾರಮ್**ದ ಮೊದಲಿನ ನೂರು ಅಡಂಗಲ್ಮುರೈ ಸಂಬಂಧರ ಸೂಕ್ತಗಳಿಂದಾದುವು. ಈತನು ಸಾಕ್ಷಾತ್ಕುಮಾರನ ಅವತಾರನಿರುವನೆಂಬ ಪೌರಾಣಿಕ ನಂಬುಗೆಯೂ, ವೀರಶೈವ ಧರ್ಮದಲ್ಲಿಯೂ ಈತನಿಗಿರುವ ಒಳ್ಳೇ ಗೌರವ ಸ್ಥಾನವೂ, ತಮಿಳು ದೇಶದ ಗುಡಿಗಳಲ್ಲೆಲ್ಲ ಈತನ ಮೂರ್ತಿಯನ್ನು ಪೂಜಿಸುವದೂ, ಶಿವಶರಣರ ಪಂಕ್ತಿಯಲ್ಲಿ ಈತನ ಸ್ಥಾನವು ಬಲು ದೊಡ್ಡದಿರುವದೆಂಬುದನ್ನು ಬಲಪಡಿಸುವವು. ಐತಿಹಾಸಿಕ ದೃಷ್ಟಿಯಿಂದ ವಿಚಾರಿಸಲು ಈತನು ಕಲ್ಪಿತ ವ್ಯಕ್ತಿಯಲ್ಲೆಂಬುದು ನಿರ್ವಿವಾದ ಸಂಗತಿಯು. ಏಕೆಂದರೆ ಈತನ ಪದ್ಯಗಳು ಇನ್ನೂ ತಮಿಳ ಶೈವರ ಮುಖದಲ್ಲಿ ಉಕ್ಕುತ್ತಿರುವವು. ಅದಲ್ಲದೆ ಈತನು ಶೈವಮತಕ್ಕೆ ಸೇರಿಸಿಕೊಂಡ ಚೋಳ ಪಾಂಡ್ಯ ಅರಸು ಮನೆತನಗಳು ಇತಿಹಾಸ ಪ್ರಸಿದ್ಧವಿರುವವು. ಆದರೂ ಈತನ ಕಾಲ ನಿರ್ಣಯಿಸುವದು ಸ್ವಲ್ಪ ಬಿಕ್ಕಟ್ಟಿನ ಕೆಲಸವಾಗಿರುವದು. ಏಕೆಂದರೆ ಅಂಥ ಸಂಪೂರ್ಣ ಸಾಧನಗಳು ಇನ್ನೂ ಹೊರಬಿದ್ದಿಲ್ಲ. ಇವನು ಆವ ಕಾಲದಲ್ಲಿದ್ದನೆಂಬುವುದನ್ನು ನಿರ್ಣಯಿಸಲಿಕ್ಕೆ ಸಾಧನವಾದ ಎರಡು ಕಾರಣಗಳು ನಮಗೆ ಸಮಂಜಸ ತೋರುವವು. ಒಂದನೆಯದು, ಈತನು ಶಂಕರಾಚಾರ್ಯನಿಗಿಂತ ಮೊದಲಿನವನೆಂದು ಸುಂದರಮ್ ಪಿಳ್ಳೆಯವರು ಅಭಿಪ್ರಾಯ ಪಡುವರು. ಹೇಗೆಂದರೆ ಶಂಕರಾಚಾರ್ಯ ನಿರ್ಮಿತವಾದ ಸೌಂದರ್ಯ ಲಹರಿಯ ೭೬ ನೆಯ ಪದ್ಯದಲ್ಲಿ ತಿರುಜ್ಞಾನ ಸಂಬಂಧರನ್ನೇ ಗುರಿಯಾಗಿಟ್ಟುಕೊಂಡಿರಬೇಕೆಂದು ತರ್ಕಿಸಿರುವರು. ಆ ಪದ್ಯವನ್ನು ಶಿವಾನುಭವದ ವಾಚಕರ ಅವಗಾಹನೆಗಾಗಿ ಕೊಡುವೆವು:—

ತವಸ್ತನ್ಯಂ ಮನ್ಯೆ ಧರಣಿಧರಕನ್ಯೆ ಹೃದಯತಃ

ಪಯಃ ಪಾರಾವಾರಂ ಪರಿವಹತಿ ಸಾರಸ್ವತ ಮಿತಿ।
ದಯಾವತ್ಯಾ ದತ್ತಂ ದ್ರವಿಡಶಿಶುರಾಸ್ವಾದ್ಯ ತವಯತ್
ಕವೀನಾಂ ಪ್ರೌಢಾನಾಮುಜನಿ ಕಮನೀಯಃ ಕವಯಿತಾ॥

ವಾಜಪೇಯ ಕೃಷ್ಣಯ್ಯನವರಿಗಾಗಿ ರಾಜರಾಜೇಶ್ವರಿ ಮುದ್ರಾಲಯದಲ್ಲಿ ಮುದ್ರಿಸಿದ ಬಸವ ಪುರಾಣದ ೩೩೮ನೇಯ ಪುಟವನ್ನು ಓದಿದರೆ “ದಯಾವತ್ಯಾ ದತ್ತಂ ದ್ರವಿಡ ಶಿಶುರಾಸ್ವಾದ್ಯ” ವೆಂಬುವದು ಸ್ಪಷ್ಟವಾಗುವದು. ಕ್ರಿ. ಶ. ೮ನೆಯ ಶತಮಾನವು ಶಂಕರಾಚಾರ್ಯನ ಕಾಲವೆಂದು ಪಂಡಿತರು ನಿರ್ಣಯಿಸಿರುವರು. ಆದುದರಿಂದ ಎಂಟನೆಯ ಶತಮಾನಕ್ಕೂ ಪೂರ್ವದಲ್ಲಿ ಈತನಿದ್ದನೆಂಬುದನ್ನು ನಂಬಬಹುದು. ಎಷ್ಟು ಶತಮಾನ ಪೂರ್ವದವನೆಂಬುದನ್ನು ನಿರ್ಣಯಿಸಲು ಮತ್ತೊಂದು ಸಾಧನವುಂಟು. ಅದು ಎರಡನೆಯ ಕಾರಣವು. ತನ್ನ ಪದ್ಯಗಳೊಲ್ಲೊಂದು ಕಡೆ ಅರುವತ್ತು ಮೂವರು ಪುರಾತನರಲ್ಲೊಬ್ಬರಾದ ಚಿರುತ್ತೊಂಡನ್ನರನ್ನು ಸ್ಮರಿಸಿರುವನು.

ಈ ಚಿರುತ್ತೊಂಡನ್ನರು ಬಾದಾಮಿಯಲ್ಲಿ ಸಂಭವಿಸಿದ ಕಾಳಗದಲ್ಲಿ ಕಾದಿದರೆಂದು ಪೆರಿಯ ಪುರಾಣದಿಂದ ತಿಳಿಯುವದು. ಈ ಯುದ್ಧವು ಕ್ರಿ. ಶ. ೬೪೨ ರಲ್ಲಿ ಸಂಭವಿಸಿತ್ತೆಂದು ಗೊತ್ತಾಗಿರುವದು. §

ಇದರ ಮೇಲಿಂದ ಶಂಕರಾಚಾರ್ಯನಿಗಿಂತ ಮೊದಲು ದಕ್ಷಿಣದಲ್ಲಿ ಹಿಂದೂ ಧರ್ಮದ ಪ್ರವರ್ತಕನಾಗಿದ್ದನೆಂಬುದು ಸ್ಪಷ್ಟವಾಗುವದು. ಉತ್ತರದಲ್ಲಿ ಭಟ್ಟ ಕುಮಾರಿಲನು ಬೌದ್ಧ ಧರ್ಮವನ್ನು ನಾಶಮಾಡಿದಂತೆ ದಕ್ಷಿಣದಲ್ಲಿ ಆಚಾರ್ಯ ಶಂಕರನಿಗಿಂತ ಮೊದಲು ಬಹುಕಾಲದಿಂದ ನೆಲೆಗೊಂಡ ವೇದಬಾಹ್ಯ ಮತ್ತು ನಿರೀಶ್ವರವಾದಿ ಮತಗಳನ್ನು ಹೊಡೆದೋಡಿಸಿ ಆ ಮತಾನುಯಾಯಿಗಳನ್ನು ವೇದಧರ್ಮಕ್ಕೆ ಸೇರಿಸಿಕೊಂಡು ಹಿಂದೂಧರ್ಮದ ಪುನಃ ಪ್ರತಿಷ್ಠಾಪನೆಯನ್ನು ಮಾಡಿದ ಶ್ರೇಯಸ್ಸಿಂಗೆ ಶಿವಶರಣರಾದ ತಿರುಜ್ಞಾನ ಸಂಬಂಧರು ಮತ್ತು ಅವರ ಸಮಕಾಲದ ಇತರ ಶಿವಶರಣರೂ ಪಾತ್ರರಿರುವರು.

**ಅಪ್ಪರ್ ಅಥವಾ ತಿರುನಾವಕ್ಕರಸು:—** ಈತನೂ ಪ್ರಸಿದ್ಧ ಶಿವಭಕ್ತನು. ವೇಳ್ಳಾಳಿ (ನೇಕಾರ) ಜಾತಿಗೆ ಸೇರಿದವನು. ಮೂಲ ಹೆಸರು **ತಿರು**

§ Hymns of Tamil Saivite saints, Heritage of India Series. P. 11 & 29

**ಜಾವಕ್ಕರಸು.** ಚಿಕ್ಕವನಿದ್ದಾಗ ತಂದೆ ತಾಯಿಗಳು ತೀರಿಕೊಂಡುದರಿಂದ ಹಿರಿಯ ಅಕ್ಕ ಒಳ್ಳೇ ಪ್ರೇಮದಿಂದ ಜೋಪಾನ ಮಾಡಿದಳು. ಚಿಕ್ಕಂದಿನಿಂದಲೂ ಈತನಲ್ಲಿ ಶಿವಭಕ್ತಿಯು ಹೆಚ್ಚಬೇಕೆಂದೂ ಶಿವಶರಣರ ಮಾಲಿಕೆಯಲ್ಲಿ ಶೋಭಿಸಬೇಕೆಂದೂ ಬಹಳೇ ಹಾರೈಸುತ್ತಿದ್ದಳು. ಸ್ವಲ್ಪ ದೊಡ್ಡವನಾದಮೇಲೆ ಶಿವಮತವನ್ನು ತ್ಯಜಿಸಿ ಜೈನಧರ್ಮೋಪದೇಶಕನಾದನು. ಆಗ ಆಕೆಗಾದ ವಿಷಾದವನ್ನು ಹೇಳಲಳವಲ್ಲ. ಆಕೆಯ ದೈನ್ಯೋಕ್ತಿಗಳೂ ಪ್ರಾರ್ಥನೆಗಳೂ ಕಡೆಗೆ ಫಲದಾಯಕವಾದುವು. ಇವನು ಮರಳಿ ಶೈವ ಮತಾನುಯಾಯಿಯಾದನಷ್ಟೇ ಅಲ್ಲ ಅನ್ಯಮತದ ಬಲು ಜನರನ್ನು ಶಿವಮತಕ್ಕೆ ಸೇರಿಸಿಕೊಂಡನು. ಇವನು **ತಿರುಜ್ಞಾನ ಸಂಬಂಧರಂತೆ** ಪದ್ಯಗಳನ್ನು ಹಾಡುತ್ತ ಊರಿಂದೂರಿಗೆ ಅಲೆಯುತ್ತಿದ್ದನು. ಸಂಬಂಧರಿಗಿಂತ ವಯಸ್ಸಿನಿಂದ ದೊಡ್ಡವನು. ಇಬ್ಬರೂ ಒಂದೇ ಕಾಲದಲ್ಲಿದ್ದವರು. ಕೆಲವು ಕಾಲ ಕೂಡಿ ತಿರುಗಾಡಿದವರು. ಆದುದರಿಂದ ಸಂಬಂಧರು ಈತನನ್ನು **ಅಪ್ಪರ್** ತಂದೆಗಳೆಂದು ಗೌರವದಿಂದ ಕರೆಯುತ್ತಿದ್ದನು. ಅದೇ ಈತನ ಮತ್ತೊಂದು ಹೆಸರಾಯಿತು. **ದೇವಾರದೊಳಗಿನ** ೪. ೫. ೬. ತಿರುಮುರೈ ಅಥವಾ ಪುಸ್ತಕಗಳು ಈತನ ಕೃತಿಗಳು. ಈತನೂ ಪರಮತದವರ ಸಂಗಡ ವಾದಿಸಿ ಶಿವಸರ್ವೋತ್ತಮನೆಂದು ಪ್ರತಿಪಾದಿಸಿ ಶೈವ ಮತಕ್ಕೆ ಆಧಾರವಾಗಿದ್ದನು.

**ಸುಂದರ ಮೂರ್ತಿ ಸ್ವಾಮಿ:**—ಈತನು ತಮಿಳು ಸಾಹಿತ್ಯದಲ್ಲಿ ಒಳ್ಳೇ ಪ್ರಸಿದ್ಧನಿದ್ದಂತೆ ಕನ್ನಡ ಸಾಹಿತ್ಯದಲ್ಲಿಯೂ ವಿಶೇಷವಾಗಿ ವೀರಶೈವ ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧನಿರುವನು. ಸು. ಕ್ರಿ. ಶ. ೧೪೫೦ ರಲ್ಲಿದ್ದ ಬೊಮ್ಮರಸನ ಸೌಂದರ ಪುರಾಣವೂ ಸು. ಕ್ರಿ. ಶ. ೧೬೦೦ ರಲ್ಲಿದ್ದ ಅಣ್ಣಾಜಿಯ ಸೌಂದರ ವಿಳಾಸವೂ ಈತನ ಚರಿತ್ರವನ್ನು ವಿವರಿಸುವವು. ಈತನನ್ನು ಕನ್ನಡ ಕವಿಗಳು **ಸೌಂದರ ನಂಬಿಣ್ಣನೆಂದು** ಪ್ರೀತಿಯಿಂದ ಕರೆದಿರುವರು. ಅರವತ್ತು ಮೂವರು ಪುರಾತನರಲ್ಲೊಬ್ಬನಾಗಿರುವನು. ಉಳಿದ ಅರುವತ್ತೆರಡು ಪುರಾತನರ ಹೆಸರುಗಳು ಈತನ ಪದ್ಯಗಳಲ್ಲಿ ಬಂದಿರುವುದರಿಂದ ಬಹುತರ ಅರವತ್ತುಮೂರನೆಯವನಿರುವನು. ಈತನು ಒಳ್ಳೇ ಸುಂದರನಿದ್ದು ಜಾತಿಯಿಂದ ಬ್ರಾಹ್ಮಣನಾಗಿದ್ದನು. ತಂಜಾವರ ಪ್ರಾಂತದಲ್ಲಿ ತಿರುವಳುರವೆಂದು ಈಗ ಕರೆಯುವ ಊರಿನ ಶಿವಾಲಯದ ನರ್ತಕಿಯಾದ **ಪರಿವಿನಾಚಿ**ಯೆಂಬುವಳು ಈತನ ಪ್ರಿಯಳು. ವೇಳಾಳ ಜಾತಿಯವಳಾದ ಇನ್ನೊರ್ವಳು ಈತನಿಗೆ ಪ್ರಿಯಳಿದ್ದಳು. ಈತನು ಒಳ್ಳೇ ಶಿವಭಕ್ತನಾಗಿ

ದ್ದನು. ಶಿವನೇ ಈತನ ದಾಸ್ಯತ್ವವನ್ನು ವಹಿಸಿದ್ದನೆಂದು ಕನ್ನಡ ಮತ್ತು ತಮಿಳ ಪುರಾಣಗಳು ಹೇಳುವವು. **ಸಂಬಂಧರ್** ಮತ್ತು **ಅಪ್ಪರ್** ಇವರಂತೆ ಈತನೂ ಪದ್ಯಗಳನ್ನು ರಚಿಸಿ ಹೋದ ಹೋದಲ್ಲಿ ಹಾಡುತ್ತಿದ್ದನು. ಈತನ ಪದ್ಯಗಳಲ್ಲಿ ಹಾಸ್ಯರಸವು ತುಂಬಿದೆ. ಈತನ ಪದ್ಯಗಳು ದೇವಾರದೊಳಗಿನ ೭ ನೆಯ ಪುಸ್ತಕವಾಗಿವೆ. ಈತನು ಸುಮಾರು ೮೨೫ ರಲ್ಲಿದ್ದನು.

**ತಿರುಮೂಲರ್**—ಸುಮಾರು ಕ್ರಿ. ಶ. ೮೦೦ ರಲ್ಲಿದ್ದನು. **ತಿರುಮಂತ್ರಮ್** ವೆಂಬ ಗ್ರಂಥವನ್ನು ಬರೆದಿದ್ದಾನೆ. ಇದು **ದೇವಾರದೊಳಗಿನ** ಹತ್ತನೆಯ ಪುಸ್ತಕವಾಗಿದೆ. ಇದರಲ್ಲಿ ಆಗಮಗಳ ತತ್ವಜ್ಞಾನದ ವಿವರಣೆಯಿದೆ. ಕಾವ್ಯದೃಷ್ಟಿಯಿಂದ ಈ ಗ್ರಂಥವು ಅತ್ಯುತ್ತಮವಾಗಿರುವದು. ಮತ್ತು ಉಪಯುಕ್ತವಾದ ಧರ್ಮವನ್ನು ಬೋಧಿಸುವದು.

**ಮಾಣಿಕ್ಕ ವಾಸಗರ್**—ಸುಮಾರು ಕ್ರಿ. ಶ. ೯೦೦ ರಲ್ಲಿ ಉದಯಿಸಿದನು ಅಸಂಖ್ಯ ಸಣ್ಣದೊಡ್ಡ ಗ್ರಂಥಗಳನ್ನು ಬರೆದಿರುವನು. ಅವಕ್ಕೆ **ತಿರುವಾಚಕಮ್** ಪವಿತ್ರ ವಾಚನಗಳೆಂದು ಅನ್ನುವರು. ಈತನು ಒಳ್ಳೇ ವಿದ್ಯಾವಂತನೂ, ಮಧುರೆಯಲ್ಲಿ ಪ್ರಸಿದ್ಧ ಮನೆತನಕ್ಕೆ ಸೇರಿದವನೂ, ಬಹಳೇ ಪ್ರಸಿದ್ಧನೂ ಆಗಿದ್ದನು. ಮುಂದೆ ವಿರಕ್ತನಾಗಿ ದೇಶಸಂಚಾರಿಯಾದನು. ಈತನು ವಿದ್ವಾಂಸನಿದ್ದುದರಿಂದ ಈತನ ಭಾಷಾ ಶೈಲಿ ವಿಷಯ ನಿರೂಪಣೆ ಮೊದಲಾದವು ಉತ್ತಮವಾಗಿರುವವು. ಈತನು ಆಗಮ ಪುರಾಣಗಳೊಳಗಿನ ಶಿವಪರ ಕಥೆಗಳನ್ನು ಮತ್ತು ಆ ಕಾಲದಲ್ಲಿ ಜನರಲ್ಲಿ ಪ್ರಚಾರದಲ್ಲಿರುವ ಶಿವಲೀಲೆಗಳನ್ನು ತೆಗೆದುಕೊಂಡು ಅವುಗಳ ಮೇಲೆ ತನ್ನ ಪ್ರತಿಭೆಯನ್ನು ಕೆಡವಿರುವನು. ಆಗಮಗಳೊಳಗಿನ ಎಷ್ಟೋ ಪಾರಿಭಾಷಿಕ ಶಬ್ದಗಳು ಈತನ ಗ್ರಂಥಗಳಲ್ಲಿ ಕಂಡುಬರುವವು. ಶಂಕರಾಚಾರ್ಯ ಮಾಯಾವಾದವು ಈತನ ಮನಸ್ಸಿಗೆ ಬಂದಿಲ್ಲ.

**ನಂಬಿ ಆಂಡರ್ನಂಬಿ**—ಈತನು ಚೋಳ ಅರಸನಾದ **ರಾಜರಾಜನ** (ಕ್ರಿ. ಶ ೯೮೫-೧೦೧೮) ಸಮಕಾಲದವನು. ಈತನು ನೈನಾರರ ತಮಿಳು ಪದ್ಯಗಳನ್ನು ಸಂಗ್ರಹಿಸಿ **ದೇವಾರಮ್** ವೆಂದು ಹೆಸರಿಟ್ಟು ದ್ರಾವಿಡ ರಾಗದಿಂದ ಹಾಡಲು ಅನುಕೂಲವಾಗುವಂತೆ ಮಾಡಿ ರಾಜರಾಜನ ಸಹಾಯದಿಂದ ಮುಖ್ಯ ಗುಡಿಗಳಲ್ಲಿ ಹಾಡುವಂತೆ ವ್ಯವಸ್ಥೆ ಮಾಡಿಸಿದನು. **ದೇವಾರಮ್** ದೊಳಗಿನ ಹನ್ನೊಂದನೆಯ ತಿರುಮುರೈದಲ್ಲಿಯ ಕಡೆಯ ಹತ್ತು **ನಂಬಿ ಆಂಡರ್ನಂಬಿ**ಯಿಂದ ಬರೆಯಲ್ಪಟ್ಟಿವೆ. ಪೆರಿಯ ಪುರಾ

ಣದ ಮೂಲನಾದ **ತಿರುತ್ತೊಂಡದ ತಿರುವಂದಾದಿಯ**ಂಬುದು ಈತನ ಕೃತಿಯು. ಈತನನ್ನು **ವ್ಯಾಸನಿಗೆ** ಹೋಲಿಸುವರು. ಏಕೆಂದರೆ ವ್ಯಾಸನು ಸಂಸ್ಕೃತ ವೇದಗಳನ್ನುಂಟು ಮಾಡಿರುವನೆಂದು ಪ್ರತೀತಿಯುದೆ ಯಾದುದರಿಂದ ಆತನಿಗೆ ವೇದವ್ಯಾಸನೆಂದು ಹೆಸರಿರುವದು. ಅದರಂತೆಯೇ ವೇದಗಳಿಗೆ ಸಮಾನವಾದ, ಅದೇಕೆ ತಮಿಳು ವೇದಗಳಾದ, ದೇವಾರವ್ಮ್‌ವನ್ನುಂಟು ಮಾಡಿರುವುದರಿಂದ ಈತನು ವ್ಯಾಸನನ್ನು ಸರಿಗಟ್ಟುವನು.

**ಶಕ್ಕೀರರ್**:—ಕ್ರಿ. ಶ. ೧೨ ನೇ ಶತಮಾನದಲ್ಲಿದ್ದನು ಅರವತ್ತು ಮೂರು ಮಂದಿ ಪುರಾತನರ ಚರಿತ್ರವನ್ನು ವಿವರಿಸುವ **ಪೆರಿಯ ಪುರಾಣವನ್ನು** ಬರೆದಿರುವನು.

**ಮೈಕಂಡದೇವ**:—ಹದಿಮೂರನೇ ಶತಮಾನದಲ್ಲಿದ್ದನು. ಜಾತಿಯಿಂದ ಶೂದ್ರನು. ಪೆನ್ನಿರ ನದಿಯ ದಂಡೆಯಮೇಲೆ ಮದ್ರಾಸದ ಉತ್ತರದಲ್ಲಿ ವಾಸಿಸುತ್ತಿದ್ದನು. ಶೈವಸಿದ್ಧಾಂತವನ್ನು ಸಂಪೂರ್ಣವಾಗಿ ವಿವರಿಸುವ **ಶಿವಜ್ಞಾನಬೋಧವೆಂಬ** ಗ್ರಂಥವನ್ನು ಬರೆದಿದ್ದಾನೆ. ಈತನು ಒಳ್ಳೇ ಪ್ರಸಿದ್ಧನಾದ ಗುರುವಾಗಿದ್ದನು **ಅರುಳ್ನಂದಿದೇವನೂ ಮನವಾಚಕಂ** ಕಡಂದಾನನೂ ಈತನ ಹೆಸರಾದ ಶಿಷ್ಯರು. **ಅರುಳ್ನಂದಿಯು ಶಿವಜ್ಞಾನ ಸಿದ್ಧಿಯೆಂಬ** ಗ್ರಂಥವನ್ನು ಬರೆದಿರುವನು. ಈಗ್ರಂಥದ ಪೂರ್ವಾರ್ಧದಲ್ಲಿ ಜೈನ ಬೌದ್ಧ ಮೊದಲಾದ ಮತಗಳನ್ನು ಟೀಕಾತ್ಮಕ ದೃಷ್ಟಿಯಿಂದ ಶೋಧಿಸಿ ಅವುಗಳ ದೋಷವನ್ನು ತೋರಿಸಿರುವನು. ಉತ್ತರಾರ್ಧದಲ್ಲಿ ಪ್ರತಿಯೊಂದು ಪ್ರಕಾರದ ಶಂಕೆಗಳನ್ನು ನಿವಾರಿಸಿ ಶೈವಸಿದ್ಧಾಂತ ಸ್ಥಾಪನೆ ಮಾಡಿರುವನು. ಈತನ ಅನುಯಾಯಿಯು ಜಾತಿಯಿಂದ ಶೂದ್ರನಾದ **ಮರೈಜ್ಞಾನ ಸಂಬಂಧನು.** ಈತನು ಶೈವ ಸಮಯನೇರಿಯೆಂಬ ಗ್ರಂಥವನ್ನು ಬರೆದಿರುವನು. **ಮನವಾಚಕಂ ಕಡಂದಾನನು ಇರುಪಾವಿರುಪಥು** ಮತ್ತು **ಉಣ್ಮೈವಿಳುಕ್ಕಮ್**ವೆಂಬ ಗ್ರಂಥಗಳನ್ನು ಬರೆದಿರುವನು. **ಉಣ್ಮೈವಿಳುಕ್ಕಮ್**ದಲ್ಲಿ ಶೈವ ಸಿದ್ಧಾಂತ ತತ್ವಗಳನ್ನು ಪ್ರಶ್ನಾರ್ಥಕ ರೂಪದಿಂದ ವಿವರಿಸಿರುವನು.

**ಉಮಾಪತಿ ಶಿವಾಚಾರ್ಯ**:—ಈತನು ಜಾತಿಯಿಂದ ಬ್ರಾಹ್ಮಣನು. ಮರೈಜ್ಞಾನ ಸಂಬಂಧನೆಂಬ ಶೂದ್ರ ಜಾತಿಯವನ ಶಿಷ್ಯತ್ವವನ್ನು ವಹಿಸಿ ಆತನ ಭುಕ್ತ ಶೇಷವನ್ನು ಗ್ರಹಿಸಿದುದರಿಂದ ಬ್ರಾಹ್ಮಣರು ಈತನಿಗೆ ಬಹಿಷ್ಕಾರ ಹಾಕಿದರು. ಈತನು ಈಮತ ಪ್ರಸಾರಕರಲ್ಲಿ ಅಗ್ರಗಣ್ಯ

ನಾಗಿರುವನು. ಈತನು ಎಷ್ಟೋ ಗ್ರಂಥಗಳನ್ನು ಬರೆದಿರುವನು. ಅವುಗಳಲ್ಲಿ ಎಂಟು ಶೈವಧರ್ಮವನ್ನು ಪ್ರತಿಪಾದಿಸುವ ಮುಖ್ಯ ಗ್ರಂಥಗಳಾಗಿರುವವು. ಅವಾವುವೆಂದರೆ-೧- ಶಿವಪ್ರಕಾಶ ೨ ತಿರುಅರುಳ್ ಪಯಮ್ ೩ ವಿಂಯ್ಯಾವೆಣ್ಬಾ ೪ ಪೊರ್‍ರಿಪಕ್ರೋಡೈ ೫ ಕೋಡಿಕವಿ ೬ ನೆಂಜು ವಿಡುತೂತು ೭ ಉಣ್ಮೈನೇರಿ ವಿಳುಕ್ಕಮ್ ೮ ಸಂಕಲ್ಪ ನಿರಾಕರಣ. **ಮೆಯ್ಕಂಡದೇವ, ಅರುಳ್ನಂದಿ, ಮರೈಜ್ಞಾನಸಂಬಂಧಿ** ಮತ್ತು **ಉಮಾಪತಿ** ಈ ನಾಲ್ವರು ಸಂತಾನಾಚಾರ್ಯರೆಂದು ಹೆಸರುಗೊಂಡಿರುವರು.

**ಉಯ್ಯವಂದನ:**—ಈತನ ಕಾಲವು ಗೊತ್ತಾಗಿಲ್ಲ. ಹನ್ನೆರಡನೇ ಶತಮಾನದ ಅಂತ್ಯದಲ್ಲಿರಬಹುದು. **ಮೆಯ್ಕಂಡದೇವನ** ಶಿಷ್ಯನಿರಬಹುದು. ಈತನು **ತಿರುವುಂತೀಯರ್** ಮತ್ತು **ತಿರುಕ್ಕಲಿರರುಪ್ಪಡಿಯರ್** ವೆಂಬ ಗ್ರಂಥಗಳನ್ನು ಬರೆದಿರುವನು. **ಉಯ್ಯವಂದನನ** ಗ್ರಂಥಗಳೂ, **ಮೇಯ್ಕಂಡದೇವ ಅರುಳ್ನಂದಿ ಮನವಾಚಕಂಕಡಂದಾಸರ** ಗ್ರಂಥಗಳೂ, **ಉಮಾಪತಿ ಶಿವಾಚಾರ್ಯನ** ಎಂಟು ಗ್ರಂಥಗಳೂ ಕೂಡಿ ೧೪ **ಶೈವಸಿದ್ಧಾಂತ ಶಾಸ್ತ್ರಗಳಾಗಿರುವವು.** ಈ ಶೈವಸಿದ್ಧಾಂತ ಶಾಸ್ತ್ರಕ್ಕೂ ಕಾಶ್ಮೀರಶೈವ ಸಿದ್ಧಾಂತ ಶಾಸ್ತ್ರಕ್ಕೂ ಬಹಳ ಹೋಲಿಕೆಯದೆ. ಆದರೂ ಈ ಮತದ ಅನುಯಾಯಿಗಳು ತಾವು ಕಾಶ್ಮೀರಶೈವ ಧರ್ಮಕ್ಕೆ ಋಣಿಯಾಗಿರುವರೆಂಬುದನ್ನು ಒಪ್ಪಿಕೊಳ್ಳುವದಿಲ್ಲ. **ಮೈಕಂಡದೇವನಿಗೆ** ಕೈಲಾಸದಿಂದ ಬಂದ ಶಿವಶರಣರಲ್ಲೋರ್ವನು ಉಪದೇಶಿಸಿರುವನೆಂದು ನಂಬುವರು.

---

# ಶ್ರೀಕರಭಾಷ್ಯ.

ಶ್ರೀಪತಿ ಪಂಡಿತಾಚಾರ್ಯರು ವಿರಚಿಸಿದ ಬಾದರಾಯಣ ಸೂತ್ರದ ಮೇಲಿನ ಭಾಷ್ಯವು ಅಸ್ತಿತ್ವದಲ್ಲಿದ್ದದ್ದು ಬಹುಜನರಿಗೆ ಈಗ ಗೊತ್ತಾಗಿರಬಹುದು. ಇದು ವೀರಶೈವ ಭಾಷ್ಯವು. ಇದಕ್ಕೆ " ಶ್ರೀಕರಭಾಷ್ಯ "ವೆಂದು ಸಾಮಾನ್ಯವಾಗಿ ಕರೆಯುವದುಂಟು. ಆದರೆ ಇದರ ಶುದ್ಧ ಪ್ರತಿಯು ಈವರೆಗೂ ಅಚ್ಚಾಗಿರಲಿಲ್ಲ. ಈ ಭಾಷ್ಯವು ೧೮೯೩ ಇಸ್ವಿಯಲ್ಲಿ ಸಿಕಂದರಾಬಾದಿನಲ್ಲಿಯ ಶ್ರೀ ಲಕ್ಷ್ಮೀವಿಲಾಸ ಪ್ರೆಸ್ಸಿನಲ್ಲಿ ಮಲ್ಲಿಕಾರ್ಜುನ ಶಾಸ್ತ್ರಿಗಳೆಂಬ

ವರಿಂದ ತೆಲಗು ಲಿಪಿಯಲ್ಲಿ ಮೊದಲು ಅಚ್ಚು ಹಾಕಲ್ಪಟ್ಟಿತು. ಆದರೆ ಅದು ಪೂರ್ಣವಾಗಿ ಅಚ್ಚು ಹಾಕಲ್ಪಡಲಿಲ್ಲ. ಆದರೆ ಈಗ ಈ ಭಾಷ್ಯವು ರಾಜ ಸಭಾಭೂಷಣ ದಿವಾನಬಹಾದ್ದೂರ ಸರ್. ಕೇ. ಪಿ. ಪುಟ್ಟಣ್ಣಶೆಟ್ಟಿ, ನಾಯಟ್. ಸಿ. ಆಯಿಸ್. ಈ ಇವರ ನಿದರ್ಶನೆಯಲ್ಲಿ ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡಿನ ಸಂಸ್ಥೆಯುವರಿಂದ ಸುಂದರವಾಗಿ ಅಚ್ಚು ಹಾಕಲ್ಪ ಡುತ್ತಲಿದೆ. ಈ ಮೇರೆಗೆ ಈ ಸಂಸ್ಥೆಯುವರು ಈ ಮಹತ್ತಾದ ಗ್ರಂಥವನ್ನು ಅಚ್ಚು ಹಾಕುತ್ತಿರುವದು ಎಲ್ಲ ವೀರಶೈವರೂ ಅತ್ಯಂತ ಆನಂದ ಪಡತಕ್ಕ ಸಂಗತಿಯಾಗಿದೆ. ಮತ್ತು ಈ ಕಾರ್ಯವನ್ನು ಕೈಕೊಂಡ ಸರ್ ದಿವಾನ ಬಹಾ ದ್ದೂರ ಪುಟ್ಟಣ್ಣ ಶೆಟ್ಟರನ್ನು ನಾವು ಬಹಳವಾಗಿ ಅಭಿನಂದಿಸುತ್ತೇವೆ.

ಇಂಡಿಯನ್ ಓರಿಯೆಂಟಲ್ ಕಾಂಗ್ರೆಸ್ಸಿನ ಅಧಿನಿವೇಶನವು ಅಲಹಾ ಬಾದಿನಲ್ಲಿ ೧೯೨೬ನೇ ಇಸ್ವಿ ನೊವೆಂಬರ ತಿಂಗಳಲ್ಲಿ ಜರಗಿತು. ಆ ಕಾಲಕ್ಕೆ ನಮ್ಮ ದೇಶದಲ್ಲಿಯ ಬೇರೆ ಬೇರೆ ಮತಗಳಲ್ಲಿಯ ವಿದ್ವಜ್ಜನರು ತಮ್ಮ ಧರ್ಮ ಸಂಬಂಧಿಯ ಲೇಖಗಳನ್ನು ಸಭೆಯಲ್ಲಿ ಓದಿದರು ಆಗ ಶ್ರೀಕರ ಭಾಷ್ಯದ ಮೇಲೆ ಒಂದು ಲೇಖವು ರಾ. ರಾ. ಸೀ. ಹಯವದನರಾವ ಬಿ. ಏ. ಬಿ. ಎಲ್. ಇವರಿಂದ ಸಭೆಗೆ ಸಮರ್ಪಿಸಲ್ಪಟ್ಟಿತು. ಈ ಲೇಖವು ಅತ್ಯಂತ ಮಹತ್ವದ್ದಾಗಿರುವದರಿಂದ, ಅದರ ಸಾರಾಂಶವನ್ನು ನಾವು ಇಲ್ಲಿ ಕೊಡುತ್ತೇವೆ.

## ಭಾಷ್ಯದ ಹೆಸರು.

ಭಾಷ್ಯಕಾರನು ಅಧ್ಯಾಯ ೧ ಪಾದ ೧ ಇದರಲ್ಲಿ ತನ್ನ ಭಾಷ್ಯವನ್ನು "ದ್ವೈತಾದ್ವೈತಾಭಿದಾನ ವಿಶೇಷಾದ್ವೈತ ಸಿದ್ಧಾಂತ ಸ್ಥಾಪಕ ಬ್ರಹ್ಮ ಮೀಮಾಂಸ ಸೂತ್ರಾರ್ಥ ವೀರಶೈವ ಸಿದ್ಧಾಂತ ಪ್ರಕಾಶಿಕಾ" ಎಂದು ಕರೆ ದುಕೊಂಡಿದ್ದಾನೆ.

ಅಧ್ಯಾಯ ೨ ಪಾದ ೧ ಇದರಲ್ಲಿ "ಭೇದಾಭೇದಾತ್ಮಕ ವಿಶೇಷಾ ದ್ವೈತ ವೀರಶೈವ ಸಿದ್ಧಾಂತ ವ್ಯವಸ್ಥಾಪಕ ಬ್ರಹ್ಮ ಮೀಮಾಂಸ ಸೂತ್ರಾರ್ಥ ಪ್ರಕಾಶಿಕಾ" ಎಂದು ಕರೆದಿದ್ದಾನೆ.

ಆದರೆ ಸಂಕ್ಷೇಪವಾಗಿ ಈ ಭಾಷ್ಯಕ್ಕೆ ಗ್ರಂಥಕಾರನು "ಶ್ರೀಕರಭಾಷ್ಯ" ಅಥವಾ "ಶಿವಂಕರಭಾಷ್ಯ" ಎಂದು ಮೇಲಿಂದ ಮೇಲೆ ಕರೆದಿದ್ದಾನೆ. ಆದರೆ ಆತನು ತನ್ನ ಹೆಸರಿನಿಂದ "ಶ್ರೀಪತಿ ಭಾಷ್ಯ" ಎಂದು ಈ ಭಾಷ್ಯ

ವನ್ನು ಕರೆದಿಲ್ಲ. ಇದರಲ್ಲಿ ತಾನು ಶಿವನಿಂದ ಪ್ರೇರಿತನಾಗಿ ಈ ಭಾಷ್ಯವನ್ನು ಬರೆದೆನೆಂಬ ತೋರಿಸುವ ಉದ್ದೇಶದಿಂದ ತನ್ನ ಭಾಷ್ಯಕ್ಕೆ ಈ ಪ್ರಕಾರ ಈಶ್ವರನ ಹೆಸರನ್ನು ಇಟ್ಟಿರಬಹುದೆಂದು ತೋರುತ್ತದೆ.

## ಭಾಷ್ಯಕಾರನು.

ಈ ಭಾಷ್ಯಕಾರನು ತನ್ನ ಹೆಸರು "ಶ್ರೀಪತಿಪಂಡಿತಾಚಾರ್ಯ" ಅಥವಾ "ಶ್ರೀಪತಿಪಂಡಿತ ಭಗವತ್ಪಾದಾಚಾರ್ಯ" ಎಂತಲೂ ತಾನು "ನಿರಾಭಾರ ವೀರಶೈವಯತಿ ವ್ರಜ ಪರಿವ್ರಢ' ನೆಂತಲೂ ಹೇಳಿಕೊಂಡಿದ್ದಾನೆ. ಅವನು ತನ್ನ ಗ್ರಂಥದಲ್ಲಿ ಷಟ್‌ಸ್ಥಲ ವಿಷಯಗಳನ್ನು ಮೇಲಿಂದ ಮೇಲೆ ವಿವರಿಸಿದ್ದಾನೆ. ಇದರ ಮೇಲಿಂದ ಶ್ರೀಪತಿಯು ವೀರಶೈವನಾಗಿದ್ದು ವೀರಶೈವ ಸಿದ್ಧಾಂತದ ಪ್ರಕಾರ ಬಾದರಾಯಣ ಸೂತ್ರದ ಮೇಲೆ ತನ್ನ ಭಾಷ್ಯವನ್ನು ಬರೆದಿರುವನೆಂಬದು ಸಿದ್ಧವಾಗುತ್ತದೆ. ಅವನು ತನ್ನ ಭಾಷ್ಯದ ಆರಂಭದಲ್ಲಿ "ರೇವಣಸಿದ್ಧಗುರು" ವನ್ನು ಉಲ್ಲೇಖಿಸಿ ಅವನನ್ನು "ರೇವಣ ಕಲ್ಪವೃಕ್ಷ" ಮತ್ತು "ರೇವಣದೇಶಿಕೇಂದ್ರ" ಎಂದು ಸಂಬೋಧಿಸಿದ್ದಾನೆ. ಅದೇ ಮೇರೆಗೆ ಅವನು "ಮರುಳಪ್ರಭು ಅಥವಾ ಮರುಳಸಿದ್ಧನನ್ನೂ ಏಕೋರಾಮಸಿದ್ಧನನ್ನೂ ಉಲ್ಲೇಖಿಸಿದ್ದಾನೆ. ಏಕೋರಾಮನು ತರ್ಕವ್ಯಾಕರಣ ಉಭಯ ಮೀಮಾಂಸಗಳಲ್ಲಿ ಬಲ್ಲಿದನೆಂತಲೂ ಯತಿಯ ವೇಷದಿಂದ ಹೊಳೆಯುತ್ತಿರುವನೆಂತಲೂ ಅವನನ್ನು ಹೊಗಳಿ ತನ್ನ ಕೃತಿಯಲ್ಲಿ ಶ್ರೇಯಸ್ಸನ್ನು ಆತನು ಕೊಡಲೆಂದು ಅವನನ್ನು ಬೇಡಿಕೊಂಡಿದ್ದಾನೆ. ಅವನು ಏಕೋರಾಮನನ್ನು ಇಷ್ಟು ಹೊಗಳಿರುವದರ ಮೇಲಿಂದ ಏಕೋರಾಮಾರಾಧ್ಯರ ಪೀಠಕ್ಕೆ ಅವನು ಸೇರಿದವನಿರಬಹುದೆಂದು ತೋರುತ್ತದೆ. ಮತ್ತು ತಾನು ನಿರಾಭಾರಿ ವೀರಶೈವನೆಂದು ಹೇಳಿಕೊಂಡಿರುವದರಿಂದ ಅವನು ಸನ್ಯಾಸಾಶ್ರಮವನ್ನು ಸ್ವೀಕರಿಸಿರಲಿಕ್ಕೆ ಬೇಕು. ಶ್ರೀಪತಿಯು ದಶೋಪನಿಷತ್ತು ಭಗವದ್ಗೀತೆ ಮತ್ತು ಇನ್ನೂ ಅನೇಕ ಗ್ರಂಥಗಳ ಮೇಲೆ ಭಾಷ್ಯಗಳನ್ನು ಬರೆದಿರುವನೆಂದು ಐತಿಹ್ಯವದೆ. ಆದರೆ ಅವಾವೂ ಇನ್ನೂವರೆಗೆ ನಮಗೆ ಉಪಲಬ್ಧವಾಗಿಲ್ಲ. ಆದರೆ ಅವನು ತನ್ನನ್ನು "ಸಿದ್ಧಾಂತಸ್ಥಾಪನಾಚಾರ್ಯ" ಮತ್ತು "ಭಗವತ್ಪಾದಾಚಾರ್ಯ" ಎಂದು ಕರೆದುಕೊಂಡಿರುವದರಿಂದ ಅವನು ಮೇಲ್ಕಂಡ ಭಾಷ್ಯಗಳನ್ನು ಬರೆದಿರುವದು ನಿಜವೆಂದು ತೋರುತ್ತದೆ.

ವದ್ಗೀತೆ, ಬೋಧಾಯನ ಸ್ಮೃತಿ, ಶಿವಗೀತೆ, ಶಿವಜ್ಞಾನ ಚಂದ್ರೋದಯ, ಶಿವಾದ್ವೈತ ಪ್ರಕಾಶಿಕಾ, ಶಿವರಹಸ್ಯ ಖಂಡ, ಶಿವಧರ್ಮ ಶಾಸ್ತ್ರ, ಶಿವಪುರಾಣ, ಇವೇ ಮೊದಲಾದ ಅಸಂಖ್ಯ ಗ್ರಂಥಗಳನ್ನು ಉಲ್ಲೇಖಿಸಿದ್ದಾನೆ.

ಶ್ರೀಕರ ಭಾಷ್ಯದ ಸ್ವರೂಪವನ್ನು ನಾವು ವಿಹಂಗಮದೃಷ್ಟಿಯಿಂದ ಅತ್ಯಂತ ಸಂಕ್ಷೇಪವಾಗಿ ತಮ್ಮ ಮುಂದೆ ಇಟ್ಟಿದ್ದೇವೆ. ಈ ಗ್ರಂಥವೆಲ್ಲವೂ ಅಚ್ಚಾದಬಳಿಕ ಅದರೊಳಗಿನ ಮಹತ್ವದ ವಿಷಯಗಳು ಎಲ್ಲರ ದೃಷ್ಟಿಗೆ ಬೀಳಲು ಶಕ್ಯವಾಗುವವು. ಈ ಕಾರ್ಯವನ್ನು ಕೈಕೊಂಡ ವೈಸೂರು ವಿದ್ಯಾಭಿವೃದ್ಧಿಸಂಘವನ್ನೂ. ಸರ್‌ದಿವಾನ ಬಹಾದ್ದೂರ ಕೆ. ಪಿ. ಪುಟ್ಟಣ್ಣ ಶೆಟ್ಟರನ್ನೂ ನಾವು ಬಹಳವಾಗಿ ಶ್ಲಾಘಿಸುತ್ತೇವೆ. ಅವರ ಅನುಕರಣವನ್ನು ಬೇರೆ ಸಂಘದವರೂ ಶ್ರೀಮಂತರೂ ತೆಗೆದುಕೊಳ್ಳುವರೆಂದು ಹಾರೈಸುತ್ತೇವೆ

---

## ಆತ್ಮಲಿಂಗಪೂಜೆ.

( ಲೇಖಕ–ರಾ. ರಾ. ಗಂಗಾಧರಪ್ಪ ಸಾಬೋಜಿ ಸಾ. ಬೆಳಗಾವ. )

---

ದೇಹವೆಂಬ ತಾಳದ ಮೇಲೆ, ಮೂರು ರತ್ನಗಳಿರುತ್ತವೆ. ಅವಾವೆಂದರೆ, ಸ್ಥೂಲತನುವಿನಲ್ಲಿ ಜೀವಾತ್ಮನಿದ್ದು ಆತನಿಗೆ ಇಷ್ಟಲಿಂಗ ಸಂಬಂಧವು. ಸೂಕ್ಷ್ಮತನುವಿನಲ್ಲಿ ಅಂತರಾತ್ಮನಿದ್ದು ಆತನಿಗೆ ಪ್ರಾಣಲಿಂಗ ಸಂಬಂಧವು. ಕಾರಣತನುವಿನಲ್ಲಿ ಪರಮಾತ್ಮನಿದ್ದು ಆತನಿಗೆ ಭಾವಲಿಂಗ ಸಂಬಂಧವು. ಮನುಷ್ಯನು ಲಿಂಗದೇಹಿಯಾದ ಕೂಡಲೆ ಆತನಲ್ಲಿ ಈ ರತ್ನಗಳು ಹೊಳೆಯ ಹತ್ತುತ್ತವೆ. ಸ್ಥೂಲ ತನುವಿಗೆ ಜಾಗ್ರಾವಸ್ಥೆಯು, ಸೂಕ್ಷ್ಮತನುವಿಗೆ ಸ್ವಪ್ನಾವಸ್ಥೆಯು, ಕಾರಣ ತನುವಿಗೆ ಸುಷುಪ್ತಾವಸ್ಥೆಯು ಇದ್ದು ಇವುಗಳನ್ನು ಪ್ರತಿಯೊಬ್ಬ ದೇಹಧಾರಿಯು ಅರಿತು ಪೂಜೆ ಮಾಡತಕ್ಕದ್ದಾಗಿದೆ. ಈ ಬಗೆಯಾಗಿ ಪೂಜೆ ಮಾಡುವವನೇ ಪರವಸ್ತು ಸ್ವರೂಪನಾಗುವನೆಂದು ವೀರಶೈವ ಮತಗ್ರಂಥಗಳಲ್ಲಿ ಆಗಿಂದಾಗ್ಗೆ ಹೇಳಲ್ಪಟ್ಟಿರುತ್ತದೆ.

ಸರ್ವಜ್ಞನು ಅನ್ನುವದೇನಂದರೆ, " ಕಾಯವೇ ಸೆಜ್ಜೆ, ಜೀವರತ್ನವೇ ಲಿಂಗ, ಭಾವಪುಷ್ಪದಲ್ಲಿ ಪೂಜೆ ಮಾಡುವವರಿಗೆ ದೇವರೆಂದೆಂಬೆ ಸರ್ವಜ್ಞ

ಬ್ರಹ್ಮೋಪಾಸನೆಯಿಂದ ಪರಶಿವಬ್ರಹ್ಮತ್ವವು ಲಭಿಸುವದೆಂದು ಹೇಳಿದ್ದಾನೆ ಅವನು ಷಟ್‌ಸ್ಥಲವನ್ನು ಪರಮಶಿವ ಸಾಕ್ಷಾತ್ಕಾರಕ್ಕೆ ಪರಮ ಕಾರಣ ವೆಂದು ಇಲ್ಲಿ ವರ್ಣಿಸಿದ್ದಾನೆ. ಅಧ್ಯಾಯ ೧ ಪಾದ ೧ ಅಧಿಕರಣ ೩ ಸೂತ್ರ ೪ 'ತತ್ತು ಸಮನ್ವಯಾತ್' ಇದರಲ್ಲಿ ಷಟ್‌ಸ್ಥಲವು ಕಾಮ್ಯಕರ್ಮ ನಿಷೇ ಧವಾಗಿರುವದೆಂತಲೂ ನಿಗಮಾಗಮೋಭಯವೇದಾಂತೋಚಿತವೆಂತಲೂ ವರ್ಣಾಶ್ರಮೋಚಿತವೆಂತಲೂ ಚಿತ್ತಶುದ್ಧಿ ಕಾರಣವೆಂತಲೂ ಇದನ್ನು ಹೇಳಿ ದ್ದಾನೆ. ಷಟ್‌ಸ್ಥಲವು ಆತ್ಮ ಮತ್ತು ಬ್ರಹ್ಮ ಇವರನ್ನು ಕೂಡಿಸತಕ್ಕ ಒಂದು ಸರಪಳಿ ಎಂದು ಶ್ರೀ ಪತಿಯು ಅನ್ನುತ್ತಾನೆ. ಜ್ಞಾನವನ್ನು ದ್ರಷ್ಟವ್ಯ ಎಂದರೆ ಸತ್ಯವನ್ನು ಪರೀಕ್ಷಿಸುವದರಿಂದಲೂ ಶ್ರೋತವ್ಯ ಎಂದರೆ ಗುರೂಪದೇಶವನ್ನು ಕೇಳುವದರಿಂದಲೂ ಮಂತವ್ಯ ಎಂದರೆ ಧ್ಯಾನದಿಂದಲೂ, ನಿಧಿಧ್ಯಾಸಿತವ್ಯ ಎಂದರೆ ಏಕಾಗ್ರತೆಯಿಂದಲೂ ದೊರಕುವದೆಂದು ಹೇಳಿದ್ದಾನೆ. ಈ ಸಾಧ ನೆಯಿಂದ ಜೀವನು ಶಂಭುವು ಆಗುವನು. ಭ್ರಮರಕೀಟ ನ್ಯಾಯದಂತೆ ಜೀವನು ಜ್ಞಾನದಿಂದ ಶಿವತತ್ವವನ್ನು ಹೊಂದುತ್ತಾನೆ. ಈ ಶಿವತತ್ವವನ್ನು ಹೊಂದಬೇಕಾದರೆ ಶ್ರವಣ, ಮನನ, ಜ್ಞಾನ, ನಿಧಿ, ಧ್ಯಾಸ ಮತ್ತು ಆಸನ ಇವುಗಳು ಅವಶ್ಯವು. ಇವುಗಳಿಗೆ ಅನುಕ್ರಮವಾಗಿ ಆತ್ಮಲಿಂಗ, ಆಕಾಶ ಲಿಂಗ, ಜ್ಯೋತಿರ್ಲಿಂಗ, ಪ್ರಾಣಲಿಂಗ, ಉಪಾಸನಾಲಿಂಗ ಮತ್ತು ಧ್ಯಾನ ಲಿಂಗ ಎಂಬ ಹೆಸರುಗಳು ಇವೆ.

ಷಟ್‌ಸ್ಥಲದ ಮೇಲೆ ಅಸಂಖ್ಯ ವೀರಶೈವ ಗ್ರಂಥಗಳು ಇವೆ. ಇವು ಸಂಸ್ಕೃತ ಮತ್ತು ಕನ್ನಡದಲ್ಲಿ ಉಪಲಬ್ಧವಿವೆ. ಇದರ ತತ್ವಗಳನ್ನೇ ಶ್ರೀಪ ತಿಯು ತನ್ನ ಭಾಷ್ಯದಲ್ಲಿ ವಿವರಿಸಿದ್ದಾನೆ.

ಶ್ರೀಕರ ಭಾಷ್ಯದಲ್ಲಿ ನಾಲ್ಕು ಅಧ್ಯಾಯಗಳು ಇವೆ. ಪ್ರತಿಯೊಂದು ಅಧ್ಯಾಯದಲ್ಲಿ ನಾಲ್ಕು ಪಾದಗಳು ಮತ್ತು ಪ್ರತಿಯೊಂದು ಪಾದದಲ್ಲಿ ಅನೇಕ ಅಧಿಕರಣಗಳು ಇರುತ್ತವೆ.

ಈ ವರೆಗೆ ಶ್ರೀಕರ ಭಾಷ್ಯದ ಸಂಕ್ಷಿಪ್ತ ವೃತ್ತಾಂತವಿದೆ. ಅವನು ತನ್ನ ಸಿದ್ಧಾಂತದ ಪ್ರಸ್ಥಾಪನೆಗೋಸ್ಕರ ಅನೇಕ ಗ್ರಂಥಗಳನ್ನು ತನ್ನ ಆಧಾ ರವಾಗಿ ತೆಗೆದುಕೊಂಡಿದ್ದಾನೆ. ಅವುಗಳಲ್ಲಿ ವೇದಗಳು, ಉಪನಿಷತ್ತು ಗಳು, ಭಾರತ ರಾಮಾಯಣಗಳು, ಮನುಸ್ಮೃತಿ, ಲಿಂಗ ಮತ್ತು ವಿಷ್ಣು ಇವರಿಗೆ ಸಂಬಂಧಪಟ್ಟ ೧೮ ಪುರಾಣಗಳು, ಸೂತಸಂಹಿತೆ. ಹರಿವಂಶ ಇವುಗಳೇ ಮುಖ್ಯವಾಗಿವೆ. ಅವುಗಳಲ್ಲದೆ ಆತನು ತನ್ನ ಗ್ರಂಥದಲ್ಲಿ ಭಗ

ವನ್ನು ಹಿಡಿದ ಮನುಷ್ಯನಿಗೆ ನಾವು ದಂಡೀ ಎಂದು ಅನ್ನುತ್ತೇವೆ. ಹೀಗೆ ಒಂದೇ ಹೆಸರಿನಿಂದ ದಂಡಧಾರಿಯನ್ನು ಕರೆದರೂ ಅವನು ಮತ್ತು ಅವನು ಹಿಡಿದ ದಂಡ ಇವೆರಡೂ ಪದಾರ್ಥಗಳು ಭಿನ್ನವಾಗಿರುತ್ತವೆ. ಈ ಎರಡೂ ಪದಾರ್ಥಗಳಲ್ಲಿ ಪರಸ್ಪರ ಸಂಬಂಧವು ಇದ್ದರೂ ಅವು ನಿಜವಾಗಿ ಭಿನ್ನ ವಾಗಿವೆ. ದಂಡವನ್ನು ಹಿಡಿಯದೆ ಇದ್ದ ಮನುಷ್ಯನು ದಂಡವನ್ನು ಹಿಡಿದವನಿಗೆ ದಂಡೀ ಎಂದು ಕರೆಯುತ್ತಾನೆ. ಆದರೆ ಇವರಿಬ್ಬರು ಭಿನ್ನವಾಗಿರುತ್ತಾರೆ. ಆದ್ದರಿಂದ ಅದ್ವೈತವು ಸಿದ್ಧಿಸುವದಿಲ್ಲ. ದಂಡವನ್ನು ಹಿಡಿಯದ ಮನುಷ್ಯ ಅದನ್ನು ಹಿಡಿದ ಮನುಷ್ಯ ಮತ್ತು ದಂಡ ಇವರೆಲ್ಲ ಭಿನ್ನರಾಗಿರುತ್ತಾರೆ. ದಂಡ ಹಿಡಿದವ ಮತ್ತು ದಂಡ ಇವರಲ್ಲಿ ಭಿನ್ನತೆ ಇರುವದರಿಂದ ಅವರಲ್ಲಿ ಅದ್ವೈತವಿಲ್ಲ. ವಿಶಿಷ್ಟಾದ್ವೈತದಲ್ಲಿ ವಿಶೇಷಣ ಮತ್ತು ವಿಶೇಷ್ಯ ಇವುಗಳ ನಿಜವಾದ ಸಂಬಂಧವನ್ನು ಸಿದ್ಧಪಡಿಸಲಾಗುವದಿಲ್ಲ. ಆದ್ದರಿಂದ ಅದರ ಸಿದ್ಧಾಂತದಲ್ಲಿ ಅದ್ವೈತವು ಇರಲಾರದು. ಆದರೆ ವಿಶೇಷಾದ್ವೈತವೇ ನಿಜವಾದ ಸಿದ್ಧಾಂತವು, ಇದರಿಂದಲೇ ಮುಕ್ತಿಯು ಎಂದು ಶ್ರೀ ಪತಿಯು ಪ್ರತಿಪಾದಿಸುತ್ತಾನೆ.

## ವಿಶೇಷಾದ್ವೈತ ಮತದ ಪ್ರಸ್ಥಾಪನೆ.

ಈ ವಿಷಯವು ಈ ಗ್ರಂಥದ ಬೇರೆ ಬೇರೆ ಭಾಗಗಳಲ್ಲಿ ಬಂದಿರುತ್ತದೆ. ಅಧ್ಯಾಯ ೧ ಪಾದ ೧ ಸೂತ್ರ ೪ ಇದರಲ್ಲಿ ಈ ವಿಷಯವು ವಿಶೇಷವಾಗಿ ಬಂದಿರುತ್ತದೆ. ಇದರಲ್ಲಿ ಶ್ರೀ ಪತಿಯು ಶಂಕರನ ನಿರ್ವಿಶೇಷಾದ್ವೈತ ತತ್ವದ ಮೇಲೆ ಟೀಕೆಗಳನ್ನು ಬಹಳ ಮಾಡಿರುತ್ತಾನೆ. ಇಲ್ಲಿ ಮಿಥ್ಯಾತ್ವವು ಶೃತಿಗಳಿಗೆ ವಿರೋಧವಾದದ್ದೆಂದು ಅವನು ಪ್ರಸ್ಥಾಪಿಸಿದ್ದಾನೆ. ಈ ತತ್ವದಿಂದ ಜ್ಞಾನ ವಿಷಯವಾದ ಬ್ರಹ್ಮ ಮತ್ತು ಜ್ಞಾನ ಇವುಗಳನ್ನೆಲ್ಲ ಅಲ್ಲಗಳೆಯಬೇಕಾಗುತ್ತದೆ. ಆದ್ದರಿಂದ ಈ ಮತವು ಸಯುಕ್ತಿಕವಲ್ಲವೆಂದು ಅವನ ಅಭಿಪ್ರಾಯವು. ಆದರೆ ವಿಶೇಷಾದ್ವೈತವೇ ಸಯುಕ್ತಿಕವು. ನಾಲ್ಕು ವೇದಗಳೂ ಉಪನಿಷತ್ತು ಪುರಾಣಗಳೂ ಈ ಮತವನ್ನೇ ಸಮರ್ಥಿಸುತ್ತವೆ. ಇದರಿಂದಲೇ ಶಿವತತ್ವ ಸಾಧನೆಯು, ಅಂದರೆ ಮೋಕ್ಷವುಲಭಿಸುತ್ತದೆ.

ಶ್ರೀ ಪತಿಯು ತನ್ನ ಗ್ರಂಥದಲ್ಲಿ ಷಟ್‌ಸ್ಥಲದ ವಿಷಯವಾಗಿಯೂ ಆಗಿಂದಾಗ್ಗೆ ಉಲ್ಲೇಖಿಸುತ್ತಾನೆ. ಅಧ್ಯಾಯ ೧ ಪಾದ ೧ ಅಧಿಕರಣ ೨ ಸೂತ್ರ ೩ 'ಶಾಸ್ತ್ರಯೋನಿತ್ವಾತ್' ಇದರಲ್ಲಿ ಷಟ್‌ಸ್ಥಲಾತ್ಮಕನಾದ ಪರಶಿವ

ಪಾಂಚರಾತ್ರ ಆಗಮಗಳಲ್ಲಿ ಶಿವನನ್ನು ಭಜಿಸುವದೂ ಶಿವಪುರಾಣಗಳನ್ನು ಅಭ್ಯಾಸಿಸುವದೂ ಪಾಪವೆಂದು ಹೇಳಿದೆ. ಶ್ರೀಪತಿಯು ಇದನ್ನು ಖಂಡಿಸಿದ್ದಾನೆ. ಅವನು ಅನ್ನುವದೇನಂದರೆ ಶೃತಿಗಳಲ್ಲಿ ಇದಕ್ಕೆ ಆಧಾರವಿಲ್ಲ. ಇದು ಪ್ರಚ್ಛನ್ನ ಬೌದ್ಧರು ಅಂದರೆ ನಿರ್ವಿಶೇಷ ಅದ್ವೈತಿಗಳು ಕಲ್ಪಿಸಿದ ಅಭಿಪ್ರಾಯವು. ಶಿವಮತ್ತು ವಿಷ್ಣು ಪುರಾಣಗಳನ್ನು ವ್ಯಾಸನು ರಚಿಸಿದ್ದಾನೆ. ಅಂದಬಳಿಕ ಒಬ್ಬನೇ ಸಾತ್ವಿಕ ಪುರಾಣಗಳನ್ನೂ ತಾಮಸ ಪುರಾಣಗಳನ್ನೂ ರಚಿಸುವದು ಶಕ್ಯವಲ್ಲ. ವೇದಗಳಲ್ಲಿ ರುದ್ರನ ಸ್ತುತಿಯು ಇದೆ. ಅಂದಬಳಿಕ ವೇದಗಳೂ ತಾಮಸವೆಂದು ಹೇಳಬೇಕಾದೀತು. ಅದ್ದರಿಂದ ಶಿವಪುರಾಣಗಳು ತಾಮಸವಾದವುಗಳೆಂದು ತಿಳಿಯಲಿಕ್ಕೆ ಬಾರಲಾರದು. ಶ್ರೀಪತಿಯ ಕಾಲಕ್ಕೆ ಶಿವಮತ್ತು ವಿಷ್ಣು ಇವರಲ್ಲಿ ಯಾರು ಶ್ರೇಷ್ಠರೆಂಬ ವಾದವು ಬಹಳ ಇದ್ದಹಾಗೆ ತೋರುತ್ತದೆ. ಆದ್ದರಿಂದ ಶ್ರೀಪತಿಯು ಶಿವನೇ ಸರ್ವೋತ್ತಮನೆಂದು ಪ್ರತಿಪಾದಿಸಿದ್ದಾನೆ. ಶಿವಮತ್ತು ವಿಷ್ಣು ಇವರಿಬ್ಬರನ್ನು ಹರಿಹರ ಮೂರ್ತಿಯಾಗಿ ಭಾವಿಸಿ ಏಕಕಾಲಕ್ಕೆ ಪೂಜಿಸುವ ವಿಚಾರಗಳು ಅವನ ಕಾಲಕ್ಕೆ ಪ್ರಬಲವಾಗಿರಲಿಲ್ಲವೆಂದು ತೋರುತ್ತದೆ. ಈತರದ ಸಂಯುಕ್ತ ಪೂಜೆಯು ಕೆಲವು ಸ್ಥಳಗಳಲ್ಲಿ ಇದ್ದಿತೆಂಬುದು ೧೨೨೪ನೇ ಇಸ್ವಿಯ ಡಾವಣಗೇರಿಯ ಶಿಲಾಲೇಖದಿಂದ ತಿಳಿಯುತ್ತದೆ.

ಶಂಕರಾಚಾರ್ಯನಿಗೆ ಶ್ರೀಪತಿಯು ಪ್ರಚ್ಛನ್ನ ಬೌದ್ಧನೆಂದು ತನ್ನ ಗ್ರಂಥವಲ್ಲಿ ಕರೆದಿದ್ದಾನೆ. ಇದೇ ಶಬ್ದದಿಂದ ೧೪ ನೇ ಶತಮಾನದಲ್ಲಿ ಇದ್ದ ನಾರಾಯಣ ಪಂಡಿತಾಚಾರ್ಯನು ತನ್ನ ಮಧ್ವ ವಿಜಯಗ್ರಂಥದಲ್ಲಿ ಶಂಕರಾಚಾರ್ಯನನ್ನು ಸಂಬೋಧಿಸಿದ್ದಾನೆ ಅಂದಮೇಲೆ ನಾರಾಯಣ ಪಂಡಿತಾಚಾರ್ಯನು ಈ ಶಬ್ದವನ್ನು ಶ್ರೀಕರನಿಂದ ತೆಗೆದುಕೊಂಡನೋ ಹ್ಯಾಗೆ ಎಂಬದು ವಿಚಾರಾರ್ಹ ಸಂಗತಿಯಾಗಿದೆ.

## ವಿಶಿಷ್ಟಾದ್ವೈತಮತದ ಖಂಡನೆ.

ಆತ್ಮನು ಆನಂದಯುಕ್ತನಾದ ಬ್ರಹ್ಮನನ್ನು ಕೂಡಲಿಕ್ಕೆ ಆತುರಪಡುತ್ತಾನೆಂದು ವಿಶಿಷ್ಟಾದ್ವೈತ ಮತದ ತತ್ವವಿದೆ. ಈ ಸಿದ್ಧಾಂತವು ವೇದಗಳಿಗೆ ಅನುಸರಿಸಿ ಇರುವದಿಲ್ಲೆಂದು ಶ್ರೀಪತಿಯು ಅನ್ನುತ್ತಾನೆ. ಯಾಕೆಂದರೆ ಹೀಗೆ ಅನ್ನುವದು ಭಿನ್ನತ್ವವು ಇರುತ್ತದೆ. ಶ್ರೀಪತಿಯು ಈ ಮತವನ್ನು ಖಂಡಿಸಲು ದಂಡಪುರುಷ ಸಂಬಂಧ ನ್ಯಾಯವನ್ನು ಉಪಯೋಗಿಸಿದ್ದಾನೆ. ದಂಡ

ವಾಗಲಾರದು. ಶಂಕರಾಚಾರ್ಯನ ಸಿದ್ಧಾಂತದಲ್ಲಿ ಕಾರ್ಯಕಾರಣ ಸಂಬಂಧವೇ ಉಳಿಯುವದಿಲ್ಲ. ಅವನ ತತ್ವವು ಸತ್ಯದ ಭಾಸ ಮಾತ್ರ ವಿರುತ್ತದೆ. ಯಾವ ಪದಾರ್ಥಕ್ಕೆ ಕಾರಣವಿಲ್ಲವೋ ಆ ಪದಾರ್ಥವು ಅಸ್ತಿತ್ವದಲ್ಲಿ ಇರುವದು ಹ್ಯಾಗೆ? ಆದ್ದರಿಂದ ಜಗತ್ತು ಮಾಯಾಮಯವೆಂದು ನಂಬುವದು ಶಕ್ಯವಲ್ಲ. ಶ್ರೀ ಪತಿಯು ಅನ್ನುವದೇನಂದರೆ ಬ್ರಹ್ಮವು ವ್ಯವಹಾರಕ್ಕೆ ಸಂಬಂಧ ಪಡದಂಥದಿದ್ದರೆ ಬ್ರಹ್ಮನು ಶೂನ್ಯನಾಗಿರಬೇಕು. ಆದ್ದರಿಂದ ಅವನ ಅವಶ್ಯಕತೆಯೇ ಉಳಿಯಲಾರದು. ಇಂಥವನು ಅಸ್ತಿತ್ವದಲ್ಲಿ ಇದ್ದಾದರೆ, ಅವನು ಅನವಶ್ಯಕನಾಗುತ್ತಾನೆ. ಇದು ನಿಜವೆಂದು ತಿಳಿದರೆ ಜಗತ್ತಿನಲ್ಲಿ ಕಾರ್ಯಗಳೇ ಉಂಟಾಗಲಾರವು. ಗುರು ಶಿಷ್ಯರಲ್ಲಿ ಪರಸ್ಪರ ಪೂಜ್ಯಪೂಜಕ ಭಾವವೇ ಉಳಿಯಲಾರದು. ಆದ್ದರಿಂದ ಗುರುವು ಶಿಷ್ಯನಿಗೆ ಉಪದೇಶ ಮಾಡಲಾರನು. ಶಿಷ್ಯನು ಗುರುವಿನಿಂದ ಉಪದೇಶ ಹೊಂದಲಾರನು ಈ ಎಲ್ಲ ಸಂಗತಿಗಳು ಅಸಂಬದ್ಧವಾಗಿವೆ. ಆದ್ದರಿಂದ ಮಾಯಾವಾದವು ನಿಜವಲ್ಲವೆಂದು ಶ್ರೀ ಪತಿಯು ಹೇಳುತ್ತಾನೆ.

## ರಾಮಾನುಜನ ಮತ್ತು ಪಾಂಚರಾತ್ರ ಆಗಮಗಳ ಖಂಡನೆ.

ರಾಮಾನುಜನ ಮತಕ್ಕೆ ವಿಶಿಷ್ಟಾದ್ವೈತವೆಂಬ ಹೆಸರು ಇದೆ. ಇದರ ಖಂಡನೆಯನ್ನು ಶ್ರೀ ಪತಿಯು ಅಧ್ಯಾಯ ೧ ಪಾದ ೧ ಸೂತ್ರ ೨೦ "ಅಸ್ಮಿನ್ನಸ್ಯಚ ತದ್ಯೋಗಂಶಾಸ್ತಿ" ಇದರಲ್ಲಿ ಮಾಡಿದ್ದಾನೆ. ರಾಮಾನುಜನ ವಿಚಾರಗಳು ಪಾಂಚರಾತ್ರರ ವಿಚಾರಗಳಿಗೆ ಹೋಲುತ್ತವೆ. ಈ ಪಾಂಚರಾತ್ರರಿಗೆ ಭಾಗವತರೆಂದು ಹೆಸರು ಇದೆ. ಇವರು ವಿಷ್ಣುವಿನ ಉಪಾಸಕರಿದ್ದು ಇವರ ಮತಗಳು ಭಗವದ್ಗೀತೆ ಮತ್ತು ಭಾಗವತ ಪುರಾಣ ಇವುಗಳಲ್ಲಿ ಹೇಳಿದೆ. ಪಾಂಚರಾತ್ರರ ಮತಗಳನ್ನು ರಾಮಾನುಜನು ವಿಸ್ತರಿಸಿದ್ದು, ಅವುಗಳಿಗೂ ಬ್ರಹ್ಮಸೂತ್ರಗಳಿಗೂ ಬಹಳ ವ್ಯತ್ಯಾಸಗಳಿವೆ, ಎಂದು ಶ್ರೀ ಪತಿಯು ಪ್ರತಿಪಾದಿಸುತ್ತಾನೆ. ಜೀವನು ಪರಮಾತ್ಮನ ಸ್ವರೂಪನಲ್ಲೆಂದು ರಾಮಾನುಜನಮತವು. ಜೀವಾತ್ಮನಿಗೆ ನಿಜವಾದ ಭಕ್ತಿಯು ಇಲ್ಲದಿದ್ದರೆ ಅವನಿಗೆ ಮೋಕ್ಷವಾಗಲಾರದೆಂದು ಅವನು ಪ್ರತಿಪಾದಿಸುತ್ತಾನೆ. ಅವನ ಜ್ಞಾನಮಾರ್ಗಕ್ಕೆ ಅಷ್ಟು ಮಹತ್ವ ಕೊಡುವದಿಲ್ಲ. ಈ ಎಲ್ಲ ವಿಷಯಗಳನ್ನು ಶ್ರೀ ಪತಿಯು ತನ್ನ ಭಾಷ್ಯದಲ್ಲಿ ಖಂಡಿಸಿದ್ದಾನೆ.

ಶದಲ್ಲಿ ಈಗ್ಗೆಯೂ ವಿಶೇಷವಾಗಿ ವಾಸವಾಗಿರುವ ತೆಲುಗು ಭಾಷ್ಯವನ್ನಾಡುವ ಆರಾಧ್ಯ ಬ್ರಾಹ್ಮಣರ ವಂಶಕ್ಕೆ ಸೇರಿದವನಾಗಿರಬೇಕು.

## ಶ್ರೀಪತಿಯ ಸಿದ್ಧಾಂತ ವಿಷಯ.

ಶ್ರೀಪತಿಯು ತಾನಿದ್ದ ಕಾಲದಲ್ಲಿ ವೀರಶೈವ ಮತಸ್ಥರಲ್ಲಿ "ತತ್ವಮಸಿ" ಎಂಬ ವಾಕ್ಯದ ಬಗ್ಗೆ ಯಾವ ವಿಚಾರಗಳು ಪ್ರಚಲಿತವಿದ್ದವೋ ಅವುಗಳನ್ನು ಅತ್ಯುತ್ತಮವಾಗಿ ತನ್ನ ಭಾಷ್ಯದಲ್ಲಿ ಸಿದ್ಧಪಡಿಸಿದ್ದಾನೆ. ಅವನ ಗ್ರಂಥದಲ್ಲಿ ಈ ವಿಷಯದ ಸಂಬಂಧದ ಭಾಗವೇ ಉತ್ಕೃಷ್ಟತರವಾದದ್ದು. ವೀರಶೈವ ಸಿದ್ಧಾಂತಕ್ಕೆ ಅವನು ಕೆಳಗೆ ಕಾಣಿಸಿದಂತೆ ಹೆಸರುಗಳನ್ನಿಟ್ಟಿದ್ದಾನೆ. ಇವುಗಳ ಮೇಲಿಂದ ಈ ಸಿದ್ಧಾಂತದ ವಿಷಯವಾಗಿ ಅವನಲ್ಲಿರುವ ವಿಚಾರಗಳನ್ನು ನಾವು ಕಂಡು ಹಿಡಿಯಬಹುದು. ಆ ಹೆಸರುಗಳು ಯಾವವೆಂದರೆ:- ವಿಶೇಷಾದ್ವೈತ, ದ್ವೈತಾದ್ವೈತಾಭಿಧಾನ, ಭೇದಾಭೇದಾತ್ಮಕ, ವಿಶೇಷಾದ್ವೈತ ಸಿದ್ಧಾಂತ ಸ್ಥಾಪಕ.

## ಶಂಕರಾಚಾರ್ಯನ ಮತದ ಖಂಡನೆ.

ಶ್ರೀ ಪತಿಯು ತನ್ನ ಭಾಷ್ಯದಲ್ಲಿ ಶಂಕರಾಚಾರ್ಯನ ಮಾಯಾವಾದವನ್ನು ಬಹಳ ವಿಸ್ತಾರ ಪೂರ್ವಕವಾಗಿ ಖಂಡಿಸಿದ್ದಾನೆ. ಈ ಖಂಡನೆಯು ಅಧ್ಯಾಯ ೧, ಪಾದ ೧ ಸೂತ್ರ ೪ "ತತ್ತು ಸಮನ್ವಯಾತ್" ಎಂಬ ಸೂತ್ರದಲ್ಲಿ ಬಂದಿರುತ್ತದೆ. ಶಂಕರಾಚಾರ್ಯನು ಈ ಜಗತ್ತೆಲ್ಲ ಮಿಥ್ಯೆಯು ಅಂದರೆ ಸುಳ್ಳು ಎಂದು ಪ್ರತಿಪಾದಿಸುತ್ತಿದ್ದ ಈ ಅಭಿಪ್ರಾಯವನ್ನು ಶ್ರೀ ಪತಿಯು ಇಲ್ಲಿ ಬಹಳವಾಗಿ ವಿರೋಧಿಸಿದ್ದಾನೆ. ಅವನು ಅನ್ನುವದೇನೆಂದರೆ:- ಶಂಕರಾಚಾರ್ಯನು ಜಗತ್ತು ವ್ಯವಹಾರದಲ್ಲಿ ನಿಜವು ಆದರೆ ಪಾರಮಾರ್ಥದಲ್ಲಿ ಮಾಯೆಯು ಅಂದರೆ ಸುಳ್ಳು ಎಂದು ಹೇಳುತ್ತಾನೆ. ಹೀಗೆ ಯಾವ ತತ್ವವು ಏಕಕಾಲಕ್ಕೆ ನಿಜವು, ಮತ್ತು ಸುಳ್ಳು ಎಂದು ಹೇಳುತ್ತದೋ ಅದರಲ್ಲಿ ಸತ್ಯಾಂಶವು ಇರಲಾರದು. ವ್ಯವಹಾರದಲ್ಲಿ ಮಾತ್ರ ಸಂಬಂಧ ಪಟ್ಟಂಥ ನಿಜತ್ವವು ಹ್ಯಾಗೆ ಸಿದ್ಧಿಸುವದು? ವ್ಯವಹಾರಕ್ಕೆ ಸಂಬಂಧಿಸದೆ ಇದ್ದಂಥ ತತ್ವವು ನಂಬಲಿಕ್ಕೆ ಹ್ಯಾಗೆ ಅರ್ಹವು? ಈ ಸಿದ್ಧಾಂತವು ಒಂದೇ ಕಾಲಕ್ಕೆ ಸುಳ್ಳೂ ನಿಜವೂ ಎಂದು ಹೇಳುವದರಿಂದ ಇಂಥ ವಿರೋಧ ಭಾವವುಳ್ಳ ಸಿದ್ಧಾಂತವನ್ನು ನಂಬುವದು ಯೋಗ್ಯ

ಪ್ರಸಿದ್ಧಿಗೆ ಬರಬೇಕಾದರೆ ಸಾಮಾನ್ಯವಾಗಿ ಕೆಲವುಕಾಲ ಹತ್ತುವದ ರಿಂದಲೂ ಶ್ರೀಪತಿಯು ಬಸವೇಶ್ವರನ ತರುವಾಯ ಆಗಿರಬಹುದೆಂದು ತೋರುತ್ತದೆ. ಆದ್ದರಿಂದ ಶ್ರೀಪತಿಯು ಹದಿಮೂರನೇ ಶತಮಾನದ ಆದಿ ಭಾಗದಲ್ಲಿ ಇದ್ದನೆಂದು ತಿಳಿದರೆ ಬಹಳ ತಪ್ಪಾಗಲಿಕ್ಕಿಲ್ಲ. ಪೀ. ಗೋಪೀ ನಾಥ ಕವಿರಾಜರು "ಹಿಂದುಸ್ತಾನರಿವ್ಹ್ಯೂ" ಎಂಬ ಮಾಸಿಕದಲ್ಲಿ (ಜಾನೇ ವಾರಿ ೧೯೨೩) ಇದೇ ಕಾಲದಲ್ಲಿಯೇ ಶ್ರೀಪತಿಯು ಇದ್ದಿರಬಹುದೆಂದು ಊಹಿಸಿದ್ದಾರೆ. ದ್ವೈತಮತ ಸ್ಥಾಪನಾಚಾರ್ಯನಾದ ಮಧ್ವಾಚಾರ್ಯನು ೧೨೩೮ನೇ ಇಸ್ವಿಯ ತರುವಾಯ ಇದ್ದನು. ಆದರೆ ಅವನ ಮತದ ಉಲ್ಲೇ ಖವನ್ನು ಶ್ರೀಪತಿಯು ತನ್ನ ಗ್ರಂಥದಲ್ಲಿ ಎಲ್ಲಿಯೂ ಮಾಡಿಲ್ಲ. ಆದ್ದರಿಂದ ಶ್ರೀಪತಿಯು ಮಧ್ವಾಚಾರ್ಯನ ಪೂರ್ವದಲ್ಲಿ ಇರಲಿಕ್ಕೆ ಬೇಕು. ಹೀಗೆ ಶ್ರೀಪತಿಯು ಹದಿಮೂರನೇ ಶತಮಾನದ ಆದಿಭಾಗದಲ್ಲಿ ಇದ್ದಿರಬಹು ದೆಂದು ಸದ್ಯಕ್ಕೆ ಗ್ರಹಿಸಲು ಅಡ್ಡಿ ಇಲ್ಲ.

ವಾಡಿಕೆಯಾಗಿ ಜನರು ನೀಲಕಂಠ ಶಿವಾಚಾರ್ಯನು ರಚಿಸಿದ ಕ್ರಿಯಾಸಾರವೆಂಬ ಗ್ರಂಥವು ಬ್ರಹ್ಮಸೂತ್ರದ ಮೇಲೆ ಬರೆದ ವೀರಶೈವಪರ ಭಾಷ್ಯ ಎಂದು ತಿಳಿಯುವದುಂಟು. ಆದರೆ ಇದು ತಪ್ಪು ಇರುತ್ತದೆ. ಕ್ರಿಯಾ ಸಾರವು ವ್ಯಾಸ ಸೂತ್ರಗಳಿಗೆ ಒಪ್ಪಿಗೆಯಾಗುವಂತೆ ಬರೆಯಲ್ಪಟ್ಟ ನಿಗಮಾ ಗಮಸಾರಭೂತವಾದ ಕ್ರಿಯೆಗಳಸಾರವೆಂದು ಈ ಗ್ರಂಥಕಾರನೇ ಅದರಲ್ಲಿ ಹೇಳಿದ್ದಾನೆ. ಈ ಗ್ರಂಥವು ವೀರಶೈವ ಮತತತ್ವಗಳನ್ನು ಬೋಧಿಸತಕ್ಕ ಒಂದು ಪ್ರಬಂಧ ಮಾತ್ರ ವಿರುತ್ತದೆ. ಇದರ ಕಾಲವು ೧೪ನೇ ಶತಮಾನ ವಿರಬೇಕು.

ಶ್ರೀಪತಿಯಂತೆ ಶ್ರೀಕಂಠ ಶಿವಾಚಾರ್ಯನೆಂಬ ಬೇರೊಬ್ಬನು ಬ್ರಹ್ಮ ಸೂತ್ರಗಳ ಮೇಲೆ ಒಂದು ಭಾಷ್ಯವನ್ನು ಬರೆದಿದ್ದಾನೆ. ಇದರಲ್ಲಿ ನಿರೂಪಿಸಿದ ತತ್ವಗಳು ವೀರಶೈವಮತಕ್ಕೆ ಸಮೀಪವರ್ತಿಯಾಗಿದ್ದರೂ, ಇದು ವೀರಶೈವ ಪರಭಾಷ್ಯವಲ್ಲ. ಈ ಶ್ರೀಕಂಠನು ಶ್ರೀಪತಿಯ ತರುವಾಯ ೧೪ನೇ ಶತಮಾ ನವಲ್ಲಿ ಇದ್ದಿರಬಹುದೆಂದು ತೋರುತ್ತದೆ.

ಶ್ರೀಪತಿಯು ಸಂಪೂರ್ಣ ವೀರಶೈವನಾಗಿರುವದರಿಂದ ಅವನು ಕರ್ನಾಟಕಸ್ಥನೇ ಆಗಿರಬಹುದೆಂದು ಊಹಿಸಬಹುದು. ಅವನು ಬಹುಶಃ ಹೈದ್ರಾಬಾದಿನ ಸಮೀಪದಲ್ಲಿ ಇದ್ದಿರಬೇಕು. ಅಲ್ಲಿ ಅವನ ವಂಶಜರು ಇನ್ನೂ ಇದ್ದಾರೆಂದು ಕೇಳುತ್ತೇವೆ. ಅವನು ಬಹುಶಃ ಗೋದಾವರೀ ಪ್ರದೇ

ಶ್ರೀಪತಿಯು ತನ್ನ ಭಾಷ್ಯವನ್ನು ದುಷ್ಟ ವಿರೋಧಿಗಳ ಗರ್ವವನ್ನು ಖಂಡಿಸಲಿಕ್ಕೂ ದುಷ್ಕೃತ್ಯಗಳನ್ನು ನಿರ್ಮೂಲ ಮಾಡಲಿಕ್ಕೂ ಉಪನಿಷತ್ತುಗಳ ಸಾರವನ್ನು ತೆಗೆದುಕೊಂಡು ರಚಿಸಿರುವೆನೆಂದು ಬರೆದಿದ್ದಾನೆ. ಮತ್ತು ಈ ಭಾಷ್ಯವು ವಿಶೇಷಾದ್ವೈತಸಿದ್ಧಾಂತಕ್ಕೆ ಭೂಷಣವೆಂದು ಹೇಳಿಕೊಂಡಿದ್ದಾನೆ. ತಾನು ಈ ಭಾಷ್ಯವನ್ನು ಸ್ಮೃತಿಗಳ ಅಭಿಪ್ರಾಯಕ್ಕೆ ಸಮ್ಮತವಾಗುವಂತೆ ಅಗಸ್ತ್ಯ ಮುನಿಯ ವೃತ್ತಿಗೆ ಅನುಸಾರವಾಗಿ ಬರೆದಿರುವೆನೆಂದು ಹೇಳಿದ್ದಾನೆ. ಇದರ ಮೇಲಿಂದ ಹ್ಯಾಗೆ ರಾಮಾನುಜನು ಬೋಧಾಯನ ವೃತ್ತಿಯನ್ನು ಅನುಸರಿಸಿರುವನೋ ಹಾಗೆಯೇ ಶ್ರೀಪತಿಯು ಅಗಸ್ತ್ಯ ವೃತ್ತಿಯನ್ನು ಅನುಸರಿಸಿದಂತೆ ತೋರುತ್ತದೆ. ಶ್ರೀಪತಿಯು ತನ್ನ ಭಾಷ್ಯದಲ್ಲಿ ಕಣ್ವ, ಭಟ್ಟ ಮತ್ತು ಭಾಸ್ಕರ ಇವರ ಸಿದ್ಧಾಂತಗಳನ್ನೂ ಉಲ್ಲೇಖಿಸಿ ಅವರನ್ನು ಖಂಡಿಸಿದ್ದಾನೆ. ಈ ಎಲ್ಲ ಸಂಗತಿಗಳ ಮೇಲಿಂದ ಶ್ರೀಪತಿಯು ವೀರಶೈವನಾಗಿದ್ದು ವೀರಶೈವ ಸಿದ್ಧಾಂತವನ್ನು ನೆಲೆಗೊಳ್ಳಿಸಲಿಕ್ಕೆ ಈ ಭಾಷ್ಯವನ್ನು ಬರೆದಿರುವನೆಂಬದು ಸಿದ್ಧವಾಗುತ್ತದೆ.

## ಭಾಷ್ಯಕಾರನ ಕಾಲ ಮತ್ತು ಸ್ಥಳ.

ಶ್ರೀಪತಿಯು ರಾಮಾನುಜನ ಮತಗಳನ್ನು ತನ್ನ ಭಾಷ್ಯದಲ್ಲಿ ಖಂಡಿಸಿರುತ್ತಾನೆ. ಇದರ ಮೇಲಿಂದ ಅವನು ರಾಮಾನುಜನ ತರುವಾಯ ಇದ್ದನೆಂದು ಸ್ಪಷ್ಟವಾಗುತ್ತದೆ. ರಾಮಾನುಜನು ತಾಂತ್ರಿಕ ಆಗಮಗಳಿಗನುಸಾರವಾಗಿ ಮೂರ್ತಿ ಪೂಜೆಯನ್ನು ಶ್ಲಾಘಿಸಿದ್ದಾನೆ. ಆದರೆ ಶ್ರೀಪತಿಯು ಇದನ್ನು ಖಂಡಿಸಿದ್ದಾನೆ. ಅದೇ ಮೇರೆಗೆ ಪಾಶುಪತರು ಅನುಸರಿಸುವ ಆಗಮಧರ್ಮವನ್ನೂ ಅವನು ಖಂಡಿಸಿದ್ದಾನೆ. ರಾಮಾನುಜನು ವಿಷ್ಣುವರ್ಧನನ ಕಾಲದಲ್ಲಿ (೧೧೧೧ ರಿಂದ ೧೧೪೧) ಇದ್ದದರಿಂದ ಇದಕ್ಕೂ ನಂತರ ಶ್ರೀಪತಿಯು ಇರಲಿಕ್ಕೆ ಬೇಕು. ಅದರಂತೆಯೇ ಶ್ರೀಪತಿಯು ಏಕೋರಾಮ ಮೊದಲಾದ ಪಂಚಾಚಾರ್ಯರನ್ನು ಸ್ತುತಿಸಿರುವದರಿಂದ ಅವನು ಅವರ ತರುವಾಯ ಇದ್ದಿರಲಿಕ್ಕೆ ಬೇಕು. ಪಂಚಾಚಾರ್ಯರು ಬಸವೇಶ್ವರನ ಕಿಂತಲೂ ಹಿಂದಿನವರು. ಆದರೆ ಶ್ರೀಪತಿಯು ಬಸವೇಶ್ವರನ ಉಲ್ಲೇಖವನ್ನು ತನ್ನ ಗ್ರಂಥದಲ್ಲಿ ಎಲ್ಲಿಯೂ ಮಾಡಿರುವದಿಲ್ಲ. ಆದರೂ ರಾಮಾನುಜನು ಬಸವೇಶ್ವರನಕಿಂತಲೂ ೫೦ ವರ್ಷ ಮಾತ್ರ ಮೊದಲು ಇದ್ದದರಿಂದಲೂ ರಾಮಾನುಜನು ತನ್ನ ಮತವನ್ನು ಸ್ಥಾಪಿಸಿದ ಬಳಿಕ ಅದು ವಿದ್ವಾಂಸರಲ್ಲಿ

ಲಿಂಗದ ದರ್ಶನವು ಲಿಂಗದ ಸ್ಪರ್ಶನವು, ಲಿಂಗಸಹ ಸರ್ವಭೋಗ ವಾದಾತನು ಲಿಂಗವೇ ಅಕ್ಕು ಸರ್ವಜ್ಞ, ॥ ೨ ॥

ಲಿಂಗದಲಿ ಮನವಾಗಿ, ಲಿಂಗದಲಿನೆನವಾಗಿ ಲಿಂಗದಲಿ ನೋಟನುಡಿ ಬೇಡ ಹೋದವನು ಲಿಂಗವೇ ಅಕ್ಕು ಸರ್ವಜ್ಞ. ॥ ೩ ॥

ಅಂಗದ ಇಚ್ಛೆಗೆ ಹರಿದು ಭಂಗಗೊಳದಿರು ಮನುಜ. ಲಿಂಗದಲಿ ನೆನವು ನಿಲಿಸು. ಸತ್ಯದಿ ನೀನು ಲಿಂಗವೇ ಅಕ್ಕು ಸರ್ವಜ್ಞ. ॥ ೪ ॥

ಇಷ್ಟಲಿಂಗದಪೂಜೆ ಮುಟ್ಟಿತಾ ಮಾಡಿದಡೆ ಗಟ್ಟ್ಯಾಗಿ ಮುಕ್ತಿಬಪ್ಪುದು ಗಟ್ಟ್ಯಾಗಿ ಮುಕ್ತಿ ಬಪ್ಪುದು. ಲಿಂಗದಲಿ ನಿಷ್ಠೆಯೊಂದಿರಲಿ ಸರ್ವಜ್ಞ. ॥೫॥

ಹೀಗೆ ಲೋಕದಲ್ಲಿ ಯಾವ ಮನುಷ್ಯನು ಲಿಂಗದರ್ಶನ ಸ್ಪರ್ಶನ ಮಾಡಿ ಲಿಂಗಭೋಗೋಪ ಭೋಗಿಯಾಗುವನೋ, ಲಿಂಗದಲ್ಲಿ ಮನವನ್ನು ನಿಲಿಸಿ ನೆನೆವನೋ ಅವನಿಗೆ ಗಟ್ಟಿಯಾಗಿ ಮುಕ್ತಿಯಾಗುವದು.

ಈ ಮೂರುವಿಧಲಿಂಗವು ಮನುಷ್ಯನಲ್ಲಿ ಒಂಬತ್ತು ಸ್ಥಾನಗಳಲ್ಲಿಯೂ ಸಂಚರಿಸುತ್ತಲಿರುವದು.

**ವಚನಃ**–ಆರುಚಕ್ರದೊಳು ಮೂರುಮಂಟಪದೊಳು ನವದ್ವಾರ ವಾಟ ಒಳಹೊರಗೆ ಆ ಲಿಂಗ ಭೋರಾಡುತಿದೆ ನಿಜಶರಣ.

**ಟೀಕೆಃ**–ಆರುಚಕ್ರ ಮೂರುಮಂಟಪ ಅಂತು ಒಂಬತ್ತು ಸ್ಥಳಗಳಲ್ಲಿ ಒಂದೇ ಲಿಂಗವು ಸಂಚಾರ ಮಾಡುತ್ತಿರುವದು. ಈ ಸ್ಥಾನಗಳು ಅವ ವೆಂದರೆ, ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ. ಆಜ್ಞೆ, ಬ್ರಹ್ಮ, ಶಿಖಾ, ಪಶ್ಚಿಮ, ಇವುಗಳು ಇರುತ್ತವೆ. ಈ ಒಂಬತ್ತು ಚಕ್ರಗಳಲ್ಲಿ ಒಂಬತ್ತು ಲಿಂಗಗಳು ಒಂಬತ್ತು ಪ್ರಣಮರೂಪದಿಂದ ಕ್ರೀಡಿಸುತ್ತಿರುವವು ಹ್ಯಾಗೆಂದರೆ, ಗುದಸ್ಥಾನದಲ್ಲಿ ಆಧಾರಚಕ್ರ, ಅದಕ್ಕೆ ನಾಲ್ಕುದಳ, ಅದಕ್ಕೆ ಮೂಲ ಪ್ರಣಮ ನಕಾರ, ಪದ್ಮಾಕಾರ, ಆಚಾರಲಿಂಗ. ಈಚಕ್ರದ ಎರ ಡಂಗುಲದ ಮೇಲೆ ಗುಹ್ಯಸ್ಥಾನ ಉಂಟು. ಇದರಲ್ಲಿ ಸ್ವಾದಿಷ್ಠಾನಚಕ್ರ ಅದಕ್ಕೆ ಆರುದಳ, ಮೂಲ ಪ್ರಣಮ ಮಕಾರ, ಗೋಲಾಕಾರ, ಇದಕ್ಕೆ ಗುರು ಲಿಂಗ. ಈಚಕ್ರದ ಎಂಟು ಅಂಗುಳದ ಮೇಲೆ ನಾಭಿಸ್ಥಾನದಲ್ಲಿ ಮಣಿ ಪೂರಕಚಕ್ರ ಉಂಟು. ಇದಕ್ಕೆ ಹತ್ತುದಳ, ಇದಕ್ಕೆ ಮೂಲ ಪ್ರಣಮ ಶಿಕಾರ, ಕೋಳೀತತ್ತೀ ಆಕಾರ, ಇದಕ್ಕೆ ಶಿವಲಿಂಗ. ಇದರ ಹನ್ನೆರಡು ಅಂಗುಳದ ಮೇಲೆ ಹೃದಯಸ್ಥಾನದಲ್ಲಿ ಅನಾಹತಚಕ್ರ, ಇದಕ್ಕೆ ಹನ್ನೆರಡುದಳ,

ಇದಕ್ಕೆ ಮೂಲ ಪ್ರಣವು ವಕಾರ, ಜಂಗಮಲಿಂಗ. ಇದರ ಹದಿನಾರು ಅಂಗುಳದ ಮೇಲೆ, ಕಂಠಸ್ಥಾನದಲ್ಲಿ ವಿಶುದ್ಧಿಚಕ್ರ, ಇದಕ್ಕೆ ಹದಿನಾರುದಳ ಇದಕ್ಕೆ ಮೂಲ ಪ್ರಣವು ಯಕಾರ, ಪ್ರಸಾದಲಿಂಗ. ಇದರ ಹತ್ತು ಅಂಗುಳದ ಮೇಲೆ ಎರಡೂ ಕಣ್ಣಿನ ಹುಬ್ಬಿನ ಮಧ್ಯದಲ್ಲಿ ಆಜ್ಞೆಚಕ್ರ, ಇದಕ್ಕೆ ಎರಡುದಳ, ಇದಕ್ಕೆ ಮೂಲ ಪ್ರಣವು ಓಂಕಾರ, ಪದ್ಮಾಕಾರ, ಮಹಾಲಿಂಗ. ಇದರ ಮೂರು ಅಂಗುಳದ ಮೇಲೆ ಶಿಖಾಚಕ್ರ, ಇದಕ್ಕೆ ಸಹಸ್ರದಳ ಮೂಲ ಪ್ರಣವು ಅಕಾರ ಇಷ್ಟಲಿಂಗ. ಇದರ ನಾಲ್ಕು ಅಂಗುಳದ ಮೇಲೆ ಬ್ರಹ್ಮಚಕ್ರ, ಇದಕ್ಕೆ ಮೂಲ ಪ್ರಣವು ಉಕಾರ, ಇದಕ್ಕೆ ಪಂಚದಳ, ಅಧೋಮುಖವಾಗಿರುವದು, ಇದಕ್ಕೆ ಪ್ರಾಣಲಿಂಗ. ಇದರ ಆರು ಅಂಗುಳದ ಮೇಲೆ ಶಿರದ ಹಿಂದೆ ಪಶ್ಚಿಮಚಕ್ರ, ಇದಕ್ಕೆ ಅಷ್ಟದಳ, ಮೂಲ ಪ್ರಣವು ಮಕಾರ, ಭಾವಲಿಂಗ. ಹೀಗೆ ಈ ನವಚಕ್ರಗಳಲ್ಲಿ ಒಂದೇ ಲಿಂಗವು ಸಂಚರಿಸುತ್ತಿರುವದು.

ಈ ತೆರದ ಲಿಂಗವನ್ನು ಯಾವನು ಭೇದಿಸಲು ಶಕ್ತನಾಗುತ್ತಾನೋ, ಅವನೇ ಲಿಂಗಾನುಭವಿಯು.

**ವಚನ**:-ಆದಿಲಿಂಗವನು ಭೇದಿಸಲರಿಯದೆ, ಹಾದಿ ಎಡೆಮಾಡಿ ನಮಿಸುವ ಮನುಜರು ಮಾದಿಗರು ನೋಡಾ ಸರ್ವಜ್ಞ. ॥

**ವಚನ**:-ಅದ್ಭುತವೆಂಬೋ ಪಿಶಾಚಿ ಮೂರು ಲೋಕವನು ಗ್ರಹಿಸುತ್ತಿದ್ದಿತಯ್ಯ. ಆ ಅದ್ಭುತದೊಳಗೊಂದು ಗ್ರಹ ನಿರಂತರದಲ್ಲಿ ನಲಿದಾಡುತ್ತಿದ್ದಿತಯ್ಯಾ. ವಜ್ರೇನಿ ಭಗೇಂದ್ರಪುರದಲ್ಲಿ ಗುಹೇಶ್ವರ ಲಿಂಗವು ತಾನೇ ನೋಡಯ್ಯ.

**ಟೀಕೆ**:-ಈ ದೇಹದಲ್ಲಿ ಒಂದು ಅದ್ಭುತವಾದ ಪಿಶಾಚ ಭಗೇಂದ್ರಪುರದಲ್ಲಿ ಗುಹೇಶ್ವರನೆಂಬ ಲಿಂಗವುಂಟು. ಈ ಲಿಂಗ ಸ್ಥೂಲ, ಸೂಕ್ಷ್ಮ, ಕಾರಣ, ಈ ಮೂರು ಲೋಕಗಳಲ್ಲಿ ಸಂಚಾರ ಮಾಡುವದು. ಈ ಲಿಂಗ ಮುಟ್ಟಿ ಪೂಜೆ ಮಾಡಿದರೆ, ಮೋಕ್ಷವಾಗುವದು.

**ವಚನ**:-ಗುರುವು ಕಟ್ಟಿದ ಲಿಂಗವಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ ನನ್ನ ಒಡೆಯ ನೀನೆಂದು ಅಡ್ಡಡ್ಡ ಬೀಳುವ ಈ ಲೊಟ್ಟೆ ಮೂಳನ ಕಂಡರೆ, ಮೆಟ್ಟಿನಿಂದ ಎಡದ ಪಾದರಕ್ಷೆಯಿಂದ ಲೊಟಲೊಟನೆ ಹೊಡಿ ಎಂದ ನಮ್ಮ ಅಂಬಿಗರ ಚೌಡಯ್ಯನು.

ಆದದರಿಂದ ಆತ್ಮಲಿಂಗವನ್ನುಬಿಟ್ಟು, ಲಿಂಗವು ಅಲ್ಲಿದೆ, ಇಲ್ಲಿದೆ, ಎಂದು ಯಾವ ಸ್ಥಲಕ್ಕೂ ಹೋಗದೆ ತನ್ನಲ್ಲಿರುವ ಲಿಂಗದೇವನೊಬ್ಬನೇ ಎಂದು ನಂಬಿ ಪೂಜೆ ಮಾಡಿದರೆ, ಅವನಿಗೆ ಮೋಕ್ಷವಾಗುವದು ಸತ್ಯ.

ಈ ಆತ್ಮಲಿಂಗ ಪೂಜೆಯು ಮನಸ್ಸಿಗೆ ಸಂಬಂಧವಿರುತ್ತದೆ. ಶುದ್ಧಾಂತಃಕರಣ, ಸದಾಚಾರ, ಇವುಗಳೇ ಆತ್ಮಲಿಂಗವನ್ನು ಪ್ರಜ್ವಲಿಸುವ ಮುಖ್ಯ ಸಾಧನಗಳಾಗಿವೆ. ಹೀಗೆ ಪೂಜೆ ಮಾಡುವವನೇ ನಿಜ ಶರಣನು, ಶಿವಾನುಭವಿಯು. ಇವನ ಪೂಜಾಕ್ರಮವನ್ನು ವಚನಕಾರರು ಕೆಳಗೆ ಬರೆದ ರೀತಿಯಿಂದ ವರ್ಣಿಸಿದ್ದಾರೆ.

**ವಚನ.**ಃ-ಹೊರಗನೆ ಕೊಯಿದು ಹೊರಗನೆ ಪೂಜಿಸುವರು. ಇದರಿಂದ ಫಲವಿಲ್ಲ, ಪ್ರಯೋಜನವಿಲ್ಲ ನೋಡಾ. ಸರ್ವ ಜೀವಿಗಳನು ಹಿಂಸೆ ಮಾಡದಿರುವದು ಮೊದಲನೆ ಪುಷ್ಪ. ಸರ್ವ ಇಂದ್ರಿಯ ನಿಗ್ರಹಿಸಬಲ್ಲಡೆ ದ್ವಿತೀಯ ಪುಷ್ಪ. ಅಹಂಕಾರ ಮುರಿದು ಶಾಂತನಾಗಿ ಇರಬಲ್ಲಡೆ, ತೃತೀಯ ಪುಷ್ಪ. ಸರ್ವ ಪ್ರಾಣಿಗಳಲ್ಲಿ ದಯಾಪರನಾಗಿ ಇರಬಲ್ಲಡೆ ಚತುರ್ಥ ಪುಷ್ಪ. ದುರ್ಭಾವದ ಪ್ರಕೃತಿಯನ್ನಳಿದು, ಸದ್ಭಾವದಿಂದೊಡಗೂಡಿ ಇರುವದೇ ಪಂಚಮ ಪುಷ್ಪ. ಉಂಡು ಉಪವಾಸಿ ಬಳಿಸಿ ಬ್ರಹ್ಮಚಾರಿ ಆಗಿರುವದೆ ಷಟ್ ಪುಷ್ಪ. ಅಸತ್ಯವಬಿಟ್ಟು ಸತ್ಯದಿಂದ ನಡೆವುದೇ ಸಪ್ತಮ ಪುಷ್ಪ. ಸಕಲ ಪ್ರಪಂಚವನಳಿದು ಜ್ಞಾನ ಸಂಪನ್ನನಾಗಿ ಇರಬಲ್ಲಡೆ, ಅಷ್ಟಮ ಪುಷ್ಪ. ಇಂತೀ ಅಷ್ಟ ಪುಷ್ಪಗಳನ್ನು ಲಿಂಗಕ್ಕೆ ಧರಿಸಿ ಪೂಜಿಸುವರಲ್ಲಿ ಪ್ರತಿಬಿಂಬದಂತೆ ಇರುವ ನಮ್ಮ ದೇಶಿಕನಧಿಕ ದೇಹದುರ್ಗಧೀಶನು. ॥೧॥

**ವಚನ.**ಃ-ನಾವು ಭಕ್ತರು ನೀವು ಭಕ್ತರು ಎಂಬುವ ಅಣ್ಣಗಳು ನೀವು ಕೇಳಿರೋ. ಗುಡ್ಡದಲ್ಲಿ ಇರುವ ಕಾಡಗಲ್ಲನೆ ತಂದು ಸಂಕ ತರಾಸರ ಕೈಯ್ಯಿಂದ ಕಟಿಸಿ, ಲಿಂಗವನು ಮಾಡಿಟ್ಟು ಆ ಲಿಂಗಕ್ಕೆ ಕಪ್ಪೆ ಮೀನು ಮಾನವರು ಎಂಜಲುಮಾಡಿದ ಬಾವಿ ನದಿ ನೀರತಂದು, ಲಿಂಗಕ್ಕೆ ಮಜ್ಜನಗೈದು, ಗಿಡಗಳಲ್ಲಿರುವ ಎಲೆ ಹೂವು ತಂದು ಪತ್ರಿಮಾಡಿ ಲಿಂಗಕ್ಕೆ ಧರಿಸಿ, ಅಂಗಡಿಯಲ್ಲಿಂದ ಲೋಬಾನ ತಂದು ಬೆಂಕಿಯ ಮೇಲೆ ಹಾಕಿ ಹೊಗೆ ಎಬ್ಬಿಸಿ, ಬಾಜಾರದಿಂದ ಗೋಧಿ ಬೆಲ್ಲ ತಂದು ಹೋಳಿಗೆ ಪಾಯಸ ಮಾಡಿ, ಆ ಲಿಂಗಕ್ಕೆ ನೈವೇದ್ಯವಮಾಡಿ, ಮೇಲೆ ತೆಂಗಿನ ಕಾಯತಂದು ಒಡೆದು, ಅಂಗಡಿಯಿಂದ ತಂದ ಕರ್ಪುರ ಅಡವಿಯಲ್ಲಿ ಬೆಳೆದ ಹತ್ತಿ ತಂದು ಬತ್ತಿಮಾಡಿ, ಗಾಣಿಗರ ಮನೆಯಿಂದ ಎಣ್ಣೆಯತಂದು ಬತ್ತಿಗೆ ಎದ್ದಿ, ಮಂಗ

ಳಾರುತಿಯ ಮಾಡಿ, ಹೇ ದೇವರೇ ಅರ್ಪಿತವೆಂದು ಅಂದು, ಈತನೆ ನಮ್ಮ ಒಡೆಯನೆಂದು ಅಡ್ಡ ಬೀಳುವ ಅಣ್ಣಗಳೇ ನೀವು ಕೇಳಿರೋ, ನೀವು ಮಾಡಿದ ನೈವೇದ್ಯ ಆ ದೇವರು ಉಣಲಿಲ್ಲ, ಇನ್ನಿಷ್ಟು ಬೇಕು ಸಾಕು ಎಂದು ಅನ್ನಲಿಲ್ಲ, ನೀವು ಮಾಡಿದಭಕ್ತಿ ಬರಿದಾಗಿ ಹೋಯಿತ್ತು. ಅದುಕಾರಣ ನಿಮಗೆ ಏನೇನುಫಲವಾಗಲಿಲ್ಲ. ಫಲವಾಗುವ ತಾತ್ಪರ್ಯವಾವುದೆಂದರೆ, ಈ ಕಾಯವನೇ ಸಜ್ಜೆಯಮಾಡಿ ಜೀವಾತ್ಮನ ಲಿಂಗವಮಾಡಿ ಭಾವವನೇ ಪುಷ್ಪವಮಾಡಿ, ಧ್ಯಾನವೆಂಬೋ ಗಂಧವತೀಡಿ, ಚಿತ್ತವೆಂಬ ಅಕ್ಷತಿಯನಿಟ್ಟು, ಕಾಯದಂಡಣೆ ಎಂಬ ನೈವೇದ್ಯವಮಾಡಿ ನಿಜವೆಂಬ ಬತ್ತಿಯಮಾಡಿ, ವೈರಾಗ್ಯವೆಂಬ ತೈಲವ ಎದ್ದಿ, ಮನವೆಂಬ ಧೂಪದಿಂದ ಮಂಗಳಾರುತಿಯಮಾಡಿ, ಪೂಜೆಯಂ ಗೈವಾತನು ಭಕ್ತನು. ಇಂಥ ಭಕ್ತನ ನಮ್ಮ ದೇಶಕ್ಕಧಿಕನಾದ ದೇಹದುರ್ಗಧೀಶನು ತನ್ನ ಹೃದಯ ಕಮಲದಲ್ಲಿ ಇಂಬಿಟ್ಟುಕೊಳ್ಳುವನು. ॥೨॥

**ವಚನಃ**–ಅಹೋ ಅಣ್ಣಗಳು ನೀವು ಕೇಳಿರಿ. ಅಡವಿಯಲ್ಲಿ ಬೆಳೆದಿರುವ ಕಾಡಪುಷ್ಪವತಂದು ಲಿಂಗಕ್ಕೆ ಧರಿಸುವಿರಿ. ಇದರಿಂದ ನಿಮಗೆ ಏನೇನುಫಲಪದವಿ ಆಗುವದಿಲ್ಲ. ಇದು ಅಲ್ಲಲ್ಲಾ. ಪುಷ್ಪ ಧರಿಸುವ ತಾತ್ಪರ್ಯ ಬೇರೆ ಉಂಟು. ಅದು ಎಂತೆಂದೊಡೆ, ಆವ ಮನುಷ್ಯನು ತನ್ನ ತಾಯಿತಂದೆಗಳ ಆಜ್ಞೆಯ ಮೀರಲೊಲ್ಲದೆ ಸೇವೆ ಮಾಡುವನೋ ಅದು ಮೊದಲನೇ ಪುಷ್ಪ. ಸಗುಣ ಬಿಟ್ಟು ನಿರ್ಗುಣ ಹಿಡಿದು ನಡೆವನೋ ಅದು ಎರಡನೇ ಪುಷ್ಪ ಪಾಪಕೃತ್ಯವಬಿಟ್ಟು ಪುಣ್ಯ ಹಿಡಿದು ನಡೆವನೋ ಅದು ಮೂರನೇ ಪುಷ್ಪ. ವಿನಯದಿಂದ ಪರೋಪಕಾರ ಮಾಡುವದೇ ನಾಲ್ಕನೇ ಪುಷ್ಪ. ಪರನಿಂದೆಯ ಮಾಡದೆ ಪರರಗೋಷ್ಟಿಯ ಬಿಟ್ಟು ಇರುವದೇ ಐದನೇ ಪುಷ್ಪ. ಏಕೋದೇವನೆಂದು ನಂಬಿ ನಡೆಯುವದೇ ಆರನೇ ಪುಷ್ಪ. ಸರ್ವಜೀವಿಗಳಲ್ಲಿ ದಯಾಪರನಾಗಿರುವದೇ ಏಳನೇ ಪುಷ್ಪ. ಒಬ್ಬರಗಂಟು ಅಪಹರಿಸದಿರುವದೇ ಎಂಟನೇ ಪುಷ್ಪ. ಪರರಚಾಡಿ, ತಗಲು, ಕುಯುಕ್ತಿ ಮಾಡದಿರುವದೇ ಒಂಬತ್ತನೇ ಪುಷ್ಪ. ಪರಸತಿಯ ಬಯಸದೆ ತನ್ನ ಸತಿಯು ಕೂಡಿಕೊಂಡಿರುವದೇ ಹತ್ತನೇ ಪುಷ್ಪ. ಎಲ್ಲ ಆಶೆಬಿಟ್ಟು ವೈರಾಗ್ಯದಿಂದ ನಡೆಯುವದೇ ಹನ್ನೊಂದನೇ ಪುಷ್ಪ. ಇಂತೀ ಏಕಾದಶ ಪುಷ್ಪಗಳನ್ನು ಲಿಂಗಕ್ಕೆ ಅರ್ಪಿಸಿದಾತನೇ ಭಕ್ತನೆಂಬೆ, ಮುಕ್ತನೆಂಬೆ. ಇಂಥ ಭಕ್ತಂಗೆ ನಮ್ಮ ದೇಶಕ್ಕಧಿಕನಾದ ದೇಹದುರ್ಗಧೀಶನು ಮೆಚ್ಚುವನು ನೋಡಾ. ॥೩॥

ಈ ಬಗೆಯಾಗಿ ಲಿಂಗ ಪೂಜೆಯನ್ನು ಮಾಡಬೇಕಲ್ಲದೆ ಡಾಂಭಿಕ ಆಚರಣೆಯಿಂದ ಮೂಢಜನರ ಕಣ್ಣಿನಲ್ಲಿ ಮಣ್ಣು ಒಗೆದು, ತನ್ನ ಕಾರ್ಯ ಸಾಧಿಸುವ ಲಿಂಗಪೂಜೆಯಿಂದ ಏನೂ ಪ್ರಯೋಜನವಿಲ್ಲ.

# ಬಸವೇಶ್ವರನ ಜನ್ಮಕಾಲ.

ಲೇಖಕ:- ವೀರಪ್ಪ ಚನಬಸಪ್ಪ ಯಗಟ ಬಿ. ಎ. (ಹೊಸರಿತ್ತಿ)

ಭರತಖಂಡದ ಭಕ್ತಿಯೋಗಿಗಳಲ್ಲಿ ಬಸವೇಶ್ವರನು ಬಹು ಪ್ರಾಧಾನ್ಯನಾಗಿರುವನು. ಆತನು ತನ್ನ ಭಕ್ತರಲ್ಲಿ ತನ್ನ ಮಹಿಮಾತಿಶಯದಿಂದ ಅಪಾರವಾದ ಆದರವನ್ನು ಪಡೆದಿರುವನು. ಇಂತಹ ಮಹಾ ಪುರುಷನ ಇತಿಹಾಸ ಕಾಲವನ್ನು ಅರಿತುಕೊಳ್ಳುವದು ಬಹು ಮಹತ್ವವಾದುದಾಗಿದೆ. ಈ ವಿಷಯದಲ್ಲಿ ರಾವಸಾಹೇಬ ಫ. ಗು. ಹಳಕಟ್ಟಿಯವರಿಗೂ ಶ್ರೀಯುತ ಮಂಜಪ್ಪನವರಿಗೂ ಅಭಿಪ್ರಾಯ ಭಿನ್ನತೆಯುಂಟಾಗಿರುವದು. ಈ ವಿಷಯದಲ್ಲಿ ಇವರೀರ್ವರು ಚರ್ಚೆಗೆ ಸ್ವಾತಂತ್ರ್ಯವನ್ನು ಕಲ್ಪಿಸಿಕೊಟ್ಟಿರುವದರಿಂದ ನನ್ನ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಕೊಡಲಿಚ್ಛಿಸುತ್ತೇನೆ. ಬಸವೇಶ್ವರನ ಸಂಬಂಧವಾಗಿ ಮೊದಲನೆಯ ತರುಣ ಸಮ್ಮೇಲನದಲ್ಲಿಯೂ, ೧೯೧೮ನೆಯ ಇಸವಿಯಲ್ಲಿ ಮ|| ರಾ|| ಬಿ. ಬಸವಾರಾಧ್ಯರು ಬಿ. ಎ. ಬಿ. ಎಲ್ ಇವರ ಅಧ್ಯಕ್ಷತೆಯಲ್ಲಿ ಬೆಂಗಳೂರಿನಲ್ಲಿ ಕಾಲೇಜ ವಿದ್ಯಾರ್ಥಿಗಳ ಸಂಘದಲ್ಲಿಯೂ ಒಂದು ಪ್ರಬಂಧವನ್ನು ಆಂಗ್ಲಭಾಷೆಯಲ್ಲಿ ಓದಿ ಹೇಳಿದ್ದೆನು. ಅಂದಿನಿಂದ ಈ ವಿಷಯದಲ್ಲಿ ಹೆಚ್ಚು ಅಭಿರುಚಿಯನ್ನು ನಾನು ತೆಗೆದುಕೊಳ್ಳುತ್ತ ಬಂದೆನು.

ಬಸವೇಶ್ವರನ ಜನ್ಮಕಾಲದ ವಿಷಯಕ್ಕೆ ಶ್ರೀಯುತ ಮಂಜಪ್ಪನವರು ಕ್ರಿ. ಶ. ೧೧೩೨ ಎಂದು ಬಸವಚರಿತ್ರೆಯಲ್ಲಿ ಬರೆದಿರುವರು. ಮತ್ತು ಈಗ ಶಿಲಾಲೇಖಗಳು ದೊರೆಯುವ ವರೆಗೆ ೧೧೩೦ನೇ ಇಸವಿಯು ಬಸವನ ಜನ್ಮಕಾಲವೆಂದು ತಿಳಿಯುವದು ಉಚಿತವೆಂದು ಅವರು ಬರೆದಿದ್ದಾರೆ. ರಾ|| ಸಾ|| ಹಳಕಟ್ಟಿಯವರಾದರೋ ಬಸವನ ಜನ್ಮಕಾಲವು ಲಕ್ಕಣ್ಣದಂಡೇಶನ ಶಿವತತ್ವಚಿಂತಾಮಣಿ ಎಂಬ ಗ್ರಂಥದ ಆಧಾರದಿಂದ ಕ್ರಿ. ಶ. ೧೧೩೯ ಎಂದು ನಿಶ್ಚಯಿಸಿರುವರು. ಲಕ್ಕಣ್ಣದಂಡೇಶನು ೧೪೧೯ ರಿಂದ ೧೪೪೬ ರ ವರೆಗೆ ವಿಜ

ಯನಗರದಲ್ಲಿ ಆಳಿಹೋದ ದೇವರಾಜನ ಸೇನಾ ನಾಯಕನಾಗಿದ್ದನು. ರಾ|| ಸಾ|| ಹಳಕಟ್ಟಿಯವರೂ ಶ್ರೀಯುತ ಮಂಜಪ್ಪನವರೂ ಬಸವನು ಮೂರುಪಟ್ಟ ಬಾಳಿದ್ದನೆಂಬ ವೀರಶೈವ ಪುರಾಣಗಳ ವಚನವನ್ನು ಆಧಾರ ವಾಗಿಟ್ಟುಕೊಂಡು ಬಸವನ ಜನ್ಮ ಮತ್ತು ಐಕ್ಯಕಾಲಗಳನ್ನು ನಿಶ್ಚಯಿಸಲು ಯತ್ನಿಸುವರು. ಮೂರುಪಟ್ಟವೆಂಬ ಸಾಮಾನ್ಯ ನಂಬಿಗೆಯನ್ನೇ ಪುರಾಣ ಗಳು ಪ್ರತಿಬಿಂಬಿಸಿರುವವಲ್ಲವೆ ಅದು ನಿಶ್ಚಿತವಾದ ಸಂಗತಿಯಲ್ಲ. ೩೦-೩೨ ವರ್ಷಕಾಲ ಬಾಳಿದ್ದರೂ ಮೂರು ಪಟ್ಟವೆಂದು ರೂಢಿಯಲ್ಲಿ ಬಂದಿರಬಹು ದೆಂದು ನಂಬುವದಕ್ಕೂ ಆಸ್ಪದವಿರುವದು. ೩ ಪಟ್ಟವೆಂಬ ಗೃಹೀತದಿಂದ ಶ್ರೀ. ಮಂಜಪ್ಪನವರ ಪ್ರಕಾರ ಬಸವನ ಐಕ್ಯಕಾಲವು ಕ್ರಿ. ಶ. ೧೧೬೬ ಮತ್ತು ರಾ|| ಸಾ|| ಹಳಕಟ್ಟಿಯವರ ಪ್ರಕಾರ ಕ್ರಿ. ಶ. ೧೧೭೫ ಆಗುವದು. ೩ ಪಟ್ಟದ ಗೃಹೀತದಿಂದ ಉಂಟಾಗುವ ಬಾಧಕಗಳೇನೆಂದರೆ, ಚರಿತ್ರೆಯಲ್ಲಿ ಹೇಳಿರುವ ಬಿಜ್ಜಳನ ಮರಣಕಾಲವೂ ಮತ್ತು ಬಸವನಐಕ್ಯಕಾಲವೂ ಆದ ೧೧೬೮ ಕ್ಕೂ ಶ್ರೀ. ಮಂಜಪ್ಪನವರ ಪ್ರಕಾರ ಆಗುವ ಐಕ್ಯಕಾಲವಾದ ೧೧೬೬ ಕ್ಕೂ ಎರಡು ವರ್ಷ ಅಂತರವುಂಟಾಗುವದು. ೨ನೆಯದೇನೆಂದರೆ ರಾ|| ಸಾ|| ಹಳಕಟ್ಟಿಯವರ ಪ್ರಕಾರ ಬಸವನು ಬಿಜ್ಜಳನ ತರುವಾಯ ೮ ವರ್ಷ ಕಾಲವಿದ್ದನೆಂದು ಗ್ರಹಿಸಬೇಕಾಗುವದು. ಇದು ವೀರಶೈವ ಪುರಾ ಣಗಳಿಗೂ ಚರಿತ್ರೆಗಳಿಗೂ ಸರಿಬೀಳುವದಿಲ್ಲ. ಬಸವನ ಐಕ್ಯವೂ ಬಿಜ್ಜಳನ ಕೊಲೆಯೂ ಒಂದೇ ಸಂವತ್ಸರದಲ್ಲಿ ಜರುಗಿದ್ದು ನಿಜವು. ಆದರೆ ಬಸವನಿಗೆ ಬಿಜ್ಜಳನ ಕೊಲೆಯ ಭವಿಷ್ಯಜ್ಞಾನವು ಕೊಲೆಯಾಗುವದಕ್ಕಿಂತ ಮೊದಲೇ ಇದ್ದುದರಿಂದ ಬಸವನು ಬಿಜ್ಜಳನ ಕೊಲೆಯಾಗುವ ಕೆಲವು ದಿನಗಳ ಪೂರ್ವ ದಲ್ಲಿಯೇ ಸಂಗಮೇಶ್ವರನಲ್ಲಿ ಹೋಗಿ ಐಕ್ಯನಾದನೆಂದು ಬಸವಪುರಾಣದ ೬೧ನೆಯ ಸಂಧಿಯಲ್ಲಿ ಹೇಳಿದೆ. ಬಸವನು ಬಿಜ್ಜಳನ ತರುವಾಯ ೮ ವರ್ಷ ಮಂತ್ರಿಯಾಗಿದ್ದರೆ ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೂ ಅರಬ್ಬಿ ಸಮುದ್ರದಿಂದ ಬಂಗಾಲಉಪಸಾಗರದ ವರೆಗೂ ಇರುವ ಜನಾಂಗವನ್ನೇ ವೀರಶೈವರನ್ನಾಗಿ ಮಾಡುತ್ತಿದ್ದನು. ತನ್ನ ಕಾರ್ಯವು ಅಪೂರ್ಣವಾಯಿ ತೆಂದು ಬಸವನಿಗೂ ಅರಿಕೆ ಇತ್ತು.

ಬಿಜ್ಜಳನು ೧೧೬೦ ರಿಂದ ೧೧೬೭ರ ವರೆಗೆ ಆಳಿದನೆಂಬುದಕ್ಕೆ ಒಂದು ಶಿಲಾಲೇಖವು ಸಿಕ್ಕಿರುವದೆಂದು ರಾ|| ಸಾ|| ಹಳಕಟ್ಟಿಯವರು ಬರೆಯು ತ್ತಾರೆ. ಈ ಶಿಲಾಲೇಖದಲ್ಲಿ ಬಿಜ್ಜಳನು ಸೋವಿದೇವನೆಂಬವನಿಗೆ ರಾಜ್ಯ

ವನ್ನು ಒಪ್ಪಿಸಿ ಸನ್ಯಾಸವನ್ನು ಸ್ವೀಕರಿಸಿ ತಾನು ರಾಜ್ಯತ್ಯಾಗಮಾಡಿದನೆಂದು ಹೇಳಿದೆ. ಈ ಶಿಲಾಲೇಖವು ನಂಬಲರ್ಹವಾಗದು. ಯಾಕಂದರೆ ಬಿಜ್ಜಳನ ಕೊಲೆಯಾಯಿತೆಂಬ ಅಪಕೀರ್ತಿಯನ್ನು ಹೋಗಲಾಡಿಸುವದಕ್ಕೆ ಇದೊಂದು ಕೃತ್ರಿಮಸೃಷ್ಟಿ ಏಕಾಗಿರಬಾರದು? ಇನ್ನೊಂದು ಜೈನಗ್ರಂಥವೇ ಆದ "ಬಿಜ್ಜಳ ಚರಿತ್ರೆ" ಎಂಬುದರಲ್ಲಿ ಬಿಜ್ಜಳನು ಬಸವನಿಂದ ಕಳುಹಲ್ಪಟ್ಟ ಒಬ್ಬ ಜಂಗಮನ ವಿಷದ ಹಣ್ಣಿನ ಸೇವನೆಯಿಂದ ಮರಣಹೊಂದಿದನೆಂದು ಬರೆಯಲ್ಪಟ್ಟಿರುವದು. ಬಿಜ್ಜಣರಾಯ ಪುರಾಣವೆಂಬ ಇನ್ನೊಂದು ಜೈನ ಗ್ರಂಥದಲ್ಲಿ ಬಿಜ್ಜಳನು ಶಿವಬಿಜ್ಜಣನೆಂಬ ತನ್ನ ಮೂರು ವರ್ಷದ ಮಗನಿಗೆ ಪಟ್ಟವನ್ನೊಪ್ಪಿಸಿ ತಾನು ಸನ್ಯಾಸಿಯಾಗಿ ಹೋದನೆಂದು ಬರೆದದೆ. ಹೀಗೆ ಜೈನರಲ್ಲಿಯೇ ಈ ವಿಷಯದಲ್ಲಿ ಒಮ್ಮತವಿಲ್ಲ. ಆದ್ದರಿಂದ ಬಿಜ್ಜಳನು ೧೧೬೮ ರಲ್ಲಿಯೇ ಕೊಲೆ ಮಾಡಲ್ಪಟ್ಟನೆಂದು ಹೇಳುವ ಚರಿತ್ರಾಧಾರವನ್ನೇ ನಂಬುವದು ವಿಹಿತವಾಗಿದೆ. ಅಂದಮೇಲೆ ಈ ತರ್ಕದ ಪ್ರಕಾರ ಬಸವನು ೧೧೩೯ ರಿಂದ ೧೧೬೮ ರ ವಗೆರೆ ೨೯ ವರ್ಷ ಬದುಕಿದ್ದನೆಂದು ಹೇಳಿದಂತಾಯಿತು. ಈ ಪ್ರಕಾರ ನನ್ನ ಅಭಿಪ್ರಾಯವು.

ಆದರೆ ಶ್ರೀಯುತ ಮಂಜಪ್ಪನವರು ಹೇಳುವದೇನಂದರೆ ಲಕ್ಕಣ್ಣ ದಂಡೇಶನ ಪ್ರಕಾರ ಬಸವನ ಜನ್ಮಕಾಲವನ್ನು ನಿಶ್ಚಯಿಸಿದರೆ ಬಸವನು ೨೬-೨೮ ವರ್ಷ ಬದುಕಿದ್ದಂತಾಯಿತು. ಮತ್ತು ೨೧-೨೨ ನೇ ವಯಸ್ಸಿನಲ್ಲಿ ಮಂತ್ರಿಯಾದಂತಾಯಿತು. ಇಷ್ಟು ಚಿಕ್ಕ ವಯಸ್ಸಿನಲ್ಲಿ ಮಂತ್ರಿಯಾಗುವದು ಅಸಂಭವವೆಂದು ಅವರು ತರ್ಕಿಸಿದ್ದಾರೆ. ಮತ್ತು ಮತ ಪ್ರಸಾರ ಕಾರ್ಯದಲ್ಲಿ ಬಸವನ ಸಹಾಯಕನಾಗಿದ್ದ ಚನ್ನಬಸವನು ಬಸವನಗಿಂತ ಒಂದುಪಟ್ಟು ಚಿಕ್ಕವನು, ಅಂದರೆ ೯-೧೦ ವರ್ಷದವನಿರಬೇಕಾಯಿತು ಹೀಗಿರುವದು ಅಸಂಭವವೆಂದು ಅವರು ಹೇಳುತ್ತಾರೆ. ಆದರೆ ಈ ಆಕ್ಷೇಪವು ಅಷ್ಟು ಮಹತ್ತದ್ದಾಗಿ ತೋರುವದಿಲ್ಲ. ಯಾಕಂದರೆ ಸಿಂಗಿರಾಜ ಪುರಾಣದ ೧೨ ನೆಯ ಸಂಧಿಯಲ್ಲಿ ಬಿಜ್ಜಳನು ಅತಿ ತರುಣನಾದ ಬಸವನಿಗೆ ಮಂತ್ರಿ ಪದವನ್ನೊಪ್ಪಿಸಿದೆನೆಂದು ಸ್ವತಃ ಹೇಳುತ್ತಾನೆ. ಬಸವನು ೨೧ ವರ್ಷಕ್ಕೆ ಮಂತ್ರಿಯಾದುದಕ್ಕೆ ಸಂಶಯ ತೆಗೆದುಕೊಳ್ಳುವದೆಂದರೆ ಅವತಾರೀ ಪುರುಷನಾದ ಬಸವನನ್ನು ಸಾಧಾರಣ ಜನರ ಪಂಕ್ತಿಯಲ್ಲಿ ಎಳೆದಂತಾಗುವದು. ಕರುಣಪಿಟ್ಟನು ಮಂತ್ರಿಯಾದಾಗ ೨೪ ವರ್ಷಗಳನ್ನು ಮೀರಿರಲಿಲ್ಲ. ಶಂಕರಾಚಾರ್ಯರು ೨೬ ಆಯುಷ್ಯದಲ್ಲಿಯೇ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನೂ,

ಧರ್ಮ ಬೋಧವನ್ನೂ ಅದ್ವಿತೀಯವಾದ ಪಾಂಡಿತ್ಯವನ್ನೂ ತೋರಿಸಿದರು. ಸದ್ಯದಲ್ಲಿ ಬರ್ಮಾದೇಶದಲ್ಲಿ ಒಬ್ಬ ೬ ವರ್ಷದ ಹುಡುಗನು ೩೦೦೦ ಪುಟಗಳುಳ್ಳ ಬೌದ್ಧಮತ ಗ್ರಂಥವಾದ ತ್ರಿಪೀಠಕವನ್ನು ಕಂಠಪಾಠವಾಗಿ ಹೇಳುತ್ತಿರುವನು. ಇಂಗ್ಲಂಡಿನಲ್ಲಿ ಹೆನ್ರಿಹಂಬೋಲ್ಟ ಎಂಬ ೭ ವರ್ಷದ ಹುಡುಗನು ರ್‍ಯಾಂಗಲರರಿಗೂ ಸಹ ನೀಗದಂಥ ಗಣಿತ ಪ್ರಶ್ನೆಗಳನ್ನು ಬಿಡಿಸುತ್ತಿರುವನು. ಹೀಗಿರುವಾಗ ಬಸವನು ೨೧ ವರ್ಷಕ್ಕೆ ಮಂತ್ರಿಯಾದುದಾಗಲಿ, ಚನ್ನಬಸವನು ೯-೧೦ ವರ್ಷದವನಿದ್ದನೆಂದು ತಿಳಿದರಾಗಲಿ ಆತನು ಗಹನವಾದ ತತ್ವ ಬೋಧೆಯನ್ನು ಮಾಡುತ್ತಿದ್ದುದು ಆಶ್ಚರ್ಯವಲ್ಲ. ಬಿಜ್ಜಳನ ೭ ವರ್ಷದ ಆಳಿಕೆಯಲ್ಲಿ ಬಲದೇವನು ವರ್ಷಾರುತಿಂಗಳು ಮಾತ್ರ ಮಂತ್ರಿಯಾಗಿದ್ದನು. ಯಾಕಂದರೆ ಅವನು ಹಿಂದಿನ ರಾಜರ ಕಾಲಕ್ಕೂ ಮಂತ್ರಿಯಾಗಿದ್ದನೆಂದು ತಿಳಿದು ಬರುವದು.

ಬಸವನು ಗುಮಾಸ್ತಗಿರಿಯಿಂದ ದಿವಾನಗಿರಿಗೆ ಏರಿದನೆಂಬದಾದರೂ ನಿಜವಾಗಿ ತೋರುವದಿಲ್ಲ. ಬಸವನ ಮಹಿಮೆಯನ್ನು ಕೇಳಿದ ಬಿಜ್ಜಳನು ಅವನನ್ನು ಏಕಕಾಲದಲ್ಲಿಯೇ ಮಂತ್ರಿಯನ್ನಾಗಿ ಸ್ವಾಗತಮಾಡಿಕೊಂಡನು. ಅವನು ಸಾಧಾರಣ ಗುಮಾಸ್ತನಾಗಿದ್ದರೆ ಲಿಪಿ ಶಾಸ್ತ್ರದಲ್ಲಿ ನಿಪುಣರಾದವರಿಂದಲೂ ತಿಳಿಯಲಸಾಧ್ಯವಾದ ಸ್ವರ್ಗಪಾತವಾದ ಲಿಪಿಯನ್ನು ಓದಿಹೇಳುವ ಸಾಮರ್ಥ್ಯವು ಅವನಿಗೆಲ್ಲಿ ಬರುತ್ತಿತ್ತು? ಅಥವಾ ಲಿಪಿಯನ್ನು ಓದಿದ ಮಾತ್ರವೇ ಗುಮಾಸ್ತನನ್ನು ದಿವಾನನನ್ನಾಗಿ ಮಾಡಿದರಾಜನಾದರೂ ಎಷ್ಟು ಮರುಳನಿರಬೇಕಾಯಿತು? ಇದು ಕಲ್ಪನಾತೀತವೇ ಸರಿ. ಬಸವನು ದಿವ್ಯ ಜ್ಞಾನಿಯಾಗಿದ್ದುದರಿಂದಲೇ ಸ್ವರ್ಗಲಿಪಿಯನ್ನು ಓದಿ ಏಕಕಾಲದಲ್ಲಿಯೇ ಮಂತ್ರಿಯಾದನು. ತಾನು ಕರಣಿಕಶಾಲೆಯಲ್ಲಿ ಕೆಲಸಮಾಡಬೇಕು ಎಂಬ ಸಿಂಗಿರಾಜ ಪುರಾಣದ ಮಾತಿನಿಂದ ಅವನು ಗುಮಾಸ್ತನಿದ್ದನೆಂದು ತರ್ಕಿಸಲು ಬರುವದಿಲ್ಲ. ಮಂತ್ರಿಯೂ ಸಹ ಕರಣಿಕಶಾಲೆಯಲ್ಲಿ ಕುಳಿತು ಬರೆಯತಕ್ಕ ಕೆಲಸವೂ ಉಂಟು. ಇದೂ ಅಲ್ಲದೆ ಸಿಂಗಿರಾಜ ಪುರಾಣವು ಆಧಾರಗ್ರಂಥವೆಂದು ಇಟ್ಟುಕೊಳ್ಳುವ ಹಾಗಿಲ್ಲ. ಮ|| ರಾ|| ಆರ್. ನರಸಿಂಹಾಚಾರ್ಯರು ಕವಿ ಚರಿತೆಯಲ್ಲಿ ಸಿಂಗಿರಾಜನು ೧೫ ನೇ ಶತಮಾನದಲ್ಲಿದ್ದನೆಂದು ಬರೆದಿದ್ದಾರೆ. ಆದ್ದರಿಂದ ನನಗೆ ತೋರುವದೇನಂದರೆ, ಮತಾಂತರ ಹೊಂದಿದ ಮತ್ತು ಸೋಮಕವಿಯ ಗಣಭಾಷ್ಯದಲ್ಲಿ ಹೇಳಲ್ಪಟ್ಟಿರುವ ಶರಣನಾದ ಸಿಂಗಿರಾಜನು ಬೇರೆಯೆಂತಲೂ ಮತ್ತು ೧೫ನೇ ಶತಮಾನದಲ್ಲಿ

ಪುರಾಣವನ್ನು ಬರೆದ ಸಿಂಗಿರಾಜನು ಬೇರೆ ಪುರುಷನೆಂತಲೂ ಇದೆ. ಸಿಂಗಿರಾಜನು ವಿಷಯವನ್ನು ಬಹಳವಾಗಿ ವಿಪರ್ಯಾಸಮಾಡಿರುವನು. ಉದಾಹರಣೆಗಾಗಿ, ಚನ್ನಬಸವನಿಗೆ ಶಿವಸ್ವಾಮಿ ಎಂಬ ತಂದೆ ಇದ್ದನೆಂಬದೂ, ಬಸವನು ಮೊದಲು ಗುಮಾಸ್ತನಿದ್ದನೆಂದು ಊಹೆಗೆ ಆಸ್ಪದಕೊಟ್ಟಿರುವದೂ ಇವೇ ಮುಂತಾದವುಗಳು. ಚನ್ನಬಸವನಿಗೆ ತಂದೆ ಇದ್ದನೆಂದು ಯಾವ ವೀರಶೈವ ಗ್ರಂಥವೂ ಹೇಳುವದಿಲ್ಲ. ಕಕ್ಕಯ್ಯನವರ ಮಿಕ್ಕ ಪ್ರಸಾದದಿಂದಲೇ ಆವನ ಜನನವಾಯಿತು. ಕ್ರಿಸ್ತನಾದರೂ ದೇವರ ವರದಿಂದಲೇ ಹುಟ್ಟಿದನು. ಅವನ ತಾಯಿಯು ಅವಿವಾಹಿತಳಿರುವಾಗಲೇ ಅವನನ್ನು ಹೆತ್ತಳು. ಸಾಧಾರಣ ಜನರ ನಿಯಮಗಳು ಮಹಾತ್ಮರಿಗೆ ಅನ್ವಯಿಸುವದಿಲ್ಲ. ಸಿಂಗಿರಾಜ ಪುರಾಣವು ಬಸವನನ್ನು ಸಾಧಾರಣ ಮನುಷ್ಯನ ದಿಶೆಗೆ ತಂದಿರುವದು ಸಿಂಗಿರಾಜ ಪುರಾಣವು ೧೫ ನೆಯ ಶತಮಾನದ ವರೆಗೆ ಯಾವ ವೀರಶೈವ ಗ್ರಂಥದಲ್ಲಿಯೂ ನಿರ್ದೇಶಿಸಲ್ಪಟ್ಟದ್ದು ಕಂಡುಬರುವದಿಲ್ಲ. ಮತ್ತು ವೀರಶೈವರಲ್ಲಿ ಈ ವರೆಗೂ ಸಮ್ಮತವಾದ ಗ್ರಂಥವಾಗಿಲ್ಲ. ಆದ್ದರಿಂದ ಸಿಂಗಿರಾಜ ಪುರಾಣವನ್ನೇ ಬಸವಚರಿತ್ರೆಗೆ ಮೂಲಾಧಾರವಾಗಿಟ್ಟುಕೊಳ್ಳುವದು ಯೋಗ್ಯವಾಗಲಾರದು. ಬಸವನು ೧೧೩೪ ರಲ್ಲಿ ಜನನವಾದನೆಂದೂ ೧೧೬೮ ರಲ್ಲಿ ಐಕ್ಯ ಹೊಂದಿದನೆಂದೂ ತಿಳಿಯುವದು ಉಚಿತವೆಂಬದು ನನ್ನ ಲೇಖದ ಸಾರಾಂಶವು. ಇನ್ನೂ ಅನೇಕ ಚರ್ಚಾಸ್ಪದವಾದ ವಿಷಯಗಳಿದ್ದರೂ ಲೇಖವು ಬೆಳೆಯುವದೆಂಬ ಶಂಕೆಯಿಂದ ಪ್ರಕೃತ ವಿಷಯಕ್ಕೆ ಬೇಕಾದುದನ್ನಷ್ಟೇ ಇಲ್ಲಿ ಚರ್ಚಿಸಬೇಕಾಯಿತು. ಲಕ್ಕಂಣದಂಡೇಶನು ಹೇಳಿರುವ ಸಂವತ್ಸರಕ್ಕೆ ಮಹತ್ವಕೊಡಬೇಕಾಗಿದೆ. ಏಕಂದರೆ **ಆತನು ಪ್ರಸಿದ್ಧ ಚರಿತ್ರಾಪುರುಷನು**. ಇದೇ ಡಿಸೆಂಬರ ೧೯೨೬ ಮಾಡರ್ನರಿವ್ಯೂದಲ್ಲಿ ೨ನೇ ದೇವರಾಯ ಎಂಬ ಶಿರೋಲೇಖದಲ್ಲಿ ದೇವರಾಯನ ಕಾಲದಲ್ಲಿದ್ದ ಅಬ್ದುರ್ರಝಾಕರು ತಮ್ಮ ಲೇಖದಲ್ಲಿ ಬರೆದಿಟ್ಟಿರುವದರಿಂದ ತಿಳಿಯುವದೇನಂದರೆ, "ಲಕ್ಕಣ್ಣದಂಡೇಶನು ಮುಖ್ಯ ನೌಕಾವಳಪತಿಯೂ ಮಂತ್ರಿಗಳಲ್ಲೊಬ್ಬನೂ ಉತ್ತರದಲ್ಲಿ ಗುಲ್ಬುರ್ಗೆಯನ್ನೂ ದಕ್ಷಿಣದಲ್ಲಿ ಸಿಲೋನ್, ಪೇಗು ದೇಶಗಳನ್ನೂ ಗೆದ್ದವನೂ, ದಕ್ಷಿಣ ಮಹಾಸಾಗರದ ದೊರೆಯೆಂದು ಕರೆಯಿಸಿ ಕೊಂಡವನೂ ಇದಲ್ಲದೆ ಮಹಾ ವಿದ್ವಾನನೂ, ಕವಿಯೂ ಆಗಿದ್ದನು." ಆದ್ದರಿಂದ ಇಂಥ ಮಹಾಪುರುಷನು ಬಸವನ ಜನ್ಮ ಸಂವತ್ಸರವನ್ನು ತನ್ನ ಗ್ರಂಥದಲ್ಲಿ ನಿರ್ದೇಶ ಪಡಿಸುವಾಗ ಬಲವಾದ ಆಧಾರಗಳ ಮೇಲೆಯೇ ಬರೆದಿರಬೇಕು.

---

# ಬಿಳಗಿಯ ರಾಜ್ಯಚರಿತ್ರೆ.

ಲೇಖಕಃ—ಬಿ. ಶಿವಮೂರ್ತಿ ಶಾಸ್ತ್ರಿ ಕೀರ್ತನಕಾರ ಹುಲಕುಂಟೀ
ಮಠ ತುಮಕೂರು.

---

**ಕಂದ||** ಬಿಳಗಿಯ ರಾಜರ ಚರಿತೆಯ ।
ನಿಳೆಯೊಳ್ ವಿಸ್ತರಿಸಲೀಗ ಯತ್ನಿಸುತಿಹೆನಾಂ||
ತಿಳಿಯಲ್ಕಿವರ್ಗಳ ವಿಷಯವ ।
ನೆಲೆ ಶಂಕರ! ಸಾಯುವಿಲ್ಲ ಮೇಗೆಯ್ದುಪೆ ಹಾ! ||೧||

ಕೀರ್ತನಗಳ ನಿಮಿತ್ತ ಬಿಳಗಿಯಲ್ಲಿ ಒಂದುವರೆ ತಿಂಗಳು ನಿಂತುದರಿಂದ ಇಲ್ಲಿನ ವಿಷಯುಗಳನ್ನೆಲ್ಲ ಕಣ್ಣಾರ ಕಂಡು ಕಿವಿಯಾರ ಕೇಳಿ ನಾನು ಕೆಳಗಿನ ಬರಹವನ್ನು ಬರೆದಿದ್ದೇನೆ.

ಪೌರ್ವಾತ್ಯರ, ಅದರಲ್ಲಿಯೂ ಭಾರತೀಯರ, ರಾಜ್ಯಸ್ಥಾಪನೆಯ ಕ್ರಮಕ್ಕೂ ಐರೋಪ್ಯರ ರಾಜ್ಯಾಧಿಕಾರ ಪ್ರಸರಣಕ್ಕೂ ಒಂದು ದೊಡ್ಡ ವ್ಯತ್ಯಾಸ ವಿದ್ದಂತೆ ಕಂಡುಬರುತ್ತದೆ. ಪಾಶ್ಚಾತ್ಯರು ತಮ್ಮ ರಾಜ್ಯಗಳನ್ನು ಜಲದುರ್ಗಗಳಿಂದ ಪ್ರಾರಂಭಿಸುವರು. ಜಲದುರ್ಗವೆಂದರೆ ಸಮುದ್ರತೀರದಲ್ಲಿ ಅಥವಾ ಸಮುದ್ರೋಪಮ ಜಲರಾಶಿಯ ಆಶ್ರಯ ಸ್ಥಾನದಲ್ಲಿರುವ ರಾಜಧಾನಿಗಳು. ಉದಾಹರಣೆಗಾಗಿ ಎಲಿಜಬೇತಳು ಇಂಗ್ಲಾಂಡಿನಲ್ಲಿ ಆಳುತ್ತಿದ್ದಾಗ ಅಲ್ಲಿ ಉಂಟಾದ ರಾಜ್ಯಕ್ರಾಂತಿಯ ದೆಸೆಯಿಂದ ಅಮೆರಿಕಾ ಪ್ರಾಂತ್ಯಕ್ಕೆ ಹೋದ ಆಂಗ್ಲರು ಅಮೆರಿಕಾ ಖಂಡದಲ್ಲಿ ನ್ಯೂಯಾರ್ಕ ಮೊದಲಾದ ರೇವೆಪಟ್ಟಣಗಳಿಂದ (ಜಲದುರ್ಗಗಳಿಂದ) ರಾಜ್ಯವಿಸ್ತರ ಮಾಡಿದರೆಂದು ಅವರ ಚರಿತ್ರೆಯು ತಿಳಿಸುತ್ತದೆ. ಹಾಗೆಯೇ ಮೇಲ್ಕಂಡ ರಾಣಿಯ ಕಾಲದಲ್ಲಿ ಇಂಗ್ಲಾಂಡಿನಲ್ಲಿ ಅನ್ನವಸ್ತ್ರಕ್ಕೆ ಅಭಾವಬಂದುದರಿಂದ ಅಥವಾ ಜನಜೀವನದಲ್ಲಿ ಆದಾಯಕ್ಕಿಂತ ಖರ್ಚು ಹೆಚ್ಚಿದುದರಿಂದ ಅಲ್ಲಿನ ಸಾಹಸಿಗರಾದ ಕಟ್ಟಾಳುಗಳು ದೂರದೇಶಗಳಿಗಾದರೂ ಹೋಗಿ ಹೊಟ್ಟೆಯನ್ನು ಹೊರೆದುಕೊಳ್ಳೋಣವೆಂಬ ಔತ್ಸುಕ್ಯದಿಂದ ಸಮುದ್ರ ಮಾರ್ಗವಾಗಿ ಹೊರಟರು. ಹೀಗೆ ಹೊರಟವರಲ್ಲಿ ಒಂದು ಗುಂಪು ಕ್ರಿ. ಶ. ೧೫೯೯ ರಲ್ಲಿ ಹಿಂದೂಸ್ಥಾನಕ್ಕೆ "ಈಸ್ಟ ಇಂಡಿಯಾ ಕಂಪನಿ" ಎಂಬ ಹೆಸರಿನಿಂದ ಕಾಲಿಟ್ಟಿತಷ್ಟೇ? ಇವರು ತಮ್ಮ ಗುಣಧರ್ಮಕ್ಕನುಸಾರವಾಗಿ ಭಾರತದ ಮುಖ್ಯಸ್ಥಳಗಳಾದ ಸೂರತ್ ಮದ್ರಾಸು ಬೊಂಬಾಯಿ ಕಲ್ಕತ್ತ

ಮೊದಲಾದ ಮುಖ್ಯ ಮುಖ್ಯ ಬಂದರುಗಳನ್ನು ಸ್ವಾಧೀನ ಮಾಡಿಕೊಂಡು ಆಯಾಕಾಲ ದೇಶಗಳಿಗನುಸಾರವಾಗಿ ಸ್ವಲ್ಪ ಕಾಲ ನಡೆದು ತಮ್ಮ ವ್ಯಾಪಾರದಲ್ಲಿ ವಿಶೇಷ ಲಾಭವನ್ನು ಪಡೆದು ಗರಿಗಟ್ಟಿಕೊಂಡು ಕ್ರಮ ಕ್ರಮವಾಗಿ ಮುಂದುವರಿದು ಅಖಂಡ ಭರತಖಂಡದ ಮೇಲೆ ತಮ್ಮ ಬೆಳ್ಗೊಡೆಯನ್ನು ಹಿಡಿದರು.

ಐರೋಪ್ಯರು ಹೀಗೆ ರಾಜ್ಯಸ್ಥಾಪನೆಗೆ ಜಲದುರ್ಗಗಳನ್ನು ಆಶ್ರೈಸುವಂತೆ ಭಾರತೀಯರು ಸ್ಥಲದುರ್ಗ ಗಿರಿದುರ್ಗಗಳನ್ನು ಆಶ್ರೈಸುವರು. ಇದಕ್ಕೆ ಹಿಂದೂ ಚರಿತ್ರೆಯು ಬಹುವಾಗಿ ಪುಷ್ಟೀ ಕರಣವನ್ನು ಕೊಡುವುದು. ಶತ್ರುಗಳು ಸುಲಭವಾಗಿ ಬರಲಾಗದ ಸ್ಥಳಗಳಲ್ಲಿ ಅಥವಾ ದುರ್ಗಮವಾದ ಬೆಟ್ಟಗುಟ್ಟೆಗಳಲ್ಲಿ ನಮ್ಮವರು ಮನೆಮಾಡುವರು. ಚಿತ್ತೂರು ಶ್ರೀರಂಗ ಪಟ್ಟಣ ಇವೆಲ್ಲ ಸ್ಥಲದುರ್ಗಗಳಲ್ಲಿಯೇ ಗಣನೆಯಾಗುವವು. ಚಿತ್ರದುರ್ಗ ಮಧ್ಗಿರಿ ಪಾವುಗಡ ಹುಲಿಯೂರುದುರ್ಗ ಮೊದಲಾದುವು ಗಿರಿದುರ್ಗಗಳು. ಮುಸಲ್ಮಾನರ ಧೂರ್ತತನದದಾಳಿಯಿಂದ ರಜಪೂತ ವೀರರು ಬಹುಮಟ್ಟಿಗೆ ಪಾರಾದುದು ಆರಾವಳೀ ಬೆಟ್ಟ ಗುಡ್ಡಗಳ ದುರ್ಗಮದುರ್ಗಗಳ ಸಹಾಯದಿಂದಲೇ. ಸ್ವರಾಜ್ಯಸ್ಥಾಪಕರಲ್ಲಿ ಅಗ್ರಗಣ್ಯನಾದ ಶಿವಾಜೀಮಹಾರಾಜನು ರಾಜ್ಯಸ್ಥಾಪನೆ ಮಾಡಿದ್ದು ಈ ಗಿರಿದುರ್ಗಗಳ ಸಹಾಯದಿಂದಲೇ. ಕರ್ನಾಟಕ ರಾಜ್ಯಚಂದ್ರನನ್ನು ಆಕ್ರಮಣ ಮಾಡಿದ್ದ ಹೈದರ ಟೀಪು ಎಂಬ ರಾಹು ಕೇತು ಗ್ರಹಗಳ ವಕ್ರದೃಷ್ಟಿಯಿಂದ ಎಷ್ಟೋ ಜನರು ಪಾರಾದುದು ಈ ಗಿರಿದುರ್ಗಗಳಿಂದಲೇ. ಅಂದಮೇಲೇ ನಮ್ಮವರಿಗೆ ಗಿರಿದುರ್ಗ ಸ್ಥಲದುರ್ಗ ಪ್ರಿಯತಮವೆಂದು ಒಪ್ಪಿಕೊಂಡಂತಾಯಿತು.

ಇದರಂತೆಯೇ ಕನ್ನಡನಾಡಿನಲ್ಲಿ ಮಹಾಶೂರರಾದ ವೀರಶೈವ ಅರಸರು ಕೆಳದಿ ಸ್ವಾದಿ ಬಿಳಗಿ ಮೊದಲಾದ ಸ್ಥಳಗಳಲ್ಲಿ ಗಿರಿದುರ್ಗಗಳ ಸಹಾಯದಿಂದ ರಾಜ್ಯಸ್ಥಾಪನೆ ಮಾಡಿ ಧರ್ಮದಿಂದ ರಾಜ್ಯವಾಳಿ ಹೆಸರಾಗಿರುವರು.

ಪ್ರಕೃತದ ಲೇಖನದಲ್ಲಿ ಬಿಳಗಿಯ ರಾಜ್ಯದ ವಿಷಯವನ್ನು ಸ್ಥೂಲರೂಪವಾಗಿ ವಿವರಿಸಿ ಮತ್ತೊಮ್ಮೆ ಇದೇ ವಿಷಯವನ್ನು ಸೂಕ್ಷ್ಮರೂಪದಿಂದ ವಿವೇಚಿಸಲಾಗುವುದು. ಈ ಲೇಖನವನ್ನು ಬರೆದಾಗ ಈ ಊರಿನಲ್ಲಿ ಪೂರ್ವದಿಂದಲೂ ವಾಸಮಾಡುತ್ತಿರುವ ಮ॥ ರಾ॥ ರಾ॥ ರಾಜವೈದ್ಯ ಹರಿಜುಪ್ಪನವರಿಂದಲೂ ಹಿರೇಮಠದ ವೇ॥ ಮುರಿಗಯ್ಯನವರಿಂದಲೂ ಹಲಕೆಲವು ಸಂಗ

ತಿಗಳು ತಿಳಿದುಬಂದುವು. ಇವಕ್ಕಾಗಿ ಅವರಿಗೆ ನಾನುಬಹು ಕೃತಜ್ಞನಾಗಿರುವೆನು.

"ಮಲೆನಾಡು" ಬರೀ ಬೆಟ್ಟ ಗುಡ್ಡ ಕಾಡು ಪ್ರದೇಶವೆಂದಾಗಲೀ ಬರೀ ಮಳೆ ಹುಯ್ಯುವ ಪ್ರದೇಶವೆಂದಾಗಲೀ ತಿಳಿಯುವುದು ಸಾಧುವಲ್ಲ. ನಾವು ಬೈಲುಸೀಮೆಯಲ್ಲಿಯೇ ಕೂಪಕೂರ್ಮದಂತಿದ್ದು ಮಲೆನಾಡಿನ ವಿಷಯವನ್ನು ತಿಳಿಯದೆ ಅದೊಂದು ಕೆಲಸಕ್ಕೆ ಬರದ ಪ್ರದೇಶವೆಂದು ತಿಳಿದಿದ್ದೆವು. ಇಲ್ಲಿಗೆ ಬಂದು ಇಲ್ಲಿ ಸಂಚರಿಸಿ ಇಲ್ಲಿನ ಜನರಲ್ಲಿ ವ್ಯವಹರಿಸಿದ ಮೇಲೆ ನಮ್ಮ ತಪ್ಪು ತಿಳವಳಿಕೆಯು ದೂರವಾಯಿತು.

ಮಲೆನಾಡು ಪ್ರಕೃತಿದೇವಿಯ ಸೌಂದರ್ಯದ ನೆಲವೀಡು. ಇಲ್ಲಿ ನಗಿಡಮರಗಳ ಸೊಂಪು, ಶೈತ್ಯ ಸೌರಭ್ಯ ಮಾಂದ್ಯಗಳೆಂಬ ಗುಣತ್ರಯಗಳಿಂದ ಅಲಂಕೃತನಾದ ವಾಯುದೇವನ ತಂಪು, ಕುಮುದಕಲ್ಹಾರ ಅರವಿಂದ ಮಲ್ಲಿಕಾದಿ ಪುಷ್ಪಗಳಿಂದ ಹೊರಸೂಸುವ ಕಂಪು, ಶುಕ ಪಿಕಾದಿ ಪಕ್ಷಿ ಸಮೂಹದ ಆನಂದಮಯ ಕಲರವದ ಇಂಪು, ಬೆಟ್ಟಗುಟ್ಟಗಳಲ್ಲಿ ಬಿಡುವಿಲ್ಲದೆ ತಡವರಿಸಿ ನಡೆಯುತ್ತಿರುವ ನಿರ್ಝರೋದಕದ ಆರ್ಭಟದ ಪೆಂಪು, ಸುಮನೋಹರವಾದ ಗಿಡಬಳ್ಳಿಗಳ ಗುಂಪು, ಇತ್ಯಾದಿಯಿಂದ ವನಲಕ್ಷ್ಮಿಯ ಬೆಡಗುಬಿನ್ನಾಣಗಳೂ ವಿಭ್ರಮವಿಲಾಸಗಳೂ ಸೌಂದರ್ಯ ಸೌಕುಮಾರ್ಯಗಳೂ ಮನಮುಟ್ಟಿ ನೋಡಿದ ರಸಿಕರ ಚಿತ್ತಕ್ಕೆ ಬಹು ಆನಂದದಾಯಕವಾಗಿರುವುವು.

ಮಲೆನಾಡು ಬರೀ ಸೌಂದರ್ಯಕ್ಕೆ ಮಾತ್ರ ಹೆಸರಾಗಿರದೆ ಸ್ವರಾಜ್ಯ ಸ್ಥಾಪನೆಗೂ ಹೆಸರಾಗಿದೆ. ಬೈಲುಸೀಮೆಯ ಮೇಲೆ ಶತ್ರುರಾಜರು ಸುಲಭವಾಗಿದಾಳಿಟ್ಟು ಜನರನ್ನು ಸದೆಬಡಿಯುವಂತೆ ಮಲೆನಾಡನ್ನು ನುಗ್ಗಲು ಪ್ರಯತ್ನಿಸುವುದು ಸುಲಭವಲ್ಲ. ಇಲ್ಲಿನ ದುರ್ಗಮವಾದ ಕಾಡುಗಳೂ ಭಯಂಕರವಾದ ಕಣಿವೆಗಳೂ ಪ್ರಯಾಣಕ್ಕೆ ಕಷ್ಟಸಾಧ್ಯವಾದ ಘಟ್ಟಬೆಟ್ಟಗಳೂ ಪರಕೀಯರ ಪ್ರವೇಶಕ್ಕೆ ಬಾಧೆಯನ್ನುಂಟು ಮಾಡುವುವು. ಇದರಿಂದಲೇ ನಮ್ಮ ಪೂರ್ವಿಕರು ಇಂತಹ ಪ್ರದೇಶದಲ್ಲಿ ರಾಜ್ಯಸ್ಥಾಪನೆ ಮಾಡಲು ಮನದಂದರು. ಕನ್ನಡನಾಡಿನಲ್ಲಿ ಹೆಸರಾದ ಕೆಳದಿಯ ಅರಸರೂ ಬನವಾಸಿಯ ರಾಜರೂ ಬಿಳಗಿಯ ಒಡೆಯರೂ ರಾಜ್ಯವಾಳಿದ ಸ್ಥಳವಾದರೂ ಇದುವೇ.

ಇನ್ನೂ ಪ್ರಕೃತ ವಿಷಯಕ್ಕೆ ಕಣ್ಣು ಹಾಕೋಣ. ಬಿಳಗಿ ಎಂಬ

ಗ್ರಾಮವು ಕಾರವಾರ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿಗೆ ಸೇರಿದೆ. ಇದು ಸಿದ್ದಾಪುರಕ್ಕೆ ಪಶ್ಚಿಮದಿಕ್ಕಿನಲ್ಲಿ ಎಂಟು ಮೈಲಿ ದೂರದಲ್ಲಿದೆ ಈ ಊರಿಗೆ ನಾಲ್ಕುಕಡೆಯಲ್ಲಿಯೂ ನದಿಗಳ ಆಕ್ರಮಣವಿದೆ. ಒಂದೆಡೆ ಸೋಮನದಿ (ಇದರ ನೀರು ಬಹು ತಂಪು. ಈ ಕಾರಣದಿಂದಲೇ ಈ ನದಿಗೆ ಸೋಮ ನದಿಯೆಂದು ಹೆಸರಾಗಿರಬಹುದು) ಇನ್ನೊಂದೆಡೆ ಬಿಳಗಿ ಹೊಳೆ. ಸ್ವಲ್ಪ ಕಡಮೆಯಾಗಿ ಇವೆರಡು ಜಲಪ್ರವಾಹಗಳೂ ಊರನ್ನು ಸುತ್ತುಗಟ್ಟಿವೆ. ಇದಕ್ಕಾಗಿಯೇ ಈ ಊರಿನ ಹವೆಯು ಬಹು ತಂಪಾಗಿರುತ್ತದೆ.

ಈ ಊರಿನ ಸುತ್ತಲೂ ಗುಟ್ಟಕಾಡುಗಳಿವೆ. ಪ್ರಕೃತಿ ಸೌಂದರ್ಯವು ಬಹು ಚನ್ನಾಗಿದೆ. ಬಿಳಗಿಗೆ ಆರು ಮೈಲು ದೂರದಲ್ಲಿರುವ ಹೊಕ್ಕುಳಿ ಗ್ರಾಮದ ಹಿರೇಗುಟ್ಟವು ಬಹು ಸುಂದರವಾದುದು. ಈ ಗುಟ್ಟದ ಮೇಲೆ ನಿಂತು ನೋಡಿದರೆ ಗೇರುಸೊಪ್ಪೆ ಹೊನ್ನಾವರ ಶರಾವತಿ ಪ್ರವಾಹ ಪಶ್ಚಿಮಕ್ಕಿರುವ ಅರಬ್ಬೀ ಸಮುದ್ರ ಇವೆಲ್ಲ ಕಾಣಿಸುತ್ತವೆ. ಈ ಗುಟ್ಟ ದಮೇಲೆ ನಿಂತರೆ ಸ್ವಲ್ಪ ಹೆಚ್ಚುಕಡಿಮೆ ಈ ಪ್ರಾಂತದ ಸೌಂದರ್ಯ ವನ್ನೆಲ್ಲ ಸುಲಭವಾಗಿ ನೋಡಬಹುದು. ಅರಬ್ಬೀ ಸಮುದ್ರವು ಸಾಯಂ ಕಾಲದ ವೇಳೆಯಲ್ಲಿ ಚನ್ನಾಗಿ ಕಾಣಿಸುತ್ತದೆ. ಈ ಗುಟ್ಟಕ್ಕೆ ಹಲವು ಮಂದಿ ಅಧಿಕಾರಿಗಳು ಬಂದುಹೋಗುತ್ತಾರೆ. ಬಂದವರು ಕುಳಿತುಕೊ ಳ್ಳಲು ವೇದಿಕೆಯೊಂದನ್ನು ಸರ್ಕಾರದವರು ಕಟ್ಟಿಸಿರುವರು. ಇಲ್ಲಿ ಒಂದು ಬಾವುಟವನ್ನೂ ನಿಲ್ಲಿಸಿರುವರು. ಹೊನ್ನಾವರದಲ್ಲಿ ನಿಂತು ದೂರದರ್ಶಕ ಯಂತ್ರದ ಸಹಾಯದಿಂದ ನೋಡಿದರೆ ಈ ನಿಶಾನಿಯು ಕಾಣುವುದಂತೆ.

ಬಿಳಗಿಯ ರಾಜ್ಯವು ಎಷ್ಟು ವಿಸ್ತಾರವಾಗಿತ್ತೆಂದು ತಿಳಿದು ಹೇಳಲು ನಮಗೆ ತಕ್ಕಷ್ಟು ಸಾಧನಗಳಿಲ್ಲ. ಆದರೂ ಇಲ್ಲಿನ ರತ್ನತ್ರಯಬಸದಿ ವಿರೂಪಾಕ್ಷ ದೇವಾಲಯ ಇಲ್ಲಿರುವ ಮೂರು ಶಾಸನಗಳನ್ನು ಓದಿನೋ ಡಿದುದರ ಅನುಭವದ ಮೇಲಿನಿಂದ ಈ ರಾಜ್ಯವು ಈಗಿನ ಸಿದ್ದಾಪುರದ ತಾಲೂಕು ಮೈಸೂರು ಸೀಮೆಗೆ ಸೇರಿದ ಸೊರಬಸಾಗರ ತಾಲೂಕು ಗಳ ಸ್ವಲ್ಪ ಸ್ವಲ್ಪ ಭಾಗ ಇಷ್ಟನ್ನು ಒಳಗೊಂಡ ಒಂದು ಪುಟ್ಟ ನಾಡಾಗಿ ತ್ತೆಂದು ಹೇಳಬಹುದು. ಲೋಕವಿಖ್ಯಾತವಾದ ಗೇರುಸೊಪ್ಪೆಯ ಜಲಪಾ ತವೂ ಈ ರಾಜ್ಯದ ಎಲ್ಲೆಯೊಳಗೆ ಇದ್ದಿತು. ಈ ರಾಜ್ಯದ ಎಲ್ಲೆಗೂ ಕೆಳದೀ ರಾಜ್ಯಗಳ ಎಲ್ಲೆಗೂ ಮಧ್ಯೆರಾಜ್ಯವಿಭಾಗ ಸೂಚಕಗಳಾದ "ಮುಕ್ಕೊಡೆಯ ಕಲ್ಲು"ಗಳಿವೆ.

ಬಿಳಗಿ ಎಂಬ ಈ ಊರಿಗೆ ಸಂಸ್ಕೃತದಲ್ಲಿ "ಶ್ವೇತಪುರ" ಎಂದು ಹೆಸರಿದೆ. ಶಾಸನಗಳಲ್ಲಿಯೂ ಶ್ವೇತಪುರ, ಬಿಳಗಿ ಎಂಬ ಎರಡು ರೀತಿಯಾದ ಹೆಸರುಗಳೂ ಬರೆಯಲ್ಪಟ್ಟವೆ. ಇದನ್ನು ಕಟ್ಟಿಸಿದವನು ಐಸೂರಿನಲ್ಲಿ ಹುಟ್ಟಿ ಬೆಳೆದ ಘಂಟಣ್ಣೊಡೆಯನೆಂಬ ಜೈನ ರಾಜನು. ಇದು ಜಿನಶಾಸನದಿಂದ ತಿಳಿದು ಬರುತ್ತದೆ. ಈ ಘಂಟಣ್ಣೊಡೆಯನೇ ಮುಂದೆ ಅಮ್ಮಣ್ಣೊಡೆಯನೆಂದು ಪ್ರಸಿದ್ಧನಾದಂತೆ ಶಾಸನವು ಹೇಳುವುದು. "ಘಂಟಣ್ಣೊಡೆಯರಮ್ಮಣ್ಣೊಡೆಯರೆಂಬ ನಾಮಾಂತರದಿಂ ಪ್ರಸಿದ್ಧನಾಗಿ ತನ್ನ ರಾಜ್ಯದೊಳ್ ಪ್ರಸಿದ್ಧವಾದ ಸೋಮನದೀ ತೀರದೊಳ್ ಬಿಳಗಿಯೆಂಬ ಪಟ್ಟಣವಂ ಕಟ್ಟಿಸಿಯುದರೊಳ್" ಇತ್ಯಾದಿ. ಈ ಬರಹವು ಬಿಳಗಿಯ ರತ್ನತ್ರಯ ಬಸದಿಯಲ್ಲಿಯ ಎರಡನೇ ಶಾಸನದ್ದು.

ಬಿಳಗಿಯು ಈಗ ಚಿಕ್ಕ ಊರಾಗಿದ್ದರೂ ಹಿಂದೆ ರಾಜಧಾನಿಯಾಗಿದ್ದಾಗ ಬಹು ದೊಡ್ಡ ಪಟ್ಟಣವಾಗಿದ್ದಂತೆ ಕಂಡು ಬರುತ್ತದೆ. ಈ ಪಟ್ಟಣದ ರಾಜಬೀದಿಯ ಉದ್ದ ಸುಮಾರು ೪॥ ಮೈಲು. ಇಲ್ಲಿ ೪॥ ಸಾವಿರ ಮನೆಗಳಿದ್ದಂತೆ ತಿಳಿದು ಬರುತ್ತದೆ. ಈ ಮನೆಗಳ ಲೆಕ್ಕದ ಮೇಲಿನಿಂದ ಮಲೆನಾಡಿನ ಗೃಹಸ್ಥರ ವಸತಿ ಮೇಲಿನಿಂದ ಊಹಿಸುವುದಾದರೆ ೨೫-೩೦ ಸಾವಿರಕ್ಕೆ ಕಡಿಮೆಯಿಲ್ಲದಷ್ಟು ಜನರಿರಬೇಕೆಂದು ಊಹಿಸಬಹುದು. ಈಗಿನ ಬಿಳಗಿಗೂ ಸಿದ್ದಾಪುರಕ್ಕೂ ಮಧ್ಯೆ "ಬೇಡಕಣ್ಣಿ" ಎಂಬ ಗ್ರಾಮವಿದೆ. ಇದು ಬಿಳಗಿಯ ರಾಜರು ನಗರ ರಕ್ಷಣೆಗಾಗಿ ಇಟ್ಟಿದ್ದ ಬೇಡರ (ಇವರು ಶೂರರೂ ನಂಬಿಗಸ್ಥರೂ ಆದ ಸೈನಿಕರು) ಪಾಳೆಯು. ಇದೊಂದು ಕಣಿವೆಯ ಪ್ರದೇಶವಾದುದರಿಂದ ಇವಕ್ಕೆ ಬೇಡರ ಕಣಿವೆ ಎಂಬ ಹೆಸರಿದ್ದಿತು. ಅದು ಈಗ ಜನರ ಬಾಯಿಗೆ ಬಿದ್ದು ರೂಪುಗೆಟ್ಟು "ಬೇಡಕಣ್ಣಿ' ಎಂದಾಗಿದೆ. ಈ ಬೇಡರ ಕಣಿವೆಯಲ್ಲಿ ಕೋಟೆಯ ಬಾಗಿಲಿವೆ. ಬಿಳಗಿಗೆ ಹೋಗುವ ಜನರು ಇಲ್ಲಿಂದಲೇ ಹೋಗಬೇಕಾಗಿದೆ. ಇಲ್ಲಿ ಕೋಟೆಯು ಕಟ್ಟಲ್ಪಟ್ಟಿರುವುದರಿಂದಲೂ ಲಿಂಗಾಯತರ ಮಹಂತಿನ ಮಠವಿರುವುದರಿಂದಲೂ ಬಿಳಗಿಯ ಊರು ಇಲ್ಲಿಂದ ಮೊದಲಾಗುವುದೆಂದು ಊಹಿಸುವುದು ಸಯುಕ್ತಿಕವಾಗಿದೆ. ಇಲ್ಲಿಂದ ಮೊದಲಾದ ದೊಡ್ಡ ಬೀದಿಯು ಸುಮಾರು ೫ ಮೈಲು ದೂರದಲ್ಲಿ ಕುಮಟಾಕ್ಕೆ ಹೋಗುವ ಮಾರ್ಗದಲ್ಲಿರುವ ಗಣೇಶನ ಗುಡಿಯ ವರೆಗೆ ವ್ಯಾಪಿಸಿದ್ದಿತು. ಈ ಊರಿನ ಬಹು ಭಾಗವು ಈಗ ಕಾಡಿನಲ್ಲಿ ಸೇರಿ ಹೋಗಿದೆ. ಒಟ್ಟಿನಲ್ಲಿ ಈ ನಗರ ನಿರ್ಮಾಣವು ಪ್ರಸಿದ್ಧನೂ ಚತುರನೂ ಆದ ಶಿಲ್ಪಿಯಿಂದ ಸ್ಥಾಪಿ

ತವಾಗಿರಬೇಕೆಂದು ಊಹಿಸಲು ಕಾರಣಗಳಿವೆ.

ಬಿಳಗಿಯ ರಾಜ್ಯವನ್ನು ಸ್ಥಾಪಿಸಿದವರೂ ಮೊದ ಮೊದಲು ಆಳಿದವರೂ ಜೈನರೆಂಬುದು ನಿರ್ವಿವಾದವು. ಅಮ್ಮಣ್ಣೊಡೆಯ, ತಿಮ್ಮರಸಒಡೆಯ ನರಸಿಂಹಭೂಪ, ವೀರೇಂದ್ರಭೂಪ, ರಂಗರಾಜ, ಘಂಟೇಂದ್ರರಾಜ ಮೊದಲಾದವರು ದರ್ಪದಿಂದಲೂ ಧರ್ಮದಿಂದಲೂ ರಾಜ್ಯಭಾರ ಮಾಡಿದರೆಂದು ಕಂಡು ಬರುತ್ತದೆ ಇವರು ಐಸೂರಿನ ಜೈನರಾಜರ ವಂಶಿಕರೆಂದು ಶಾಸನವು ಹೇಳುವುದು. ಈ ಐಸೂರೆಂಬುದು ಬಿಳಗಿಗೆ ದಕ್ಷಿಣಕ್ಕೆ ಸುಮಾರು ೧೦ ಮೈಲಿ ದೂರದಲ್ಲಿದೆ. ಇಲ್ಲಿಗೆ ನಾನು ಖುದ್ದಾಗಿ ಹೋಗಿ ನೋಡಿದೆನು. ಈ ಊರು ಕಾಡಿನಲ್ಲಿ ಸೇರಿ ಹೋಗಿದೆ. ಜೈನರ ಬಸತಿಗಳೆಲ್ಲ ಹಾಳಾಗಿ ಹೋಗಿವೆ. ಜಿನಮೂರ್ತಿಗಳು ಪುಡಿಪುಡಿಯಾಗಿ ಬಿದ್ದಿವೆ. ಇದು ಯಾವಾಗ ಯಾರಿಂದಾಯಿತೋ ನಮಗೆ ತಿಳಿದು ಬಂದಿಲ್ಲ. ಇಲ್ಲಿ ಒಂದು ಶಿವಾಲಯವೂ ವೀರಭದ್ರದೇವಾಲಯವೂ ಇವೆ. ಇವು ಬಿಳಗಿಯ ವೀರಶೈವರಾಜರ ಮನೆ ದೇವರುಗಳಂತೆ. ಈ ದೇವಾಲಯಗಳಿಗೆ ಸರಕಾರದಿಂದ ಉಂಬಳಿಯುಂಟು.

ರಾಜ್ಯಭಾರವು ಸ್ವಲ್ಪ ಕಾಲವಾದ ಮೇಲೆ ವೀರಶೈವ ರಾಜರುಗಳ ಕೈಗೆ ಸಿಕ್ಕಿ ಕೊನೆಯ ವರೆಗೂ ಅವರಿಂದಲೇ ಪಾಲಿಸಲ್ಪಟ್ಟಿತು. ಮೊದಲು ಜೈನರದಾಗಿದ್ದುದು ವೀರಶೈವರಿಗೆ ಹ್ಯಾಗೆ ಸಿಕ್ಕಿತೆಂದು ನಿರ್ಣಯಿಸಿ ಹೇಳಲಾಗುವುದಿಲ್ಲ. ಕೆಲವರು ಜೈನರಾಜರೇ ವೀರಶೈವ ಮತದ ಪ್ರಾಬಲ್ಯಕಾಲದಲ್ಲಿ ಶಿವ ದೀಕ್ಷೆಯನ್ನು ಹೊಂದಿ ಲಿಂಗಾಂಗಿಗಳಾದರೆಂದು ಹೇಳುತ್ತಾರೆ. ಮತ್ತೆ ಕೆಲವರು ಸ್ವಾದಿಯ ವೀರಶೈವ ರಾಜರು ಅನ್ಯ ಮತೀಯರಾದ ಜೈನ ರಾಜರನ್ನು ಜಯಿಸಿ ತಮ್ಮ ಬಂಧುಗಳನ್ನು ಇಲ್ಲಿಗೆ ಅರಸರನ್ನಾಗಿ ಮಾಡಿದರೆಂದು ಹೇಳುತ್ತಾರೆ. ನನಗಾದರೋ ಮೊದಲನೆಯವರ ಮಾತೇ, ಜೈನರು ಶೈವರಾದರೆಂಬ ಮಾತೇ, ನ್ಯಾಯವಾಗಿರುವಂತೆ ತೋರುತ್ತದೆ. ಈ ಪುಷ್ಟೀಕರಣಕ್ಕೆ ಕೆಳಗಿನ ಕಾರಣಗಳು ಸಹಾಯ ಕೊಡುತ್ತವೆ

೧. ಜೈನರಾಜರ ಜನ್ಮ ಸ್ಥಲವಾದ ಐಸೂರಿನಲ್ಲಿ ವೀರಶೈವ ರಾಜರು ತಮ್ಮ ಮನೆ ದೇವರುಗಳನ್ನು ಸ್ಥಾಪಿಸಲು ಕಾರಣವೇನು? ಇದು ಅವರ ಪುರಾತನ ಜನ್ಮಸ್ಥಳದ ಅಭಿಮಾನದಿಂದಲೇ ಎಂದು ಕಂಡುಬರುವುದು.

೨. ಜೈನರಿಗೂ ವೀರಶೈವರಿಗೂ ಈ ರಾಜ್ಯಕ್ಕಾಗಿ ಯುದ್ಧವಾದ ದಾಖಲೆಗಳು ಸಿಕ್ಕುವದಿಲ್ಲ.

೩. ಬಿಳಗಿಯ ರತ್ನತ್ರಯ ಜಿನಾಲಯದ ಶಾಸನಗಳಿಗೂ ವಿರೂಪಾಕ್ಷ

ದೇವಾಲಯದ ಶಿವ ಶಾಸನಕ್ಕೂ (ಇದು ವೀರಶೈವ ರಾಜರದು) ನಿಕಟ ಸಂಬಂಧವಿದ್ದು ಜಿನ ಶಾಸನದ ಪದ್ಯಗಳೇ ಶಿವ ಶಾಸನದಲ್ಲಿ ರೂಪಾಂತರ ಹೊಂದಿವೆ. ಇತ್ಯಾದಿ ಕಾರಣಗಳಿಂದ ಜೈನರೇ ಶೈವರಾದರೆಂದು ಹೇಳು ವದೇ ಸಮಂಜಸವಾಗಿದೆ. ಇವೆಲ್ಲಕ್ಕೂ ಮುಖ್ಯವಾಗಿ ಅರಮನೆಯು ವೀರ ಶೈವರದು ಜೈನರದು ಎಂದು ಬೇರೆ ಬೇರೆ ಕಂಡು ಬರುತ್ತಿಲ್ಲ. ಒಂದೇ ಒಂದಿದೆ. ಜೈನರನ್ನು ಜಯಿಸಿ ಶೈವರು ರಾಜ್ಯಾಕ್ರಮಣ ಮಾಡಿದ್ದರೆ ಜೈನ ರಾಜರ ಅರಮನೆಯನ್ನು ಬಿಟ್ಟು ತಮ್ಮ ಕುಲಾಚಾರಕ್ಕೆ ತಕ್ಕದಾದ ಬೇರೊಂದು ರಾಜಭವನವನ್ನು ಕಟ್ಟಿಸಬೇಕಾಗಿತ್ತು. ಈ ಕುರುಹು ಇಲ್ಲಿ ಇಲ್ಲದೇ ಇರುವದರಿಂದ ಜೈನರೇ ಶೈವರಾದರೆಂಬ ಊಹೆಯು ಸಾರ್ಥಕವಾ ಗಲು ಕಾರಣವಿದೆ.

ಯಾವ ಜೈನರಾಜನು ವೀರಶೈವ ದೀಕ್ಷೆಯನ್ನು ತೆಗೆದುಕೊಂಡನೆಂ ದಾಗಲಿ ಅಥವಾ ಯಾವ ವೀರಶೈವ ಭೂಮಿಪನು ಇಲ್ಲಿ ರಾಜ್ಯಭಾರಕ್ಕೆ ಮೊದಲು ಮಾಡಿದನೆಂದಾಗಲಿ ಅದು ಯಾವ ವರ್ಷ ಯಾವ ಮಾಸ ತಿಥಿ ಗಳಲ್ಲಾಯಿತೆಂದಾಗಲಿ ನಮಗೆ ತಿಳಿದು ಬಂದಿಲ್ಲ. ಪರಂತು ಯಾವನೋ ಒಬ್ಬನು ಯಾವದೋ ಒಂದು ಮಧ್ಯಕಾಲದಲ್ಲಿ ಮತಾಂತರವಾಗಿ ಆಳಿದ ನೆಂದು ಊಹಿಸಲಿಕ್ಕೆ ಈ ಶಾಸನಗಳ ಮೇಲಿನಿಂದ ಅವಕಾಶವುಂಟು

ಇಲ್ಲಿ ಆಳುತ್ತಿದ್ದ ಅರಸರಿಗೆ "ವೈರಿವಧೂ ವೈಧವ್ಯದೀಕ್ಷಾಚಾರ್ಯರು" ಎಂಬ ಬಿರುದಿದ್ದಂತೆ ಶಾಸನಗಳು ಹೇಳುತ್ತವೆ. ಇವರ ಮುಖ್ಯ ನಾಣ್ಯಕ್ಕೆ "ಗದ್ಯಾಣ" ವೆಂದೂ ಇವರ ರಾಜ್ಯದ ಮೇರೆಯ ಕಲ್ಲಿಗೆ "ಮುಕ್ಕೊಡೆ" ಯ ಕಲ್ಲೆಂದೂ ಹೆಸರಿದ್ದಂತೆ ಶಾಸನಗಳು ಹೇಳುತ್ತವೆ. ಇಲ್ಲಿನ ರಾಜರುಗಳ ಹೆಸರುಗಳ ಮುಂದೆ ಮೈಸೂರರಸರಿಗಿರುವಂತೆ "ಒಡೆಯರು" ಎಂಬ ಬಿರು ದು ಇರುವದು. ಈ ಬಿರುದು ಜೈನ ಶೈವರಾಜರಿಬ್ಬರಿಗೂ ಇದೆ. ಇದು ಈಗಿಗೂ ನಡೆದು ಬಂದಿದೆ.

ಇಲ್ಲಿ ಹಲವು ಮಂದಿ ವೀರಶೈವ ರಾಜರು ರಾಜ್ಯಭಾರವನ್ನು ದಕ್ಷತೆ ಯಿಂದಲೂ ನಿಷ್ಪಕ್ಷಪಾತ ಬುದ್ಧಿಯಿಂದಲೂ ಮಾಡಿದರೆಂದು ತೋರಿ ಬರು ವುದು. ಇಲ್ಲಿಯ ರಾಣಿವಾಸದವರ ಪೈಕಿ ಸಿದ್ದಮ್ಮಾಜಿ ಎಂಬೊಬ್ಬಳು ಈಗ ತಾಲೂಕು ಮುಖ್ಯ ಸ್ಥಳವಾಗಿರುವ "ಸಿದ್ದಾಪುರ" ವನ್ನೂ ಇಲ್ಲಿ ಒಂದು ಸಿದ್ಧ ಗಣಪತಿಯ ದೇವಾಲಯವನ್ನೂ ಕಟ್ಟಿಸಿದಳಂತೆ. ಈ ಸಿದ್ದಾಪುರವು ಈಗೀಗ ಪ್ರಬಲವಾಗ ಹತ್ತಿದೆ. ವೀರಪ್ಪೊಡೆಯರ ರಾಣಿವಾಸವಾದ ವೀರಮ್ಮನ

ವರು ತಮ್ಮ ಪತಿಗೆ ಸ್ವರ್ಗಪದವು ಪ್ರಾಪ್ತಿಯಾಗಲೆಂದು ಇಲ್ಲಿ ಒಂದು ಭವ್ಯ ವಾದ ವಿರೂಪಾಕ್ಷದೇವಾಲಯನ್ನೂ ಕಟ್ಟಿಸಿರುವರು. ಇಲ್ಲಿಯ ಲಿಂಗವಂತ ರಾಜರು ಕೆಳದಿಯ ನೃಪರಂತೆ ನಿಷ್ಪಕ್ಷಪಾತಿಗಳಾದುದರಿಂದ ಬಿಳಗಿಯಲ್ಲಿ ಬ್ರಾಹ್ಮಣರಿಗೊಂದು ಅಗ್ರಹಾರವನ್ನು ಕಟ್ಟಿಸಿ ಕೊಟ್ಟು ಅಲ್ಲಿ ಒಂದು ಶಿಲಾ ಮಯ ಲಕ್ಷ್ಮೀಕಾಂತದೇವಾಲಯುವನ್ನೂ ಕಟ್ಟಿಸಿ ಕೊಟ್ಟಿರುವರು. ಇದು ಇಂದಿಗೂ ಉತ್ತಮ ರೀತಿಯಲ್ಲಿದೆ. ಇದಲ್ಲವೇ ರಾಜಧರ್ಮ?

ಇಲ್ಲಿ ಎಲ್ಲಿಂದ ಎಲ್ಲಿಯ ವರೆಗೆ ಯಾವ ಯಾವ ವೀರಶೈವ ರಾಜರು ಎಷ್ಟೆಷ್ಟು ಕಾಲ ಆಳಿದರೆಂಬುದನ್ನು ತಿಳಿಯಲು ಸಾಧ್ಯವಿಲ್ಲ. "ಕೆಳದೀ ನೃಪ ವಿಜಯ" ದಂತೆಯೇ "ಬಿಳಗೀ ನೃಪ ವಿಜಯ" ವೆಂಬುದೊಂದಿದೆಯೆಂದೂ ಇದರ ಒಂದು ಜೀರ್ಣ ಪ್ರತಿಯು ಮದ್ರಾಸಿನ ಪ್ರಾಚೀನ ಪುಸ್ತಕಾಲಯದಲ್ಲಿ ದೆಯೆಂದೂ "ಶಿವಾನುಭವ" ದ ಸಂಪಾದಕ ಮಹಾಶಯರಿಂದ ನನಗೆ ತಿಳಿದು ಬಂದ ಮೇಲೆ ಇಲ್ಲೆಲ್ಲಾ ವಿಚಾರಿಸಿ ನೋಡಿದೆನು. ಈ ಪ್ರಾಂತ್ಯದಲ್ಲಿ ಅದರ ಗಂಥವೇ ಸಿಗಲಿಲ್ಲ. ಕೆಲವರು ಆ ಕಾವ್ಯವು "ಸ್ವಾದಿ" ಪ್ರಾಂತ್ಯದಲ್ಲಿ ಸಿಕ್ಕುವುದೆನ್ನುವರು. ಇದರ ತಥ್ಯಾಂಶವು ಅಲ್ಲಿಗೆ ಹೋದ ಮೇಲೆ ಗೊತ್ತಾ ಗುವದು. ಒಂದು ವೇಳೆ ಈ ಗ್ರಂಥವು ನಮಗೆ ಸಿಕ್ಕುದಾದರೆ ಈ ರಾಜರ ಚರಿತ್ರೆಯನ್ನು ವಿಸ್ತಾರವಾಗಿ ತಿಳಿಯಲು ಅವಕಾಶವಾಗುವದು.

ಇಲ್ಲಿ ಆಳಿದ ರಾಜರ ಪರಾಕ್ರಮವನ್ನು ತೋರಿಸುವ ಕೆಲ ಪದ್ಯಗಳು ಶಾಸನಗಳಲ್ಲಿ ಸಿಕ್ಕುವವು. ಇಲ್ಲಿ ಆಳಿದ ವೀರಶೈವ ರಾಜರಲ್ಲಿ ಒಬ್ಬನಾದ ನರಸೇಂದ್ರ ಒಡೆಯನ ಪರಾಕ್ರಮವನ್ನು ಶಾಸನದಲ್ಲಿ ಈ ಪ್ರಕಾರ ಹೇಳಿರು ವರು. "ಮತ್ತ ಮಾತನ ಮಾಹಾತ್ಮ್ಯವೆಂತೆನೆ,

ವೃ॥ ಮೂಲೋಕಕ್ಕೆಂದು ಮೇಲೆತ್ತಿದ ವಿಪುಲ ಸಿತಚ್ಛತ್ರವೆಂಬಂತೆ ಸದ್ಧ।
ರ್ಮಾಲಂಬಂ ಕೀರ್ತಿಯೊಪ್ಪಲ್ಕದರ ನೆಳಲವೊಲ್ ಸಂತತಂತೋ
ರ್ಪದಿಂತೀ॥
ನೀಲಾಭ್ರಂಪದ್ಮರಾಗೋ ಜ್ವಲ ಕಲಶಮೆನಲ್ ತತ್ಪ್ರತಾಪಾರ್ಕನಲ್ಲೀ।
ಮೇಲಿರ್ಪಂ ತಾನೆನಲ್ ತನ್ನರಸ ನೃಪತಿಯಂ ಬಣ್ಣಿಸಲ್ಬಲ್ಲನಾವಂ॥೧॥

ಆ ನರಸೇಂದ್ರ ಭೂಪನ ಕೈಗತ್ತಿಯು ಹ್ಯಾಗಿತ್ತೆಂಬುದನ್ನು ಶಾಸ ನವು ಬಹು ಚನ್ನಾಗಿ ಹೇಳುವದು.

ವೃ॥ ಹರಭಾಳಾಖಿಳ ನೇತ್ರಾಗ್ನಿಯೊಳತಿ ಭರದಿಂಪ್ರೇತರಾಟ್ತೀಕ್ಷಕಂತ।
ದ್ಗರಳಾಯಾ ಪಿಂಡಮಂತಾಪಿಸಿಫಣಿ ವಿಷನಾಗ್ರಾವದೊಳ್ಸ್ಫೂರ್ಜದುಪ್ರ।

ಸ್ಫುರದುದ್ವೃಸ್ಫೋಜಿಸಿ ಹಿತದೊಳೆ ಸಮೆದದಂ ತಂದುತಾಂ ಕಾಣ್ಕೆ
ಯೆಂದೀ।
ನರಸೇಂದ್ರಂಗಿತ್ತ ವೊಲೊಪ್ಪಿದುದು ಹೃತರಿಪು ಪ್ರಾಣ ಮುದ್ಯತ್ಕೃ
ಪಾಣಂ ॥೨॥

ಶಾಸನದಲ್ಲಿ ಇನ್ನೂ ಮನೋಹರವಾದ ಸಂಸ್ಕೃತ ಕನ್ನಡ ಪದ್ಯಗಳಿದ್ದರೂ ಲೇಖನ ವಿಸ್ತಾರ ಭಯದಿಂದ ಎರಡನ್ನು ಮಾತ್ರ ಉದಾಹರಿಸಿರುವೆನು. ಈ ಪದ್ಯಗಳು ಸ್ವಲ್ಪ ಮಟ್ಟಿಗೆ ಉತ್ಪ್ರೇಕ್ಷೆಯಾಗಿದ್ದರೂ ಸಂಪೂರ್ಣವಾಗಿ ಉತ್ಪ್ರೇಕ್ಷೆಯಿಲ್ಲ.

ಬಿಳಗಿಯ ರಾಜರು ಕೆಲವು ಕಾಲ ಸ್ವತಂತ್ರರಾಗಿಯೂ ಆ ಮೇಲೆ ಕೆಳದಿ, ಸ್ವಾದಿ ರಾಜರ ಅಧೀನರಾಗಿಯೂ ರಾಜ್ಯವಾಳುತ್ತಿದ್ದರು. ಕ್ರಿ. ಶ. ೧೭೬೯ ರಲ್ಲಿ ಶ್ರೀರಂಗ ಪಟ್ಟಣದಲ್ಲಿ ಆಳುತ್ತಿದ್ದ ಟೀಪು ಸುಲ್ತಾನನು ಮಲೆನಾಡನ್ನು ಕೊಳ್ಳೆ ಹೊಡೆವ ಭರದಲ್ಲಿ ಬಿಳಗಿಯ ಸಂಸ್ಥಾನವನ್ನೂ ಮಣ್ಣು ಮುಕ್ಕಿಸಿದನು. ಅಲ್ಲಿಂದೀಚೆಗೆ ಇದು ನಾಮಾವಶೇಷವಾಯಿತು.

ಟೀಪುವು ಇಲ್ಲಿಗೆ ಬಂದಾಗ ಇಲ್ಲಿ ಶಾಂತವೀರ ರಾಜರು ಆಳುತ್ತಿದ್ದರಂತೆ. ಇವರು ಮುಸಲ್ಮಾನರ ದಂಡು ಬಂದ ವಾರ್ತೆಯನ್ನು ಕೇಳಿ ದೇಶತ್ಯಾಗ ಮಾಡಿದರು. ಹೀಗೆ ಹೋದವರು ಹತ್ತಾರುವರ್ಷಗಳ ಮತ್ತೆ ಇಲ್ಲಿಗೆ ಬಂದರೆಂದು ವಾರ್ತೆಯಿದೆ.

ಶಾಂತವೀರ ರಾಜರು ಮತ್ತೆ ಬರುವದರೊಳಗಾಗಿ ಶ್ರೀರಂಗ ಪಟ್ಟಣದಲ್ಲಿ ಕ್ರಿ. ಶ. ೧೭೯೯ ರಲ್ಲಿಯೇ ಇಂಗ್ಲಿಷರು ಟೀಪುವನ್ನು ಕೊಂದು ಅವನ ರಾಜ್ಯದಲ್ಲಿ ಸ್ವಲ್ಪ ಭಾಗವನ್ನು ಮೈಸೂರಿನ ಅರಸರಿಗೆ ಕೊಟ್ಟು ಮತ್ತುಳಿದುದನ್ನು ತಾವೂ ನೈಜಾಮರೂ ಹಂಚಿಕೊಂಡರಷ್ಟೇ. ಆ ಸಮಯದಲ್ಲಿ ಕಾರವಾರ ಜಿಲ್ಲೆಯೂ ಇಂಗ್ಲಿಷರಿಗೆ ಸೇರಿದುದರಿಂದ ತದಂತರ್ಗತ ಬಿಳಗಿ ರಾಜ್ಯವೂ ಸೇರಿಹೋಯಿತು. ಶಾಂತವೀರರಾಜರು ಹಿಂತಿರುಗಿ ಬಂದು ತಾವು ಪ್ರಾಚೀನ ಕಾಲದಿಂದಲೂ ಆಳಿದವರೆಂತಲೂ ತಮಗೆ ಮಾನ ಮರ್ಯಾದೆಯನ್ನು ನಡಿಸಬೇಕೆಂತಲೂ ಆಗಿನ ಆಂಗ್ಲಾಧಿಕಾರಿಗಳನ್ನು ಕೇಳಿಕೊಂಡದರ ಮೇಲೆ ಆಗಿನ ಅಧಿಕಾರಿಗಳು ಇವರಿಗೆ ಜೀವನಕ್ಕೆ ತಕ್ಕಷ್ಟು ಭೂಮಿ ಕಾಣ್ಕೆಯನ್ನೂ ತಿಂಗಳಿಗೆ ಇನ್ನೂರು ರೂಪಾಯಿ ವಿಶ್ರಾಂತಿ ಧನವನ್ನೂ ಕೊಡುವಂತೆ ವಾಗ್ದಾನ ಮಾಡಿ ಅದರಂತೆ ಅವರ ಜೀವ ಮಾನದ ವರೆಗೂ ಕೊಡುತ್ತಿದ್ದರಂತೆ. ಆ ಮೇಲೆ ಅವರ ಮಕ್ಕಳು ಸೋಮಶೇಖರ ಒಡೆಯರಿಗೆ ಅದರಲ್ಲಿ

ಅರ್ಧವಾಯಿತು. ಅನಂತರ ಅವರ ಮಕ್ಕಳು ಬಸವಲಿಂಗ ರಾಜರಿಗೆ ಅದ ರಲ್ಲಿ ಅರ್ಧವಾಯಿತು. ಇವರೂ ಶಿವಾಧೀನವಾದ ಮೇಲೆ ಇವರ ಪತ್ನಿ ಯೊನ್ನೆ ತಾನೇ ದಿವಂಗತರಾದ ಸೌಭಧ್ರಮ್ಮಾಜಿಯವರಿಗೆ ತಿಂಗಳಿಗೆ ೩೦ರೂ ಪಾಯಿನಷ್ಟು ಜೀವನವು ಕೊಡಲ್ಪಡುತ್ತಿತ್ತು.

ಶಾಂತವೀರ ರಾಜರ ಸೊಸೆಯವರಾದ ಚನ್ನಮ್ಮಾಜಿಯವರು ಬಹು ಪರಾಕ್ರಮವುಳ್ಳ ಮಹಿಳೆಯರಾಗಿದ್ದರಂತೆ. ಇವರಿಗೆ ಕುದುರೇ ಸವಾರಿ, ಶಿಕಾರಿ ಹೊಡೆಯುವದು ಮೊದಲಾದ ರಾಜೋಚಿತ ಕಲೆಗಳಲ್ಲಿಯೂ ಚಿತ್ರ ಗಾಯನ ಮೊದಲಾದ ಚತುರ ರಸಿಕ ಕಲೆಗಳಲ್ಲಿಯೂ ಇದ್ದ ಪಾಂಡಿತ್ಯ ವನ್ನು ನೋಡಿ ಎಷ್ಟೋ ಆಂಗ್ಲ ವೀರರೂ ಮೂಗಿನ ಮೇಲೆ ಬೆರಳಿಟ್ಟುಕೊಂ ಡಿರುವರೆಂದು ತಿಳಿದು ಬರುವುದು.

ಇಲ್ಲಿ ಬಹು ಬೆಲೆ ಬಾಳುವ ಯಾಲಕ್ಕಿ ಮೆಣಸು ಅಡಕೆ ಮುಂತಾದ ಜನೋಪಕಾರಿ ಪದಾರ್ಥಗಳು ಬೆಳೆಯಾಗುತ್ತವೆ. ಕಾಡುಗಳಲ್ಲಿ ಒಳ್ಳೊಳ್ಳೇ ಮರ ಮುಂಡಿಗಳು ಬೆಳೆಯುತ್ತವೆ. ಇಲ್ಲಿನ ಜನರು ಸಾಮಾನ್ಯವಾಗಿ ವ್ಯವಸಾಯದಿಂದಲೇ ಜೀವಿಸುವರು. ಮತ್ತೆ ಕೆಲವರು ಮಾತ್ರ ಅಡಕೆ ಮೆಣಸು ಯಾಲಕ್ಕಿ ಈ ವ್ಯಾಪಾರದಿಂದ ಜೀವಿಸುವರು. ಕೈಗಾರಿಕೆ ಅಷ್ಟಾಗಿ ನಡೆಯುವದಿಲ್ಲ.

**ಬಿಳಗಿ ರಾಜರ ಬಾಂಧವ್ಯ**:-ಬಿಳಗಿಯ ಅರಸರಿಗೂ ಕೊಡಗು ಪುಂಗನೂರು ಹಾಗಲ್ವಾಡಿ ಮೊದಲಾದೆಡೆಗಳಲ್ಲಿ ಆಳುತ್ತಿದ್ದ ವೀರಶೈವ ರಾಜರಿಗೂ ದೇಹ ಸಂಬಂಧ ವಿದ್ದಂತೆ ಕಂಡು ಬರುತ್ತದೆ.

**ಶಾಸನಗಳು**:-ಇಲ್ಲಿರುವ ಶಾಸನಗಳು ಮೂರು. ಎರಡು ಬಸದಿಯ ಲ್ಲಿರುವುವು, ಒಂದು ವಿರುಪಾಕ್ಷ ದೇವಾಲಯದಲ್ಲಿರುವುದು. ಇವುಗಳು ಈ ರಾಜ್ಯ ವಿಷಯವನ್ನು ತಿಳಿಯಲಿಕ್ಕೆ ಬಹುಮಟ್ಟಿಗೆ ಸಹಾಯವಾಗು ತ್ತವೆ. ಈ ಶಾಸನಗಳು ಕರ್ನಾಟಕ ಮತ್ತು ಸಂಸ್ಕೃತ ಭಾಷೆಗಳೆರಡರ ಲ್ಲಿಯೂ ಬರೆಯಲ್ಪಟ್ಟಿವೆ. ಇವುಗಳ ಶೈಲಿ ಬಹು ರಮ್ಯವಾಗಿಯೂ ಪ್ರೌಢ ವಾಗಿಯೂ ಇವೆ. ಈ ಶಾಸನವೊಂದರಲ್ಲಿ ಭಟ್ಟಾಕಲಂಕನ ಉಲ್ಲೇಖವಿದೆ. ಇವನು ಹಲವು ಶಾಸ್ತ್ರಗಳಲ್ಲಿ ಪಂಡಿತನಾಗಿದ್ದಂತೆ ವರ್ಣಿಸಲ್ಪಟ್ಟಿರುವುದ ರಿಂದ ಶಬ್ದಾನುಶಾಸನವನ್ನು ಬರೆದಾತನು ಈತನೇ ಆಗಿರಬಹುದೆಂದು ತೋರುತ್ತದೆ. ಅಲ್ಲದೆ ಶೃತ ಕೀರ್ತಿದೇವನೆಂಬುವನು ತನ್ನ ಶಿಷ್ಯನಾದ ಅಗ್ಗಳನಿಂದ ಕಾವ್ಯಮಾರ್ಗದಲ್ಲಿ ಚಂದ್ರಪ್ರಭ ಪುರಾಣವನ್ನು ಬರೆಸಿದ

ನೆಂದು ಉಲ್ಲೇಖವಿದೆ. ಅಂದ ಮೇಲೆ ಕರ್ನಾಟಕ ಮಹಾ ಕವಿಗಳಿಬ್ಬರು ಇಲ್ಲಿ ಹುಟ್ಟಿ ಬೆಳೆದಂತಾಯಿತಲ್ಲವೇ?

**ಪ್ರಾಚೀನ ಸ್ಮಾರಕಗಳು:**-ಸುಮಾರು ನಾಲ್ಕುಲಕ್ಷ ವರಹ ಉತ್ಪತ್ತಿಯಿದ್ದ ಈ ರಾಜರು ತಮ್ಮ ಆಳ್ವಿಕೆಯಲ್ಲಿ ಕೆಲವು ಸ್ಮಾರಕಗಳನ್ನು ಏರ್ಪಡಿಸಿರುವರು.

**೧. ರತ್ನತ್ರಯ ಬಸದಿ:**-ಇದು ಜೈನರಾಜರ ಕಾಲದಲ್ಲಿ ಕಟ್ಟಿಸಿದುದು. ಈಗ ಮೂರ್ತಿಗಳೆಲ್ಲಾ ಭಿನ್ನವಾಗಿವೆ. ಕಟ್ಟಡವೂ ಶಿಥಿಲವಾಗಿದೆ. ರಂಗಮಂಟಪ ಚಂದ್ರಶಾಲೆ ಮೊದಲಾದುವೆಲ್ಲಾ ಪ್ರಸಿದ್ಧ ಶಿಲ್ಪಿಗಳಿಂದ ಕಟ್ಟಲ್ಪಟ್ಟವೆ. ನಮಗೆ ಸಿಕ್ಕಿದ ಶಾಸನಗಳೆರಡೂ ಇಲ್ಲಿಯೇ ಇರುತ್ತವೆ.

**೨. ವಿರೂಪಾಕ್ಷ ದೇವಾಲಯ:**-ಇದು ವೀರಪ್ಪೊಡೆಯರ ಪತ್ನಿ ವೀರಮ್ಮಾಜಿಯವರಿಂದ ಕಟ್ಟಿಸಲ್ಪಟ್ಟದು. ದೇವಾಲಯವು ಬಹು ಮುದ್ದಾಗಿದೆ. ಶಿವಲಿಂಗ ಮೂರ್ತಿಯೂ ಮುಂದಿರುವ ಬಸವನೂ ಬಹು ಸುಂದರವಾಗಿಯೂ ಶಾಸ್ತ್ರೋಕ್ತವಾಗಿ ಮಾಡಲ್ಪಟ್ಟವಾಗಿಯೂ ಇವೆ. ಈ ದೇವಾಲಯವು ಈಗೀಗ ಕಳಚಿ ಬೀಳಲು ಪ್ರಾರಂಭವಾಗಿದೆ. ಇಲ್ಲಿ ಲಿಂಗಾಂಗಿಗಳು ವಾಸವಾಗಿಲ್ಲವಾದುದರಿಂದಲೂ ಊರಿನವರು ತಕ್ಕಷ್ಟು ಉದಾರತ್ವದಿಂದ ದೇವಾಲಯವನ್ನು ನೋಡದಿರುವುದರಿಂದಲೂ ಸರಕಾರದ ಉದಾಸೀನದಿಂದಲೂ ಇಂತಹ ಭವ್ಯ ಮಂದಿರಗಳು ಮುರಿದು ಬೀಳುತ್ತಿವೆ.

**೩ ಲಕ್ಷ್ಮೀಕಾಂತ ದೇವಾಲಯ:**— ಬಿಳಗಿಯ ರಾಜರು ತಮ್ಮ ವೈಷ್ಣವ ಭಕ್ತರ ಸಲುವಾಗಿ ಕಟ್ಟಿಸಿಕೊಟ್ಟ ಶಿಲಾಮಯ ದೇವಾಲಯವಿದು. ಇದು ಜಾಗರೂಕತೆಯಿಂದ ಕಾದಿಡಲ್ಪಟ್ಟಿದೆ. ಇದಕ್ಕೆ ಇಲ್ಲಿನ ಜನರು ಸಾಮಾನ್ಯವಾಗಿ ವೈಷ್ಣವರಾಗಿರುವುದೇ ಕಾರಣ.

**೪. ಅರಮನೆ:**—ಪೂರ್ವದ ರಾಜಮಂದಿರವು ಈಗ ನೆಲಸಮವಾಗಿದೆ. ಆದರೆ ಈಗಿನ ಅರಮನೆ ಹೊಸವಾಗಿಯೂ ಅಡಕವಾಗಿಯೂ ಕಟ್ಟಲ್ಪಟ್ಟಿದೆ.

**೫. ಗೋಲುಬಾವಿ:**—ಇದು ಹಿಂದಿನ ಅರಮನೆಯ ಹಿಂಭಾಗಕ್ಕಿದೆ. ಈ ಬಾವಿಯು ಬಹು ಮನೋಹರವೂ ಪ್ರಶಂಸನೀಯವೂ ಆದುದಾಗಿದೆ. ಈ ಬಾವಿಗೆ ಇಳಿದುಹೋಗಲು ಸೋಪಾನಗಳೂ ನೆಲಮಾಳಿಗೆಯೂ ಇವೆ. ಈ ಬಾವಿಯೊಳಕ್ಕೆ ಇಳಿದು ಹೋದಾಗ ಭೂಗರ್ಭದಲ್ಲಿ ವಾಸಮಾಡುವಂತೆ ಭಾಸವಾಗುತ್ತದೆ. ರಾಜರು ಇದನ್ನು ವಿಲಾಸಾರ್ಥ

ವಾಗಿ ಕಟ್ಟಿಸಿರಬೇಕು. ಶತ್ರುರಾಜರು ಬಂದಾಗ ತಲೆತಪ್ಪಿಸಿ ಕೊಳ್ಳಲು ಈ ಬಾವಿಯಿಂದ ನಾಲ್ಕು ಮೈಲು ದೂರದವರೆಗಿರುವ ಬೇಡರ ಕಣಿವೆಯ ವರೆಗೆ ಒಂದು ಭಯಂಕರವಾದ ಸುರಂಗಮಾರ್ಗವಿದೆ. ಇದು ಈಗ ಮುಚ್ಚಿ ಹೋಗಿರಬಹುದು.

ವೀರಶೈವರ ರಾಜ್ಯವಾದ ಪ್ರದೇಶದಲ್ಲಿ ವೀರಶೈವರ ವಸತಿಯು ಹೆಚ್ಚಾ ದಿರುವದು ಸೋಜಿಗವೇ ಸರಿ. ಬಿಳಗಿಯಲ್ಲಿ ಈಗಿರುವ ಅರಮನೆಯ ನಿವಾ ಸಿಗಳನ್ನು ಬಿಟ್ಟರೆ ಇನ್ನೆರಡೇ ಮನೆಗಳು. ಆಶ್ಚರ್ಯ! ವೀರಶೈವರ ಅಭಾ ವಕ್ಕೆ ಕಾರಣವನ್ನು ಕೇಳಿದರೆ ಇಲ್ಲಿನ ಜನರು ಹೇಳುವುದೇನಂದರೆ ಟೀಪು ವು ದಂಡೆತ್ತಿ ಬಂದಾಗ ರಾಜರ ಜೊತೆಯಲ್ಲಿಯೇ ಇಲ್ಲಿನ ಮಠಪತಿಗಳೂ ವೀರಶೈವ ಗೃಹಸ್ಥರೂ ಬೇರೆ ಪ್ರದೇಶಗಳಿಗೆ ಓಡಿ ಹೋದರು ಎಂಬುದೇ.

**ವೀರಶೈವರ ಮಠಗಳು**:— ಇಲ್ಲಿ ರಾಜ್ಯಭಾರವು ಸುಲಲಿತವಾಗಿ ನಡೆಯುತ್ತಿದ್ದಾಗ ಈ ವೀರಶೈವ ರಾಜರು ಹತ್ತಾರು ಮಠಗಳನ್ನು ಸ್ಥಾಪಿಸಿ ದ್ದಂತೆ ತೋರುತ್ತದೆ. ಇವುಗಳೆಲ್ಲವೂ ನೆಲಸಮವಾಗಿ ಹೋದುದಲ್ಲದೆ ಅನ್ಯಾ ಕ್ರಾಂತವಾಗಿವೆ. ಇವುಗಳಲ್ಲಿ ಕೆಲವು ಮಠಗಳ ವಿಷಯವು ಸ್ವಲ್ಪಸ್ವಲ್ಪ ತಿಳಿದು ಬಂದುದು ಇಲ್ಲಿ ವಿವರಿಸಲ್ಪಟ್ಟಿದೆ.

**೧. ಹಿರೇಮಠ**:— ಇದು ಶ್ರೀಮದ್ರಂಭಾಪುರೀ ಮಹಾ ಸಂಸ್ಥಾ ನಕ್ಕೆ ಸೇರಿದುದು. ಈಗ ನಿರ್ನಾಮವಾಗಿದೆ. ಈ ಮಠಪತಿಗಳಾದ ವೇ॥ ಮುರಿಗಯ್ಯನವರು ಬೇರೊಂದೆಡೆಯಲ್ಲಿದ್ದಾರೆ. ಈ ಮಠವು ಪೂರ್ವದಲ್ಲಿ ಬಹು ಸಂಪದ್ಯುಕ್ತವಾಗಿದ್ದಿತಂತೆ.

**೨. ಕಲ್ಯಾಣದೇವರ ಮಠ**:— ಇದು ಸೊಮನದೀತಟದಲ್ಲಿದೆ. ಇದರಲ್ಲಿ ಶಿಲಾಮಯ ಶಿವಲಿಂಗ ದೇವಾಲಯ ಒಂದಿದೆ. ಈ ದೇವಾ ಲಯವೂ ಈಗ ಜೀರ್ಣಾವಸ್ಥೆಗೆ ಬಂದಿದೆ. ಮಠದ ತಳಪಾಯ ಮಾತ್ರ ಕಾಣುತ್ತಿದೆ. ಈ ಮಠದ ಸ್ವಾಮಿಗಳು ವಿರಕ್ತರೆಂದೂ ಕಲ್ಯಾಣದಿಂದ ಬಂದ ವರೆಂದೂ ಬಹು ಮಹಾತ್ಮರಾಗಿದ್ದರೆಂದೂ ಇಲ್ಲಿನ ಜನರು ಹೇಳುತ್ತಿ ದ್ದಾರೆ.

**೩. ಕಾನನ ಮಠ**— ನಿರ್ಮೂಲ. ಅರಣ್ಯದಲ್ಲಿರುವುದರಿಂದ ಈ ಹೆಸ ರು ಬಂತು.

**೪. ಚಿಲುಮೆ ಮಠ**— ಇಲ್ಲಿ ಪ್ರಸಿದ್ಧವಾದ ಚಿಲುಮೆ ಇದ್ದುದರಿಂದ ಈ ಹೆಸರು ಬಂತು. ಈ ಚಿಲುಮೆ ಈಗಿಗೂ ಇದೆ. ಮಠ ಹಾಳಾಗಿದೆ.

ಭೂಮಿ ಯಾವಕಾರಣದಿಂದಲೋ ಕೈತಪ್ಪಿ ಹೋಗಿದೆ.

**೫. ಮಹಾಂತಿನ ಮಠ:**—ಇದೂ ಹಿಂದಿನಂತೆಯೇ ಸರಿ. ಇದರಂತೆಯೇ ಇನ್ನೂ ಹಲಕೆಲವು ಮಠಗಳು ಹೆಸರಿಲ್ಲದಂತಾಗಿವೆ. ಇವುಗಳಲ್ಲಿ ವಿರಕ್ತ ಮಠ ಚೌಕೀ ಮಠ ಇವುಗಳ ಕುರುಹು ಕಾಣುತ್ತಿದೆ. ಮತ್ತುಳಿದವು ನಿರ್ನಾಮವಾಗಿವೆ.

ಮೇಲ್ಕಂಡರೀತಿಯಲ್ಲಿ ಬಿಳಗಿಯ ರಾಜ್ಯದ ವಿಷಯವನ್ನು ಸ್ಥೂಲಮಾನದಿಂದ ವಿವೇಚಿಸಿ ಮತ್ತೊಮ್ಮೆ ಸಾಧನ ಸಾಮಗ್ರಿಗಳು ಲಭ್ಯವಾದ ಮೇಲೆ ಈ ವಿಷಯವನ್ನು ಇನ್ನೂ ಸೂಕ್ಷ್ಮದೃಷ್ಟಿಯಿಂದ ವಿಚಾರಿಸುವೆನು ಅಲ್ಲದೆ ಇದರಬಗ್ಗೆ ಇತಿಹಾಸ ಶೋಧನೆ ಮಾಡಲುಳ್ಳವರು ತಮ್ಮ ಅನುಭವವನ್ನು ಪ್ರಕಟಿಸಬೇಕೆಂದು ವಿನಂತಿ ಇದೆ.



## ಬಿಳಗಿ ಸಂಸ್ಥಾನ.

**ಕಂದ**॥ ತಿಳಿದನಿತನಿಂದು ಬರೆದೆಂ।
ತಿಳಿಯುದುದಂ ಮುಂದೆ ತಿಳಿದು ಬರೆದಪೆನಿದರೊಳ್ ॥
ತಿಳಿದುದನಿಳೆಗಿಡವಾತಂ।
ಖಳರೊಳ್ತಾಂ ಪ್ರಥಮನೆಂದು ಪೇಳ್ದಪರಾದ್ಯರ್ ॥೨॥
ವರವೀರಶೈವ ರಾಜರ್।
ಧರೆಯೊಳ್ ನಿಜ ರಾಜ್ಯ ವಾಳ್ದು ಬಾಳ್ದಪರಾಗಲ್ ॥
ಧುರದೊಳ್ ವಿಕ್ರಮರೆನಿಸುತುಂ।
ವರರಾಘವನಂತೆ ನೀತಿಯುಕ್ತರೆನುತ್ತುಂ ॥೩॥
ಕರ್ನಾಟಕ ರಾಜ್ಯ ಮನಿತುಂ।
ನಿರ್ನೈಸಲ್ ವೀರಶೈವಮಯವಾಗಿರ್ಕುಂ ॥
ಕರ್ಣಾರಿವರದ ಭಕ್ತರ್
ತೂರ್ಣದಿಶಿವನರಿದು ಸಾಸಗೆಯ್ವುದು ಕಜ್ಜಂ ॥೪॥
ಪೋದುದು ನಮ್ಮಯ ಮಾನ್ಯತೆ।
ಪೋದುದಲಾ ನಮ್ಮ ರಾಜ್ಯ ಕೋಶಾದಿಗಳುಂ ॥
ಪೋದುವು ನಮ್ಮಯ ಕೃತಿಗಳ್ ॥

ಮೇದಿನಿಯೊಳ್ ಕೇಳ್ವರಿಲ್ಲ ಮಿಂತಾಯ್ತು ಕಟಾ॥ ೫॥
ನಮ್ಮಯ ಬಾಂಧವರ ಖಿಳರ್ ।
ಸುಮ್ಮನೆ ಬಡಿದಾಡುತಿಹರು ಗರ್ವಾಂಧತೆಯಿಂ ॥
ಬೊಮ್ಮನೆಯಂತೆರೆಸಗಿದೆ ।
ಸಮ್ಮತಮೇಂ ನಿನಗೆ ಪೇಳ ಜಡಜಭವಾಖ್ಯಾ ॥೬॥
ಆದದ್ದಾಗಲಿ ಪಿಂದಕೆ ।
ಪೋದದ್ದಾ ರಾಜ್ಯಕೋಶ ಮೆಲ್ಲಂ ಪೋಗೇ ॥
ಮೇದಿನಿಯೊಳಿನ್ನು ನಾವ್ಗಳ್ ।
ಸಾಧುಜನಾಹ್ಲಾದ ಜನಕರಾದೊಡೆ ಸಾಕೈ ॥೭॥
ಜಯ ಜಯ ಶಿವಾನುಭವವೇ ।
ಜಯಜಯ ವರ ವೀರಶೈವ ಜನ ಭೂಷಣವೇ ॥
ಜಯಜಯ ಶಿವನಾಭರಣವೆ ।
ಜಯ ಸಂಯುತವಾಗಿ ಬಾಳು ಧರೆಯೊಳಗನಿಶಂ ||೮||
ಮಂಗಳಮಕ್ಕೆಮ ದೇಶಕೆ ॥
ಮಂಗಳಕರ ಪಾವನಾತ್ಮ ಪರಶಿವನೊಲವಿಂ ||
ಭಂಗಮದೆಲ್ಲಂ ಪೋಗುಗೆ ।
ಸಂಗಳಿಸುಗೆಯಾಯುರಾದಿ ವಾಂಛಿತಫಲಮುಂ ॥೯॥

ಓಂ

ಶ್ಯಾಂತಿ ಶ್ಯಾಂತಿ ಶ್ಯಾಂತಿಃ

---

# ಅಗಸ್ತ್ಯ ಮತ್ತು ರೇಣುಕ.

(ಕರ್ನಾಟಕ ಸಂಸ್ಕೃತಿಯ ಪ್ರಾಚೀನತ್ವ ಮತ್ತು ಶೈವಧರ್ಮಗಳ ಉಗಮ)

ಲೇಖಕಃ- ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಏ. ಎಲ್ ಎಲ್, ಬಿ.

---

ಅಗಸ್ತ್ಯನು ಶೈವಋಷಿಗಳಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದಾನೆ. ಈತನ ವೃತ್ತಾಂತವು ಅನೇಕ ಪುರಾಣಗಳಲ್ಲಿ ಬಂದಿರುತ್ತದೆ. ಇದಲ್ಲದೆ ಜಾವಾದ್ವೀ

ಪದಲ್ಲಿ ಇವನ ಬಗ್ಗೆ ಅನೇಕ ಶಿಲಾಶಾಸನಗಳು ಈಚೀಚೆಗೆ ದೊರೆತಿವೆ. ಇವೆಲ್ಲವುಗಳನ್ನು ಸಂಗ್ರಹಿಸಿ ಮಿ॥ ಓ. ಸಿ. ಗಂಗೂಳಿ ಎಂಬ ಹೆಸರಿನ ಬಂಗಾಲಿ ಪಂಡಿತರು "ರೂಪಂ" ಎಂಬ ಹೆಸರಿನ ಬಂಗಾಲಿ ಭಾಷೆಯಲ್ಲಿ ಹೊರಡುವ ಒಂದು ಪತ್ರಿಕೆಯಲ್ಲಿ ಒಂದು ಮಹತ್ವದ ಲೇಖವನ್ನು ಪ್ರಸಿದ್ಧಿಸಿದ್ದಾರೆ. ಈ ಲೇಖವು ಸರ್ ರವೀಂದ್ರನಾಥ ಟಗೋರ ಈ ಜಗದ್ವಿಖ್ಯಾತ ಮಹಾ ಕವಿಗಳ ನಿದರ್ಶನೆಯಲ್ಲಿ ಪ್ರಕಟವಾಗುವ "ವಿಶ್ವಭಾರತಿ"ಯ ೧೯೩೬ನೇ ಜುಲೈ ಸಂಚಿಕೆಯಲ್ಲಿಯೂ ಕೊಡಲ್ಪಟ್ಟಿರುತ್ತದೆ. ಪ್ರತಿಯೊಬ್ಬ ಶೈವನು ಅಗಸ್ತ್ಯನ ಚರಿತ್ರೆಯನ್ನೂ ಅದರೊಡನೇ ವೀರಶೈವಧರ್ಮ ಸಂಸ್ಥಾಪಕನೆಂದೆಣಿಸಿಕೊಳ್ಳುವ ರೇಣುಕನ ಚರಿತ್ರೆಯನ್ನೂ ತುಲನಾತ್ಮಕವಾಗಿ ಅತಿ ಸೂಕ್ಷ್ಮ ದೃಷ್ಟಿಯಿಂದ ವಿಚಾರಿಸುವದು ಬಹಳ ಮಹತ್ವದ್ದಿರುತ್ತದೆ. ಯಾಕಂದರೆ ಇದರಿಂದ ಶೈವಧರ್ಮಗಳ ಪೂರ್ವೇತಿಹಾಸ ಮತ್ತು ಕರ್ನಾಟಕದ ಮೊದಲಿನ ಸಂಸ್ಕೃತಿ ಇವುಗಳ ಮೇಲೆ ವಿಶೇಷ ಪ್ರಕಾಶವು ಬೀಳುವಂತೆ ಇದೆ.

ಮೇಲ್ಕಂಡ ಲೇಖಕರು ಈ ಲೇಖಕ್ಕೆ "ಪೂರ್ವ ಕಾಲದ ಮಹತ್ತರ ವಸಾಹತುಗಾರನಾದ ಅಗಸ್ತ್ಯ ಋಷಿ" ಎಂಬ ಹೆಸರನ್ನು ಇಟ್ಟು ಅದನ್ನು ಪ್ರಸಿದ್ಧಿಸಿದ್ದಾರೆ. ಅವರು ಈ ಲೇಖದಲ್ಲಿ ಮೊದಲಿಗೆ ದಕ್ಷಿಣ ಹಿಂದುಸ್ಥಾನ ದೇಶವು ಅತ್ಯಂತ ಕಾಡುಸ್ಥಿತಿಯಲ್ಲಿ ಇತ್ತು, ಆ ಮೇಲೆ ಆರ್ಯರೇ ಈ ಪ್ರದೇಶಕ್ಕೆ ಬಂದು ನಾಗರೀಕತೆಯನ್ನು ಪಸರಿಸಿದರು, ಈ ಕಾರ್ಯದಲ್ಲಿ ಅಗಸ್ತ್ಯನೇ ಅಗ್ರ ಭಾಗವನ್ನು ವಹಿಸಿದನು, ಎಂಬಿವೇ ಮೊದಲಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಆದರೆ ಈ ಅಭಿಪ್ರಾಯವು ನಿಜವಲ್ಲವೆಂಬದು ಇತ್ತೀಚೆಗೆ ಆದ ಶೋಧಗಳಿಂದ ಹೆಚ್ಚೆಚ್ಚು ಸ್ಪಷ್ಟವಾಗ ಹತ್ತಿರುತ್ತವೆ. ಹ್ಯಾಗೆ ಉತ್ತರ ಹಿಂದುಸ್ಥಾನದ ಆರ್ಯರು ನಾಗರೀಕತೆಯಲ್ಲಿ ಮುಂದಾಗಿದ್ದರೋ ಅದೇ ಮೇರೆಗೆ ದಕ್ಷಿಣ ದೇಶದಲ್ಲಿ ದ್ರವಿಡರೂ ನಾಗರೀಕತೆಯಲ್ಲಿ ಮುಂದಾಗಿದ್ದರು. ಹಿಂದೂ ಸಂಸ್ಕೃತಿಯು ಉತ್ತರ ಮತ್ತು ದಕ್ಷಿಣ ಹಿಂದುಸ್ಥಾನ ದೇಶಗಳಲ್ಲಿಯ ನಾಗರೀಕತೆಗಳ ಮಿಶ್ರಣದಿಂದ ಬೇರೆ ಬೇರೆ ಕಾಲಗಳಲ್ಲಿ ನಾನಾ ಸ್ವರೂಪಗಳನ್ನು ಹೊಂದುತ್ತ ಅದು ಶ್ರೇಷ್ಠತರಸ್ಥಿತಿಗೆ ಬಂದಿರುತ್ತದೆ. ಉತ್ತರ ದೇಶದ ಆರ್ಯರ ವೈದಿಕ ಕರ್ಮಗಳಲ್ಲಿ ದಾಕ್ಷಿಣಾತ್ಯರಾದ ಶೈವರ ಅನೇಕ ಪದ್ಧತಿಗಳು ಸೇರಿಕೊಂಡಿರುತ್ತವೆ. ಅವರ ಪೂಜಾದಿ ಕರ್ಮಗಳೂ ಮಂತ್ರಗಳೂ ಶಿಲ್ಪ ಕಲೆಗಳೂ ಶೈವಧರ್ಮದ ಕುರುಹುಗಳನ್ನು ಸ್ಪಷ್ಟವಾಗಿ ಹೊರಗೆಡುವುತ್ತವೆ. ಆದರೆ ಇದನ್ನು ಉತ್ತರ ಹಿಂದುಸ್ಥಾನದ ಆರ್ಯ ಪಂಡಿತರು

ದುರ್ಲಕ್ಷಿಸುತ್ತಾರೆ. ಆದ್ದರಿಂದ ಅವರ ಶೋಧಗಳಲ್ಲಿ ಅಕುಂಚಿತತ್ವದ ದೋಷಗಳು ಉಂಟಾಗುತ್ತವೆ. ಅಗಸ್ತ್ಯನ ಚರಿತ್ರೆಯೊಡನೆ ಶೈವರಲ್ಲಿ ಪ್ರಸಿದ್ಧನಾಗಿರುವ ರೇಣುಕಾಚಾರ್ಯನ ಚರಿತ್ರೆಯನ್ನು ಅಭ್ಯಾಸಿಸಿದರೆ ಶೈವ ಧರ್ಮಗಳ ಪೂರ್ವೇತಿಹಾಸದ ಬಗ್ಗೆ ಅನೇಕ ಮಹತ್ವದ ವಿಷಯಗಳು ಕಂಗೊಳಿಸ ಹತ್ತುತ್ತವೆ. ಈಗ ನಾವು ಈ ಇಬ್ಬರೂ ಮಹಾ ಪುರುಷರ ಚರಿತ್ರೆಗಳನ್ನು ಈ ಮೇರೆಗೆ ತುಲನಾತ್ಮಕವಾಗಿ ವಿವೇಚಿಸುವ ಮೊದಲು ಈ ಉಭಯತರ ಚರಿತ್ರೆಗಳನ್ನು ನಮ್ಮ ವಾಚಕರು ಅರಿಯುವದು ಅವಶ್ಯವಾಗಿದೆ. ಆದ್ದರಿಂದ ಮಿ. ಗಂಗೂಳಿಯವರು ವಿವರಿಸಿದ ಅಗಸ್ತ್ಯ ಚರಿತ್ರೆಯನ್ನು ನಾವು ಸಂಕ್ಷೇಪವಾಗಿ ಇಲ್ಲಿ ವಿವರಿಸುತ್ತೇವೆ.

ಅಗಸ್ತ್ಯನು ಕಾಶೀಪಟ್ಟಣದಲ್ಲಿ ವಾಸವಾಗಿದ್ದನು. ಅವನು ಕೇವಲ ಶಿವಭಕ್ತನಾಗಿ ಶಿವಲಿಂಗಗಳನ್ನೇ ಸದಾ ಪೂಜಿಸುತ್ತಿದ್ದನು. ಆದರೆ ಅವನು ಬಹಳ ದಿವಸಗಳ ವರೆಗೆ ಉತ್ತರ ದೇಶದಲ್ಲಿ ನಿಲ್ಲಲಿಲ್ಲ. ಅವನು ವಿಂಧ್ಯಾಟವಿಯನ್ನು ದಾಟಿ ದಕ್ಷಿಣಾಪಥದಲ್ಲಿ ಬಂದು ಇರಹತ್ತಿದನು. ಅವನು ದಂಡಕಾರಣ್ಯಕ್ಕೆ ಸಮೀಪವಾಗಿರುವ ನಾಸಿಕ ಕ್ಷೇತ್ರದಲ್ಲಿ ಆಶ್ರಮವನ್ನು ಸ್ಥಾಪಿಸಿದನು. ಇದೇ ಸ್ಥಳದಲ್ಲಿಯೇ ರಾಮಚಂದ್ರನು ಇದ್ದನೆಂದು ಐತಿಹ್ಯವದೆ. ಈ ಆಶ್ರಮದಲ್ಲಿ ಅಗಸ್ತ್ಯನು ಕೆಲಕಾಲವಿದ್ದು ಆ ಮೇಲೆ ದಕ್ಷಿಣಕ್ಕೆ ತೆರಳಿ ಬದಾಮಿ ಹತ್ತರವಿರುವ ಮಹಾಕೂಟ ಕ್ಷೇತ್ರದಲ್ಲಿ ವಾಸಿಸ ತೊಡಗಿದನು. ಅಲ್ಲಿ ಅವನಿಗೆ ರಾಕ್ಷಸರೊಂದಿಗೆ ಯುದ್ಧ ಮಾಡುವ ಪ್ರಸಂಗವು ಬಂದೊದಗಿತು. ಐಹೊಳಿಯಲ್ಲಿ ಇಲ್ವಲನೆಂಬ ರಾಕ್ಷಸನೂ ವಾತಾಪಿಪುರ ಎಂದರೆ ಬದಾಮಿಯಲ್ಲಿ ವಾತಾಪಿ ಎಂಬ ರಾಕ್ಷಸನೂ ರಾಜ್ಯವಾಳುತ್ತಿದ್ದರು. ಅಗಸ್ತ್ಯನು ಇವರಿಬ್ಬರನ್ನು ಬದಾಮಿಯಿಂದ ಮೂರು ಮೈಲುಗಳ ಮೇಲಿರುವ ಮಹಾಕೂಟದಲ್ಲಿ ಸಂಹರಿಸಿದನು. ಈಸಂಗತಿಯು ಇಲ್ಲಿ ವರ್ಣಿಸಿದ್ದರಿಂದ ಇದೊಂದು ಮಹಾಕ್ಷೇತ್ರಸ್ಥಾನವಾಗಿ, ದಕ್ಷಿಣ ಕಾಶಿ ಎಂಬ ಹೆಸರನ್ನು ಹೊಂದಿದೆ. ಆ ಮೇಲೆ ಅವನು ದಕ್ಷಿಣ ದೇಶಕ್ಕೆ ತೆರಳಿ, ಪಾಂಡ್ಯ ರಾಜ್ಯವನ್ನು ಪ್ರವೇಶಿಸಿದನು. ಅಲ್ಲಿ ಅವನು ಪಾಂಡ್ಯ ರಾಜರ ಗುರುವೆಂದೆನಿಸಿಕೊಂಡನು. ತಮಿಳು ರಾಜ್ಯದಲ್ಲಿ ಶಿವಧರ್ಮವು ಮೊದಲು ಪ್ರಕಟವಾದದ್ದು ಇವನಿಂದಲೇ ಎಂದು ಅಲ್ಲಿ ತಿಳಿಯುತ್ತಾರೆ. ಇಷ್ಟೇ ಅಲ್ಲ, ಅವನು ತಮಿಳು ಭಾಷೆಯ ಸುಧಾರಕನೆಂತಲೂ ಪ್ರಸಿದ್ಧನಾಗಿದ್ದಾನೆ. ತಮಿಳ ಭಾಷೆಗೆ ವ್ಯಾಕರಣವನ್ನು ಮೊದಲು ಬರೆದವನು ಅಗಸ್ತ್ಯನೇ ಎಂದು ದ್ರಾವಿಡ ಪಂಡಿತರು ತಿಳಿಯುತ್ತಾರೆ. ಅವನ

ವ್ಯಾಕರಣಕ್ಕೆ 'ಅಗತ್ತಿಯಂ' ಎಂಬ ಹೆಸರು ಇದೆ. ಇವನು ಮೂರ್ತಿಗಳನು ರಚಿಸುವ ಶಾಸ್ತ್ರದ ಬಗ್ಗೆಯೂ ಒಂದು ಗ್ರಂಥವನ್ನೂ ರಚಿಸಿದನು. ಇದಕ್ಕೆ 'ಅಗಸ್ತೀಯ ಸಕಲಾಧಿಕಾರ' ಎಂಬ ಹೆಸರು. ಅದೇ ಮೇರೆಗೆ ವೈದ್ಯ ಶಾಸ್ತ್ರ ವನ್ನೂ ದ್ರವಿಡದೇಶದಲ್ಲಿ ಪ್ರಚಾರಗೊಳಿಸಿದನು. ಒಟ್ಟಿಗೆ ಅಗಸ್ತ್ಯನು ತಮಿಳು ದೇಶದ ನಾಗರೀಕತೆಯ ಉತ್ಪಾದಕನೆಂದು ಅಲ್ಲಿಯ ಪಂಡಿತರು ತಿಳಿಯು ತ್ತಾರೆ.

ಅಗಸ್ತ್ಯನು ದ್ರಾವಿಡದೇಶದಲ್ಲೆಲ್ಲ ಅನೇಕ ಗುಡಿಗಳನ್ನು ಕಟ್ಟಿಸಿದನು. ಕನ್ಯಾಕುಮಾರಿಯ ಹತ್ತರ ಪೋಧೀಯ ಎಂಬ ಹೆಸರಿನ ಬೆಟ್ಟವು ಇದೆ. ಈ ಸ್ಥಳದಲ್ಲಿ ಅವನು ಅದೃಶ್ಯರೂಪನಾಗಿ ಇನ್ನೂ ವಾಸಿಸುತ್ತಾನೆಂದು ದ್ರವಿ ಡರು ತಿಳಿಯುತ್ತಾರೆ. ಇದು ಅತ್ಯಂತ ಪವಿತ್ರ ಸ್ಥಾನವೆಂದೆನಿಸಿಕೊಳ್ಳು ತ್ತದೆ.

ಅಗಸ್ತ್ಯನು ಹೀಗೆ ದಕ್ಷಿಣ ದೇಶದಲ್ಲೆಲ್ಲ ಮಹತ್ತಾದ ಧಾರ್ಮಿಕ ಕ್ರಾಂತಿ ಯನ್ನು ಮಾಡಿದಕಾರಣ ಅವನು ಆ ಭಾಗದಲ್ಲಿ ಭಕ್ತಿಯಿಂದ ಪೂಜಿಸಲ್ಪ ಡುತ್ತಾನೆ. ಅಲ್ಲಿ ಅವನ ಹೆಸರಿನ ಅಸಂಖ್ಯ ದೇವಾಲಯಗಳು ಇವೆ. ಅವ ನನ್ನು ಅಲ್ಲಿ ಪೂಜೆಮಾಡುವ ಕ್ರಮಗಳು ಸ್ಕಂದಪುರಾಣ ಮತ್ತು ಅಗ್ನಿ ಪುರಾಣ ಇವುಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ. ಅವನ ಸಂಬಂಧದ ಮಂತ್ರದ ಅರ್ಥವು ಏನಿರುವದೆಂದರೆ "ಎಲೋ ಕುಂಭಯೋನಿಯಾದ ನಿನಗೆ ನಮ ಸ್ಕಾರವು. ನೀನು ಮಿತ್ರಾವರುಣರ ಮಗನಾಗಿ 'ಕಾಶ' ಹೂವಿನಂತೆ ಶುಭ್ರ ನಾಗಿರುವಿ. ಆತಾಪಿವಾತಾಪಿಗಳನ್ನು ಸಂಹರಿಸಿದಂಥ ಸಮುದ್ರವನ್ನು ಕುಡಿ ದಂಥ ಎಲೋ ಅಗಸ್ತ್ಯನೇ ನಿನ್ನನ್ನು ನಾನು ಆಹ್ವಾನಿಸುತ್ತೇನೆ" ಅಗಸ್ತ್ಯನು ಪೋಧೀಯ ಬೆಟ್ಟದಲ್ಲಿ ಇರುವನೆಂದು ತಿಳಿಯುವಂತೆ, ಪೂರ್ವದ ಸಮು ದ್ರದ ಆಗ್ನೇಯ ಮೂಲೆಯಲ್ಲಿರುವ 'ವೇದಾರಣ್ಯ' ಎಂಬ ಸ್ಥಳದಲ್ಲಿಯೂ ಅವನು ಸದಾ ವಾಸಿಸುತ್ತಾನೆಂದು ತಿಳಿದು ಜನರು ಅವನನ್ನು ಅಲ್ಲಿ ಪೂಜಿ ಸುತ್ತಾರೆ. ಹೀಗೆ ಅಗಸ್ತ್ಯನು ದಕ್ಷಿಣದೇಶದಲ್ಲಿ ಶೈವಧರ್ಮವನ್ನು ಸ್ಥಾಪಿಸಿ ಬೇರೆ ದೇಶಗಳಲ್ಲಿ ಸಹ ಶಿವಧರ್ಮವನ್ನು ಸ್ಥಾಪಿಸಲು ಉದ್ಯುಕ್ತನಾದನು. ಅವನು ಸಮುದ್ರವನ್ನು ದಾಟಿ ಕಾಂಬೋಡಿಯಾ ದೇಶಕ್ಕೆ ಹೋದನು ಈ ಸಂಗತಿಯು ಅಲ್ಲಿಯ ಅನೇಕ ಶಿಲಾಲೇಖಗಳಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ಹೀಗೆ ಅವನು ಸಮುದ್ರವನ್ನು ದಾಟಿ ಹೋದದ್ದರಿಂದ ಸಮು ದ್ರವನ್ನು ಕುಡಿದುಬಿಟ್ಟನೆಂದು ಪುರಾಣದಲ್ಲಿ ದಂಥ ಕಥೆಗಳು ಉತ್ಪನ್ನವಾ

ಗಿರಬಹುದು. ಈ ಕಾಂಬೋಡಿಯಾ ದೇಶದಲ್ಲಿ 'ಅಂಕೋರವಾಟ' ಎಂಬ ಸ್ಥಳದಲ್ಲಿರುವ ಶಿಲಾಲೇಖದಲ್ಲಿ ಕೆಳಗಿನ ಸಂಗತಿಗಳು ತಿಳಿದುಬರುತ್ತವೆ. "ಆರ್ಯದೇಶದಲ್ಲಿ ಹುಟ್ಟಿದಂಥ ಬ್ರಾಹ್ಮಣನಾದ ಅಗಸ್ತ್ಯನು ಶಿವಪೂಜೆ ಯಲ್ಲಿ ನಿರತನಾಗಿ ತನ್ನ ಅಲೌಕಿಕ ಶಕ್ತಿಯಿಂದ ಕಾಂಬೋಡಿಯಾ ದೇಶಕ್ಕೆ ಬಂದು ಶ್ರೀಭದ್ರೇಶ್ವರನೆಂಬ ಶಿವಲಿಂಗವನ್ನು ಪೂಜಿಸಿದನು. ಮತ್ತು ಆ ದೇವ ರನ್ನು ಬಹುದಿವಸ ಪೂಜಿಸಿ ಮೋಕ್ಷವನ್ನೈದಿದನು."

ಅಗಸ್ತ್ಯನು ಈ ಪ್ರದೇಶದಲ್ಲಿದ್ದು ಒಬ್ಬ ರಾಜಕನ್ನಿಕೆಯನ್ನು ಮದು ವೆಯಾಗಿ ಒಂದು ರಾಜವಂಶವನ್ನು ಸ್ಥಾಪಿಸಿದನೆಂದು ಮತ್ತೊಂದು ಶಿಲಾ ಲೇಖದಿಂದ ತಿಳಿದುಬರುತ್ತದೆ. ಆ ಶಿಲಾಲೇಖದಲ್ಲಿರುವದೇನಂದರೆ:— "ಆರ್ಯದೇಶದಿಂದ ಬಂದಂಥ ಮತ್ತು ವೇದಗಳಲ್ಲಿ ಪಾರಂಗತನಾದಂಥ ಅಗಸ್ತ್ಯನೆಂಬ ಹೆಸರಿನಿಂದ ಪ್ರಸಿದ್ಧನಾದ ಬ್ರಾಹ್ಮಣನು "ಮಹಸಿದ್ಧ" ಮನೆ ತನಕ್ಕೆ ಹೊಂದಿದ ಯಶೋಮತಿ ಎಂಬ ಕನ್ನಿಕೆಯನ್ನು ಮದುವೆಯಾದನು. ಮತ್ತು ಆಕೆಯಿಂದ ನರೇಂದ್ರವರ್ಮನೆಂಬ ಮಗನನ್ನು ಪಡೆದನು" ಎಂದು ಬರೆದದೆ. ಇದೇಸಂಗತಿಯು ಅನೇಕ ಶಿಲಾಲೇಖಗಳಲ್ಲಿ ಉಲ್ಲೇಖಿಸಲ್ಪ ಟ್ಟಿದೆ. ಕಾಂಬೋಡಿಯಾ ದೇಶದಲ್ಲಿಯ ಅಸಂಖ್ಯಸುಂದರವಾದ ಶಿವಾಲಯ ಗಳನ್ನು ಈ ರಾಜವಂಶಕ್ಕೆ ಸಂಬಂಧಿಸಿದ ಅರಸರುಗಳೇ ಕಟ್ಟಿಸಿದ್ದಾರೆ.

ಕಾಂಬೋಡಿಯಾ ದೇಶದಂತೆಯೇ 'ಶ್ಯಾಮ'ದೇಶ ಎಂದರೆ ಸಯಾ ಮಪ್ರಾಂತದಲ್ಲಿಯೂ ಶಿವಾಲಯಗಳು ಈಗ್ಗೆಯೂ ದೃಷ್ಟಿಗೋಚರವಾಗು ತ್ತವೆ. ಈ ಶಿವಾಲಯಗಳ ಹೋಲಿಕೆಯು ದಕ್ಷಿಣ ಹಿಂದುಸ್ಥಾನದಲ್ಲಿರುವ ಶಿವಾಲಯಗಳಂತೆಯೇ ಇರುತ್ತದೆ. ಈ ಕಟ್ಟಡಗಳಮೇಲಿಂದ ಈ ದೇಶ ಗಳ ಶೈವಧರ್ಮವು ಹಿಂದುಸ್ಥಾನ ದೇಶದಿಂದಲೇ ಬಂದಿತೆಂದು ನಿರ್ವಿ ವಾದವಾಗಿ ಹೇಳಬಹುದು.

ವಾಯುಪುರಾಣ, ಅಧ್ಯಾಯ ೪೮ ಇದರಲ್ಲಿ ಕೆಳಗೆ ಕಾಣಿಸಿದ ದ್ವೀಪ ಗಳಿಗೆ ಅಗಸ್ತ್ಯನು ಹೋದಂತೆ ತಿಳಿದುಬರುತ್ತದೆ. ಅವು ಯಾವವೆಂದರೆ:— ಬರ್ಹಿಣದ್ವೀಪ ಎಂದರೆ ಬೋರ್ನಿಯೊ, ಕುಶದ್ವೀಪ, ವರಾಹದ್ವೀಪ, ಶೌಖ್ಯ ದ್ವೀಪ ಇವೇ ಮೊದಲಾದವುಗಳು. ಇದೇ ಪುರಾಣದಲ್ಲಿ ಅಗಸ್ತ್ಯನು ಮಹಾಮಲಯ ಪರ್ವತದಲ್ಲಿ ಇರುತ್ತಾನೆಂದು ಸ್ಪಷ್ಟವಾಗಿ ಹೇಳಿದೆ. ಸುಮಾ ತ್ರಾದ್ವೀಪದಲ್ಲಿ 'ಮಲಯ' ಎಂಬ ಹೆಸರಿನ ಪ್ರಸಿದ್ಧ ಪರ್ವತವು ಈಗ್ಗೆಯೂ ಇದೆ. ಇದು ಅಗಸ್ತ್ಯನ ಸ್ಥಾನವಾಗಿರಬಹುದು.

'ದಕ್ಷಿಣ ಕೋಡೋ' ಎಂಬ ಹೆಸರಿನ ಪಟ್ಟಣದಲ್ಲಿ ಕ್ರಿಸ್ತಶಕದ ಪೂರ್ವದ ೭೩೨ ಇಸ್ವಿಯ ಒಂದು ಸಂಸ್ಕೃತ ಶಿಲಾಲೇಖವು ದೊರೆತಿದೆ. ಇದರಲ್ಲಿ ಮಧ್ಯಜಾವಾ ನಡುಗಡ್ಡೆಯಲ್ಲಿ ವಸಾಹತುಮಾಡಿದ ಸಂಜಯನೆಂಬ ಹೆಸರಿನ ಅರಸನ ಉಲ್ಲೇಖವು ಇದೆ. "ಜಾವಾ ಎಂಬ ಹೆಸರಿನ ಅತ್ಯುತ್ತಮವಾದ ದ್ವಿಪವು ಇದೆ. ಇಲ್ಲಿ ಬಂಗಾರದ ಕಣಿಗಳು ಇದ್ದು, ಅಕ್ಕಿ ಮೊದಲಾದ ಧಾನ್ಯಗಳೂ ಹೇರಳವಾಗಿ ಬೆಳೆಯುತ್ತವೆ. ಈ ದ್ವೀಪದಲ್ಲಿ ಒಂದು ಸುಂದರವಾದ ಮತ್ತು ಅದ್ಭುತವಾದ ಶಿವಾಲಯವು ಇದೆ. ಈ ಶಿವಾಲಯದಲ್ಲಿಯ ಮೂರ್ತಿಯನ್ನು ಪುಣ್ಯಭೂಮಿಯಾದ ಕುಂಜರ ಕುಂಜ ದೇಶದ ಜನರು ಸ್ಥಾಪಿಸಿರುವರು." ಈ ಕುಂಜರ ಕುಂಜ ಅಥವಾ ಕುಂಜರ ದೇಶವು ದಕ್ಷಿಣ ಹಿಂದುಸ್ಥಾನದಲ್ಲಿಯೇ ಇದ್ದಿರಲಿಕ್ಕೆಬೇಕು. ವಿಜಯನಗರದ ಹದಿಮೂರನೇ ಶತಮಾನದ ಕೆಲವು ಶಿಲಾಲೇಖಗಳಲ್ಲಿ 'ಕುಂಜರ ಕೋಣ' ಎಂಬ ದೇಶದ ಉಲ್ಲೇಖವು ಇರುತ್ತದೆ. ಅವುಗಳಿಂದ ಈ ಪ್ರದೇಶವು ಈಗಿನ ಹಂಪಿಯ ಉತ್ತರಕ್ಕೆ ತುಂಗಭದ್ರಾ ನದಿಯ ತೀರದಲ್ಲಿ ಇತ್ತೆಂದು ತಿಳಿದುಬರುತ್ತದೆ. ಹರಿವಂಶದಲ್ಲಿ 'ಅಗಸ್ತ್ಯನ ಶುಭಕರವಾದ ಆಶ್ರಮವು ಕುಂಜರ ಪರ್ವತದಲ್ಲಿ ಇತ್ತು' ಎಂದು ಬರೆದದೆ. ಈ ಎಲ್ಲ ಸಂಗತಿಗಳಿಂದ ತುಂಗಭದ್ರಾತೀರದಲ್ಲಿ ಅಗಸ್ತ್ಯಾಶ್ರಮವು ಇತ್ತು, ಅಲ್ಲಿ ಅವನು ವಾಸಿಸಿರಬಹುದು, ಮತ್ತು ಈ ಕುಂಜರ ಕೋಣದೇಶದ ಜನರೇ ಸಮುದ್ರ ಮಾರ್ಗವಾಗಿ ಜಾವಾದ್ವೀಪಕ್ಕೆ ಹೋಗಿ ಅಲ್ಲಿ ಮೇಲ್ಕಂಡ ಶಿವಾಲಯವನ್ನು ಸ್ಥಾಪಿಸಿರಬಹುದು ಎಂದು ಸ್ಪಷ್ಟವಾಗುತ್ತದೆ.

ಈ ಮೇರೆಗೆ ಅಗಸ್ತ್ಯನು ಜಾವಾ ಮತ್ತು ಅದರ ನೆರೆಯದ್ವೀಪಗಳಲ್ಲಿ ಶಿವಧರ್ಮವನ್ನು ನೆಲೆಗೊಳಿಸಿ ಶಿವಾಲಯಗಳನ್ನು ಸ್ಥಾಪಿಸಿ ಧರ್ಮೋದ್ಧಾರ ಮಾಡಿದ್ದರಿಂದ ಸ್ವಾಭಾವಿಕವಾಗಿ ಅಲ್ಲಿಯ ಜನರು ಅವನಿಗೆ ದೇವಾವತಾರನೆಂದು ತಿಳಿಯಹತ್ತಿದರು. ಆದ್ದರಿಂದ ಅವರು ಅವನನ್ನು ದೇವನಂತೆ ಪೂಜೆಮಾಡಹತ್ತಿದರು. ಪೂರ್ವಜಾವಾದ್ವೀಪದಲ್ಲಿ ದಿನಯವೆಂಬ ಗ್ರಾಮವಿದೆ. ಆಲ್ಲಿ ಕ್ರಿಸ್ತಶಕದ ಪೂರ್ವದ ೭೬೦ ನೇ ಇಸ್ವಿಯ ಒಂದು ಶಿಲಾಲೇಖವಿದ್ದು, ಅದರಲ್ಲಿ ಅಗಸ್ತ್ಯನ ಹೆಸರಿನಿಂದ ಒಂದು ಮೂರ್ತಿಯು ಮಾಡಲ್ಪಟ್ಟಿತ್ತೆಂದು ಉಲ್ಲೇಖವಿದೆ. ಈ ಅಗಸ್ತ್ಯಮುನಿಗೆ ಈ ಪ್ರಾಂತದಲ್ಲಿ 'ಶಿವಗುರು' ಅಥವಾ 'ಭಟ್ಟಾರಕ ಗುರು' ಎಂಬ ಹೆಸರುಗಳು ಬಂದಿವೆ. ಈ ಎಲ್ಲಸಂಗತಿಗಳ ಮೇಲಿಂದ ಅಗಸ್ತ್ಯನು ದಕ್ಷಿಣ ಹಿಂದಸ್ಥಾನ ದೇಶ

ದಲ್ಲಿ ಆರಂಭದಲ್ಲಿ ಧರ್ಮಜಾಗ್ರತಿಯನ್ನುಂಟುಮಾಡಿ, ಆ ಮೇಲೆ ಜಾವಾ ಮೊದಲಾದ ದ್ವೀಪಗಳಿಗೆ ಹೋಗಿ ಅಲ್ಲಿ ಶಿವಧರ್ಮವನ್ನು ಪ್ರಕಾಶಗೊಳಿಸಿದನೆಂದು ವ್ಯಕ್ತವಾಗುತ್ತದೆ.

ಈ ಮೇರೆಗೆ ಅಗಸ್ತ್ಯನ ವೃತ್ತಾಂತವಿದ್ದು ಇನ್ನುಮೇಲೆ ರೇಣುಕನ ವೃತಾಂತವು ಏನಿರುವದೆಂಬದನ್ನು ವಿಚಾರಿಸುವಾ. ಇವನಚರಿತ್ರೆಯು ಅನೇಕ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳಲ್ಲಿ ಉಪಲಬ್ಧವಿರುತ್ತದೆ. ಅವನ ಸಮಗ್ರ ವೃತ್ತಾಂತವನ್ನು ನಾವು ಇಲ್ಲಿ ಕೊಡದೆ ಈಗಿನ ವಿಷಯಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ಮಾತ್ರ ಉಲ್ಲೇಖಿಸುತ್ತೇವೆ.

ರೇಣುಕನು ಈಗ ಹೈದರಾಬಾದ ಸಂಸ್ಥಾನದಲ್ಲಿರುವ ಕೊಲ್ಲಿಪಾಕಿ ಸೋಮೇಶ್ವರಲಿಂಗದಲ್ಲಿ ಉದ್ಭವಿಸಿದನು. ರೇಣುಕನು ಇಲ್ಲಿ ಉದ್ಭವಿಸಿದ ಬಳಿಕ ಅಗಸ್ತ್ಯಾಶ್ರಮವಾದ ಮಲಯ ಪರ್ವತಕ್ಕೆ ಬಂದನು. ಅಲ್ಲಿ ಅಗಸ್ತ್ಯನು ಅತ್ರಿ, ಭೃಗು ಮೊದಲಾದ ಪರಮತಾಪಸರಿಂದ ಕೂಡಿಕೊಂಡು ಇರುತ್ತಿದ್ದನು. ಆಗ ರೇಣುಕನು ಅಗಸ್ತ್ಯನಿಗೆ ಷಟ್‌ಸ್ಥಲ ಮಾರ್ಗವನ್ನು ಉಪದೇಶಿಸಿ ಅವನಿಗೆ ಲಿಂಗಧಾರಣೆ ಮಾಡಿದನು. ಅಲ್ಲಿಂದ ರೇಣುಕನು ಗಗನಮಾರ್ಗವಾಗಿ ಹೊರಟು ಸಮುದ್ರತೀರದಲ್ಲಿರುವ ರಾಮೇಶ್ವರ ಲಿಂಗಕ್ಕೆ ಬಂದನು. ಅಲ್ಲಿ ಅವನು ಕೆಲಕಾಲವಿದ್ದು ಚೋಳದೇಶದ ರಾಜಧಾನಿಯಾದ ಕಂಚೀಪಟ್ಟಣಕ್ಕೆ ಬಂದನು. ಅಲ್ಲಿ ಅನೇಕ ಮಹತ್ವಗಳನ್ನು ಮಾಡಿ, ಅಲ್ಲಿ 'ಪಿಣ್ಯಾಕನಾಯನಾರ್' ಎಂಬ ಹೆಸರಿನಿಂದ ಪ್ರಸಿದ್ಧಹೊಂದಿ ಶಿವಧರ್ಮವನ್ನು ಅಲ್ಲಿ ದೃಢಗೊಳಿಸಿದನು. ಆಮೇಲೆ ತಿರುಗಿ ಕರ್ನಾಟಕ ದೇಶಕ್ಕೆ ಬಂದು ಮಂಗಳವಾಡದಲ್ಲಿ ಇರತೊಡಗಿದನು. ಲಂಕಾಧಿಪತಿಯಾದ ವಿಭೀಷಣನು ತನ್ನ ಅಣ್ಣನಾದ ರಾವಣನ ಮರಣ ಸಮಯದಲ್ಲಿ ಅವನಿಗೆ ಮೂರುಕೋಟಿ ಲಿಂಗಗಳನ್ನು ಸಿಂಹಲದ್ವೀಪದಲ್ಲಿ ಸ್ಥಾಪಿಸುವೆನೆಂದು ವಚನಕೊಟ್ಟಿದ್ದನು. ಆದರೆ ಈ ವಚನವನ್ನು ಪೂರೈಸಲು ರೇಣುಕನೇ ಸಮರ್ಥನೆಂದು ತಾನು ಪೂಜಿಸುತ್ತಿದ್ದ ಮತ್ಸ್ಯೇಶ್ವರನು ತಿಳಿಸಲಾಗಿ ಆಮೇರೆಗೆ ವಿಭೀಷಣನು ರೇಣುಕನನ್ನು ಮಂಗಳವಾಡದಲ್ಲಿ ಕಂಡು ಅವನನ್ನು ಲಂಕೆಗೆ ಕರೆದೊಯ್ದನು. ಆಗ ರೇಣುಕನು ಅತ್ರಿ ಮೊದಲಾದ ಮಹರ್ಷಿಗಳನ್ನು ಬರಮಾಡಿಕೊಂಡು, ಲಂಕಾಪಟ್ಟಣದಲ್ಲಿ ಒಂದೇ ಸುಮೂರ್ತದಲ್ಲಿ ಮೂರುಕೋಟಿ ಶಿವಲಿಂಗಗಳನ್ನು ಸ್ಥಾಪಿಸಿದನು. ಆ ಮೇಲೆ ಅವನು ಅಲ್ಲಿಂದ ಹೊರಟು ಕಕುದ್ಗಿರಿಗೆ ಬಂದು ಅಲ್ಲಿ ಋಷ್ಯಶೃಂಗ ಮುನಿಯಿಂದ

ಸತ್ಕೃತನಾಗಿ, ಕೂಷ್ಮಾಂಡ ಪರ್ವತಕ್ಕೆ ಬಂದನು. ಅಲ್ಲಿಂದ ಹೊರಟು ತುಂಗ ಭದ್ರಾನದೀತೀರದಲ್ಲಿದ್ದ ಪಂಪಾಕ್ಷೇತ್ರಕ್ಕೆ ಬಂದು, ಹಂಪೀವಿರೂಪಾಕ್ಷನನ್ನು ಸಾಕ್ಷಾತ್ಕರಿಸಿಕೊಂಡನು. ಆ ಮೇಲೆ ಕಲ್ಯಾಣ, ಕೊಲ್ಲಾಪುರ ಮೊದಲಾದ ಸ್ಥಳಗಳಿಗೆ ಹೋಗಿ, ಶ್ರೀಶೈಲದಲ್ಲಿ ಅನೇಕ ಸಂವತ್ಸರ ಕಾಲಕಳೆದನು. ಆ ಮೇಲೆ ಕಲ್ಯಾಣ, ಮಂಗಳವಾಡ, ಕಾಶೀಕ್ಷೇತ್ರ, ಹಿಮಾಚಲ ಮುಂತಾದ ಸ್ಥಳಗಳಲ್ಲಿ ಸಂಚರಿಸಿ, ಅಲ್ಲಲ್ಲಿ ಶಿವಧರ್ಮವನ್ನು ನೆಲೆಗೊಳಿಸುತ್ತ ಕಡೆಗೆ ಕೊಲ್ಲಿಪಾಕಿಗೆ ಬಂದು ಅಲ್ಲಿಯ ಶ್ರೀಸೋಮನಾಥ. ಲಿಂಗದಲ್ಲಿಯೇ ಐಕ್ಯ ಹೊಂದಿದನು.

ಈ ಮೇರೆಗೆ ರೇಣುಕನ ಸಂಕ್ಷಿಪ್ತ ವೃತ್ತಾಂತವಿದ್ದು ಈ ಉಭಯ ಮಹಾ ಪುರುಷರ ಚರಿತ್ರೆಗಳಲ್ಲಿಯು ಕೆಲವು ಮಹತ್ವದ ಸಂಗತಿಗಳನ್ನು ನಾವು ವಾಚಕರೆದುರಿಗೆ ಇಡುವೆವು.

## ಕರ್ನಾಟಕದಲ್ಲಿ ಆರ್ಯರ ಪ್ರವೇಶ.

ಉತ್ತರ ಹಿಂದುಸ್ಥಾನದಲ್ಲಿ ಆರ್ಯರು ನೆಲಿಸಿದ ತರುವಾಯ, ಅನೇಕ ಬ್ರಾಹ್ಮಣರ ಗುಂಪುಗಳು ದಕ್ಷಿಣ ದೇಶವನ್ನು ಪ್ರವೇಶಿಸಿ ನಾಗರೀಕತೆ ಯನ್ನು ಅಲ್ಲಿ ಪ್ರಸಾರಗೊಳಿಸಿದರೆಂತಲೂ ಅವರು ಈ ಪ್ರದೇಶವನ್ನು ವಿಂಧಾ ಟವಿಯ ಪೂರ್ವದಿಕ್ಕಿನಿಂದ ಅಂದರೆ ನರ್ಮದೆಯ ಉಗಮಸ್ಥಾನದ ಸಮೀ ಪದಲ್ಲಿ ಪ್ರವೇಶಿಸಿದರೆಂತಲೂ ಆ ಮೇಲೆ ಅವರು ಪೂರ್ವಸಮುದ್ರ ದಂಡೆ ಗುಂಟ ಮುಂದುವರಿದು ತಮಿಳನಾಡಿನಲ್ಲಿ ನಿಂತು ಅಲ್ಲಿ ಸುಧಾರಣೆಯನ್ನು ಮಾಡಿದರೆಂತಲೂ ಬಹುತರ ಈಗಿನ ಯುರೋಪಿಯನ್ ಮತ್ತು ತಮಿಳು ದೇಶದ ಎಲ್ಲ ವಿದ್ವಾಂಸರ ತಿಳವಳಿಕೆಯು ಇದೆ. ಆದರೆ ಮಿ. ಗಾಂಗೂ ಳಿಯವರು ಪ್ರಸಿದ್ಧಪಡಿಸಿದ ಅಗಸ್ತ್ಯ ಚರಿತೆಯಿಂದ ಈ ಅಭಿಪ್ರಾಯಗ ಳೆಲ್ಲ ತಪ್ಪೆಂದು ತೋರಿಬರುತ್ತದೆ. ದಕ್ಷಿಣ ದೇಶವನ್ನು ಪ್ರವೇಶಿಸಿದ ತಂಡ ಗಳಲ್ಲಿ ಅಗಸ್ತ್ಯನ ತಂಡವೇ ಮೊದಲನೆಯದಾಗಿದ್ದು, ಅದು ಈ ದೇಶವನ್ನು ಪೂರ್ವಮಾರ್ಗದಿಂದ ಪ್ರವೇಶಿಸದೆ ಪಶ್ಚಿಮ ಮಾರ್ಗದಿಂದ ಅಂದರೆ ಕರ್ನಾ ಟಕ ದೇಶದೊಳಗಿಂದ ಮೊದಲಿಗೆ ಪ್ರವೇಶಿಸಿದಹಾಗೆ ಮೇಲ್ಕಂಡ ಅಗ ಸ್ತ್ಯನ ವೃತ್ತಾಂತದಿಂದ ತಿಳಿಯುತ್ತದೆ. ಅಗಸ್ತ್ಯಾಶ್ರಮಗಳು ನಾಸಿಕ, ಬದಾಮಿ ಮತ್ತು ಹಂಪಿ ಈ ಸ್ಥಳಗಳ ನೆರೆಯಲ್ಲಿರುತ್ತವೆ. ಈ ಸ್ಥಳಗಳೆಲ್ಲ ಮೊದ ಲಿನ ಕಾಲದಲ್ಲಿ ಕರ್ನಾಟಕದ ಭಾಗಗಳೇ ಆಗಿದ್ದವು. ಆದ್ದರಿಂದ ಅಗ

ಸ್ತ್ಯನು ಕರ್ನಾಟಕ ಪ್ರಾಂತಕ್ಕೆ ಮೊದಲು ಬಂದಿರಬಹುದು, ಆ ಮೇಲೆ ಆವನು ತಮಿಳ ದೇಶಕ್ಕೆ ಹೋಗಿರಬಹುದು, ಎಂದು ತೋರುತ್ತದೆ. ತೆಲಗು ದೇಶದಲ್ಲಿ ಅಗಸ್ತ್ಯಾಶ್ರಮಗಳೇ ಇರುವದಿಲ್ಲ. ಈ ಸಂಗತಿಯಿಂದಲಾದರೂ ಆರ್ಯರು ಪೂರ್ವದಿಕ್ಕಿನಿಂದ ದಕ್ಷಿಣದೇಶವನ್ನು ಪ್ರವೇಶಿಸಲಿಲ್ಲವೆಂದು ತೋರುತ್ತದೆ. ಅವರು ಕರ್ನಾಟಕ ಸೀಮೆಯಲ್ಲಿಯೇ ಪ್ರಥಮವಾಸಮಾಡಿ ಆ ಮೇಲೆ ಅವರು ದಕ್ಷಿಣಕ್ಕೆ ತೆರಳಿದರು.

## ಕರ್ನಾಟಕ ನಾಗರೀಕತೆಯ ಪ್ರಾಚೀನತ್ವ.

ಬಹುತರ ಎಲ್ಲ ಯುರೋಪ್ಯ ಮತ್ತು ಏತದ್ದೇಶಿಯ ಪಂಡಿತರು ದಕ್ಷಿಣ ಹಿಂದುಸ್ಥಾನದ ಪ್ರಾಂತಗಳಲ್ಲಿ ತಮಿಳು ದೇಶವೇ ಮೊದಲಿಗೆ ಸುಧಾರಿಸಿತು, ಆ ಮೇಲೆ ಅಲ್ಲಿಯ ನಾಗರೀಕತೆಯು ಕರ್ನಾಟಕ ಮಲಿಯಾಳ ಮೊದಲಾದ ಪ್ರಾಂತಗಳಲ್ಲಿ ಪಸರಿಸಿತು ಎಂದು ತಿಳಿಯುತ್ತಾರೆ. ತಮಿಳು ವಾಙ್ಮಯವು ಈಗ ಅನೇಕ ಪಂಡಿತರಿಂದ ಪರಿಶೋಧಿಸಲ್ಪಟ್ಟದ್ದರಿಂದ ಅನೇಕ ಪುರಾತನ ತಮಿಳ ಗ್ರಂಥಗಳು ಉಪಲಬ್ಧವಾಗಿವೆ. ಆದರೆ ಕರ್ನಾಟಕದಲ್ಲಿ ಇನ್ನೂ ಈ ತರದ ಶೋಧವಾಗಿಲ್ಲ. ಆದ್ದರಿಂದ ಕನ್ನಡ ವಾಙ್ಮಯವು ತಮಿಳಿನಗಿಂತಲೂ ಮಹತ್ತರವೆಂಬ ಅಭಿಪ್ರಾಯವು ಇನ್ನೂ ವಿದ್ವಜ್ಜನರಲ್ಲಿ ನೆಲೆಗೊಂಡಿಲ್ಲ. ಆದ್ದರಿಂದ ಮೇಲ್ಕಂಡ ತರ್ಕವು ಜನರಲ್ಲಿ ಪ್ರಬಲವಾಗಲಿಕ್ಕೆ ಕಾರಣವಾಗಿರುತ್ತದೆ. ಆದರೆ ಅಗಸ್ತ್ಯನ ಮೇಲ್ಕಂಡ ಚರಿತ್ರೆಯಿಂದ ಈ ತಿಳವಳಿಕೆಯಾದರೂ ತಪ್ಪೆಂದು ತೋರುತ್ತದೆ. ತಮಿಳ ಭಾಷೆಯ ಸುವ್ಯಸ್ಥೆಯು ಅಗಸ್ತ್ಯನಿಂದಲೇ ಮೊದಲು ಆಯಿತೆಂದು ತಮಿಳರೇ ಒಪ್ಪಿಕೊಳ್ಳುತ್ತಾರೆ. ಅದರಂತೆಯೇ ಅಲ್ಲಿಯ ವೈದ್ಯಶಾಸ್ತ್ರ, ಶಿಲ್ಪಶಾಸ್ತ್ರ, ಧಾರ್ಮಿಕ ಸುಧಾರಣೆ ಮೊದಲಾದ ಪ್ರಗತಿಯ ಕಾರ್ಯಗಳಿಗೆ ಅಗಸ್ತ್ಯನೇ ಮೂಲ ಕಾರಣನೆಂದು ಅವರು ಒಪ್ಪಿಕೊಳ್ಳುತ್ತಾರೆ. ಇದರಿಂದ ತಮಿಳ ನಾಡಿನ ಪ್ರಗತಿಯು ಆರ್ಯರು ಆ ಪ್ರಾಂತಕ್ಕೆ ಬಂದ ಬಳಿಕ ಆಯಿತೆಂದು ಗೊತ್ತಾಗುತ್ತದೆ. ಆದರೆ ಕರ್ನಾಟಕ ಭಾಷೆ ಮತ್ತು ಅದರ ನಾಗರೀಕತೆ ಇವುಗಳ ಉಗಮದ ವಿಷಯವಾಗಿ ಆರ್ಯರ ಸಂಬಂಧವಿದ್ದ ಹಾಗೆ ಯಾವ ಐತಿಹ್ಯವು ಇರುವದಿಲ್ಲ. ಅವರು ತಮ್ಮ ಭಾಷೆ ಅಥವಾ ವ್ಯಾಕರಣ ಅಗಸ್ತ್ಯ ಅಥವಾ ಬೇರೆ ಯಾವ ಆರ್ಯ ಋಷಿಯಿಂದ ಉತ್ಪನ್ನವಾಯಿತೆಂದು ಅವರು ತಿಳಿಯುವದಿಲ್ಲ. ಅಗಸ್ತ್ಯನು ಇಲ್ಲಿಗೆ ಬರುವ ಪೂರ್ವದಲ್ಲಿಯೇ ಐಹೊಳೆ ಮತ್ತು ಬದಾ

ಮಿಯಲ್ಲಿ ರಾಜ್ಯಗಳಿದ್ದವು. ಇಲ್ಲಿ ಅವನು ಯಾವ ತರದ ಧರ್ಮ ಪ್ರಸಾರ ಅಥವಾ ಶಾಸ್ತ್ರ ರಚನೆ ಮಾಡಿದಂತೆ ಎಲ್ಲಿಯೂ ಉಲ್ಲೇಖವಿಲ್ಲ. ಆದ್ದರಿಂದ ಆರ್ಯರು ದಕ್ಷಿಣ ದೇಶಕ್ಕೆ ಬರುವ ಪೂರ್ವದಲ್ಲಿಯೇ ಕರ್ನಾಟಕವು ನಾಗರೀಕತೆಯನ್ನು ಹೊಂದಿರಬಹುದು. ತೆಲಗರು ತಮ್ಮ ವ್ಯಾಕರಣವು ಕಣ್ವ ಋಷಿಯಿಂದ ಆಯಿತೆಂದುತಿಳಿಯುತ್ತಾರೆ. ಹೀಗೆ ಅವರಾದರೂ ತಮಿಳರಂತೆ ಆರ್ಯರೊಡನೆ ತಮ್ಮ ಸಂಬಂಧವನ್ನು ತೋರಿಸುತ್ತಾರೆ. ಅಂದಬಳಿಕ ತೆಲಗರೂ ತಮಿಳರೂ ನಾಗರೀಕತೆಯನ್ನು ಹೊಂದುವ ಪೂರ್ವದಲ್ಲಿಯೇ ಕನ್ನಡಿಗರು ಸುಧಾರಣೆಯನ್ನು ಹೊಂದಿರ ಬಹುದೆಂದು ಊಹಿಸಲಿಕ್ಕೆ ಏನೂ ಬಾಧೆಯು ತೋರುವದಿಲ್ಲ.

ತ್ರಿವೇಂದ್ರಮ್‌ದಲ್ಲಿಯ ಸಿ. ಎನ್. ಅನಂತರಾಮಯ್ಯ ಶಾಸ್ತ್ರಿ ಎಮ್. ಎ. ಎಂಬವರು 'ಇಂಡಿಯನ್ ಸೋಶಲ್ ರಿಫಾರ್ಮರ'ದ೧೯೨೭, ೧೫ ನೇ ಜನೆವರಿ ಸಂಚಿಕೆಯಲ್ಲಿ ಭಾಷಾಯುತ್ಪತ್ತಿಯ ಶಾಸ್ತ್ರದ ಬಗ್ಗೆ ತಾವು ಮಾಡಿದ ಶೋಧದಲ್ಲಿ ದ್ರಾವಿಡ ದೇಶದ ಭಾಷೆಗಳಲ್ಲಿ ಮತ್ತು ಪೃಥ್ವಿಯಲ್ಲಿಯ ಬೇರೆ ಸುಧಾರಿಸಿದ ಭಾಷೆಗಳಲ್ಲಿ ಕನ್ನಡವೇ ಹೆಚ್ಚು ಪುರಾತನ ಸ್ಥಿತಿಯನ್ನು ತೋರಿಸುತ್ತದೆಂದು ಬರೆದಿರುತ್ತಾರೆ. ಅಂದಬಳಿಕ ಕರ್ನಾಟಕದ ಸುಧಾರಣೆಯು ತಮಿಳಿನಗಿಂತಲೂ ಪೂರ್ವದಲ್ಲಿಯೇ ಉಂಟಾಗಿತ್ತೆಂಬ ಸಂಗತಿಯು ಈಗ ಜನರಿಗೆ ಹೆಚ್ಚೆಚ್ಚು ವಿದಿತವಾಗ ತೊಡಗಿದೆಂದು ತೋರಹತ್ತಿದೆ.

## ಕರ್ನಾಟಕವೇ ಶೈವ ಧರ್ಮದ ಮೂಲಸ್ಥಾನವು.

ಮೇಲ್ಕಂಡ ಅಗಸ್ತ್ಯ ಚರಿತ್ರೆಯನ್ನು ಬರೆದ ವಿ. ಗಾಂಗೂಳಿಯವರು ದಕ್ಷಿಣ ದೇಶದಲ್ಲಿ ಶೈವಧರ್ಮವನ್ನು ಪ್ರಸಾರ ಪಡಿಸಿದವರು ಅಗಸ್ತ್ಯನೇ ಎಂದು ತಿಳಿದಿದ್ದ ಹಾಗೆ ತೋರುತ್ತದೆ. ಆದರೆ ಈ ಅಭಿಪ್ರಾಯವು ತಪ್ಪು ಇರುತ್ತದೆ. ಹಿಂದೂ ಧರ್ಮದಲ್ಲಿ ನಾವು ಆಗಮ ಧರ್ಮ ಮತ್ತು ವೈದಿಕ ಧರ್ಮ ಎಂದು ಎರಡು ಮುಖ್ಯಭಾಗಗಳನ್ನು ಮಾಡಬಹುದು. ಈ ಎರಡೂ ಧರ್ಮಗಳಲ್ಲಿ ನಿಕಟ ಸಂಬಂಧವಿದ್ದರೂ ಅವುಗಳ ಪ್ರಗತಿಯ ಮಾರ್ಗಗಳು ಮಾತ್ರ ಭಿನ್ನವಾಗಿರುತ್ತವೆ. ವೈದಿಕ ಧರ್ಮವು ಉತ್ತರ ದೇಶದ್ದು, ಆಗಮ ಧರ್ಮವು ದಕ್ಷಿಣ ದೇಶದ್ದು ಇರುತ್ತವೆ. ದಕ್ಷಿಣದೇಶದವರೇ ಈ ಶೈವ ಧರ್ಮವನ್ನು ಎಲ್ಲ ಕಡೆಗೆ ಪ್ರಬಲಗೊಳಿಸಿದರು. ಶೈವ ಧರ್ಮವು ದಕ್ಷಿಣ

ದೇಶದಲ್ಲಿಯೇ ಪ್ರಬಲವಾಗಿರುತ್ತದೆ. ಆದರೆ ಅದು ಉತ್ತರ ದೇಶದಲ್ಲಿ ಅಷ್ಟು ಪ್ರಬಲವಾಗಿರುವದಿಲ್ಲ. ಆದ್ದರಿಂದ ಅಗಸ್ತ್ಯನು ಉತ್ತರ ದೇಶದಿಂದ ಈ ಶೈವಧರ್ಮವನ್ನು ತಂದನೆನ್ನುವದರಕಿಂತಲೂ ಅವನು ದಕ್ಷಿಣದೇಶಕ್ಕೆ ಬಂದಬಳಿಕ ಅದನ್ನು ಸ್ವೀಕರಿಸಿದನೆಂದು ತಿಳಿದರೆ ಹೆಚ್ಚಿಗೆ ಸಯುಕ್ತಿಕವೆಂದು ತೋರುತ್ತದೆ. ಅವನು ಆರಂಭದಲ್ಲಿ ಕರ್ನಾಟಕ ದೇಶಕ್ಕೆ ಬಂದದ್ದರಿಂದ ಅವನು ಈ ಶೈವಧರ್ಮವನ್ನು ಇಲ್ಲಿಯೇ ಅಂಗೀ ಕರಿಸಿರಬಹುದು. ರೇಣುಕ ಚರಿತ್ರೆಯನ್ನು ನೋಡಿದರೆ ರೇಣುಕನೇ ಅಗಸ್ತ್ಯನಿಗೆ ವೀರಶೈವಧರ್ಮದ ದೀಕ್ಷೆಯನ್ನು ಕೊಟ್ಟನೆಂದು ತಿಳಿಯುತ್ತದೆ. ಮೇಲ್ಕಂಡ ಸಂಗತಿಗಳಿಂದ ಈ ಐತಿಹ್ಯದಲ್ಲಿ ಸತ್ಯಾಂಶವಿರಬಹುದು. ಈ ಮೇರೆಗೆ ಅಗಸ್ತ್ಯನು ಕರ್ನಾಟಕದಲ್ಲಿ ಶೈವಧರ್ಮವನ್ನು ಸ್ವೀಕರಿಸಿ ಆ ಮೇಲೆ ಅವನು ತಮಿಳ ಮತ್ತು ಜಾವಾದ್ವೀಪಗಳಲ್ಲಿ ಅದನ್ನು ಪ್ರಸಾರಗೊಳಿಸಿರಬಹುದು.

ಹಿಂದುಸ್ತಾನದಲ್ಲಿ ಅತ್ಯಂತ ಪ್ರಸಿದ್ಧವಾಗಿರುವ ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಕೆಲವುಗಳು ಮತ್ತು ಇನ್ನೂ ಅನೇಕ ಮಹತ್ವದ ಪುರಾತನ ಶಿವಾಲಯಗಳು ಕರ್ನಾಟಕದಲ್ಲಿಯೇ ಇವೆ. ನಾಸಿಕದ ತ್ರ್ಯಂಬಕೇಶ್ವರ, ಪರಳಿ ವೈಜನಾಥ, ಗೋಕರ್ಣದ ಮಹಾಬಳೇಶ್ವರ, ಪರ್ವತದ ಮಲ್ಲಿಕಾರ್ಜುನಲಿಂಗ, ಹಂಪಿಯ ವಿರೂಪಾಕ್ಷಲಿಂಗ ಮೊದಲಾದ ಪುರಾತನ ಶಿವಾಲಯಗಳು ಇಲ್ಲಿಯೇ ಇವೆ. ಆದರೆ ತಮಿಳದೇಶದಲ್ಲಿ ಶಿವಾಲಯಗಳು ಇಷ್ಟು ಪುರಾತನ ಕಾಲದವುಗಳಿಲ್ಲ. ಈ ಸಂಗತಿಯಿಂದಲಾದರೂ ಕರ್ನಾಟಕವೇ ಶೈವಧರ್ಮದ ಮೂಲಸ್ಥಾನವಾಗಿರಬೇಕೆಂದು ತೋರುತ್ತದೆ. ಆದ್ದರಿಂದ ಅಗಸ್ತ್ಯನು ಈ ಪ್ರಾಂತದಲ್ಲಿ ಇದ್ದಾಗ ಶೈವಧರ್ಮದ ಬೋಧೆಯನ್ನು ಹೊಂದಿ, ಮುಂದೆ ಅದನ್ನು ಬೇರೆ ಬೇರೆ ದೇಶಗಳಲ್ಲಿ ಪ್ರಸಾರಪಡಿಸಿರುವದೇ ಹೆಚ್ಚಿಗೆ ಸಂಭವನೀಯವು.

ರೇಣುಕನು ಅಗಸ್ತ್ಯನಿಗೆ ಬೋಧಮಾಡಿದ ಸ್ಥಳವು ಮಲಯ ಪರ್ವತವೆಂದು ವೀರಶೈವರು ತಿಳಿಯುತ್ತಾರೆ. ವಾಯು ಪುರಾಣ ಅಧ್ಯಾಯ ೪೮ ಇದರಲ್ಲಿ ಅಗಸ್ತ್ಯನು ಮಹಾಮಲಯ ಪರ್ವತದಲ್ಲಿ ವಾಸಿಸುತ್ತಿದ್ದನೆಂದು ಸ್ಪಷ್ಟವಾಗಿ ಬರೆದದೆ. ಈ ಸ್ಥಾನವು ಸುಮಾತ್ರಾದ್ವೀಪದಲ್ಲಿರುವ ಮಲಯಾ ಪರ್ವತವಿರಬಹುದೆಂದು ಮಿ. ಗಾಂಗೂಳಿಯವರು ತರ್ಕಿಸಿದ್ದಾರೆ. ಆದರೆ ಈಗ ಬಾಳೇಹಳ್ಳಿಯು ಇರುವ ಸ್ಥಾನಕ್ಕೆ ಮಲಯಪರ್ವತವೆಂದು ಈಗಲೂ ಹೆಸರು ಇದೆ. ಮತ್ತು ಇಲ್ಲಿಯೇ ಅಗಸ್ತ್ಯನು ರೇಣುಕನಿಂದ

ದೀಕ್ಷೆ ಹೊಂದಿದನೆಂದು ವೀರಶೈವರು ತಿಳಿಯುತ್ತಾರೆ. ಆದ್ದರಿಂದ ವೀರಶೈವರು ತಿಳಿಯುತ್ತಿದ್ದಂತೆ ಅಗಸ್ತ್ಯನು ಶೈವ ಧರ್ಮೋಪದೇಶ ಹೊಂದಿದ್ದು ಈ ಸ್ಥಳವೇ ಆಗಿರಬಹುದೆಂದು ತೋರುತ್ತದೆ.

## ಅಗಸ್ತ್ಯ ರೇಣುಕರಿಂದ ಶೈವಧರ್ಮದ ಪ್ರಸಾರವು.

ಹೀಗೆ ಅಗಸ್ತ್ಯನು ಶೈವ ಧರ್ಮವನ್ನು ಸ್ವೀಕರಿಸಿದ ಬಳಿಕ ಉಭಯತರು ತಮಿಳದೇಶಕ್ಕೆ ಹೋಗಿರಬಹುದು. ಅವರು ಮೊದಲು ರಾಮೇಶ್ವರಕ್ಕೆ ಹೋಗಿ ಆ ಮೇಲೆ ಅವರಿಬ್ಬರಲ್ಲಿ ಅಗಸ್ತ್ಯನು ಪಾಂಡ್ಯದೇಶಕ್ಕೂ ರೇಣುಕನು ಚೋಳದೇಶಕ್ಕೂ ಹೋದಂತೆ ತೋರುತ್ತದೆ. ಮತ್ತು ಈ ಉಭಯತರು ಆ ರಾಜ್ಯಗಳಲ್ಲಿ ಶೈವಧರ್ಮಗಳನ್ನು ಸ್ಥಾಪಿಸಿದರು. ಆ ಮೇಲೆ ರೇಣುಕನು ಕರ್ನಾಟಕದೇಶಕ್ಕೂ ಅಗಸ್ತ್ಯನು ಜಾವಾದ್ವೀಪಕ್ಕೂ ಹೋದಂತೆತೋರುತ್ತದೆ. ಅಗಸ್ತ್ಯನು ಜಾವಾ ದ್ವೀಪಕ್ಕೆ ಹೋದ ಬಳಿಕ ಮಿ. ಗಾಂಗೂಳಿಯವರು ವಿವರಿಸಿಂತೆ ಅಲ್ಲಿಯೂ ಅದರ ಸುತ್ತು ಮುತ್ತಲಿನ ದ್ವೀಪಗಳಲ್ಲಿಯೂ ಅವನು ಶೈವ ಧರ್ಮವನ್ನು ವಿಸ್ತರಿಸಿದನು. ಇತ್ತ ರೇಣುಕನು ಲಂಕಾಧಿಪತಿಯಿಂದ ಕರೆಯಲ್ಪಟ್ಟವನಾಗಿ ಸಿಂಹಲ ದ್ವೀಪಕ್ಕೆ ಶೈವ ಧರ್ಮ ಪ್ರಸಾರಕ್ಕೋಸ್ಕರ ಹೋದನು. ಅಲ್ಲಿ ರೇಣುಕನು ಮೂರು ಕೋಟಿ ಶಿವಲಿಂಗಗಳನ್ನು ಸ್ಥಾಪಿಸಿದನು. ಈ ಮೇರೆಗೆ ಅಗಸ್ತ್ಯ ರೇಣುಕರು ಮೊದಲು ದಕ್ಷಿಣ ಹಿಂದುಸ್ಥಾನದಲ್ಲಿ ಶೈವಧರ್ಮ ಪ್ರಸಾರ ಮಾಡಿದ ಬಳಿಕ ದ್ವೀಪಾಂತರಗಳಲ್ಲಿ ಅದನ್ನು ಸ್ಥಾಪಿಸಲಿಕ್ಕೆ ಹೋದ ಹಾಗೆ ತೋರುತ್ತದೆ. ಮತ್ತು ಈ ಪರಪ್ರಾಂತಗಳಲ್ಲಿ ಈಗಲೂ ಕಾಣಬರುವ ಅನೇಕ ಶೈವಗುಡಿಗಳ ಅವಶೇಷಗಳಿಂದ ಈ ಕಾರ್ಯವನ್ನು ದಕ್ಷಿಣಹಿಂದುಸ್ಥಾನದ ಶೈವಮಹಾತ್ಮರೇ ಮಾಡಿರುವದು ನಿಶ್ಚಯವು. ಈ ಕಾರ್ಯವನ್ನು ಅಗಸ್ತ್ಯನೂ ರೇಣುಕನೂ ಮಾಡಿರುವರೆಂದು ಬಹು ಪುರಾತನ ಕಾಲದಿಂದಲೂ ಶೈವರಲ್ಲಿ ತಿಳುವಳಿಕೆಯು ಇದೆ. ಇದಕ್ಕೆ ಶಿಲಾಲೇಖಗಳ ಆಧಾರಗಳೂ ಇತ್ತಿತ್ತ ದೊರೆಯಹತ್ತಿವೆ. ಆದ್ದರಿಂದ ಅಗಸ್ತ್ಯ ರೇಣುಕರ ಐತಿಹ್ಯಗಳಲ್ಲಿ ಸತ್ಯಾಂಶವು ಇರಬಹುದೆಂದು ತೋರುತ್ತದೆ.

## ಜಾವಾದ್ವೀಪಕ್ಕೆ ಕರ್ನಾಟಕಸ್ಥರ ಆಗಮನ.

ರೇಣುಕನು ಲಂಕೆಯಲ್ಲಿ ಶೈವಧರ್ಮವನ್ನು ಸ್ಥಾಪಿಸಿದ ಬಳಿಕ ಅವನು ಹಂಪಿಯ ನೆರೆಯಲ್ಲಿ ಕೆಲಕಾಲವಿದ್ದನೆಂದು ಅವನ ಚರಿತ್ರೆಯಿಂದ ತಿಳಿಯು

ತ್ತದೆ. ಮಿ. ಗಾಂಗೂಳಿಯವರು ತಮ್ಮ ಲೇಖದಲ್ಲಿ ಕ್ರಿಸ್ತೀಶಕದ ಪೂರ್ವದ ೭೩೨ ನೇ ಇಸ್ವಿಯ ಶಿಲಾಲೇಖವನ್ನು ಉಲ್ಲೇಖಿಸಿದ್ದು ಅದರಿಂದ "ಕುಂಜರ ಕುಂಜದೇಶ"ದ ಜನರು ಮಧ್ಯಜಾವಾದೇಶದಲ್ಲಿ "ದಕ್ಷಿಣಕೋಡೊ" ಎಂಬಲ್ಲಿ ಒಂದು ಸುಂದರವಾದ ಶಿವಾಲಯವನ್ನು ಸ್ಥಾಪಿಸಿದರೆಂದು ತಿಳಿಯುತ್ತದೆ. ಈ ಕುಂಜರ ಕುಂಜದೇಶವು ಹಂಪಿಯ ಪ್ರದೇಶವೆಂದು ಮಿ. ಗಾಂಗೂಳಿಯವರು ಸಿದ್ಧಪಡಿಸಿದ್ದಾರೆ. ಇದರ ಮೇಲಿಂದ ಆ ಕಾಲಕ್ಕೆ ಕರ್ನಾಟಕಸ್ಥರು ಸಹ ಜಾವಾ ದ್ವೀಪಕ್ಕೆ ಹೋಗಿ ಶೈವಧರ್ಮ ಸ್ಥಾಪನೆಯ ಕಾರ್ಯವನ್ನು ಮಾಡಿದರೆಂದು ತಿಳಿಯುತ್ತದೆ. ಆದರೆ ರೇಣುಕನು ಮಾತ್ರ ಸ್ವತಃ ಜಾವಾ ದ್ವೀಪಕ್ಕೆ ಹೋದಂತೆ ಎಲ್ಲಿಯೂ ಉಲ್ಲೇಖವಿಲ್ಲ. ಆದ್ದರಿಂದ ಅವನು ಹಂಪೆಯ ನೆರೆಯಲ್ಲಿ ಇದ್ದಾಗ ಅಗಸ್ತ್ಯನಿಗೆ ಸಹಾಯವಾಗಿ ಕರ್ನಾಟಕ ಶೈವರನ್ನು ಜಾವಾ ದ್ವೀಪಕ್ಕೆ ಕಳಿಸಿರಬಹುದು.

ಈ ಮೇರೆಗೆ ಈ ಉಭಯ ಮಹಾತ್ಮರ ಚರಿತ್ರೆಗಳನ್ನು ತುಲನಾತ್ಮಕ ದೃಷ್ಟಿಯಿಂದ ಪರೀಕ್ಷಿಸಿ ನೋಡಿದರೆ ಕನ್ನಡ ನಾಡಿನ ಸಂಸ್ಕೃತಿ, ಶೈವಧರ್ಮಗಳ ಉಗಮ, ಅವುಗಳ ಪ್ರಸಾರ, ಕರ್ನಾಟಕಸ್ಥರ ಜಲಪರ್ಯಟನ ಇವೇ ಮೊದಲಾದ ವಿಷಯಗಳ ಬಗ್ಗೆ ಒಂದು ವಿಲಕ್ಷಣ ತರವಾದ ಪ್ರಕಾಶವು ಬೀಳ ಹತ್ತುತ್ತದೆ. ಈ ಸಂಗತಿಗಳನ್ನು ಕರ್ನಾಟಕಸ್ಥರೂ ವೀರಶೈವರೂ ಅತಿ ಸೂಕ್ಷ್ಮವಾಗಿ ನಿದರ್ಶಿಸುವದು ಅತ್ಯಾವಶ್ಯಕವಾಗಿದೆ.

## ಪಂಚಾಚಾರ್ಯರು.

ರೇಣುಕ, ದಾರುಕ ಮೊದಲಾದ ಪಂಚಾಚಾರ್ಯರು ಬಹು ಪುರಾತನ ಕಾಲದವರಾಗಿದ್ದು ಅವರೇ ವೀರಶೈವ ಧರ್ಮವನ್ನು ಪ್ರತಿಷ್ಠಾಪಿಸಿದರೆಂದು ವೀರಶೈವರು ತಿಳಿಯುತ್ತಾರೆ. ಮೇಲ್ಕಂಡ ಅಗಸ್ತ್ಯ ರೇಣುಕರ ಚರಿತ್ರೆಗಳಿಂದ ಈ ತಿಳುವಳಿಕೆಯು ಕೇವಲ ಕಾಲ್ಪನಿಕವಿರದೆ ಅದರಲ್ಲಿ ನಿಜಾಂಶವಿರುವದೆಂಬದು ವಾಚಕರಿಗೆ ತಿಳಿಯದೆ ಇರಲಾರದು. ಈ ಪಂಚಾಚಾರ್ಯರ ಪೀಠಗಳಲ್ಲಿ ಮೂರು ಪೀಠಗಳು ಕರ್ನಾಟಕದಲ್ಲಿಯೇ ಇವೆ. ಆದರೆ ತಮಿಳ ದೇಶದಲ್ಲಿ ಈತರದ ಯಾವ ಮಹತ್ವದ ಪೀಠವೂ ಇರುವದಿಲ್ಲ. ಈ ಸಂಗತಿಯಿಂದಲಾದರೂ ಶೈವಧರ್ಮಗಳ ಉಗಮವು ತಮಿಳ ದೇಶವಾಗಿರದೆ ಕರ್ನಾಟಕ ದೇಶವೇ ಆಗಿರಬಹುದೆಂಬ ಊಹೆಗೆ ಆಸ್ಪದ ಕೊಡುತ್ತದೆ. ಈ ಪಂಚಪೀಠಗಳಲ್ಲಿ ಎರಡು ಪೀಠಗಳು ಉತ್ತರ ಹಿಂದು

ಸ್ಥಾನದಲ್ಲಿ ಇವೆ. ಈ ಪೀಠದವರು ಉತ್ತರಕ್ಕಿರುವ ಕಾಶ್ಮೀರ ಮೊದಲಾದ ಸ್ಥಳಗಳಲ್ಲಿ ಆಗಮ ಧರ್ಮವನ್ನು ಪ್ರಸಾರಪಡಿಸಿರಬಹುದು. ಹ್ಯಾಗೆ ಬಸವೇಶ್ವರನ ಕಾಲದಲ್ಲಿ ಒಂದು ಪ್ರಚಂಡವಾದ ಧರ್ಮಜಾಗ್ರತೆಯು ಕರ್ನಾಟಕದಲ್ಲಿ ಉತ್ಪನ್ನವಾಯಿತೋ, ಹಾಗೆಯೇ ರೇಣುಕರ ಕಾಲದಲ್ಲಿಯೂ ಕರ್ನಾಟಕದಲ್ಲಿ ಒಂದು ಮಹತ್ತರವಾದ ಧರ್ಮಜಾಗ್ರತಿಯು ಉಂಟಾಗಿರಬಹುದು. ಈ ಜಾಗ್ರತೆಯಿಂದ ಅಗಸ್ತ್ಯ, ಅತ್ರಿ, ಭೃಗು ಮೊದಲಾದ ಋಷಿಗಳು ಶೈವಧರ್ಮಾನುಯಾಯಿಗಳಾಗಿ ಅವರು ತಮಿಳು, ತೆಲುಗು, ಕಾಶ್ಮೀರ, ಸಿಂಹಲದ್ವೀಪ, ಜಾವಾ ಮುಂತಾದ ದೇಶಗಳಲ್ಲಿ ಅದನ್ನು ಪ್ರಸಾರಪಡಿಸಿರಬಹುದು.

## ರೇಣುಕರ ಕಾಲ.

ಈ ಮಹತ್ತರ ಧರ್ಮಜಾಗ್ರತೆಯ ಕಾಲವನ್ನು ನಾವು ನಿಶ್ಚಯಿಸುವದು ಮಹತ್ವದ್ದಿರುತ್ತದೆ. ಎಮ್. ಶ್ರೀನಿವಾಸ ಅಯ್ಯಂಗಾರ ಎಮ್. ಎ. ಇವರು "ಟಾಮಿಲ್‌ಸ್ಟಡೀಜ" ಎಂಬ ತಮ್ಮ ಗ್ರಂಥದಲ್ಲಿ ಅಗಸ್ತ್ಯನು ಕ್ರಿ. ಶ. ಪೂರ್ವದಲ್ಲಿ ೪ ನೇ ಶತಮಾನದಲ್ಲಿ ಇರಬಹುದೆಂದು ಬರೆದಿದ್ದಾರೆ. ರೇಣುಕನು ಅಗಸ್ತ್ಯನ ಸಮಕಾಲೀನನಾದುದರಿಂದ ಇದೇ ಕಾಲಕ್ಕೆ ಅವನು ಇರಬಹುದು ರೇಣುಕನು ಏಳುನೂರುವರ್ಷ ಗುಪ್ತವಾಗಿಯೂ ಏಳುನೂರು ವರ್ಷ ಪ್ರಕಟವಾಗಿಯೂ ಹೀಗೆ ಒಟ್ಟಿಗೆ ಹದಿನಾಲ್ಕುನೂರುವರ್ಷ ಬಸವೇಶ್ವರನಕಿಂತ ಪೂರ್ವದಲ್ಲಿ ಇದ್ದನೆಂದು ವೀರಶೈವರು ತಿಳಿಯುತ್ತಾರೆ. ಬಸವೇಶ್ವರನು ೧೨ ನೇ ಶತಮಾನದಲ್ಲಿ ಇದ್ದದರಿಂದ ರೇಣುಕನು ಅವನಿಂದ ಹಿಂದೆ ಹದಿನಾಲ್ಕುನೂರುವರ್ಷ ಅಂದರೆ ಕ್ರಿ. ಶ. ಪೂರ್ವದಲ್ಲಿ ೨೦೦ ವರ್ಷಗಳ ಹಿಂದೆ ಸೋಮೇಶ್ವರ ಲಿಂಗದಲ್ಲಿ ಉದ್ಭವಿಸಿದನೆಂದು ತಿಳಿಯಬೇಕಾಗುತ್ತದೆ. ಆದರೆ ಕರ್ನಾಟಕಸ್ಥರು ಜಾವಾದ್ವೀಪದಲ್ಲಿ ಶಿವಾಲಯವನ್ನು ಸ್ಥಾಪಿಸಿದವರ್ಷವು ಕ್ರಿ. ಶ. ಪೂರ್ವ ೭೩೨ ಇರುತ್ತದೆ. ಅಂದಮೇಲೆ ರೇಣುಕನು ಕ್ರಿ. ಶ. ಪೂರ್ವ ೭೩೨ ಇಸ್ವಿಯಲ್ಲಿ ಅಥವಾ ಕೆಲವು ಕಾಲ ಅದಕ್ಕೂ ಮೊದಲು ಇದ್ದಿರಬಹುದೆಂದು ತೋರುತ್ತದೆ. ಹಿಂದೂಧರ್ಮದ ಪ್ರಗತಿಯಲ್ಲಿ ಕೆಲವು ಕಾಲಗಳು ಆಧುನಿಕ ವಿದ್ವಾಂಸರಿಂದ ಕಲ್ಪಿಸಲ್ಪಟ್ಟಿವೆ. ಅವುಯಾವವೆಂದರೆ, ವೈದಿಕಕಾಲ, ಉಪನಿಷತ್‌ಕಾಲ, ಬೌದ್ಧಕಾಲ, ಪೌರಾಣಿಕಕಾಲ ಇತ್ಯಾದಿ. ಆಗಮಗಳಕಾಲವು ಉಪನಿಷತ್‌ಕಾಲಕ್ಕೆ ಬಹು

ಸಮಿಾಪವರ್ತಿ, ಆದರೆ ಅವುಗಳ ತರುವಾಯ ಆಗಿರಬೇಕು. ಯಾಕಂದರೆ ಇವೆರಡೂವಾಙ್ಮಯಗಳಲ್ಲಿ ವಿಚಾರಸಾಮ್ಯತೆಯು ಅತ್ಯಂತವಾಗಿ ಇರುತ್ತದೆ. ಆದರೆ ಮತ್ತೊಂದು ವಿಶೇಷ ಸಂಗತಿ ಏನಂದರೆ, ವೇದಗಳಲ್ಲಿ ಮತ್ತು ಉಪನಿಷತ್ತುಗಳಲ್ಲಿ ಮೂರ್ತಿ ಪೂಜೆಯು ಇರುವದಿಲ್ಲ. ವೇದಗಳಲ್ಲಿ ಪಂಚಭೂತಗಳ ಪೂಜೆಯೂ ಉಪನಿಷತ್ತುಗಳಲ್ಲಿ ನಿರಾಕಾರ ಪರಬ್ರಹ್ಮನ ವಿಚಾರವೂ ಇರುತ್ತವೆ. ಆದರೆ ಅವುಗಳಲ್ಲಿ ಮೂರ್ತಿ ಪೂಜೆಯ ಉಲ್ಲೇಖವಿರುವದಿಲ್ಲಾದ್ದರಿಂದ ಆ ಕಾಲಕ್ಕೆ ಹಿಂದುಸ್ಥಾನದಲ್ಲಿ ದೇವಾಲಯಗಳನ್ನು ಕಟ್ಟಿಸುವ ಸಾಂಪ್ರದಾಯವಿದ್ದಿದ್ದಿಲ್ಲ. ಆದರೆ ಬೌದ್ಧ ಜೈನ ಕಾಲದಲ್ಲಿಯೂ ಪೌರಾಣಿಕ ಕಾಲದಲ್ಲಿಯೂ ದೇವರಿಗೆ ಮೂರ್ತಿಯುಂಟೆಂದು ಭಾವಿಸಿ ಅವನನ್ನು ಜನರು ಪೂಜಿಸ ಹತ್ತಿದ್ದರಿಂದಲೂ ಮಹಾತ್ಮರ ಅವಶೇಷಗಳನ್ನು ಪೂಜಿಸುವ ಸಾಂಪ್ರದಾಯವು ಉತ್ಪನ್ನವಾದ್ದರಿಂದಲೂ ಮೂರ್ತಿ ಪೂಜೆಯು ಪ್ರಾರಂಭವಾಯಿತು, ಮತ್ತು ಅಂದಿನಿಂದ ಸುಂದರವಾದ ದೇವಾಲಯಗಳು ಕಟ್ಟಲ್ಪಡಹತ್ತಿದವು, ಹೀಗೆ ಆಧುನಿಕ ವಿದ್ವಾಂಸರು ತಿಳಿಯುತ್ತಾರೆ. ಈ ಕಲ್ಪನೆಯು ನಿಜವಿರಬಹುದೆಂದು ತೋರುತ್ತದೆ. ಆದರೆ ಶೈವರು ದೇವರನ್ನು ಲಿಂಗ ಅಂದರೆ ಒಂದು ಮೂರ್ತಿ ಎಂದು ಭಾವಿಸಿ ಪೂಜಿಸುತ್ತಾರೆ. ಆದ್ದರಿಂದ ಅವರು ಲಿಂಗಗಳನ್ನು ಸ್ಥಾಪಿಸಿ, ಅವುಗಳಿಗೆ ಸುಂದರವಾದ ದೇವಾಲಗಳನ್ನು ಕಟ್ಟಿಸಿದರು. ಇದರ ಮೇಲಿಂದ ನಾವು ಆಗಮಧರ್ಮಗಳು ಉಪನಿಷತ್ತುಗಳ ತರುವಾಯ ಆಗಿರಬಹುದೆಂದು ಊಹಿಸಬೇಕಾಗಿದೆ. ಆದರೆ ಬೌದ್ಧನು ಕ್ರಿಸ್ತಶಕದ ಪೂರ್ವ ೫ ನೇ ಶತಮಾನದಲ್ಲಿ ಇದ್ದದರಿಂದ, ಆಗಮಗಳ ಕಾಲವು ಅವನಕಿಂತ ಪೂರ್ವದಲ್ಲಿ ಮತ್ತು ಉಪನಿಷತ್ಕಾಲ ತರುವಾಯ ಅಂದರೆ ಕ್ರಿ. ಶ. ಪೂರ್ವ ಸುಮಾರು ೬೦೦-೭೦೦ ಶತಮಾನಗಳಲ್ಲಿ ಇರಬಹುದೆಂದು ನಾವು ಸದ್ಯಕ್ಕೆ ಗ್ರಹಿಸಬಹುದು.

ಪ್ರಚಲಿತ ವೀರಶೈವ ಗ್ರಂಥಗಳಲ್ಲಿ ರೇಣುಕ ಚರಿತ್ರೆಯೊಡನೆ ರೇವಣಸಿದ್ಧೇಶ್ವರನ ಚರಿತ್ರೆಯನ್ನೂ ಕೂಡಿಸಿ ವಿವರಿಸುವದುಂಟು. ಯಾಕಂದರೆ ರೇವಣಸಿದ್ಧೇಶ್ವರನು ರೇಣುಕನ ಕಲಿಯುಗದ ಅವತಾರನೆಂದು ತಿಳಿಯಲ್ಪಡುತ್ತಾನೆ. ಆದರೆ ರೇವಣಸಿದ್ಧೇಶ್ವರನು ಬಸವೇಶ್ವರನ ಕಾಲದಲ್ಲಿ ಅಥವಾ ಅವನಕಿಂತಲೂ ಸ್ವಲ್ಪ ಕಾಲ ಹಿಂದೆ ಇದ್ದನು. ಆದ್ದರಿಂದ ಪೂರ್ವಕಾಲದ ಶೈವ ಧರ್ಮಗಳ ಸ್ಥಿತಿಯನ್ನು ತಿಳಿಯಬೇಕಾದರೆ ರೇವಣಸಿದ್ಧೇಶ್ವರನಕಿಂತಲೂ ರೇಣುಕನವೃತ್ತಾಂತವನ್ನು ಅರಿಯುವದು ಮಹತ್ವದ್ದಿರುತ್ತದೆ.

ಪಂಚಾಚಾರ್ಯರು ಪೂರ್ವದಲ್ಲಿ ಸ್ಥಾಪಿಸಿದ ಶೈವ ಧರ್ಮದ ಸ್ವರೂಪವು ಈಗಿನ ವೀರಶೈವ ಧರ್ಮದಂತೆಯೇ ಇದ್ದಿತೋ ಹ್ಯಾಗೆ ಇದನ್ನು ವಿದ್ವಜ್ಜನರು ಚನ್ನಾಗಿ ವಿಚಾರ ಮಾಡತಕ್ಕ ವಿಷಯವಾಗಿದೆ. ಇದನ್ನು ನಾವು ಮತ್ತೊಂದು ಲೇಖದಲ್ಲಿ ವಿಸ್ತರಿಸುವೆವು. ಆದರೆ ಈ ಲೇಖದಲ್ಲಿ ನಾವು "ಶೈವ ಧರ್ಮ" ಅಥವಾ "ಆಗಮ ಧರ್ಮ" ಎಂಬ ಶಬ್ದಗಳನ್ನು ಯಾವುದೊಂದು ವಿಶಿಷ್ಟ ಆಗಮ ಧರ್ಮವನ್ನು ಉದ್ದೇಶಿಸಿ ಬರೆಯದೆ ಸಾಮಾನ್ಯವಾಗಿ ಪ್ರಯೋಗಿಸಿದ್ದೇವೆ.

---

## ರೇಣುಕ ಸ್ತೋತ್ರ.

ಲೇಖಕ:— ಶಿವಮೂರ್ತಿ ಶಾಸ್ತ್ರಿ ಹುಲಕುಂಟಿಮಠ ತುಮಕೂರ.

---

ಕಂ॥ ಶ್ರೀಮದ್ಗುಣ ಮಣಿಹಾರಂ।
ಕಾಮಾಂತಕನಖಿಲವಿಬುಧ ವಂದಿತಸುಪದಂ।
ಕಾಮಿತಫಲ ಪ್ರದಾತಂ।
ಸ್ವಾಮಿ ಶ್ರೀರೇಣುಕಾರ್ಯನೋವುಗೆ ಧರೆಯಂ॥೧॥

ಭಾ ಷ॥ ಕೊಲ್ಲಿಪಾಕೀ ಪುರದೊಳೆಣೆಯಾ।
ರಿಲ್ಲೆನಿಪ ಸೋಮೇಶಲಿಂಗವು।
ಖುಲ್ಲರಂಜಯಿಪಾವ ಮಹಿಮಗೆ ಪುಟ್ಟಿದೆಡೆಯಹುದೋ॥
ಫುಲ್ಲಶರ ರಿಪು ಸಮನನಾವನ।
ನೆಲ್ಲ ವಿಬುಧರ್ಪೊಗಳುತಿರ್ಪರೊ।
ಸಲ್ಲಲಿತಗುಣ ಭರಿತರೇಣುಕ ನೋವುಗೀಜಗವಂ॥೨॥

ರಾವಣಾನುಜಗೊಲಿದು ಲಿಂಗವ।
ಭಾವಜಾರಿಗೆ ಸದೃಶನಾವನು।
ಕೋವಿದರ್ನೆರೆ ಪೊಗಳ್ವವೋಲ್ನೆಲೆಗೊಳಿಸಿ ಲಂಕೆಯಲಿ॥
ಭೂವಿನುತನೆನಿಸಿರ್ಪಗಸ್ತ್ಯನ।
ದಾವನುಕ್ತಿಯ ಕೇಳ್ದು ಜನಿಮೃತಿ।
ಖೇದವಿಲ್ಲದೆ ಸುಖವನಾಂತಿರುತಿರ್ದಪನೊ ಸತತಂ॥೩॥

ಶಂಕರಾರ್ಯನದಾವ ಗುರುವಂ।

ಶಂಕಿಸದೆ ನೆರೆಪೂಜೆಗೆಯ್ವುದು ಕ|
ಲಂಕನಾಶಕ ಲಿಂಗವಾಂತಿಳೆಯಲ್ಲಿ ಮೆರೆದಿಪನೋ॥
ಸಂಕಟವ ಪರಿಹರಿಸಿ ತನ್ನಯ।
ಕಿಂಕರರನುರೆ ಪೊರೆವ ಘನಮಹಿ।
ಮಾಂಕ ರೇವಣಸಿದ್ಧನಂಘ್ರಿಗೆ ನಮಿಪೆನುರೆ ಮುದದಿ॥೪॥

ನಿಮಗೆ ಲಭಿಸಿಹುದೀ ಮಹತ್ವವು।
ತಮದಮಾದಿಸಮನ್ವಿತರೆ ನೀವ್।
ಕ್ರಮದೆಪಾಲಿಪುದೆಮ್ಮ ಸಮಯವನೊಲಿದು ಬಗೆನಲಿದು॥
ಅಮಮ ಪೇಳುವುದೇನು ನಮ್ಮೀ|
ಶ್ರಮವನೀಧರೆಯಲ್ಲಿ ಭಕ್ತರ।
ಮಮತೆಯಿಂದೀಕ್ಷಿಸುತೆ ದುಃಖವ ಹರಿಪರತಿವಿರಳಂ ॥೫॥

ಕನ್ನಡಿಯ ವೂಲುಮೆರೆವ ಸುಲಲಿತ।
ಕನ್ನಡವ ಕೇಳ್ವವರೆ ಇಲ್ಲವು।
ಚನ್ನೆನಿಪ ಜಸವಾಂತ ಸಕ್ಕದಮಳಿದು ಪೋಗಿಹುದು॥
ಮುನ್ನಿನುದ್ಧತ ಕವಿಕೃತಿಗಳುಂ|
ಬನ್ನಕೊಳಗಾಗಿರ್ಪುವಕಟಾ।
ಸನ್ಮತನೆ ಸಾಹಿತ್ಯವೆಮ್ಮದು ಲಯವನೊಂದಿಹುದು॥೬॥

ವೀರಶೈವಮತಾಬ್ಧಿ ಬತ್ತಿತು।
ವೀರಶೈವಸುಭೂಜ ವೊಣಗಿತು।
ವೀರಶೈವಮಹಾದ್ರಿ ಪುಡಿಪುಡಿಯಾಗುತಿಹುದೀಗ।
ಮಾರಹರ ಶಿವರಾಜ ದೇಶಿಕ।
ತೋರಿಕರುಣವನೆಮ್ಮ ಮತವನು।
ಧಾರಿಣಿಯಲಭಿವೃದ್ಧಿಯೊಂದುವೂಲೆಸಗುವುದು ಗುರುವೇ॥೭॥

ಧನವಗಳಿಪರು ಕೆಲರು ಗುರುಗಳು।
ಮನಸಿಜಗೆ ತುತ್ತಾಗುತಿರ್ಪರು।
ಜನರೊಳಗೆ ಕಲಹವನು ಪೆರ್ಚಿಸುತಿರ್ದಪರು ಕೆಲರು॥
ಇನಿತು ತಿಳಿವಿಲ್ಲದೊಡಮುರುಚಿನ್ಮ।
ಯನತತ್ವವ ಬೋಧಿಪರುಕೆಲ।
ರನಿಬರನು ಕಿಡಿಸುತ್ತ ಸುಮ್ಮನೆ ಪೊಳ್ತಕಳೆಯುವರು॥೮॥

ಕೆಟ್ಟು ಪೋದುದು ನಮ್ಮ ದೇಶವು।
ಕೆಟ್ಟು ಪೋದುದು ನಮ್ಮ ಮತಮುರೆ।
ಕೆಟ್ಟು ಪೋದುದು ನಮ್ಮ ಭಾಷೆಯು ಕೇಳ್ವರಿಲ್ಲದಲೇ॥
ನಿಟ್ಟಿಸಿದ ನಡಿಗಡಿಗುಮೆಮ್ಮಯ।
ಹೊಟ್ಟೆಯುರಿಯುತ್ತಿಹುದು ಗುರುವರ।
ಕೊಟ್ಟು ರಕ್ಷಿಪುದಭಯುವನು ಭಕ್ತರನು ನೀದಯೆಯಿಂ॥೯॥
ನೋಡಿ ನೀದಯುಗೂಡಿ ದುರಿತವ।
ಗಾಡಿಯನು ಯಿಾಡಾಡಿ ಶುಭವನು।
ಮಾಡಿ ಭಕ್ತರು ಬೇಡಿದಿಷ್ಟವ ನೀಡಿ ಪೊರೆಯುವುದು॥
ರೂಢಿಗೆರಡನೆ ಚಂದ್ರಚೂಡನೆ।
ಗಾಢದಿಂದೀ ಕೇಡನೆಲ್ಲವ।
ಕಾಡಿಗಟ್ಟುತೆ ಮೂಢಜನರನು ನೋಡಿ ಪೊರೆಯುವುದು॥೧೦॥

ಕಂ॥ ಶಿವಮೂರ್ತಿಶಾಸ್ತ್ರಿ ನಾಮಕ।
ಕವಿಮುದದಿಂ ರಚಿಸಿ ರತ್ನ ಮಂಜರಿಯನಿದಂ॥
ಭವಹರ ರೇಣುಕನಂಘ್ರಿಗೆ।
ತವಕದೆ ತಾನಿತ್ತು ಸುಕೃತಭಾಜನನಾದಂ॥೧೧॥



# ಸ್ಫುಟ ವಿಷಯಗಳು.

**ಶಿವಾನುಭವದ ೨ ನೇ ವರ್ಷ:-** ಶಿವಾನುಭವಕ್ಕೆ ಮೊದಲನೇ ವರ್ಷವು ನಿರ್ವಿಘ್ನತೆಯಿಂದ ಮುಗಿದು ಎರಡನೇ ವರ್ಷದ ಮೊದಲನೇ ಸಂಚಿಕೆಯು ಈಗ ವಾಚಕರ ಕೈಸೇರಿರುತ್ತದೆ. ನಾವು ಕೈಕೊಂಡಿರುವ ಈ ಮಹತ್ಕಾರ್ಯದಲ್ಲಿ ಬಹು ಜನರು ನಮಗೆ ಅತ್ಯಂತ ಸಹಾನುಭೂತಿಯುಳ್ಳವರಾಗಿ ಬಹಳ ಪ್ರೋತ್ಸಾಹಿಸುತ್ತಲಿರುವರು. ಇದಕ್ಕೋಸ್ಕರ ಅವರಿಗೆ ನಾವು ಬಹಳ ಋಣಿಯಾಗಿದ್ದೇವೆ. ಮುಂದಿನ ವರ್ಷವಾದರೂ ಅವರು ಇದೇ ರೀತಿಯಾಗಿ ನಮಗೆ ಸಹಾಯ ಮಾಡುವರೆಂದು ಕೋರುತ್ತೇವೆ. ಶಿವಾನುಭವದ ಉದ್ದೇಶವು ವೀರಶೈವ ಧರ್ಮ ಗ್ರಂಥಗಳನ್ನು ಪ್ರಕಟ ಪಡಿಸುವದೂ ಅದರ ಧಾರ್ಮಿಕ ಮತ್ತು ರಾಜಕೀಯ ಇತಿಹಾಸವನ್ನು ಸಂಶೋಧಿಸುವದೂ ಮುಖ್ಯವಾಗಿರುತ್ತದೆ. ಇದು ಸಿದ್ಧಿಗೆ ಹೋಗಬೇಕಾದರೆ ಕೈಬರಹ ಗ್ರಂಥಗಳನ್ನೂ ಶಿಲಾಲೇಖಗಳನ್ನೂ ಹಳೇ ದಪ್ತರಗಳನ್ನೂ ಹುಡುಕಬೇಕಾಗಿರುತ್ತದೆ. ಈ ತರದ ಕಾರ್ಯಮಾಡುವ ಪ್ರೀತಿಯುಳ್ಳವರು ವೀರಶೈವ ಸಮಾಜದಲ್ಲಿ ಬಹು ಕಡಿಮೆ. ಆದರೂ ಇದ್ದ ಸ್ವಲ್ಪ ಜನರಲ್ಲಿಯೋ ಶಕ್ಯವಿದ್ದಷ್ಟರ ಮಟ್ಟಿಗೆ, ಈ ತರದ ಸಂಶೋಧನ ಕಾರ್ಯವನ್ನು ನೆರವೇರಿಸಬೇಕಾಗಿರುತ್ತದೆ. ಈ ಕಾರ್ಯದಲ್ಲಿ ನೆರವಾಗಬೇಕೆಂದು ನಾವು ಕೋರಿದ ಸದ್ಗೃಹಸ್ಥರೆಲ್ಲರೂ ನಮಗೆ ಬಹಳ ಸಹಾಯಮಾಡಿದ್ದಾರೆ. ಅವರ ಲೇಖಗಳು ಶಿವಾನುಭವದಲ್ಲಿ ಮೇಲಿಂದ ಮೇಲೆ ಬಂದಿವೆ. ವೀರಶೈವರಂತೆಯೇ ಬ್ರಾಹ್ಮಣ ಜೈನ ಮೊದಲಾದ ಸಮಾಜಗಳ ಅನೇಕ ಸಭ್ಯ ಗೃಹಸ್ಥರೂ ನಮಗೆ ಈ ಕಾರ್ಯದಲ್ಲಿ ಬಹಳ ಸಹಾಯವಾಗಿದ್ದಾರೆ. ಇವರೆಲ್ಲರನ್ನು ನಾವು ಬಹು ಪ್ರೇಮ ಪೂರ್ವಕವಾಗಿ ವಂದಿಸುತ್ತೇವೆ.

**ವೀರಶೈವ ಧರ್ಮಗ್ರಂಥ ಪ್ರಸಾರಕ ಸಂಘ:-** ಈ ತರದ ಸಂಶೋಧನ ಕಾರ್ಯಗಳನ್ನು ನಾವು ಸಂಘ ಸಹಾಯದಿಂದ ಮಾಡಿದರೆ ಅವು ಬಹು ತೀವ್ರವಾಗಿ ಮುಂದೊರೆಯುತ್ತವೆ. ಇವುಗಳನ್ನು ವ್ಯಕ್ತಿಶಃ ಮಾಡುವದರಿಂದ ಕಾರ್ಯದಲ್ಲಿ ಏಕಾಂಗಿತ್ವವೂ ಅಪೂರ್ಣತೆಯೂ ಉಂಟಾಗುವ ಸಂಭವವು ಹೆಚ್ಚು ಇರುತ್ತದೆ. ಯುರೋಪಿಯನ್ ಪಂಡಿತರು ವಿಜ್ಞಾನಶಾಸ್ತ್ರ ವೈದ್ಯಶಾಸ್ತ್ರ ಮೊದಲಾದ ಶೋಧ ಮಾಡತಕ್ಕ ವಿಷಯಗಳನ್ನು ಸಂಘ ಮುಖಾಂತರವಾಗಿ ಮಾಡುವದುಂಟು. ಇದರಿಂದ ಅವರ ಶೋಧಗಳು ಬಹು

ತೀವ್ರ ಗತಿಯಿಂದ ಮುಂದೆ ಸಾಗುತ್ತವೆ, ಮತ್ತು ಪ್ರಸಾರ ಹೊಂದುತ್ತವೆ. ಆದರೆ ನಮ್ಮ ದೇಶದ ವಿದ್ವಾಂಸರಲ್ಲಿ ಪರಸ್ಪರ ಮಾತ್ಸರ್ಯ, ಸ್ವಾರ್ಥತೆ, ಗುಪ್ತತನ ಮೊದಲಾದ ದೋಷಗಳು ಇರುವದರಿಂದ ಅವರ ಶೋಧಗಳು ಮುಂದುವರಿಯುವದಿಲ್ಲ. ಆದ್ದರಿಂದ ವೀರಶೈವ ಧರ್ಮಗ್ರಂಥ ಸಂಶೋಧನ ಮೊದಲಾದ ಕಾರ್ಯಗಳನ್ನು ಮಾಡಲು "ವೀರಶೈವ ಧರ್ಮಗ್ರಂಥ ಪ್ರಸಾರಕ ಸಂಘ" ಎಂಬ ಹೆಸರಿನಿಂದ ಒಂದು ಸಂಸ್ಥೆಯು ತಾ॥ ೨೩-೧-೧೯೨೭ನೇ ದಿವಸ ವಿಜಾಪುರದಲ್ಲಿ ಸ್ಥಾಪಿಸಲ್ಪಟ್ಟಿದೆ. ಇದರ ಸಂಬಂಧದ ಪ್ರಕಟನಾ ಪತ್ರಿಕೆಯು ಈ ಸಂಚಿಕೆಯೊಡನೆ ಇಡಲ್ಪಟ್ಟಿದೆ. ಈ ಸಂಘದವರು ಈ ವರ್ಷ ಆಗಮ ಮೊದಲಾದ ಪುರಾತನ ಗ್ರಂಥಗಳನ್ನು ಅಚ್ಚು ಹಾಕುವದು, ಶಿಲಾಲೇಖಗಳ ಸಂಗ್ರಹ, ಧರ್ಮಗ್ರಂಥಾಲಯ ಸ್ಥಾಪನೆ ಮೊದಲಾದ ಕಾರ್ಯಗಳನ್ನು ಕೈಕೊಂಡಿದ್ದಾರೆ. ಅವರ ಈ ಮಹತ್ತರವಾದ ಪುಣ್ಯ ಕಾರ್ಯದಲ್ಲಿ ಎಲ್ಲ ವೀರಶೈವರು ತನುಮನಧನದಿಂದ ಸಹಾಯ ಮಾಡುವರೆಂದು ನಮ್ಮ ಆಗ್ರಹದ ಸೂಚನೆ ಇದೆ.

**ಧಾರ್ಮಿಕ ಮತ್ತು ರಾಜಕೀಯ ಸುಧಾರಣೆಗಳುಃ–** ಧರ್ಮಸುಧಾರಣಾ ಕಾರ್ಯಗಳು ಈಗಿನ ಕಾಲದಲ್ಲಿ ಅನವಶ್ಯಕವೆಂದು ಬಹುಜನರು ತಿಳಿಯುವದುಂಟು. ಇಂಥ ಪ್ರಯತ್ನಗಳು ಮುಂದುವರಿಯುತ್ತಿರುವ ಸಮಾಜವನ್ನು ಹಿಂದಕ್ಕೆ ದಬ್ಬುತ್ತವೆಂತಲೂ ಇವರು ತಿಳಿಯುತ್ತಾರೆ. ಈ ತೆರದ ವಿಚಾರಗಳು ವಿಶೇಷವಾಗಿ ಸುಶಿಕ್ಷಿತರಲ್ಲಿ ಅದರಲ್ಲಿ ಉಚ್ಚ ತರದ ಶಿಕ್ಷಣ ಹೊಂದಿದವರಲ್ಲಿ ಬಹಳವಾಗಿ ನೆಲೆಗೊಳ್ಳ ಹತ್ತಿವೆ. ಈಗಿನ ವಾತಾವರಣವು ನಾನಾ ಬಗೆಯ ರಾಜಕೀಯ ಪ್ರಯತ್ನಗಳಿಂದ ತುಂಬಿ ಹೋಗಿರುತ್ತದೆ. ನಮ್ಮ ಸುಶಿಕ್ಷಿತರು ಇಂಥ ಪ್ರಯತ್ನಗಳ ಮೋಹಕ್ಕೆ ಸಿಲುಕಿ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣಾ ಪ್ರಯತ್ನಗಳನ್ನು ಅತ್ಯಂತ ತುಚ್ಛವಾಗಿ ತಿಳಿಯುತ್ತಾರೆ. ಆದರೆ ಸಾಮಾಜಿಕ ಮತ್ತು ಧಾರ್ಮಿಕ ಹೆಚ್ಚಳವು ಧ್ಯೇಯವಿಲ್ಲದಂಥ ರಾಜಕೀಯ ಪ್ರಯತ್ನಗಳು ಮನುಷ್ಯನನ್ನು ತಾಮಸ ವೃತ್ತಿಗೆ ಎಳೆಯುತ್ತವೆ. ಇದರಿಂದ ದೇಶದಲ್ಲಿ ನಾನಾ ಬಗೆಯ ವೈಷಮ್ಯಗಳು ಉತ್ಪನ್ನವಾಗುತ್ತವೆ. ಧಾರ್ಮಿಕ ಜಾಗ್ರತೆ ಎಂದರೆ ಸಮಾಜದಲ್ಲಿ ಕೇವಲವಿಧಿ ವಿಧಾನಗಳನ್ನು ಹೆಚ್ಚಿಸುವದು ಮಾತ್ರವಲ್ಲ. ಅದರಬಗ್ಗೆ ಮಾಡಿದ ಪ್ರಯತ್ನಗಳು ನೈತಿಕ ಮತ್ತು ಮಾನಸಿಕ ಉನ್ನತೆಯಲ್ಲಿ ಪರಿಣಮಿಸುತ್ತವೆ. ಸಾರ್ವಜನಿಕ ಪ್ರಯತ್ನಗಳಲ್ಲಿ ಈ ಉಚ್ಚಧ್ಯೇಯವು ಇಲ್ಲದ್ದರಿಂದ ನಮ್ಮ ದೇಶ

ದಲ್ಲಿ ನಾನಾಬಗೆಯ ಒಡಕುಗಳು ಉತ್ಪನ್ನನಾಗಿರುವದನ್ನು ನೋಡುತ್ತೇವೆ. ವೀರಶೈವ ಸಮಾಜದಲ್ಲಿಯಾದರೂ ಇದೇ ಸ್ಥಿತಿಯು ಒದಗಿರುತ್ತದೆ. ಆದ್ದರಿಂದ ಸಮಾಜದಲ್ಲಿ ಧಾರ್ಮಿಕ ಸುಧಾರಣೆಯನ್ನು ತಳಹದಿಯಾಗಿ ಇಟ್ಟುಕೊಂಡು ಸದಾಚಾರ ಸತ್ಶೀಲ ಶುದ್ಧವರ್ತನೆ ಇವುಗಳನ್ನು ಉಂಟುಮಾಡುವದೇ ಸಮಾಜದ ಚಾಲಕರ ಈಗಿನ ಕರ್ತವ್ಯವಾಗಿದೆ. ಇದಿಲ್ಲದೆ ಹೋದರೆ ರಾಜಕೀಯ ಸುಧಾರಣೆ, ಸಾಂಪತ್ತಿಕ ಉನ್ನತೆ, ಸಂಘಶಕ್ತಿ ಇವೆಲ್ಲವೂ ಅಳಿದು ಹೋಗುತ್ತವೆ. ಹಿಂದೂಧರ್ಮದಲ್ಲಿ ಸಾಮಾಜಿಕ ಸುಧಾರಣೆ ನೈತಿಕ ಉನ್ನತಿ ಮತ್ತು ಧರ್ಮ ಸುಧಾರಣೆ ಇವೆಲ್ಲವೂ ಒಂದನ್ನೊಂದು ನಿಕಟವಾಗಿ ಅವಲಂಬಿಸಿವೆ. ಆದ್ದರಿಂದ ನಾವು ಧಾರ್ಮಿಕ ಸಂಸ್ಕೃತಿಯು ಬೆಳವಣಿಗೆಗೆ ಶ್ರೇಷ್ಠ ಸ್ಥಾನವನ್ನು ಕೊಡಬೇಕಾಗಿರುತ್ತದೆ.

**ವಿಶ್ವನಾಥ ಕಾಶೀನಾಥ ರಾಜವಾಡೆಃ**—ಪರಿಶೋಧನಕಾರ್ಯವು ಯಾವಾಗಲೂ ಉಚ್ಚತಮವಾದದ್ದು. ಇಂಥವನಿಗೆ ಜ್ಞಾನ ಸಂಪಾದನೆಯೇ ಆಯುಷ್ಯದ ಮುಖ್ಯ ಧ್ಯೇಯವಾಗುತ್ತದೆ. ಅದರಲ್ಲಿಯೇ ಅವನು ಆನಂದ ಬಡುತ್ತಾನೆ- ಅವನಿಗೆ ಅವರ ಮುಂದೆ ಶ್ರೀಮಂತಿಕೆಯು ಸಹ ಕಃಪದಾರ್ಥವೆನಿಸುತ್ತದೆ. ಈ ಸಂಗತಿಯು ಪ್ರಸಿದ್ಧ ಮಹಾರಾಷ್ಟ್ರ ಇತಿಹಾಸ ಸಂಶೋಧಕರಾದ ರಾಜವಾಡೆ ಇವರ ಚರಿತ್ರೆಯಿಂದ ತಿಳಿಯುತ್ತದೆ. ಅವರು ೩೧-೧೨-೧೯೨೬ ಇಸ್ವಿಯ ದಿವಸ ತೀರಿಕೊಂಡರು. ಇವರ ಮನೋವೇಧಕವಾದ ಚರಿತ್ರೆಯನ್ನು ಪ್ರೊ॥ ಸರ್. ಜದುನಾಥ ಸರಕಾರ ಇವರು ಮಾಡರ್ನ ರೀವ್ಹ್ಯೂವಿನ ಫೆಬ್ರುವರಿ ಸಂಚಿಕೆಯಲ್ಲಿ ಕೊಟ್ಟಿದ್ದಾರೆ. ರಾಜವಾಡೆಯುವರು ತಾರಿಖು ೧೨-೭-೬೪ ಇಸ್ವಿಯದಿವಸ ಹುಟ್ಟಿದರು. ಇವರು ಮನೆತನದಿಂದ ಬಹಳ ಬಡವರು. ಮತ್ತು ಮರಣದವರೆಗೂ ಬಡತನದಲ್ಲಿಯೇ ತಮ್ಮ ಆಯುಷ್ಯವನ್ನು ಕಳೆದರು. ಆದರೆ ಇವರು ಮಹಾರಾಷ್ಟ್ರದೇಶದ ಇತಿಹಾಸಕ್ಕೆ ಮಾಡಿದ ಸಹಾಯದಿಂದ ಇವರ ಹೆಸರು ಆಚಂದ್ರಾರ್ಕವಾಗಿ ಅಲ್ಲಿ ಉಳಿಯುವದೆಂಬದರಲ್ಲಿ ಸಂದೇಹವಿಲ್ಲ. ಇವರು ೧೮೯೧ ನೇ ಇಸ್ವಿಯಲ್ಲಿ ಬಿ. ಎ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಆದರೂ ಅವರು ಯಾವ ನೌಕರಿಯನ್ನು ಅಪೇಕ್ಷಿಸದೆ, ಇತಿಹಾಸ ಸಂಶೋಧನ ಕಾರ್ಯದಲ್ಲಿ ತೊಡಗಿದರು. ಮೊದಲಿಗೆ ಪ್ಲೇಟೋ ಮೊದಲಾದ ತತ್ವಜ್ಞಾನಿಗಳ ವಿಚಾರಗಳನ್ನು ಜನರಲ್ಲಿ ಪ್ರಕಟಿಸಬೇಕೆಂದು "ಭಾಷಾಂತರ" ಎಂಬ ಹೆಸರಿನ ಒಂದು ಪತ್ರಿಕೆಯನ್ನು ಪ್ರಸಿದ್ಧಿಸಹತ್ತಿದರು. ಆದರೆ ಸ್ವಲ್ಪ ದಿವಸಗ

ಳಲ್ಲಿ ಅವರ ಅಚ್ಚು ಕೂಟವು ಸುಟ್ಟು ಹೋದ್ದರಿಂದ ಅವರು ತಮ್ಮ ಈ ಪ್ರಯತ್ನವನ್ನು ನಿಲ್ಲಿಸಬೇಕಾಯಿತು. ಆ ಮೇಲೆ ಅವರ ಹೆಂಡತಿಯೂ ತೀರಿಕೊಂಡಳು. ಹೀಗೆ ರಾಜವಾಡೆಯವರು ಆರಂಭದಲ್ಲಿಯೇ ಪ್ರಪಂಚದಿಂದ ಬಿಡುಗಡೆ ಹೊಂದಿದವರಾದರೂ ಅವರು ಸಾಯುವವರೆಗೆ ಹಾಗೆಯೇ ಪತ್ನಿರಹಿತರಾಗಿಯೇ ಉಳಿದರು. ಅವರು ಐಹಿಕ ಸುಖೋಪ ಭೋಗಗಳನ್ನು ತೊರೆದು, ತಮ್ಮ ಪ್ರೀತಿಯ ವಿಷಯವಾದ ಇತಿಹಾಸ ಸಂಶೋಧನೆಗೋಸ್ಕರ ಹಳ್ಳಿ ಹಳ್ಳಿ ತಿರುಗಹತ್ತಿದರು. ಅವರು ಹೋಗದೇ ಇದ್ದ ಹಳ್ಳಿಯು ಮಹಾರಾಷ್ಟ್ರದಲ್ಲಿ ಒಂದೂ ಉಳಿದಿರಲಿಕ್ಕಿಲ್ಲ. ಅವರು ಅಟಕದಿಂದ ತಂಜಾವರದವರೆಗೆ ಪುಣೆಯಿಂದ ದಿಲ್ಲಿಯವರೆಗೆ ಹಳೇ ಐತಿಹಾಸಿಕ ಕಾಗದಗಳನ್ನು ಶೋಧಿಸುತ್ತ ಯಾವಾಗಲೂ ತಿರುಗುವರು. ಅವರು ಒಮ್ಮೊಮ್ಮೆ ಅನ್ನನೀರು ಸಹ ಇಲ್ಲದೆ ಪಾದಚಾರಿಗಳಾಗಿ ಸಂಚರಿಸುವಾಗ ಕಷ್ಟಪಟ್ಟಿದ್ದನ್ನು ಹೇಳಲಳವಲ್ಲ. ಅವರು ಎಷ್ಟೋ ಸಾರೆ ಭಿಕ್ಷೆಯಿಂದ ಹೊಟ್ಟೆ ಹೊರೆದುಕೊಂಡರು. ಅವರು ಒಮ್ಮೆ ಖಾನೆಸುಮಾರಿಯಲ್ಲಿ ತಮ್ಮ ಉಪಜೀವನೆಯು ಭಿಕ್ಷೆಯೆಂದು ಹೇಳಬೇಕಾಯಿತು. ಅವರು ಹೀಗೆ ಪರಿಶ್ರಮ ಮಾಡಿ "ಮರಾಠಾಂಚಿ ಇತಿಹಾಸಾಂಚೆ ಸಾಧನೆ" ಎಂಬ ಹೆಸರಿನ ೩೦೪ ಹಳೇ ಪತ್ರಗಳುಳ್ಳ ಗ್ರಂಥವನ್ನು ಪ್ರಸಿದ್ಧಪಡಿಸಿದರು. ಈ ಗ್ರಂಥದಿಂದ ರಾಜವಾಡೆಯವರು ಮಹತ್ವದ ಇತಿಹಾಸ ಸಂಶೋಧಕರೆಂಬ ಕೀರ್ತಿಯನ್ನು ಕೂಡಲೇ ಪಡೆದರು. ಆದರೆ ಈ ಗ್ರಂಥವನ್ನು ಅಚ್ಚು ಹಾಕುವದರಿಂದ ಅವರಿಗೆ ೧೪೦೦ ರೂಪಾಯಿ ಸಾಲಮಾತ್ರವಾಯಿತು. ಆದರೂ ಗಟ್ಟಿಗರಾದ ರಾಜವಾಡೆಯವರು ತಮ್ಮ ಪ್ರಯತ್ನವನ್ನು ಬಿಡಲಿಲ್ಲ. ಮುಂದೆ ಅವರು ರಚಿಸಿದ ೫ ಗ್ರಂಥಗಳನ್ನು ಪ್ರೊ॥ ಬಿಜಾಪುರಕರ ಇವರು ಪ್ರಸಿದ್ಧಿಸಿದರು. ಅವರು ಅಚ್ಚು ಹಾಕಿದ ಪ್ರತಿಗಳಲ್ಲಿ ೫೦ ಪ್ರತಿಗಳನ್ನು ಮಾತ್ರ ರಾಜವಾಡೆಯವರಿಗೆ ಕೊಡುತ್ತಿದ್ದರು. ಈ ಪ್ರತಿಗಳನ್ನು ಮಾರಿಬಂದ ಹಣದಿಂದ ಅವರು ತಮ್ಮ ಉದರ ನಿರ್ವಾಹ ಸಾಗಿಸಿದರು. ಈ ಮೇರೆಗೆ ರಾಜವಾಡೆಯವರು ಆಮರಣಾಂತ ಪರಿಶೋಧನ ಕಾರ್ಯದಲ್ಲಿ ತೊಡಗಿ ಒಟ್ಟಿಗೆ ೩೪ ಗ್ರಂಥಗಳನ್ನು ಪ್ರಸಿದ್ಧಿಸಿದರು. ಈ ಗ್ರಂಥಗಳು ಮಹಾರಾಷ್ಟ್ರ ಇತಿಹಾಸವನ್ನು ಬರೆಯುವವರಿಗೆ ಬಹು ಬೆಲೆಯುಳ್ಳ ಸಾಧನಗಳಾಗಿವೆ. ಅವರು ಮಾಡಿದ ಈ ಕಾರ್ಯವು ಸಾಮಾನ್ಯವಾದುದಲ್ಲ. ಇಂಥ ಮಹಾನುಭಾವರಿಂದಲೇ ದೇಶದ ಸಂಸ್ಕೃತಿಯು ಸ್ಥಿರಗೊಳ್ಳುವದು. ಕೇವಲ ಶ್ರೀಮಂತಿಕೆ

ಅಥವಾ ರಾಜಕೀಯ ಅಧಿಕಾರ ಇವುಗಳಿಂದ ದೇಶದ ಬೆಳವಣಿಗೆಯು ಆಗಲಾರದು. ರಾಜೆವಾಡೆಯವರಂಥ ಪ್ರಯತ್ನಶೀಲರಿಂದಲೇ ಒಂದು ದೇಶದ ಪ್ರಕಾಶವು ಹೊರಚಿಮ್ಮುವದು.

**ಮಠಗಳ ಪದ್ಧತಿಯು ಬಗ್ಗೆ ಆಧಾರ ಗ್ರಂಥಃ–** ಮಿ|| ಷ್ಹಿ. ಬಿ. ಮುಧೋಳಕರ ಬಿ. ಎ. ಎಲ್ ಎಲ್, ಬಿ. ವಿಜಾಪುರ ಇವರು ವೀರಶೈವ ಮಠಗಳ ಪದ್ಧತಿಯನ್ನು ಗೊತ್ತು ಪಡಿಸುವ ಉದ್ದೇಶದಿಂದ ಕೆಲವು ಪ್ರಶ್ನಗಳನ್ನು ಮಾಡಿ ಪ್ರಸಿದ್ಧಿಸಿದ್ದಾರೆ. ವೀರಶೈವರಲ್ಲಿ ಮಠಗಳ ಬಗ್ಗೆ ಆಧಾರವೆಂದು ಎಣಿಸಿಕೊಳ್ಳುವ ಯಾವ ಗ್ರಂಥವೂ ಇರುವದಿಲ್ಲ. ಆದ್ದರಿಂದ ಮಠಗಳ ಸಂಬಂಧದ ವ್ಯಾಜ್ಯಗಳು ಕೋರ್ಟಿನಲ್ಲಿ ಬಂದಾಗ್ಗೆ ಅವುಗಳ ತೀರ್ಪುಮಾಡುವದು ನ್ಯಾಯಾಧೀಶರಿಗೆ ಬಹಳ ತೊಂದರೆ ಹೋಗುತ್ತದೆ. ಪಕ್ಷಕಾರರು ಸ್ವಾರ್ಥಪರಾಯಣರಿರುವದರಿಂದ ಮಠಗಳ ನಿಜವಾದ ಪದ್ಧತಿಯನ್ನು ಅವರು ಕೋರ್ಟಿನ ಮುಂದೆ ಇಡುವದಿಲ್ಲ. ಈ ಕಾಲಕ್ಕೆ ಕೋರ್ಟಿನವರು ಗ್ಯಾಝೀಟಿಯರ ಮತ್ತು ಕೆಲವು ಆಂಗ್ಲ ಪಂಡಿತರು ಬರೆದ ಗ್ರಂಥಗಳು ಇವುಗಳನ್ನು ಅವಲಂಬಿಸಬೇಕಾಗುತ್ತದೆ. ಈ ಗ್ರಂಥಗಳೆಲ್ಲ ಅರ್ಧಶತಮಾನಗಳ ಹಿಂದೆ ಬರೆಯಲ್ಪಟ್ಟವು ಇದ್ದು ಇವುಗಳಲ್ಲಿ ಬಹಳ ತಪ್ಪುಗಳು ಇರುತ್ತವೆ. ಇದರಿಂದ ಮಠಗಳ ಸಂಬಂಧದ ವ್ಯಾಜ್ಯಗಳು ಮತ್ತಿಷ್ಟು ಬೆಳೆಯುಲಿಕ್ಕೆ ಕಾರಣವಾಗಿರುತ್ತದೆ. ಆದ್ದರಿಂದ ಈ ಕಾಲಕ್ಕೆ ಮಠಗಳ ನಿಜವಾದ ಪದ್ಧತಿಯನ್ನು ಗೊತ್ತು ಪಡಿಸಿ ಒಂದು ಆಧಾರಯುಕ್ತ ಗ್ರಂಥವನ್ನು ವೀರಶೈವ ಸಮಾಜದವರು ಬರೆಯಿಸಲು ಯೋಗ್ಯ ವ್ಯವಸ್ಥೆ ಮಾಡುವದು ಬಹಳ ಅವಶ್ಯವದೆ. ಇದಕ್ಕೋಸ್ಕರ ಮಠಗಳಸಂಬಂಧವಾಗಿ ವೀರಶೈವ ಗ್ರಂಥಗಳಲ್ಲಿರುವ ಉಲ್ಲೇಖಗಳನ್ನು ಶೋಧಿಸುವದೂ ಬೇರೆಬೇರೆ ಭಾಗಗಳಲ್ಲಿಯ ಪ್ರಚಲಿತ ರೂಢಿಗಳನ್ನು ತಿಳಿದು ಕೊಳ್ಳುವದೂ ಬಹಳ ಅವಶ್ಯವಿದೆ. ಈ ಉದ್ದೇಶವು ಕೊನೆಗಾಣಬೇಕೆಂದು ಮಿ|| ಮುಧೋಳಕರ ಇವರು ಈ ಪ್ರಶ್ನಗಳನ್ನು ಪ್ರಸಿದ್ಧಿಸಿದ್ದಾರೆ. ಹೀಗೆ ಎಲ್ಲ ಕಡೆಯ ಸಾಂಪ್ರದಾಯಗಳನ್ನು ಗೊತ್ತು ಪಡಿಸಿ, ಅವುಗಳನ್ನು ಮೊದಲಿಗೆ ಪ್ರಸಿದ್ಧಿಸಿ ಜನರ ಅಭಿಪ್ರಾಯಗಳನ್ನು ತೆಗೆದು ಕೊಂಡು ಆ ಮೇಲೆ ಒಂದು ಆಧಾರ ಗ್ರಂಥವನ್ನು ರಚಿಸುವದು ಯುಕ್ತವು. ಈ ಕಾರ್ಯವನ್ನು ವಿಜಾಪುರದಲ್ಲಿ ಈಗ ಸ್ಥಾಪಿಸಲ್ಪಟ್ಟಿರುವ ವೀರಶೈವ ಧರ್ಮಗ್ರಂಥ ಪ್ರಸಾರಕ ಸಂಘದ ನಿದರ್ಶನೆಯಲ್ಲಿ ಮಾಡುವದು ಹೆಚ್ಚಿಗೆ ಯೋಗ್ಯವೆಂದು ತೋರುತ್ತದೆ.

ಳಲ್ಲಿ ಅವರ ಅಚ್ಚು ಕೂಟವು ಸುಟ್ಟು ಹೋದ್ದರಿಂದ ಅವರು ತಮ್ಮ ಈ ಪ್ರಯತ್ನವನ್ನು ನಿಲ್ಲಿಸಬೇಕಾಯಿತು. ಆ ಮೇಲೆ ಅವರ ಹೆಂಡತಿಯೂ ತೀರಿಕೊಂಡಳು. ಹೀಗೆ ರಾಜವಾಡೆಯವರು ಆರಂಭದಲ್ಲಿಯೇ ಪ್ರಪಂಚದಿಂದ ಬಿಡುಗಡೆ ಹೊಂದಿದವರಾದರೂ ಅವರು ಸಾಯುವವರೆಗೆ ಹಾಗೆಯೇ ಪತ್ನಿರಹಿತರಾಗಿಯೇ ಉಳಿದರು. ಅವರು ಐಹಿಕ ಸುಖೋಪಭೋಗಗಳನ್ನು ತೊರೆದು, ತಮ್ಮ ಪ್ರೀತಿಯ ವಿಷಯವಾದ ಇತಿಹಾಸ ಸಂಶೋಧನೆಗೋಸ್ಕರ ಹಳ್ಳಿ ಹಳ್ಳಿ ತಿರುಗುತ್ತಿದರು. ಅವರು ಹೋಗದೇ ಇದ್ದ ಹಳ್ಳಿಯು ಮಹಾರಾಷ್ಟ್ರದಲ್ಲಿ ಒಂದೂ ಉಳಿದಿರಲಿಕ್ಕಿಲ್ಲ. ಅವರು ಅಟಕದಿಂದ ತಂಜಾವರದವರೆಗೆ ಪುಣೆಯಿಂದ ದಿಲ್ಲಿಯವರೆಗೆ ಹಳೇ ಐತಿಹಾಸಿಕ ಕಾಗದಗಳನ್ನು ಶೋಧಿಸುತ್ತ ಯಾವಾಗಲೂ ತಿರುಗುವರು. ಅವರು ಒಮ್ಮೊಮ್ಮೆ ಅನ್ನನೀರು ಸಹ ಇಲ್ಲದೆ ಪಾದಚಾರಿಗಳಾಗಿ ಸಂಚರಿಸುವಾಗ ಕಷ್ಟಪಟ್ಟಿದ್ದನ್ನು ಹೇಳಲಳವಲ್ಲ. ಅವರು ಎಷ್ಟೋ ಸಾರೆ ಭಿಕ್ಷೆಯಿಂದ ಹೊಟ್ಟೇ ಹೊರೆದುಕೊಂಡರು. ಅವರು ಒಮ್ಮೆ ಖಾನೆಸುಮಾರಿಯಲ್ಲಿ ತಮ್ಮ ಉಪಜೀವನೆಯು ಭಿಕ್ಷೆಯೆಂದು ಹೇಳಬೇಕಾಯಿತು. ಅವರು ಹೀಗೆ ಪರಿಶ್ರಮಮಾಡಿ "ಮರಾಠಾಂಚಿ ಇತಿಹಾಸಾಂಚೆ ಸಾಧನೆ" ಎಂಬ ಹೆಸರಿನ ೩೦೪ ಹಳೇ ಪತ್ರಗಳುಳ್ಳ ಗ್ರಂಥವನ್ನು ಪ್ರಸಿದ್ಧಪಡಿಸಿದರು. ಈ ಗ್ರಂಥದಿಂದ ರಾಜವಾಡೆಯವರು ಮಹತ್ವದ ಇತಿಹಾಸ ಸಂಶೋಧಕರೆಂಬ ಕೀರ್ತಿಯನ್ನು ಕೂಡಲೇ ಪಡೆದರು. ಆದರೆ ಈ ಗ್ರಂಥವನ್ನು ಅಚ್ಚು ಹಾಕುವದರಿಂದ ಅವರಿಗೆ ೧೪೦೦ ರೂಪಾಯಿ ಸಾಲವಮಾತ್ರವಾಯಿತು. ಆದರೂ ಗಟ್ಟಿಗರಾದ ರಾಜವಾಡೆಯವರು ತಮ್ಮ ಪ್ರಯತ್ನವನ್ನು ಬಿಡಲಿಲ್ಲ. ಮುಂದೆ ಅವರು ರಚಿಸಿದ ೫ ಗ್ರಂಥಗಳನ್ನು ಪ್ರೊ॥ ಬಿಜಾಪುರಕರ ಇವರು ಪ್ರಸಿದ್ಧಿಸಿದರು. ಅವರು ಅಚ್ಚು ಹಾಕಿದ ಪ್ರತಿಗಳಲ್ಲಿ ೫೦ ಪ್ರತಿಗಳನ್ನು ಮಾತ್ರ ರಾಜವಾಡೆಯವರಿಗೆ ಕೊಡುತ್ತಿದ್ದರು. ಈ ಪ್ರತಿಗಳನ್ನು ಮಾರಿಬಂದ ಹಣದಿಂದ ಅವರು ತಮ್ಮ ಉದರ ನಿರ್ವಾಹ ಸಾಗಿಸಿದರು. ಈ ಮೇರೆಗೆ ರಾಜವಾಡೆಯವರು ಆಮರಣಾಂತ ಪರಿಶೋಧನ ಕಾರ್ಯದಲ್ಲಿ ತೊಡಗಿ ಒಟ್ಟಿಗೆ ೩೪ ಗ್ರಂಥಗಳನ್ನು ಪ್ರಸಿದ್ಧಿಸಿದರು. ಈ ಗ್ರಂಥಗಳು ಮಹಾರಾಷ್ಟ್ರ ಇತಿಹಾಸವನ್ನು ಬರೆಯುವವರಿಗೆ ಬಹು ಬೆಲೆಯುಳ್ಳ ಸಾಧನಗಳಾಗಿವೆ. ಅವರು ಮಾಡಿದ ಈ ಕಾರ್ಯವು ಸಾಮಾನ್ಯವಾದುದಲ್ಲ. ಇಂಥ ಮಹಾನುಭಾವರಿಂದಲೇ ದೇಶದ ಸಂಸ್ಕೃತಿಯು ಸ್ಥಿರಗೊಳ್ಳುವದು. ಕೇವಲ ಶ್ರೀಮಂತಿಕೆ

ಅಥವಾ ರಾಜಕೀಯ ಅಧಿಕಾರ ಇವುಗಳಿಂದ ದೇಶದ ಬೆಳವಣಿಗೆಯು ಆಗಲಾರದು. ರಾಜೆವಾಡೆಯುವರಂಥ ಪ್ರಯತ್ನಶೀಲರಿಂದಲೇ ಒಂದು ದೇಶದ ಪ್ರಕಾಶವು ಹೊರಚಿಮ್ಮುವದು.

**ಮಠಗಳ ಪದ್ಧತಿಯ ಬಗ್ಗೆ ಆಧಾರ ಗ್ರಂಥಃ–** ಮಿ|| ವ್ಹಿ. ಬಿ. ಮುಧೋಳಕರ ಬಿ. ಎ. ಎಲ್ ಎಲ್, ಬಿ. ವಿಜಾಪುರ ಇವರು ವೀರಶೈವ ಮಠಗಳ ಪದ್ಧತಿಯನ್ನು ಗೊತ್ತು ಪಡಿಸುವ ಉದ್ದೇಶದಿಂದ ಕೆಲವು ಪ್ರಶ್ನಗಳನ್ನು ಮಾಡಿ ಪ್ರಸಿದ್ಧಿಸಿದ್ದಾರೆ. ವೀರಶೈವರಲ್ಲಿ ಮಠಗಳ ಬಗ್ಗೆ ಆಧಾರವೆಂದು ಎಣಿಸಿಕೊಳ್ಳುವ ಯಾವ ಗ್ರಂಥವೂ ಇರುವದಿಲ್ಲ. ಆದ್ದರಿಂದ ಮಠಗಳ ಸಂಬಂಧದ ವ್ಯಾಜ್ಯಗಳು ಕೋರ್ಟಿನಲ್ಲಿ ಬಂದಾಗ್ಗೆ ಅವುಗಳ ತೀರ್ಪುಮಾಡುವದು ನ್ಯಾಯಾಧೀಶರಿಗೆ ಬಹಳ ತೊಂದರೆ ಹೋಗುತ್ತದೆ. ಪಕ್ಷಕಾರರು ಸ್ವಾರ್ಥಪರಾಯಣರಿರುವದರಿಂದ ಮಠಗಳ ನಿಜವಾದ ಪದ್ಧತಿಯನ್ನು ಅವರು ಕೋರ್ಟಿನ ಮುಂದೆ ಇಡುವದಿಲ್ಲ. ಈ ಕಾಲಕ್ಕೆ ಕೋರ್ಟಿನವರು ಗ್ಯಾಝೀಟಿಯರ ಮತ್ತು ಕೆಲವು ಆಂಗ್ಲ ಪಂಡಿತರು ಬರೆದ ಗ್ರಂಥಗಳು ಇವುಗಳನ್ನು ಅವಲಂಬಿಸಬೇಕಾಗುತ್ತದೆ. ಈ ಗ್ರಂಥಗಳೆಲ್ಲ ಅರ್ಧಶತಮಾನಗಳ ಹಿಂದೆ ಬರೆಯಲ್ಪಟ್ಟವು ಇದ್ದು ಇವುಗಳಲ್ಲಿ ಬಹಳ ತಪ್ಪುಗಳು ಇರುತ್ತವೆ. ಇದರಿಂದ ಮಠಗಳ ಸಂಬಂಧದ ವ್ಯಾಜ್ಯಗಳು ಮತ್ತಿಷ್ಟು ಬೆಳೆಯಲಿಕ್ಕೆ ಕಾರಣವಾಗಿರುತ್ತದೆ. ಆದ್ದರಿಂದ ಈ ಕಾಲಕ್ಕೆ ಮಠಗಳ ನಿಜವಾದ ಪದ್ಧತಿಯನ್ನು ಗೊತ್ತು ಪಡಿಸಿ ಒಂದು ಆಧಾರಯುಕ್ತ ಗ್ರಂಥವನ್ನು ವೀರಶೈವ ಸಮಾಜದವರು ಬರೆಯಿಸಲು ಯೋಗ್ಯ ವ್ಯವಸ್ಥೆ ಮಾಡುವದು ಬಹಳ ಅವಶ್ಯವದೆ. ಇದಕ್ಕೋಸ್ಕರ ಮಠಗಳಸಂಬಂಧವಾಗಿ ವೀರಶೈವ ಗ್ರಂಥಗಳಲ್ಲಿರುವ ಉಲ್ಲೇಖಗಳನ್ನು ಶೋಧಿಸುವದೂ ಬೇರೆಬೇರೆ ಭಾಗಗಳಲ್ಲಿಯ ಪ್ರಚಲಿತ ರೂಢಿಗಳನ್ನು ತಿಳಿದು ಕೊಳ್ಳುವದೂ ಬಹಳ ಅವಶ್ಯವಿದೆ. ಈ ಉದ್ದೇಶವು ಕೊನೆಗಾಣಬೇಕೆಂದು ಮಿ॥ ಮುಧೋಳಕರ ಇವರು ಈ ಪ್ರಶ್ನಗಳನ್ನು ಪ್ರಸಿದ್ಧಿಸಿದ್ದಾರೆ. ಹೀಗೆ ಎಲ್ಲ ಕಡೆಯ ಸಾಂಪ್ರದಾಯುಗಳನ್ನು ಗೊತ್ತು ಪಡಿಸಿ, ಅವುಗಳನ್ನು ಮೊದಲಿಗೆ ಪ್ರಸಿದ್ಧಿಸಿ ಜನರ ಅಭಿಪ್ರಾಯುಗಳನ್ನು ತಿಗೆದುಕೊಂಡು ಆ ಮೇಲೆ ಒಂದು ಆಧಾರ ಗ್ರಂಥವನ್ನು ರಚಿಸುವದು ಯುಕ್ತವು. ಈ ಕಾರ್ಯವನ್ನು ವಿಜಾಪುರದಲ್ಲಿ ಈಗ ಸ್ಥಾಪಿಸಲ್ಪಟ್ಟಿರುವ ವೀರಶೈವ ಧರ್ಮಗ್ರಂಥ ಪ್ರಸಾರಕ ಸಂಘದ ನಿದರ್ಶನೆಯುಲ್ಲಿ ಮಾಡುವದು ಹೆಚ್ಚಿಗೆ ಯೋಗ್ಯವೆಂದು ತೋರುತ್ತದೆ.

**ಸ್ವಾಮಿ ಶ್ರದ್ಧಾನಂದರ ಕೊಲೆ:--** ಈಗ ಹಿಂದೂ ಸಮಾಜ ಮತ್ತು ಧರ್ಮ ಇವುಗಳ ಮೇಲೆ ನಾನಾ ರೀತಿಯಿಂದ ಆಘಾತಗಳು ಬಂದು ಬೀಳುತ್ತಿರುವದರಿಂದ ಅದರ ಸಂಖ್ಯೆಯು ಕಡಿಮೆಯಾಗುತ್ತ ನಡೆದದೆ. ಈ ಸ್ಥಿತಿಯನ್ನು ಹ್ಯಾಗೆ ದೂರ ಮಾಡಬೇಕೆಂಬದರ ಕಡೆಗೆ ಹಿಂದೂ ಸಮಾಜದ ಪ್ರತಿಯೊಬ್ಬ ಹಿತೈಷಿಯು ಇತ್ತಿತ್ತ ವಿಶೇಷವಾಗಿ ಲಕ್ಷಗೊಡಹತ್ತಿದ್ದಾನೆ. ಇಂಥ ಕಾಲಕ್ಕೆ ಆರ್ಯ ಸಮಾಜದ ಅಭಿವೃದ್ಧಿಗೆ ಅತ್ಯಂತ ಪ್ರಯತ್ನಿಸುತ್ತಲಿದ್ದ ಸ್ವಾಮಿ ಶ್ರದ್ಧಾನಂದರವರ ಕೊಲೆಯನ್ನು ಒಬ್ಬ ಮುಸಲ್ಮಾನನು ಮಾಡಲು ಇಡೀ ಹಿಂದೂ ಸಮಾಜದಲ್ಲಿ ಎಲ್ಲ ಕಡೆಗೆ ಉದ್ವೇಗವು ಉತ್ಪನ್ನವಾಗಿದೆ. ಇದು ಸಹಜಿಕವೇ ಇರುತ್ತದೆ. ವೀರಶೈವ ಸಮಾಜದಲ್ಲಿಯೂ ಮತಾಂತರ ಮಾಡುವ ಪ್ರಯತ್ನಗಳು ಮುಖ್ಯವಾಗಿ ನಿಜಾಮುಇಲಾಖೆ ಧಾರವಾಡ ಜಿಲ್ಹೆ ಮತ್ತು ಮೈಸೂರ ಪ್ರಾಂತ ಇಲ್ಲಿ ಇತ್ತಿತ್ತ ವಿಶೇಷವಾಗಿ ನಡೆದಿರುತ್ತವೆ. ಅದರಿಂದ ಅವರಲ್ಲಿಯೂ ಒಂದು ಬಗೆಯ ಉದ್ವೇಗವು ಉತ್ಪನ್ನವಾಗಲು ಕಾರಣವಾಗಿದೆ. ಆದರೆ ನಾವು ಈ ತರದ ಮತಾಂತರ ಮಾಡುವ ಪ್ರಯತ್ನಗಳಿಗೆ ಭೀತರಾಗುವ ಕಾರಣವಿಲ್ಲ. ಬಲಾತ್ಕಾರದಿಂದ ಧರ್ಮ ವೃದ್ಧಿಯು ಎಂದಿಗೂ ಆಗಲಾರದು. ಆದರೆ ಒಂದು ಸಮಾಜವು ಅದರ ಆಂತರ್ಯ ಕಾರಣಗಳಿಂದ ಮಾತ್ರ ಕುಗ್ಗುವ ಸಂಭವವದೆ. ಈ ಕಾರಣಗಳೆಂದರೆ ಧಾರ್ಮಿಕ ತತ್ವಗಳ ಅಜ್ಞಾನ, ಅದರಲ್ಲಿಯ ಪ್ರಮುಖವರ್ಗದವರ ಬಲಾತ್ಕಾರ, ಅನೀತಿ, ಅನಾಚಾರ ಇವುಗಳೇ ಮುಖ್ಯವಾಗಿರುತ್ತವೆ. ಇವುಗಳಿಂದ ಸಮಾಜದ ಬಂಧನೆಗಳು ಸಡಿಲುತ್ತವೆ. ಈ ಸ್ಥಿತಿಯು ಉಂಟಾಗುವದರಿಂದ ಪರಧರ್ಮಗಳ ಪ್ರಾಬಲ್ಯವು ಹೆಚ್ಚಿ, ಜನರು ಮತಾಂತರ ಮಾಡುವ ಸಂಭವವು ಹೆಚ್ಚಿದೆ. ಈ ಸ್ಥಿತಿಯು ವೀರಶೈವ ಸಮಾಜದಲ್ಲಿ ಈಗ ಬಹಳ ಅಂಶದಿಂದ ಒದಗಿರುತ್ತದೆ. ಆದ್ದರಿಂದ ನಾವು ಪರಧರ್ಮದವರನ್ನು ದೂಷಿಸದೆ ನಮ್ಮ ತಪ್ಪುಗಳನ್ನು ನಾವು ಕಂಡುಕೊಂಡು ಸಮಾಜದಲ್ಲಿ ಸುವ್ಯವಸ್ಥೆಯು ನೆಲೆಗೊಳ್ಳುವಂತೆ ಪ್ರಯತ್ನಿಸತಕ್ಕದ್ದು. ಅಂದರೆ ನಾವು ನಮ್ಮ ಮತದ ಉದಾರ ಮತ್ತು ವಿಶಾಲತತ್ವಗಳನ್ನು ಜನರಿಗೆ ತಿಳಿಯುವಂತೆ ಮಾಡತಕ್ಕದ್ದು, ಸಮಾಜದಲ್ಲಿ ಯಾವ ತರಗತಿಯ ಮನುಷ್ಯನಿದ್ದರೂ ಅವನು ಧರ್ಮ ದೃಷ್ಟಿಯಿಂದ ಸಮಾನನೆಂದು ಭಾವಿಸಿ ಅವನೊಡನೆ ಬಂಧು ಭಾವದಿಂದ ವರ್ತಿಸತಕ್ಕದ್ದು, ಸಮಾಜದಲ್ಲಿಯ ಪ್ರತಿಯೊಬ್ಬನು ತನ್ನ ಉಚ್ಚ ಗುಣಗಳನ್ನು ವಿಕಾಸ ಪಡಿಸಲು ಅವನಿಗೆ ಆವಶ್ಯಕ

ಸಹಾಯ ಮಾಡತಕ್ಕದ್ದು, ಇನೇ ಮೊದಲಾದ ಕಾರ್ಯಗಳಿಗೆ ನಾವು ಉಜ್ಜುಗಿಸುವದು ನಮ್ಮ ಕರ್ತವ್ಯವಾಗಿದೆ. ಹೀಗಾದರೆ ನಾವು ಪರಧರ್ಮದವರಉರವಣಿಗೆ ಎಳ್ಳಷ್ಟಾದರೂ ಭೀತಿಗೊಳ್ಳುವ ಕಾರಣವಿಲ್ಲ. ಇಷ್ಟೇ ಅಲ್ಲ, ನಾವು ಇನ್ನೂ ಅನೇಕ ಹೊರಗಿನ ಸಮಾಜಗಳನ್ನು ನಮ್ಮೊಳಗೆ ಒಳಕೊಳ್ಳುವ ಸಂಭವವದೆ.

**ಧರ್ಮವೀರ ಶಂಕರಣ್ಣನವರುಃ-** ಯಾದಗಿರಿಯ ಧರ್ಮವೀರ ಶಂಕರಣ್ಣನವರು ೧೯೩೬ನೇ ನೊವೆಂಬರ ತಿಂಗಳಿನಲ್ಲಿ ಶಿವೈಕ್ಯರಾದರೆಂದು ತಿಳಿಯಹಲು ನಮಗೆ ಬಹಳ ಖೇದವಾಗುತ್ತದೆ. ಇವರು ಸಂಸ್ಕೃತ ಮಹಾಶಾಲೆಗೋಸ್ಕರ ಒಂದುವರೆ ಲಕ್ಷ ರೂಪಾಯಿಗಳನ್ನು ದಾನ ಮಾಡಿ ವೀರಶೈವ ಧರ್ಮ ಸಂಸ್ಕೃತಿಯ ಪ್ರಗತಿಗೆ ಬಹಳ ಸಹಾಯಮಾಡಿದ್ದಾರೆ. ಇವರ ಭಾವ ಚಿತ್ರವನ್ನು ಈ ಸಂಚಿಕೆಯಲ್ಲಿ ಸೇರಿಸಿದ್ದೇವೆ. ಅವರ ಮುಖ ಮುದ್ರೆಯಿಂದಲೇ ಅವರು ಎಷ್ಟು ಸಾದಾ ನಡತೆಯವರೂ ಸಜ್ಜನರೂ ಧರ್ಮಿಷ್ಠರೂ ಇದ್ದಿರಬಹುದೆಂಬದನ್ನು ನಾವು ಕೂಡಲೇ ಊಹಿಸ ಬಹುದಾಗಿದೆ. ನಮ್ಮ ಮೊದಲಿನ ವ್ಯಾಪಾರಸ್ಥರ ಸ್ಥಿತಿಗೂ ಈಗಿನ ವ್ಯಾಪಾರಸ್ಥರ ಸ್ಥಿತಿಗೂ ಮಹದಂತರವಾಗಿರುತ್ತದೆ. ಮೊದಲಿನವರು ಬಹಳ ಸಾದಾತರದ ಜೀವಿತ ಕ್ರಮವುಳ್ಳವರೂ ಶುದ್ಧವಾದ ನಡತೆಯುವರೂ ಸತ್ಯಸಂಧರೂ ಅತ್ಯಂತ ಧರ್ಮಿಷ್ಠರೂ ಬಹಳ ದುಡಿಯುವವರೂ ಆಗಿದ್ದರು. ಆದರೆ ಈಗಿನವರಲ್ಲಿ ಈ ಅಮೌಲ್ಯ ಗುಣಗಳು ಲೋಪವಾಗುತ್ತಲಿವೆ. ಇವಕ್ಕೆ ಕಾರಣವು ಪಾಶ್ಚಿಮಾತ್ಯ ಸಂಸ್ಕೃತಿಯನ್ನು ನಮ್ಮ ದೇಶದಲ್ಲಿ ಸರಿಯಾದ ರೀತಿಯಿಂದ ನೆಲೆಗೊಳಿಸದಿರುವದೇ ಇರುತ್ತದೆಂದು ನಮಗೆ ತೋರುತ್ತದೆ. ಇದರಿಂದ ಇವರು ಹೆಚ್ಚೆಚ್ಚು ಭೋಗಪ್ರಿಯರೂ, ಸ್ವಲ್ಪ ದುಡಿಕೆಯಿಂದ ಬಹಳ ಆಶೆ ಮಾಡುವವರೂ, ಕಪಟೋಪಾಯಚಿತ್ತರೂ, ಆಗಹತ್ತಿದ್ದಾರೆ. ಈ ವೃತ್ತಿಯಿಂದ ನಮ್ಮ ವ್ಯಾಪಾರಸ್ಥರ ಮೊದಲಿನ ಶ್ರೇಷ್ಠ ಸ್ಥಿತಿಯು ತೀವ್ರವಾಗಿ ಹೊರಟು ಹೋಗಹತ್ತಿದೆ. ಧರ್ಮ ವೀರ ಶಂಕರಣ್ಣನವರು ಈ ಹಿಂದಿನ ಪೀಳಿಗೆಯವರು. ಅವರು ಮರಣಸಮಯದಲ್ಲಿ ೭೦ ವರ್ಷ ವಯಸ್ಸಿನವರಾಗಿದ್ದರು. ಅವರು ಆರಂಭದಲ್ಲಿ ಬಡತನಸ್ಥಿತಿಯಲ್ಲಿದ್ದರು. ಆದರೂ ಅವರು ತಮ್ಮ ಸತ್ಯ ಶುದ್ಧ ಕಾಯಕದಿಂದ ಧನಸಂಪನ್ನರಾದರು. ಅವರಿಗೆ ಪುತ್ರಸಂತಾನವಿದ್ದಿಲ್ಲ. ಆದರೆ ಅವರು ಯಾರನ್ನೂ ದತ್ತಕ ತಗೆದುಕೊಳ್ಳಲಿಲ್ಲ. ಕಡೆಗೆ ಅವರು ತಮ್ಮ ಧನದ ದೊಡ್ಡ ಭಾಗವನ್ನು ಒಂದು ಮಹತ್ತರ ಸತ್ಕಾ

ರ್ಯಕ್ಕೆ ಅರ್ಪಿಸಿದರು. ಹೀಗೆ ಅರ್ಪಿಸಿ ಚಿರಾಯುವಾಗಿದ್ದಾರೆ. ಇದೇ ವೀರಶೈವರಿಗೆ ಉಚಿತವಾದ ವರ್ತನೆಯು. ಧರ್ಮವೀರ ಶಂಕರಣ್ಣನವರೇ ಧನ್ಯರು.

**ಶಿವಾನುಭವ ಸಂಘಗಳು:**– ವೀರಶೈವ ಧರ್ಮ ತತ್ವಗಳನ್ನು ತಿಳಿದುಕೊಂಡು ಅವುಗಳನ್ನು ಆಚರಣೆಯಲ್ಲಿ ತರುವದರಲ್ಲಿಯೇ ವೀರಶೈವ ಸಮಾಜದ ಹೆಚ್ಚಳವು ಇರುತ್ತದೆ. ಶಿವಾನುಭವವೆಂದರೆ ಕೇವಲ ಧಾರ್ಮಿಕ ತತ್ವಗಳ ಬಗ್ಗೆ ವಾಗ್ವಾದಮಾಡುವವದಲ್ಲ. ಆದರೆ ಅವುಗಳನ್ನು ಚರ್ಚಿಸಿ ತಿಳಿದು ಆಚರಿಸುವದು ಇರುತ್ತದೆ. ಇದರಿಂದಲೇ ಸಮಾಜದ ಸುಧಾರಣೆಯು, ಧರ್ಮದ ಉನ್ನತಿಯು. ಈ ರೀತಿಯಾಗಿ ಪ್ರಯತ್ನಿಸಬೇಕೆನ್ನುವವರು ನಮಗೆ ತಿಳಿಸಿದಲ್ಲಿ ಅವರಿಗೆ ಶಿವಾನುಭವಸಂಘದ ಮಾದರೀ ನಿಯಮಗಳನ್ನು ನಾವು ಕಳಿಸಿಕೊಡುವೆವು. ಆ ಮೇರೆಗೆ ಅವರು ತಮ್ಮಲ್ಲಿ ಸಂಘಗಳನ್ನು ಸ್ಥಾಪಿಸಬೇಕೆಂದು ನಮ್ಮ ಸೂಚನೆಇದೆ. ಇದರಲ್ಲಿ ನಮ್ಮ ಉದ್ದೇಶವು ಧರ್ಮತತ್ವಗಳನ್ನು ಜನರು ತಮ್ಮ ಮಿತ್ರರೊಂದಿಗೆ ಆಲೋಚಿಸತಕ್ಕದ್ದು, ಚರ್ಚಿಸತಕ್ಕದ್ದು, ಮತ್ತು ತಮಗೆ ಶಕ್ಯವಿದ್ದಷ್ಟರ ಮಟ್ಟಿಗೆ ಅವುಗಳನ್ನು ಅನುಸರಿಸತಕ್ಕದ್ದು, ಇಷ್ಟೇ ಇರುತ್ತದೆ. ಈಗಿನ ಕಾಲಕ್ಕೆ ಸತ್ಶೀಲವು ಅತ್ಯಾವಶ್ಯಕವಾಗಿದೆ. ಇದು ವೀರಶೈವ ಸಂಸ್ಕೃತಿಯ ತಳಹದಿಯ ಮೇಲೆ ನೆಲೆಗೊಳಿಸುವದರಿಂದಲೇ ಸಾಧ್ಯವು. ಈ ಸಂಸ್ಕೃತಿಯನ್ನು ಪ್ರಜ್ವಲಗೊಳಿಸುವದೇ ಶಿವಾನುಭವ ಸಂಘದ ಮುಖ್ಯೋದ್ದೇಶವಾಗಿದೆ. ಇಂಥ ಸಂಘಗಳನ್ನು ಇಡೀ ಕರ್ನಾಟಕದಲ್ಲಿ ಪ್ರಸಾರಗೊಳಿಸುವದು ಅತ್ಯಾವಶ್ಯಕವು. ಈ ಸಂಘಗಳಿಗೋಸ್ಕರ ಕೆಲವು ಪಠ್ಯ ಪುಸ್ತಕಗಳು ರಚಿಸಲ್ಪಡುತ್ತಲಿವೆ. ಅವು ಈಗ ಅಚ್ಚಿನಲ್ಲಿವೆ. ಈ ಸಂಬಂಧದ ಬಗ್ಗೆ ಹೆಚ್ಚಿನ ವಿವರವು ಯಾರಿಗಾದರೂ ಬೇಕಾಗಿದ್ದರೆ ಅವರು "ಸಂಪಾದಕ ಶಿವಾನುಭವ ವಿಜಾಪುರ" ಎಂಬ ವಿಳಾಸದಿಂದ ಪತ್ರವ್ಯವಹಾರ ಮಾಡಬೇಕು.



ಚನ್ನಬಸವ ಮೊದಲಾದ ಮಹಾಗಣಂಗಳು ಅರ್ಥಿ ಉತ್ಸಾಹದಿಂದ ಭಕ್ತಿಯ ಮಾಡಿದ ಜಂಗಮವೇ ನನಗೆ ಮಹಾ ಪ್ರಸಾದವೆಂದು ಅವರಡಿಗಳಿಗೆ ವಂದಿಸಿ ತನುಮನಧನವನೊಪ್ಪಿಸಿ ಶರಣೆಂದರಯ್ಯ. ನಿರವಯ ಸ್ಥಲಕ್ಕೆ ಕಾರಣವಾದ ಪ್ರಭುದೇವನೇ ಆವ ಮತವೆಂದು ನೋಡದೆ ಬಾಲ ಬ್ರಹ್ಮಿ ಬಳಸಿ ಬ್ರಹ್ಮಿಯೆಂಬ ಸಂಸಾರ ಸಂಕಲ್ಪ ಸೂತಕವನೆಣಿಸದೆ ಸರ್ವಾಂಗದ ವಯವಗಳ ನೋಡಿ ಸರ್ವಸಂಗ ಪರಿತ್ಯಾಗತ್ವದಿಂದ ದ್ವಾದಶ ಮಲಂಗಳಂ ತ್ಯಜಿಸಿ, ಭಕ್ತಿಜ್ಞಾನವೈರಾಗ್ಯದಿಂದ ಸಮಸ್ತವಾದ ಭೋಗಯೋಗಾದಿಗಳಿಗೆ ಹೇವರಿಸಿ ನಿರಾಸಕತ್ವದಿಂ ಶಿವಧ್ಯೇಯೆಂದು ಗುರೂಪಾವಸ್ಥೆಯ ಮಾಡು ವಂಥ ಜ್ಞಾನಕಲಾತ್ಮಂಗೆ ಜಂಗಮಾಕೃತಿಯಿಂದ ಪ್ರತ್ಯಕ್ಷವಾಗಿ ಆ ಜ್ಞಾನಕ ಲಾತ್ಮನ ಉಪಾವಸ್ಥೆಯನೊಂದಿಸಿ ಆತನಿಗೆ ಅಂಜಬೇಡೆಂದು ಅಭಯಹಸ್ತವ ನಿತ್ತು ರೇವಣಸಿದ್ಧೇಶ್ವರ ಮೊದಲಾದ ಗಣಾಚಾರರ ಮಧ್ಯದಲ್ಲಿ ಈ ಜ್ಞಾನ ಕಲಾತ್ಮನನೊಪ್ಪಿಸಿ ಅವರಿಂದ ನಿರಾಕಾರವಾದ ಪ್ರಾಣಲಿಂಗವ ಬಹಿಷ್ಕರಿಸಿ ಪಂಚಕಲಶ ಸೂತ್ರದಿಂದ ಪ್ರಮಥಗಣ ಸಾಕ್ಷಿಯಾಗಿ ಆತನ ಷಡ್ವಿಧಸ್ಥಾನ ದಲ್ಲಿ ಸ್ಥಿರಂಗೊಳಿಸಿ, ಅಂತರಂಗ ಬಹಿರಂಗದಲ್ಲಿ ಅಷ್ಟವಿಧಾರ್ಚನೆ ಷೋಡ ಶೋಪಚಾರಗಳ ಭಕ್ತಿಯನರುಹಿ, ಆ ಪರಶಿವಲಿಂಗದಲ್ಲಿ ನೈಷ್ಠೆಯನೋಡಿ, ಪ್ರಮಥಗಣಾರಾಧ್ಯ ಭಕ್ತಮಾಹೇಶ್ವರರೊಡಗೂಡಿ ಏಕವಿಂಶತಿ ದೀಕ್ಷೆ ಮೊದಲಾಗಿ ಪ್ರಮಥರು ನುಡಿದ ಎರಡೆಂಬತ್ತುಕೋಟಿ ವಚನಾನುಭವ ಉದ್ಧರಣೆಯ ಬೋಧಿಸಿ ಸ್ವಸ್ವರೂಪು ನಿಲುಕಡೆಯ ಬೋಧಿಸಿ ನಾನುನೀನು ಎಂಬ ಭಿನ್ನಭಾವವನಳಿದು ಏಕ ಸ್ವರೂಪವೆಂಬ ಅಭಿನ್ನ ಲೀಲೆಯಿಂದ ಪಾದೋದಕ ಪ್ರಸಾದದಲ್ಲಿ ಏಕಭಾಜನವ ಮಾಡಿದ ಮೇಲೆ, ಶ್ರೀಗುರು ಬಸವ ಮೊದಲಾದ ಪ್ರಮಥಗಣಾರಾಧ್ಯರ ಕರೆದು ಇಲ್ಲೊಂದು ನಿಜವಸ್ತು ಉಂಟೆಂದು ತಾವು ಮೊದಲು ಶರಣ್ಬೊಕ್ಕು ತಮ್ಮ ಹಿಂದೆ ಶರಣಗಣಂಗ ಳೆಲ್ಲ ಶರಣ್ಬೊಕ್ಕು, ಅಡಿಮುಡಿಯಿಂದ ವಸ್ತುವ ಬೆಸಗೊಂಡು ಆ ಲಿಂಗ ಜಂಗಮ ದೇವರೊಡಗೂಡಿ ಬಯಲೊಳಗೆ ಮಹಾಬಯಲಾದರು ನೋಡಾ ಸಂಗನ ಬಸವೇಶ್ವರಾ.

---

## ಭಕ್ತಿಜ್ಞಾನ ಸತ್ಕ್ರಿಯೆಗಳ ಮಹತ್ವ.

೧. ಹರಗಣಂಗಳಾಚರಿಸಿದ ಸತ್ಕಾಯಕದಿಂದೆ ಬಹುಜನ್ಮದದೋಷ

ತೊಲಗುವದಯ್ಯ. ಸತ್ಕ್ರಿಯೆಯಿಂದ ಕಾಲಕಾಮರ ಭಯ ಹರಿವುದಯ್ಯ. ಸಮ್ಯಜ್ಞಾನದಿಂದ ಮಾಯಾಪಾಶ ಹಿಂದಾಗುವದಯ್ಯ. ಸದ್ಭಕ್ತಿಯಿಂದ ಪಾವನ ಸ್ವರೂಪರಾಗುವರಯ್ಯ. ಲಿಂಗಾಚಾರದಿಂದ ತನ್ನಂಗ ಶುದ್ಧವಾಗುವದಯ್ಯ. ಸದಾಚಾರದಿಂದ ಮನಶುದ್ಧವಾಗುವದಯ್ಯ ಶಿವಾಚಾರದಿಂದ ಧನ ಪ್ರಸಿದ್ಧವಾಗುವದಯ್ಯ. ಗಣಾಚಾರದಿಂದ ನಡೆಪರುಷವಾಗುವದಯ್ಯ. ಭೃತ್ಯಾಚಾರದಿಂದ ನುಡಿ ಪರುಷವಾಗುವದಯ್ಯ. ಕ್ರಿಯಾಚಾರದಿಂದ ಕರ್ಮೇಂದ್ರಿಯಂಗಳು ಪವಿತ್ರವಾಗುವವಯ್ಯ. ಜ್ಞಾನಾಚಾರದಿಂದ ಜ್ಞಾನೇಂದ್ರಿಯಂಗಳು ಪಾವನವಾಗುವವಯ್ಯ. ಭಾವಾಚಾರದಿಂದ ಕರಣಂಗಳು ನಿಜಸ್ವರೂಪವಾಗುವವಯ್ಯ. ಸತ್ಯಾಚಾರದಿಂದ ವಾಯುಗಳು ಮಹಾ ಪ್ರಸಾದವಾಗುವವಯ್ಯ. ಸರ್ವಾಚಾರದಿಂದ ಸರ್ವಾಂಗ ಜ್ಞಾನ ಜ್ಯೋತಿಯಪ್ಪುದು ತಪ್ಪದು ನೋಡಾ. ಧರ್ಮಾಚಾರದಿಂದ ಲಿಂಗಾಂಗಗಳು ಏಕವಾಗುವವಯ್ಯಾ. "ಲಿಂಗಾಚಾರ ಸದಾಚಾರ ಶಿವಾಚಾರ ಸ್ತಥೈವಚ। ಗಣಾಚಾರ ಭೃತ್ಯಾಚಾರ ಪಂಚಾಚಾರ ಪ್ರಕೀರ್ತಿತಃ ||೧|| ಕ್ರಿಯಾಚಾರ ಜ್ಞಾನಾಚಾರೊ, ಭಾವಾಚಾರ ಸ್ತಥೈವಚ। ಸತ್ಯಾಚಾರೋ ನಿತ್ಯಾಚಾರೊ ಧರ್ಮಾಚಾರವರಾನನೇ ||೨|| ಸರ್ವಾಚಾರ ಸಂಪನ್ನೇನ ಸದಾಸನ್ನಿಹಿತಃ ಶಿವಃ। ಲಿಂಗಾವ ಸಾನಕಾಲೇಸು ದ್ವಾದಶಾಚಾರಕಂ ಶ್ರುಣಿ ||೩|| ಇಂತೆಂದುದಾಗಿ ಸತ್ಕಾಯಕ ಮೊದಲಾದ ಷೋಡಶ ಕಲೆಗಳ ಸದ್ಗುರು ಮುಖದಿಂದ ಚಿದ್ಘನಲಿಂಗವ ಮಾಡಿಕೊಂಡು, ಷೋಡಶವರ್ಣವ ಸದ್ಗುರು ಮುಖದಿಂದ ಚಿದಂಗವ ಮಾಡಿಕೊಂಡು, ಸದ್ಗುರು ಮುಖದಿಂದ ಎರಡಳಿದು ಏಕಸ್ವರೂಪದಿಂದ ಜ್ಯೋತಿಯು ಜ್ಯೋತಿ ಬೆರೆದಂತೆ, ಬಸವ ಮೊದಲಾದ ಪ್ರಮಥಗಣಂಗಳೆಲ್ಲ ಬಯಲೊಳಗೆ ಮಹಾಬಯಲಾದರು ನೋಡಾ ಸಂಗನ ಬಸವೇಶ್ವರಾ.

೨. ಅಯ್ಯಾ ಲಿಂಗಜಂಗಮದನುಮತವಾದ ಕ್ರಿಯಾಜ್ಞಾನದಿಂದ ಅಹುದಾಗದೆಂಬ ಸಂದೇಹಬೇಡ. ಅದೆಂತೆಂದೊಡೆ "ಕ್ರಿಯಾದ್ವೈತನಕರ್ತವ್ಯಂ ಭಾವಾದ್ವೈತಂ ಸಮಾಚರೇತ್। ಜ್ಞಾನಕ್ರಿಯಾ ಸಮಾಯುಕ್ತಂ ಭಾವಶುದ್ಧಂತು ಶಾಂಕರಿ ||೧|| ಇಂತೆಂದುದಾಗಿ ಕೂಡಲ ಚನ್ನಸಂಗಯ್ಯನಲ್ಲಿ ಸಕಲೇಂದ್ರಿಯಂಗಳು ತಲ್ಲೀಯ ತದ್ರೂಪು. ಇಂತು ಚಿಕ್ಕ ದಂಡನಾಥನ ಪ್ರಸನ್ನ ಪ್ರಸಾದದಿಂದ ಅಂತರಂಗದಜ್ಞಾನ ಬಹಿರಂಗದಕ್ರಿಯೆಯ ಸಾಧಿಸು. "ಅಂತಜ್ಞಾ೯ನ ಬಹಿಃ ಕ್ರಿಯಾ ಏಕೀಭಾವ ವಿಶೇಷತಃ। ತತ್ಪ್ರಭೇದ ನಜಾ

ನಾತಿ ನಚಜ್ಞಾನ ನಚಕ್ರಿಯಾ ||೨|| ನ ಕ್ರಿಯಾರಹಿತಂ ಜ್ಞಾನಂ ನಜ್ಞಾನ ರಹಿತಂ ಕ್ರಿಯಾ। ನಪಶ್ಯಂ ತ್ಯಂಧಕಂ ದಗ್ಧಂ ತಸ್ಯದಾಹತಿ ಪಂಗುಃ ||೩|| ಕ್ರಿಯಾಜ್ಞಾನ ಸ್ತಥಾ ಭಾವಾತ್ ಸ್ಥಾಣೂರ ಮಿತ ತೇಜಸಃ। ಜ್ಞಾನವಂತ ಕ್ರಿಯಾ ನಿಷ್ಠಾ ಸಾಕ್ಷಾದ್ದೇವ ಮಹೇಶ್ವರಃ||೪|| ಇಂತು ಸತ್ಕ್ರಿಯೆ ಸಮ್ಯ ಜ್ಞಾನ ಸದ್ಭಾವವ ಹರಗುರು ವಚನೋಕ್ತಿಯಿಂದಾಚರಿಸಿ ಭಿನ್ನ ಕ್ರಿಯೆ ಜ್ಞಾನವಳಿದು ಹರುಕಿಲ್ಲದ ಚಿಂತಾಲಿನ ತ್ರಾಸಿನಂತೆ ಸಕಲ ಪ್ರಮಥಗಣಂ ಗಳು ನಿರಾಲಂಬ ಮಹಾಲಿಂಗೈಕ್ಯಾನುಭಾವದ ಬೆಳಗಿನೊಳಗೆ ಬಯಲಾ ದರು ನೋಡಾ ಸಂಗನ ಬಸವೇಶ್ವರಾ.

೩. ಅಯ್ಯಾ ಒಂದು ಜೀವಾತ್ಮನೇ ನಾಲ್ಕು ತೆರನಾಗಿಪ್ಪುದಯ್ಯ. ಅದೆಂತೆಂದೊಡೆ, ಒಂದು ಜೀವಾತ್ಮನೇ ಅಂಡಜ ಪ್ರಾಣಿಯಾಗಿರ್ಪುದಯ್ಯ. ಮತ್ತೊಂದು ಜೀವನೆ ಪಿಂಡಜ ಪ್ರಾಣಿ, ಉದ್ಭಿಜ ಪ್ರಾಣಿ, ಜರಾಯುಜ ಪ್ರಾಣಿಯಾಗಿರ್ಪುದಯ್ಯ. ಈ ಚತುರ್ವಿಧ ಜೀವನೊಳಗೆ ೭ಲಕ್ಷ ಮಲ ಜೀವನ, ೭ಲಕ್ಷ ಜಡಜೀವನ, ೭ಲಕ್ಷ ಕುಜೀವನ, ೭ಲಕ್ಷ ದುರ್ಜೀವನ, ೭ಲಕ್ಷ ಕಪಟ ಜೀವನ, ೭ಲಕ್ಷ ಸಂಚಲ ಜೀವನ, ೭ಲಕ್ಷ ವಂಚಕ ಜೀವನ, ೭ಲಕ್ಷ ನಿರ್ಮಲ ಜೀವನ, ೭ಲಕ್ಷ ಅಜಡ ಜೀವನ, ೭ಲಕ್ಷ ಸುಜೀವನ, ೭ಲಕ್ಷ ಸಜ್ಜೀವನ, ೭ಲಕ್ಷ ಪರಮ ಜೀವನ ಈ ತೆರವಾದ ಎಂಬತ್ತುನಾಲ್ಕು ಲಕ್ಷ ಜೀವಿಗಳೆಲ್ಲ, ಶಿವನ ಪೂರ್ವಭಾಗ. ಪ್ರವೃತ್ತಿ ಮಾರ್ಗದ ಕರ್ಮೇಂ ದ್ರಿಯ ಜ್ಞಾನೇಂದ್ರಿಯವೆಂಬ ದ್ವಾದಶೇಂದ್ರಿಯಂಗಳಲ್ಲಿ ಜೀವಿಸುತ್ತಿಪ್ಪ ವಯ್ಯ. ಆ ದ್ವಾದಶ ಜೀವನ ವರ್ತನ ಭೇದದಿಂದ ಒಂದು ಜೀವನೆ ಹನ್ನೆ ರಡು ತೆರನಾಗಿರ್ಪುದಯ್ಯ. ಅದರ ಗುಣಭೇದವೆಂತೆಂದೊಡೆ, ಉಚ್ಛಿಷ್ಟವ ತಿಂದು ಬದುಕುವ ಜೀವನೇ ಮಲಜೀವನೆನಿಸುವನಯ್ಯ. ಜಾಡಿ ಕ್ಷುದ್ರತ ನದಿಂದ ಒಡಲ ಹೊರೆವ ಜೀವನೇ ಜಡಜೀವನೆನಿಸುವನಯ್ಯ. ಕಡೆದು ಹೊಡೆದು ಬಡಿದು ಬಂಧಿಸಿ ಒಡಲಹೊರೆವ ಜೀವನೆ ಕಪಟ ಜೀವನ. ಗಾರುಡಿಗ ವಿದ್ಯದಿಂದ ಒಡಲಹೊರೆವ ಜೀವನೆ ಸಂಚಲ ಜೀವನೆನಿಸುವ ನಯ್ಯ. ದೇಶಕ್ಕೊಂದು ಭಾಷೆ, ದೇಶಕ್ಕೊಂದು ವೇಷವ ಧರಿಸಿ, ಒಡಲ ಹೊರೆವ ಜೀವನೆ, ವಂಚಕ ಜೀವನೆನಿಸುವನಯ್ಯ. ಷಟ್ಕೃಷಿ ವ್ಯಾಪಾರದೊ ಳಗೆ ಆವುದಾನೊಂದು ವ್ಯವಹಾರವಮಾಡಿ ಸತ್ಯದಿಂದ ಬಾಳುವನೆ ನಿರ್ಮ ಲಜೀವನೆನಿಸುವನಯ್ಯ. ಆವ ಮತವಾದರೇನು ಆವ ಜಾತಿಯಾದರೇನು ಮಲ ಮಾಯಾ ಸಂಸಾರ ಬಂಧವಂ ತ್ಯಜಿಸಿ, ಅಷ್ಟಾಂಗಯೋಗವಂ

ತ್ಯ [illegible]ಗುರು ಪರಮಾರಾಧ್ಯನ ಉಪಾವಸ್ಥೆಯಂ ಮಾಡುವನೆ ಸುಜೀವ ನ[illegible]ಸುವನಯ್ಯ. ಮಹಾಚಿದ್ಘನ ಗುರುದೇವನ ಪ್ರತ್ಯಕ್ಷವ ಮಾಡಿಕೊಂಡು, ಘನಗುರುಭಕ್ತಿಯಲ್ಲಿ ನಿಷ್ಠೆಯುಳ್ಳಾತನೆ ಸಜ್ಜೀವನೆನಿಸುವನಯ್ಯ ಶ್ರೀಮದ್ಘನ ಗುರುವ ಮೆಚ್ಚಿಸಿ ಇಷ್ಟಪ್ರಾಣ ಭಾವಲಿಂಗವ ಪಡೆದಾತನೆ ಪರಾತ್ಪರ ಪರಮ ಜೀವನೆನಿಸುವನಯ್ಯ. ಇಂತೀ ಜೀವನ ಬುದ್ಧಿಯಗುರು ಕಟಾಕ್ಷದಿಂ ನಿವೃತ್ತಿಯ ಮಾಡಿ ತ್ರಿವಿಧಾಂಗವೆಲ್ಲ ದೀಕ್ಷಾತ್ರಯಂಗಳಿಂದ ಶುದ್ಧ ಪ್ರಸಾದವಾಗಿ, ತ್ರಿವಿಧಮನವೆಲ್ಲ ಶಿಕ್ಷಾತ್ರಯಂಗಳಿಂದ ಸಿದ್ಧಪ್ರಸಾದವಾಗಿ, ಭಾವತ್ರಯಂಗಳೆಲ್ಲಾ ಮೋಕ್ಷತ್ರಯಂಗಳಿಂದ ಪ್ರಸಿದ್ಧ ಪ್ರಸಾದವಾಗಿ, ಸತ್ಯವಾಣಿ, ಸತ್ಯಪಾಣಿ, ಸತ್ಯಮಾಣಿ ಉಳಿದವಯವಂಗಳೆಲ್ಲಾ ಸತ್ಯವನೆ ಹಾಸಿಹೊದ್ದು ಸತ್ಯಕಾಯಕವನೆ ಮಾಡಿ, ಸತ್ಯ ಭಿಕ್ಷವ ಬೇಡಿ, ಮರ್ತ್ಯದಲ್ಲಿ ಬಂದು ಬಾರದಂತೆ ಸತ್ಯಸದಾಚಾರದಿಂದ ನಡೆನುಡಿ ಸಂಪನ್ನರೇ ಕೇವಲ ಪರಮ ಶಿವಗಣಂಗಳು ನೋಡಾ ಸಂಗನ ಬಸವೇಶ್ವರಾ.

## ತನಗೂ ಅಷ್ಟಾವರಣಕ್ಕೂ ಇರುವ ಸಂಬಂಧ.

೧. ಅಯ್ಯಾ ಆಚರಣೆಯಲ್ಲಿ ಇಷ್ಟಪ್ರಾಣಭಾವ ಲಿಂಗಗಳಿಗೆ ಗುರುಚರಭಕ್ತರೆ ಮೂಲ ಚೈತನ್ಯಮೂರ್ತಿ, ಅನಾದಿ ಚಿದ್ಘನಪಾದೋದಕ ಪ್ರಸಾದ ಮಂತ್ರಸ್ವರೂಪ ನೋಡಾ. ಅಯ್ಯಾ ಸಂಬಂಧದಲ್ಲಿ ಗುರುಚರ ಭಕ್ತಂಗೆ ಇಷ್ಟಪ್ರಾಣಭಾವ ಲಿಂಗಂಗಳಿಗೆ ಮೂಲಚೈತನ್ಯಮೂರ್ತಿ ಅನಾದಿ ಚಿದ್ಘನ ಪಾದೋದಕ ಪ್ರಸಾದ ಮಂತ್ರಸ್ವರೂಪ ನೋಡಾ. ಈ ವಿಚಾರವ ನಿನ್ನ ನೀನರಿವಡೆ ಅನಾದಿ ಗುರುಚರಭಕ್ತ ಇಷ್ಟ ಪ್ರಾಣ ಭಾವ ಪಾದೋದಕ ಪ್ರಸಾದ ಮಂತ್ರ ನಿನ್ನ ಸರ್ವಾಂಗದಲ್ಲುಂಟುನೋಡಾ ಸಂಗನಬಸವೇಶ್ವರಾ.

## ೧ ನೇ ವಿಧ.

೨. ದೀಕ್ಷಾತ್ರಯಂಗಳಲ್ಲಿ ನಿಜಗುರುವ ಸಂಬಂಧವ ಮಾಡಿಕೊಂಡು, ಪೂಜಾತ್ರಯಂಗಳಲ್ಲಿ ನಿಜಲಿಂಗವ ಸಂಬಂಧವ ಮಾಡಿಕೊಂಡು, ಭೋಗತ್ರಯಂಗಳಲ್ಲಿ ನಿಜಜಂಗಮವ ಸಂಬಂಧವ ಮಾಡಿಕೊಂಡು, ಕ್ರಿಯಾತ್ರಯಂಗಳಲ್ಲಿ ನಿಜಪಾದೋದಕವ ಸಂಬಂಧವ ಮಾಡಿಕೊಂಡು, ಜ್ಞಾನತ್ರಯಂಗಳಲ್ಲಿ ನಿಜಪ್ರಸಾದವ ಸಂಬಂಧವ ಮಾಡಿಕೊಂಡು, ಆಚಾರತ್ರಯಂ

ಗಳಲ್ಲಿ ನಿಜ ಚಿದ್ಭಸಿತವ ಸಂಬಂಧವ ಮಾಡಿಕೊಂಡು, ಸ[illegible]ಲ್ಲಿ ನಿಜ ರುದ್ರಾಕ್ಷಿಗಳ ಸಂಬಂಧವ ಮಾಡಿಕೊಂಡು, ಪಂಚಾಕ್ಷರಿ ಷಡಕ್ಷರಂಗಳೇ ನಡೆನುಡಿಯಾಗಿ, ಸಕಲ ಶಾಸ್ತ್ರಾಗಮ ಪುರಾಣಂಗಳೇ ಹಸ್ತಪಾದಂಗಳಾಗಿ ಎರಡೆಂಬತ್ತುಕೋಟಿ ವಚನಂಗಳೇ ಮಹಾ ಮಂತ್ರಂಗಳ ಸಂಬಂಧವ ಮಾಡಿಕೊಂಡರು ನೋಡಾ. "ಪೂಜಾಮೂರ್ತಿರ್ಭವೇಲ್ಲಿಂಗಂ ದೀಕ್ಷಾಮೂರ್ತಿರ್ಗುರುಸ್ತಥಾ। ಜಂಗಮಂ ಭೋಗಮೂರ್ತ್ಯಂಚ ಸತ್ಯಂ ಸತ್ಯಂ ನ ಸಂಶಯಃ ॥೧॥ ಕ್ರಿಯಾ ಸಂಬಂಧಯೋ ತೀರ್ಥಂ ಜ್ಞಾನ ಸಂಬಂಧ ಶೇಷಯೋ। ಸರ್ವಾಂಗಭೂತಿರುದ್ರಾಕ್ಷಂ ಶರಣಂ ಮಂತ್ರರೂಪಕಃ ॥೨॥ ಇಂತೆಂದುದಾಗಿ ಪರಹಿತಾರ್ಥಕ್ಕೋಸ್ಕರ ಸ್ಥೂಲ ಕಂಥೆಯ ಧರಿಸಿ ನಿರ್ವಂಚಕ ಲೀಲಾಮೂರ್ತಿಯಾಗಿ ಇಂತೀ ಏಕಲಿಂಗ ನಿಷ್ಠಾಪರತ್ವದಿಂದ ಅರಿದಾಚರಿಸುವರೆ ನೂತನ ಸದ್ಭಕ್ತ ಶಿವ ಶರಣ ಗಣಂಗಳು ನೋಡಾ ಸಂಗನ ಬಸವೇಶ್ವರಾ.

## ೨ ನೇ ವಿಧ.

೩. ಆಚಾರ ಅರುಹಿನಲ್ಲಿ ಸತ್ಕ್ರಿಯಾ ಸುಜ್ಞಾನ ಗುರುವ ಸಂಬಂಧವ ಮಾಡಿಕೊಂಡು, ಪಾಣಿ ಪ್ರಾಣದಲ್ಲಿ ಸತ್ಕ್ರಿಯ ಸುಜ್ಞಾನ ಲಿಂಗಸಂಬಂಧವಮಾಡಿಕೊಂಡು, ಆಚರಣೆ ಸಂಬಂಧಗಳಲ್ಲಿ ಸತ್ಕ್ರಿಯಾ ಸುಜ್ಞಾನ ಜಂಗಮವ ಸಂಬಂಧವ ಮಾಡಿಕೊಂಡು, ನಡೆನುಡಿಗಳಲ್ಲಿ ಸತ್ಕ್ರಿಯಾ ಸುಜ್ಞಾನ ಪಾದೋದಕವ ಸಂಬಂಧವ ಮಾಡಿಕೊಂಡು, ಜಿಹ್ವೆನಾಸಿಕದಲ್ಲಿ ಸತ್ಕ್ರಿಯಾ ಸುಜ್ಞಾನ ಪ್ರಸಾದವ ಸಂಬಂಧವ ಮಾಡಿಕೊಂಡು, ಸರ್ವಾಂಗ ಸುಮನ ಸತ್ಕ್ರಿಯಾ ಸುಜ್ಞಾನ ಚಿದ್ವಿಭೂತಿಯ ಸಂಬಂಧವ ಮಾಡಿಕೊಂಡು, ತತ್ತತ್ ಸ್ಥಾನಂಗಳಲ್ಲಿ ಚಿದೃಕ್ಕಿನಲ್ಲಿ ಸತ್ಕ್ರಿಯಾ ಸುಜ್ಞಾನ ಚಿದ್ರುದ್ರಾಕ್ಷಿಯ ಸಂಬಂಧವ ಮಾಡಿಕೊಂಡು, ಕ್ರಿಯಾಕಾಶ ಜ್ಞಾನಾಕಾಶಂಗಳಲ್ಲಿ ಸತ್ಕ್ರಿಯಾ ಸುಜ್ಞಾನ ಚಿನ್ಮಂತ್ರವ ಸಂಬಂಧವ ಮಾಡಿಕೊಂಡರು ನೋಡಾ. ಅದೆಂತೆಂದೊಡೆ "ಅಂತರ್ಜ್ಞಾನ ಬಹಿಃಕ್ರಿಯಾ ಏಕೀಭಾವ ವಿಶೇಷತಃ। ಷೋಡಶ ವರ್ಣರೂಪಂಚ ಸಾಕ್ಷಾತ್ ಪ್ರಭು ಮಹೇಶ್ವರೀ" ॥೧॥ ಇಂತೆಂದುದಾಗಿ ಸೂಕ್ಷ್ಮ ಕಂಥೆಯ ಧರಿಸಿ ಸಚ್ಚಿದಾನಂದ ಲೀಲಾಮೂರ್ತಿಗಳಾಗಿ ಇಂತು ಉಭಯ ವಿಚಾರವಿಡಿದು ಆಚರಿಸುವರೆ ಅನಾದಿ ಸದ್ಭಕ್ತ ಶಿವಶರಣಗಣಂಗಳು ನೋಡಾ ಸಂಗನ ಬಸವೇಶ್ವರಾ.

## ೩ ನೇ ವಿಧ.

೪. ತನುತ್ರಯಂಗಳಲ್ಲಿ ಕ್ರಿಯಾಗುರು ಜ್ಞಾನಗುರು ಮಹಾಜ್ಞಾನ ಗುರು ಸಂಬಂಧವ ಮಾಡಿಕೊಂಡು, ಮನತ್ರಯಂಗಳಲ್ಲಿ ಕ್ರಿಯಾಲಿಂಗ ಜ್ಞಾನಲಿಂಗ ಮಹಾಜ್ಞಾನಲಿಂಗವ ಸಂಬಂಧವ ಮಾಡಿಕೊಂಡು, ಭಾವ ತ್ರಯಂಗಳಲ್ಲಿ ಕ್ರಿಯಾಜಂಗಮ ಜ್ಞಾನಜಂಗಮ ಮಹಾಜ್ಞಾನಜಂಗಮವ ಸಂಬಂಧವ ಮಾಡಿಕೊಂಡು, ಆತ್ಮತ್ರಯಂಗಳಲ್ಲಿ ಕ್ರಿಯಾಪಾದೋದಕ ಜ್ಞಾನಪಾದೋದಕ ಮಹಾ ಜ್ಞಾನಪಾದೋದಕ ಸಂಬಂಧವ ಮಾಡಿಕೊಂಡು, ಅವಸ್ಥಾ ತ್ರಯಂಗಳಲ್ಲಿ ಕ್ರಿಯಾಪ್ರಸಾದ, ಜ್ಞಾನಪ್ರಸಾದ, ಮಹಾ ಜ್ಞಾನಪ್ರಸಾದವ ಸಂಬಂಧವ ಮಾಡಿಕೊಂಡು, ಕರಣ ತ್ರಯಂಗಳಲ್ಲಿ ಕ್ರಿಯಾಭಸಿತ, ಜ್ಞಾನಭಸಿತ, ಮಹಾ ಜ್ಞಾನಭಸಿತವ ಸಂಬಂಧವ ಮಾಡಿಕೊಂಡು, ಜೀವತ್ರಯಂಗಳಲ್ಲಿ ಕ್ರಿಯಾರುದ್ರಾಕ್ಷಿ, ಜ್ಞಾನರುದ್ರಾಕ್ಷಿ, ಮಹಾ ಜ್ಞಾನರುದ್ರಾಕ್ಷಿಗಳ ಸಂಬಂಧವ ಮಾಡಿಕೊಂಡು, ಗುಣತ್ರಯಂಗಳಲ್ಲಿ ಕ್ರಿಯಾಮಂತ್ರ, ಜ್ಞಾನಮಂತ್ರ, ಮಹಾ ಜ್ಞಾನಮಂತ್ರಗಳ ಸಂಬಂಧವ ಮಾಡಿಕೊಂಡರು ನೋಡಾ. ಅದೆಂತೆಂದೊಡೆ "ತ್ರಿತನುಂ ಗುರು ಸಂಬಂಧಂ ತ್ರಿಮಲಂ ಲಿಂಗಸಂಯುತಂ। ತ್ರಿಭಾವ ಜಂಗಮಶ್ಚೈವ ತ್ರಿಯಾತ್ಮಾತೀರ್ಥರೂಪಕಂ ॥೧॥ ತ್ರಿಯಾವಸ್ಥೇ ಶೇಷರೂಪಂ ಕರಣಂ ಭೂತಿರೂಪಕಂ। ತ್ರಿಜೀವ ಅಕ್ಷಮಾಲಿಕ್ಯಂ ತ್ರಿಗುಣಂ ಮಾತ್ರರೂಪಕಂ ॥೨॥ ಆಗವಾಚಾರ ಲಿಂಗಂಚ ಆತ್ಮಂಚಗುರು ಲಿಂಗಕಂ। ತತ್ಪ್ರಾಣ ಶಿವಲಿಂಗಂಚ ಇಂದ್ರಿಯಂ ಚರಲಿಂಗಕಂ ॥೩॥ ವಿಷಯಂಚ ಪ್ರಸಾದಾಖ್ಯಂ ತೃಪ್ತಿಶ್ಚ ಮಹಾಲಿಂಗಕಂ। ಸರ್ವಾಂಗ ಷಡು ಲಿಂಗಂಚ ಷಟ್ಸ್ಥಲ ಬ್ರಹ್ಮಮುಚ್ಯತೆ॥೪॥ ಶಿವಾಂಗ ಇಷ್ಟಲಿಂಗಂಚ ಮನಸ್ತತ್ಪ್ರಾಣ ಲಿಂಗಯೋಃ। ಆತ್ಮಾನಂ ಭಾವಲಿಂಗಶ್ಚ ತ್ರಿವಿಧಂ ಜ್ಯೋತಿರೂಪಕಂ ॥೫॥ ಇಂತೆಂದುದಾಗಿ ಕಾರಣ ಕಂಥೆಯ ಧರಿಸಿ ತ್ರಿವಿಧ ವಿಚಾರವಿಡಿದು ಆಚರಿಸುವಡೆ ಅನಾದಿ ಸದ್ಭಕ್ತ ಶಿವಶರಣಗಣಂಗಳು ನೋಡಾ ಸಂಗನ ಬಸವೇಶ್ವರಾ.

---

## ಗುರುಮಹಾತ್ಮೆ.

೧. ಗುರುವೇ ಸಕಲಲೋಕ ಜನಕನಯ್ಯಾ, ಸರ್ವಲೋಕ ಜನನಿಯಯ್ಯಾ. ಗುರುವೇ ಸಮಸ್ತ ಕುಟುಂಬಿಯಯ್ಯಾ, ಸ್ವತಂತ್ರನಯ್ಯಾ. ಗುರುವೇ

ಘನ ಮಹಿಮನಯ್ಯಾ, ಮುಕ್ತಿಗೆ ಮೂಲಾಧಾರನಯ್ಯಾ. ಗುರುವೇ ಸುರಚಿರ ಭೇದ್ಯನಯ್ಯಾ, ಸತ್ಕ್ರಿಯಾಜ್ಞಾನಕ್ಕೆ ಮಂದಿರನಯ್ಯಾ. ಗುರುವೇ ಕಾಲಹರನಯ್ಯಾ, ಕರ್ಮಹರನಯ್ಯಾ, ದುರಿತಹರನಯ್ಯಾ, ಪಾಪಹರನಯ್ಯಾ. ಗುರುವೇ ದೀಕ್ಷಾಕಾರಣ ಶಿಕ್ಷಾಕಾರಣ ಮೋಕ್ಷಕಾರಣನಯ್ಯಾ. ಪರಮಾಮೃತ ಸುಧಾರಸವಯ್ಯಾ. ಗುರುವೇ ಭಕ್ತಿಗೆ ಬೀಜವಯ್ಯಾ. ಅನಾಚಾರ ಸಂಹರನಯ್ಯಾ, ದುಷ್ಟ ನಿಗ್ರಹನಯ್ಯಾ, ಶಿಷ್ಟ ಪರಿಪಾಲನಯ್ಯಾ, ಸ್ತುತಿನಿಂದೆ ರಹಿತನಯ್ಯಾ. ಗುರುವೇ ಅಪ್ರಮಾಣನಯ್ಯಾ, ಅಗಮ್ಯ ಅಗೋಚರನಯ್ಯಾ. ಕಾಮಧೇನು ಕಲ್ಪವೃಕ್ಷ ನೋಡಾ. "ಗುರುಃಪಿತಾ ಗುರುರ್ಮಾತಾ ಗುರುರೇವ ಬಾಂಧವಃ। ಗುರುರ್ದೈವಾತ್ಪರಂನಾಸ್ತಿ ತಸ್ಮೈ ಶ್ರೀ ಗುರವೇನಮಃ॥ ನಮುಕ್ತಿರ್ನಚ ಧರ್ಮಂಚ ನಪುಣ್ಯಂಚ ನಪಾಪಂ ನಕರ್ಮ ಜನ್ಮನಷ್ಟಯೇ। ಗುರುಪಾದ ನಿರೀಕ್ಷಣಾತ್" ಗುರುವಿನಿಂ ಪೆರತೊಂದು ಅಧಿಕ ವಸ್ತುವಿಲ್ಲ ಸಂಗನ ಬಸವೇಶ್ವರಾ.

---

## ಲಿಂಗ ಮಹಾತ್ಮೆ.

೧. ಶ್ರೀಗುರುವಿನ ಕರಕಮಳ ಹೃದಯ ಮಧ್ಯದಲ್ಲಿ ಉದಯವಾದ ಇಷ್ಟಮಹಾಲಿಂಗವೇ ಪರಮ ಪಾವನವಯ್ಯ. ಆ ಮಹಾಲಿಂಗವೇ ಪರಮ ಪ್ರಕಾಶವಯ್ಯಾ. ಆ ಮಹಾಲಿಂಗವೇ ಪರಂಜ್ಯೋತಿ ಸ್ವರೂಪವಯ್ಯಾ. ಆ ಮಹಾಲಿಂಗವೇ ಪರಮ ನಿಷ್ಕಳಂಕನಯ್ಯ, ಚಿದ್ಘನವಸ್ತುವಯ್ಯ. ಆ ಮಹಾಲಿಂಗವೇ ಚಿನ್ಮಯ ಸ್ವರೂಪನಯ್ಯಾ. ಆ ಮಹಾಲಿಂಗವೇ ಚಿದಾನಂದ ಮೂರ್ತಿಯಯ್ಯಾ, ಚಿತ್ಪ್ರಕಾಶ ಮೂರ್ತಿಯಯ್ಯಾ. ಆ ಮಹಾಲಿಂಗವೇ ಚಿದ್ರೂಪ ಮೂರ್ತಿಯಯ್ಯಾ. ಸಹಜ ಸನ್ಮಾರ್ಗ ಸ್ವರೂಪನಯ್ಯಾ. ಆ ಮಹಾಲಿಂಗವೇ ಸತ್ತುಚಿತ್ತಾನಂದ ಮೂರ್ತಿಯಯ್ಯಾ. ಸರ್ವ ಸಾಕ್ಷಿಕ ಮೂರ್ತಿಯಯ್ಯಾ. ಸರ್ವ ಚೈತನ್ಯ ಮೂರ್ತಿಯಯ್ಯಾ. ಆ ಮಹಾಲಿಂಗವೇ ಸರ್ವಾಂತರ್ಯಾಮಿ ನೋಡಾ. ಅದೆಂತೆಂದೊಡೆ "ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂಸಚರಾಚರಂ। ಲಿಂಗಬಾಹ್ಯಾತ್ಪರಂ ನಾಸ್ತಿ ತಸ್ಮಾತ್ ಲಿಂಗಂ ಪ್ರಪೂಜಯೇತ್ ॥೧॥ ಲೀಯತೆ ಗಮ್ಯತೆ ಯತ್ರ ಯೇನಸರ್ವ ಚರಾಚರಂ। ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ವಪರಾಯಣೈಃ ॥೨॥" ಎಂದುದಾಗಿ

ಇಷ್ಟ ಮಹಾಚಿದ್ಘನಲಿಂಗವೇ ಸರ್ವ ತತ್ವಂಗಳಿಗೆ ಮೂಲಾಧಾರ ಮೂರ್ತಿ ನೋಡಾ ಸಂಗನ ಬಸವೇಶ್ವರಾ.

೨. ಆ ಮಹಾಲಿಂಗವೇ ಚಿನ್ನಾದ ಮೂರ್ತಿನೋಡಾ. ಪರನಾದ ಮೂರ್ತಿನೋಡಾ. ಪ್ರಣವನಾದ ಮೂರ್ತಿನೋಡಯ್ಯಾ. ಆ ಮಹಾಲಿಂಗವೇ ಮಹಾನಾದ ಮೂರ್ತಿಯಯ್ಯಾ. ಚಿದ್ಬಿಂದು ಮೂರ್ತಿ ನೋಡಯ್ಯಾ. ಆ ಮಹಾಲಿಂಗವೇ ಪರಬಿಂದು ಮೂರ್ತಿಯಯ್ಯಾ ಪ್ರಣವು ಬಿಂದು ಮೂರ್ತಿ ಯಯ್ಯಾ. ಆ ಮಹಾಲಿಂಗವೇ ಮಹಾ ಬಿಂದು ಮೂರ್ತಿಯಯ್ಯಾ. ಚಿತ್ಕಲಾಮೂರ್ತಿಯಯ್ಯಾ, ಪರಕಲಾ ಮೂರ್ತಿಯಯ್ಯಾ. ಆ ಮಹಾಲಿಂಗವೇ ಪ್ರಣವ ಸ್ವರೂಪ ಕಲಾಮೂರ್ತಿಯಯ್ಯಾ, ಪೂರ್ಣ ಕಲಾಮೂರ್ತಿ ಯಯ್ಯಾ. ಮಹಾಕಲಾ ಮೂರ್ತಿಯಯ್ಯಾ ಗೋಳಕಾರ ಪ್ರಣವ ಮೂರ್ತಿ ~~ನೋಡಯ್ಯಾ.~~ ಗಣಿತಕ್ಕೆ ಅಗಣಿತ ನೋಡಾ. ಅದೆಂತೆಂದೊಡೆ "ಆಕಾಶಂ ಲಿಂಗಮಿತ್ಯಾಹುಃ ಪ್ರಥ್ವೀತಸ್ಯಾದಿಪೀಠಕಂ । ಆಲಯಂ ಸರ್ವ ಭೂತಾನಾಂ ಲಯನಾಂ ಲಿಂಗಮುಚ್ಯತೆ ||೧|| ಲಿಂಗಮಧ್ಯೆ ಭವೇನ್ಮಂತ್ರಂ ಮಂತ್ರ ಮಧ್ಯೇ ಭವೇಲ್ಲಿಂಗಂ । ಲಿಂಗಮಂತ್ರದ್ವಯೋರ್ಮುಕ್ತಂ ಇಷ್ಟಲಿಂಗಂತು ಶಾಂಕರೀ ||೨||" ಇಂತೆಂದುದಾಗಿ ಚಿದ್ಘನ ಮಹಾಲಿಂಗವೇ ಮಂತ್ರ ಮೂರ್ತಿ ನೋಡಾ ಸಂಗನ ಬಸವೇಶ್ವರಾ.

## ಲಿಂಗವನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸ ಬಾರದು.

೧. ಅಂಗದ ಮೇಲೆ ಲಿಂಗವ ಧರಿಸಿ ಶಿವಭಕ್ತರೆಂದು ಹೇಳಿ, ಶಿವಾಚಾರದ ಮಾರ್ಗವಬಿಟ್ಟು, ಭವಿಶೈವ ದೈವಗಳಿಗೆ ಲಿಂಗವಡಿಯಾಗಿ ಅಡ್ಡಬಿದ್ದು ಶರಣೆಂಬ ಹೊಲೆಯರಿಗೆ ಚಂದ್ರ ಸೂರ್ಯರುಳ್ಳನಕ್ಕ ಇಪ್ಪತ್ತೆಂಟು ಕೋಟಿ ನರಕ ತಪ್ಪದು ಕಾಣಾ ಸಂಗನ ಬಸವೇಶ್ವರಾ.

೨. ಕಾಳಿಕಾ ಚಾಮುಂಡಿ ಗಂಗೆ ಗೌರಿ ಬನಶಂಕರಿ ಎಲ್ಲಿ ಎಕ್ಕ ಎಕ್ಕನಾದಿ ಹುಲಿಗಿ ಹುಸೂರಿ ಸತ್ತವರು ಹೆತ್ತವರು ಇಂತೀ ಹಲವು ಪಿಶಾಚಿಗಳ ಹೆಸರಿನಿಂದ ಇದಿರಿಟ್ಟು ಆರಾಧಿಸಿ ಆದರ ನೈವೇದ್ಯವೆಂದು ಶ್ರೀಗುರು ಇತ್ತ ಲಿಂಗಕ್ಕೆ ತೋರಿಸಿ ಭುಂಜಿಸುವ ಶಿವದ್ರೋಹಿಗಳಿಗೆ ಗುರುವಿಲ್ಲ, ಲಿಂಗ ವಿಲ್ಲ, ಜಂಗಮವಿಲ್ಲ, ಪಾದೋದಕ ಪ್ರಸಾದವಿಲ್ಲ ಕಾಣಾ ಸಂಗನ ಬಸವೇಶ್ವರಾ.

# ಅಂತರ್ಲಿಂಗದ ಸ್ವರೂಪು.

೧ ಅಯ್ಯಾ ಷೋಡಶ ಕಮಲಂಗಳಲಿ ನೆಲಸಿರ್ಪ ಲಿಂಗಂಗಳ ಭಿಧಾನವ ಕರುಣಿಸಬೇಕಯ್ಯಾ ಶ್ರೀಗುರುನಾಥನೇ. ಕೇಳಯ್ಯ ಎನ್ನ ಕಂಗಳ ಹೃದಯಂಗಳಲ್ಲಿ ನೆಲಸಿರ್ಪ, ವರಕುಮಾರ ಶಿಷ್ಯೋತ್ತಮನೇ, ಸುಚಿತ್ತ ಕಮಲದಲ್ಲಿ ಆಚಾರ ಲಿಂಗವಾಗಿ ನೆಲಸಿರ್ಪುದಯ್ಯ. ಸುಬುದ್ಧಿ ಕಮಲ ದಲ್ಲಿ ಗುರುಲಿಂಗವಾಗಿ ನೆಲಸಿರ್ಪುದಯ್ಯ. ನಿರಹಂಕಾರ ಕಮಲದಲ್ಲಿಶಿವ ಲಿಂಗವಾಗಿ ನೆಲಸಿರ್ಪುದಯ್ಯ. ಸುಮನ ಕಮಲದಲ್ಲಿ ಜಂಗಮಲಿಂಗ ವಾಗಿ ನೆಲಸಿರ್ಪುದಯ್ಯ. ಸುಜ್ಞಾನ ಕಮಲದಲ್ಲಿ ಪ್ರಸಾದ ಲಿಂಗವಾಗಿ ನೆಲ ಸಿರ್ಪುದಯ್ಯ. ಸದ್ಭಾವ ಕಮಲದಲ್ಲಿ ಮಹಾಲಿಂಗವಾಗಿ ನೆಲಸಿರ್ಪುದಯ್ಯ. ನಿರುಪಾಧಿ ಕಮಲದಲ್ಲಿ ಚಿದ್ಘನ ಲಿಂಗವಾಗಿ ನೆಲಸಿರ್ಪುದಯ್ಯ. ನಿಃಪ್ರ ಪಂಚ ಕಮಲದಲ್ಲಿ ಚಿತ್ಪ್ರಾಣಲಿಂಗವಾಗಿ ನೆಲಸಿರ್ಪುದಯ್ಯ. ಇಂತೀ ಸಾಕಾ ರವಾದ ಅಷ್ಟದಳ ಕಮಲಂಗಳಲ್ಲಿ ಅಷ್ಟವಿಧ ಲಿಂಗಂಗಳಾಗಿ ನೆಲಸಿರುವಾ ತನು ತಾನೇ ನೋಡಾ. ಇನ್ನು ನಿರಾಕಾರವಾದ ಅಷ್ಟದಳ ಕಮಲಂಗಳಾ ವವೆಂದೊಡೆ, ನಿರಾಲಂಬ ಕಮಲದಲ್ಲಿ ನಿಃಕಳಲಿಂಗವಾಗಿ ನೆಲಸಿರ್ಪುದು ನೋಡಾ. ನಿರಾತಂಕ ಕಮಲದಲ್ಲಿ ನಿಃಶೂನ್ಯ ಲಿಂಗವಾಗಿ ನೆಲಸಿರ್ಪು ದಯ್ಯ. ನಿಃಕಾಮ್ಯ ಕಮಲದಲ್ಲಿ ನಿರಂಜನ ಲಿಂಗವಾಗಿ ನೆಲಸಿರ್ಪುದಯ್ಯ. ನಿಃಪ್ರಪಂಚ ಕಮಲದಲ್ಲಿ ನಿಃಪ್ರಪಂಚ ಲಿಂಗವಾಗಿ ನೆಲಸಿರ್ಪುದಯ್ಯ. ಸಚ್ಚಿ ದಾನಂದ ಕಮಲದಲ್ಲಿ ಸಚ್ಚಿದಾನಂದ ಲಿಂಗವಾಗಿ ನೆಲಸಿರ್ಪುದಯ್ಯ. ನಿರ್ನಾಮ ಕಮಲದಲ್ಲಿ ನಿರ್ನಾಮ ಲಿಂಗವಾಗಿ ನೆಲಿಸಿರ್ಪುದಯ್ಯ. ನಿರಾಳ ಕಮಲದಲ್ಲಿ ನಿರಾಳ ಲಿಂಗವಾಗಿ ನೆಲಸಿರ್ಪುದಯ್ಯ. ಸುರಾಳ ಕಮಲದಲ್ಲಿ ಸುರಾಳ ಲಿಂಗವಾಗಿ ನೆಲಸಿರ್ಪುದು ನೋಡಾ. ಇಂತು ಸಾಕಾರ ನಿರಾಕಾರ ಲೀಲೆಯಿಂದ ತಿಳಿದುಪ್ಪ ಹೆರೆದುಪ್ಪದೋಪಾದಿಯಲ್ಲಿ ಷೋಡಶ ಕಮಲಂಗ ಳಲ್ಲಿ ಷೋಡಶ ಲಿಂಗಂಗಳಾಗಿ ನೆಲಸಿರ್ಪ ಅನಾದಿ ನಿಃಕಳಂಕ ಜ್ಯೋತಿ ರ್ಮಯ ಪರಶಿವಲಿಂಗ ಪ್ರಭು ತಾನೇ ನೋಡಾ. ಸಂಗನ ಬಸವೇಶ್ವರಾ.

೨. ಅಯ್ಯಾ ವರಕುಮಾರ ದೇಶಿಕೇಂದ್ರನೆ ನಿನ್ನಾದಿ ಮಧ್ಯಾವಸಾನ ಸ್ವರೂಪವಾದ ಶ್ರೀಗುರುಲಿಂಗ ಜಂಗಮದ ಕರುಣಾಕಟಾಕ್ಷೆಯಿಂದ ದಶ ವಿಧ ಲಿಂಗಂಗಳ ಪಡೆದು, ಆ ಲಿಂಗ ನಿಷ್ಠಾಪರತ್ವದಿಂದ ನಿನ್ನ ಪ್ರಾಣನ ಮಧ್ಯದಲ್ಲಿ ನೆಲಿಸಿರ್ಪ ದಶವಿಧ ಚಿದ್ವಾಯುಗಳು ದಶವಿಧ ಸುನಾದಗಳು

ದಶವಿಧ ಸತ್ಕರಣಂಗಳನ್ನು ಮಹಾ ಜ್ಯೋತಿರ್ಮಯ ಲಿಂಗದತ್ತ ಮುಖ ನಾಗಿ ನೋಡಲು ಮಹಾ ಶರಣಗಣ ಮಾರ್ಗದ ಬಟ್ಟಬಯಲು ನಿಜಾಚ ರಣೆ ದೊರೆವುದು ನೋಡಾ. ಇಂತು ಮಹಾ ಪ್ರಮಥಗಣಂಗಳಾಚರಿಸಿದ ಸನ್ಮಾರ್ಗವನರಿದಾಚರಿಸಿದರೆ ನಿನ್ನಿಂದ ಬಿಟ್ಟು ಪರವಸ್ತು ಇಲ್ಲ ನೋಡಾ ಸಂಗನ ಬಸವೇಶ್ವರಾ.

೩. ಅಯ್ಯಾ ಎನ್ನ ಕರ ಮನ ಭಾವ ಕಂಗಳ ಕೊನೆಯಲ್ಲಿ ಬೆಳಗುವ ಪರಂಜ್ಯೋತಿ ಮೂರ್ತಿ ಕೇಳಾ. ನಿತ್ಯ ನಿಜಾನಂದ ಪರಿಪೂರ್ಣದಿರವೆ ಆದಿಯಲ್ಲಿ ಪ್ರಸಾದವಯ್ಯಾ, ಅಂತ್ಯದಲ್ಲಿ ಪ್ರಸಾದವಯ್ಯ, ಮಧ್ಯದಲ್ಲಿ ಪದಾ ರ್ಥವಯ್ಯ. ಈ ಪ್ರಸಾದ ಪದಾರ್ಥವನರಿಯದವರೆಲ್ಲಾ ಹುಟ್ಟಂಧಕರೆಂಬೆ ನಯ್ಯ. ಈ ಪ್ರಸಾದ ಪದಾರ್ಥವ ಭೇದಿಸಿ ಬಸವಣ್ಣ ಬಯಲಾದ. ಚನ್ನ ಬಸವಣ್ಣ ಸಿದ್ಧರಾಮ ಅಜಗಣ್ಣ ಮರುಳಶಂಕರ ನೀಲಲೋಚನೆ ಅಕ್ಕ ಮಹಾದೇವಿ ಮುಕ್ತಾಂಗನೆ ಮೊದಲಾದ ಮಹಾ ಚಿದ್ಘನಗಣಂಗಳೆಲ್ಲ ಜ್ಯೋತಿರ್ಮಯವಾದರು ನೋಡಾ. ಮತ್ತು ಸಚ್ಚಿದಾನಂದ ನಿಜದಿಂದ ಭೇದಿಸಿ ಆನಂದ ಜಲವುಕ್ಕಿ ಅತಿ ಮೋಹದಿಂದ ಪವನೆ ನೂರೆಂಟೆಳೆಯ ದಾರವ ಮಾಡಿ ಅರ್ಥವನೆನವ ವರ್ಣಯುಕ್ತವಾದ ಮಣಿಯಮಾಡಿ ಮಹಾ ಪರಿಪೂರ್ಣ ಜ್ಞಾನವೆಂಬ ರಂಧ್ರವ ರಚಿಸಿ ಮಹಾ ಚಿದ್ಘನ ಪ್ರಕಾ ಶವೆಂಬ ಬಣ್ಣವನಿಟ್ಟು ಒಂದು ದಾರದಲ್ಲಿ ೧೨ ಮಣಿಯ ಪವಣಿಸಿದರಯ್ಯ ಮತ್ತೊಂದು ದಾರದಲ್ಲಿ ೨೪ ಮಣಿಯನ್ನು ಮತ್ತೊಂದರಲ್ಲಿ ೩೬ ಮಣಿ ಯನ್ನು ಮಿಗಿಲೊಂದು ದಾರದಲ್ಲಿ೪೮ ಮಣಿಯ ಪವಣಿಸಿದರಯ್ಯ. ಮತ್ತೊಂ ದರಲ್ಲಿ ೭೨ ಮತ್ತೊಂದರಲ್ಲಿ ೮೪ ಮತ್ತೊಂದರಲ್ಲಿ ೯೬ ಮತ್ತೊಂದರಲ್ಲಿ ೧೦೮ ಮತ್ತೊಂದರಲ್ಲಿ ೨೧೬ ಮತ್ತೊಂದರಲ್ಲಿ ೪೩೨ ಮತ್ತೊಂದರಲ್ಲಿ ೮೬೪ ಮತ್ತೊಂದರಲ್ಲಿ ೧೭೨೮ ಮತ್ತೊಂದು ದಾರದಲ್ಲಿ ಅನಂತನಂತ ಮಣಿ ಗಳ ಪವಣಿಸಿದರಯ್ಯಾ. ಈ ಪ್ರಕಾರದಿಂದ ಹದಿಮೂರೆಳೆಯ ಮಣಿ ಗಳ ಸರಗೊಳಿಸಿ ಆಯಾಯ ಸರದ ಎಸಳುಗಳ ಮಧ್ಯದಲ್ಲಿ ಮುತ್ತು ಮಾಣಿಕ್ಯ ನವರತ್ನ ಪ್ರಕಾಶಕ್ಕೆ ಮಿಗಿಲಾದ ಮಹಾ ಜ್ಯೋತಿರ್ಮಯ ಶ್ರೀ ಗುರುಲಿಂಗ ಜಂಗಮವೆಂಬ ಮಹಾ ಪ್ರಸಾದವ ಪದಕವ ಮಾಡಿ ರಚಿಸಿ ಅಂಗಲಿಂಗ ಪ್ರಾಣಲಿಂಗ ಭಾವಲಿಂಗವೆಂಬ ವುಭಯ ಚಿನ್ನ ವಳಿದು ಮಹಾ ಬೆಳಗಿನೊಳಗೆನಿಂದು ಸರ್ವಾವಸ್ಥೆಗಳಿಲ್ಲದೆ ಕಂಠಾಭರಣವ ಮಾಡಿ ಧರಿಸಿ ಮಹಾ ಪರಿಪೂರ್ಣ ಮಹಾ ಪ್ರಕಾಶವೆಂಬ ಮಹಾ ಚಿದ್ಘನ

ಪ್ರಸಾದ ಭಾಜನದಲ್ಲಿ ಪರಿಪೂರ್ಣರಾಗಿ ಸತ್ಯ ಸದಾಚಾರ ಸತ್ಕ್ರಿಯಾಯುಕ ಸದ್ಭಕ್ತಿಯಾನಂದ ಸತ್ಕ್ರಿಯೆ ಸಮ್ಯಜ್ಞಾನದ ಬೆಳಗಿನೊಳಗಣ ಮಹಾ ಬೆಳಗ ಸಾಧಿಸಿ ಅನಾದಿಯ ಬಯಲೊಳಗಣ ಮಹಾ ಬಯಲೊಳಗೆ ಜನಿತರಾಗಿ ಚತುರ್ಮುಖನ ಜಡಸಂಸಾರಕ್ಕೊಳಗಾಗದೆ ಯದ್ದೃಷ್ಟಂತನ್ನಷ್ಟಂ ಎಂದುದಾಗಿ ಮತ್ತೆ ಮರಳಿ ಬಯಲೊಳಗಣ ಮಹಾ ಬಯಲಾದರು ನೋಡಾ ಸಂಗನಬಸವೇಶ್ವರಾ.

---

## ಜಂಗಮ.

೧. ಹರಹರಾ ಶಿವಶಿವಾ ಕರುಣಾಕರ ಮತ್ಪ್ರಾಣನಾಥ ಮಹಾಪ್ರಭು ಜಂಗಮವೇ, ಸರ್ವ ಪರಬ್ರಹ್ಮ ಘನ ಗಂಭೀರ ಪರತತ್ವ ಮೂರ್ತಿ ನೋಡಾ ಜಂಗಮವೇ, ನಿರುಪಮ ನಿರವಯ ನೋಡಾ. ನಿಶ್ಚಿಂತ ನಿಷ್ಕಳಂಕ ನೋಡಾ. ಜಂಗಮವೇ ಸ್ವಯಚರ ಪರವಸ್ತು ನೋಡಯ್ಯ. ಭೂರುದ್ರ ಮೂರ್ತಿ ನೋಡಯ್ಯ. ಸತ್ಯ ಸದಾಚಾರ ಮೂರ್ತಿ ನೋಡಯ್ಯ. ಜಂಗಮವೇ ಸತ್ಕ್ರಿಯಾ ಸಮ್ಯಜ್ಞಾನ ಮೂರ್ತಿ ನೋಡಯ್ಯ. ಸದ್ಭಕ್ತಿಪ್ರಿಯ ಜಂಗಮವು ಗುರುಲಿಂಗ ಭಕ್ತಂಗೆ ಹರಣ ಕಿರಣ ಚೈತನ್ಯ ಮೂರ್ತಿ ನೋಡಯ್ಯ. ಪರಮಾನಂದ ಪರಿಣಾಮಿ ನೋಡಯ್ಯ. ಜಂಗಮವೇ ಸಚ್ಚಿದಾನಂದ ಮೂರ್ತಿ ನೋಡಯ್ಯ. ಜಗತ್ಪಾವನ ಮೂರ್ತಿ ನೋಡಯ್ಯ ಕಾರಣಾವತಾರ ಮೂರ್ತಿ ನೋಡಯ್ಯ. ಜಂಗಮವೆ ಅಂಗಲಿಂಗ ವೆರಡಕೆ ಹರಣ ಕಿರಣ ಚೈತನ್ಯ ಮೂರ್ತಿ ನೊಡಯ್ಯ ಅದೆಂತೆಂದೊಡೆ “ ಭೂಸುರೋ ಬ್ರಾಹ್ಮಣಶ್ಚೈವ ಭೂರುದ್ರೋ ಜಂಗಮಸ್ತಥಾ । ಸುರರುದ್ರಪ್ವಯೋರ್ಮಧ್ಯೆ ರುದ್ರಯೋವವಿಶೇಷಿತಃ ||೧|| ನಾದ ಬಿಂದು ಕಲಾತೀತಂ ವೇದಶಾಸ್ತ್ರಾತಿವರ್ತನಂ । ಆದಿ ಮದ್ಯಾಂತರಹಿತಂ ನಿತ್ಯಾನಂದಾತ್ಮಕಂ ನಿಜಂ ||೨|| ಎಂದುದಾಗಿ ಜಂಗಮವೇ ಸ್ವದ್ಭಕ್ತ ಮಾಹೇಶ್ವರರ ಸದ್ಧರ್ಮ ಸರ್ವಾಚಾರ ಸಂಪತ್ತಿನಾಚರಣೆಗೆ ಕಾರಣ ಕರ್ತು ನೋಡಾ ಸಂಗನಬಸವೇಶ್ವರಾ.

೨. ಅಯ್ಯಾ ಜಂಗಮವೆಂದೊಡೆ ಬಾಯಲಿಕ್ಕವೇ? ಜಂಗಮವೆಂದೊಡೆ ಉಪಾಧಿಕನೆ? ಜಂಗಮವೆಂದೊಡೇನು ಸ್ತ್ರೀಲಂಪಟನೆ? ಈ ಗುಣವುಳ್ಳವನ ಚರ ಜಂಗಮ ವೆಂಬೆನೆ? ಎನ್ನೆನು. ಈ ಪಾತಕದ ನುಡಿಯ ಕೇಳಲಾಗದು. ಜಂಗಮವೆಂತವನೆಂದೊಡೆ, ನಿರ್ಲೇಪ ನಿರುಪಾಧಿಕ

ನಿರ್ಬೋಧ, ನಿರಾಶ್ರಿತ ನಿಷ್ಕಾರಣ ನಿರ್ಲಂಪಟ. ಜಂಗಮ ಈ ಷಡ್ಗುಣ ಭರಿತನಾದೊಡೆ ಜಂಗಮವೆಂಬೆನಯ್ಯ. ಇಂತಿಪ್ಪುದೆ ಕಾರಣವಾಗಿ ಪ್ರಭುದೇವರೇ ಶರಣೆಂದು ಬದುಕನೇ ಬಸವಣ್ಣ? ಇವರಿಬ್ಬರು ಒಕ್ಕುದಕೊಂಡು ನಾನು ಬದುಕಿದೆನು ಕಾಣಾ. ಇಂತು ಪ್ರಮಥಗಣಮಾರ್ಗದಲ್ಲಿ ದೃಢ ಚಿತ್ತದಿಂದ ನಿಂದ ಮಹಂತ ಶರಣಂಗೆ ನಾನು ನೀನು, ಗುರುವು ಶಿಷ್ಯ, ಭಕ್ತ ಜಂಗಮ, ಸತಿಪತಿ, ತಂದೆ ಮಗನೆಂಬ, ಉಭಯ ಶಬ್ದ ಉಂಟೆ ನೋಡಾ ಸಂಗನಬಸವೇಶ್ವರಾ?

---

## ಪ್ರಸಾದ.

೧. ಅಯ್ಯಾವರಕುಮಾರ ದೇಶಿಕೋತ್ತಮನೇ ಕೇಳಾ. ಕಲ್ಯಾಣ ಪಟ್ಟಣದ ಅನುಭಾವ ಮಂಟಪದಲ್ಲಿ ಬಸವ ಮೊದಲಾದ ಪ್ರಮಥರೆಲ್ಲ ಚನ್ನಬಸವರಾಜೇಂದ್ರಂಗೆ ಮಹಾಲಿಂಗೈಕ್ಯಾನುಭಾವವ ಬೆಸಗೊಳಲು, ಆದೇ ಪ್ರಸಾದವ ನಿನಗೆ ಅರುಹಿಸಿ ಕೊಟ್ಟೆವು ಕೇಳಾ ನಂದಿ ಸಂಗನ ಬಸವೇಶ್ವರಾ.

೨. ಆದಿಯನು ಲಿಂಗಮುಖದಲ್ಲಿ ಅರ್ಪಿತವ ಮಾಡಿ, ಅನಾದಿಯನು ಲಿಂಗಮುಖದಲ್ಲಿ ಅರ್ಪಿತವ ಮಾಡಿ, ಮನವೆಂಬುದ ನಿರಾಕಾರದಲ್ಲಿ ನಿಲಿಸಿ, ಪರಿಣಾಮ ಪ್ರಸಾದದಲ್ಲಿ ತದ್ಗತನಾಗಿ ಪ್ರಸಾದವೇ ಪ್ರಾಣ ಪ್ರಸಾದವೇ ಜ್ಞಾನ ಪ್ರಸಾದವೇ ಧ್ಯಾನ ಪ್ರಸಾದವೇ ಭೋಗವಾಗಿಪ್ಪ ಸಂಗಮೇಶ್ವರ ಲಿಂಗದಲ್ಲಿ ಮರುಳ ಶಂಕರದೇವನ ನುಪಮಿಸಬಾರದು ನೋಡಾ ಬಸವಣ್ಣ.

೩. ಬಸವಣ್ಣ ಚನ್ನಬಸವಣ್ಣ ಪ್ರಭುದೇವ ಮರುಳ ಶಂಕರ ಸಿದ್ಧರಾಮಯ್ಯ ಅಜಗಣ್ಣ ಅಕ್ಕನಾಗಲೆ ನೀಲಲೋಚನೆ ಮುಕ್ತಾಂಗನೆ ಮಹಾದೇವಿಯಕ್ಕ ಮೊದಲಾದ ಮಹಾ ಪ್ರಮಥಗಣಂಗಳೆಲ್ಲ ಸುಗಂಧದೊಳಗಣ ಮಹಾ ಗಂಧ ಪ್ರಸಾದವ ಕೊಂಡರಯ್ಯ. ಸುರಸದೊಳಗಣ ಮಹಾ ರಸಪ್ರಸಾದವ ಕೊಂಡರಯ್ಯಾ. ಸುರೂಪಿನೊಳಗಣ ಮಹಾ ಸ್ಪರ್ಶನ ಪ್ರಸಾದವ ಕೊಂಡರಯ್ಯ. ಇಂತೀ ಸುಗಂಧ ಸುರಸ ಸುರೂಪು ಸುಶಬ್ದ ಸತ್ತು ಚಿತ್ತಾನಂದ ಮೂರ್ತಿ ಶ್ರೀಗುರು ಲಿಂಗ ಜಂಗಮಕ್ಕೆ ಪವಿತ್ರ ಮುಖದಿಂದ ಸಮರ್ಪಿಸಿ ಅವರೊಕ್ಕು ಮಿಕ್ಕ ಪ್ರಸಾದವ ಹಾರೈಸಿ ಪರತತ್ವ ಲಿಂಗಮುಖದಲ್ಲಿ

ನಿಜ ಪ್ರಸಾದವೆಂದು ಸಂಬಂಧಿಸಿ ನಿರವಯ ಸಮಾಧಿಸ್ಥರಾದರು ನೋಡಾ. ಅಂದಿನ ಮಹಾಗಣಂಗಳ ಚಿತ್ತ್ರುಥಿಯೆ ಇಂದಿನ ಗುರುಲಿಂಗಜಂಗಮದ ಪಾದೋದಕ ಪ್ರಸಾದವೆಂದು ನಿರ್ವಂಚಕತ್ವದಿಂದ ಪ್ರಸಾದದೊಳಗಣ ಮಹಾ ಪ್ರಸಾದವೆಂದರಿದು ಆಚರಿಸುವ ನಿತ್ಯ ತೃಪ್ತಿಯೇ ಘನ ಪ್ರಸಾದ. ಆ ಪ್ರಸಾದವೇ ಪರಮಾನಂದ. ಈ ವಿಚಾರವನರಿದುಕೊಂಡು ಕೊಡಬಲ್ಲಾತನೆ ಸದ್ಗುರು: ಲಿಂಗ ಜಂಗಮ ಪಾದೋದಕ ಪ್ರಸಾದ. ಈ ಗುರು ಲಿಂಗ ಜಂಗಮ ಪಾದೋದಕ ಪ್ರಸಾದವನರಿದು ಕೊಳಬಲ್ಲಾತನೆ ಸದ್ಭಕ್ತ ಪ್ರಸಾದಿ ಶಿವಶರಣ ನೋಡಾ. ಈ ವಿಚಾರವನರಿಯದೆ ಕೊಟ್ಟು ಕೊಂಬ ಭ್ರಷ್ಟರನೇನೆಂಬೆನಯ್ಯ? ಆದಿ ಅನಾದಿಯಿಂದತ್ತತ್ತ ಮೀರಿ ತೋರುವ ಸದ್ಗುರು ಲಿಂಗ ಜಂಗಮದಿಂದ ಸದ್ಗುರು ಲಿಂಗ ಜಂಗಮ ಸದ್ಭಕ್ತಿ ಪ್ರಸಾದಿ ಶರಣತ್ವದ ವಿಚಾರವ ತಿಳಿದು ಮಹಾಗಣಂಗಳಿಗೆ ಪಾತಕ ಸೂತಕ ದರಿದ್ರ ದುಃಖಗಳು ಬಂದು ತಟ್ಟಲುಂಟೆ? ಅದೆಂತೆಂದೊಡೆ "ಯಥಾ ಅಗ್ನಿ ಸ್ತಥಾ ಕಾಷ್ಠಂ ಯಥಾ ಕ್ಷೀರ ತಥಾ ಘೃತಂ। ಯಥಾ ಜ್ಯೋತಿ ಸ್ತಥಾ ಸಾರಂ ಸರ್ವತ್ರಾವಸ್ಥಿತಂ ಕಲಾ ॥೧॥ ಯಥಾ ಕಲಾ ತಥಾ ಭಾವಂ ಯಥಾ ಭಾವ ಸ್ತಥಾ ಮನಃ। ಯಥಾ ಮನ ಸ್ತಥಾ ದೃಷ್ಟಿಃ ಯಥಾ ದೃಷ್ಟಿ ಸ್ತಥಾ ಶಿವಃ॥೨॥ ಇಂತೆಂದುದಾಗಿ ಅಗ್ನಿಯಲ್ಲಿ ದಗ್ಧವಾದಕಾಷ್ಠಂಗಳಿಗೆ ಮರಳಿ ಅಗ್ನಿಯುಂಟೆ? ಕ್ಷೀರವಳಿದು ಘೃತವಾದ ಮೇಲೆ ಮರಳಿ ಕ್ಷೀರವಪ್ಪುದೆ? ಜ್ಯೋತಿಯಲ್ಲಿ ಘನ ಸಾರ ಮರಳಿ ಸಾಕಾರವಪ್ಪುದೆ? ಸರ್ವಾವಸ್ಥೆಯಲ್ಲಿ ಪರತತ್ವ ಮೂರ್ತಿಯಲ್ಲಿ ಕೂಡಿದ ಸದ್ಭಕ್ತ ಮರಳಿ ಭವಿಯಪ್ಪನೆ? ಜಾತಿಸೂತಕ ಪಾತಕವಳಿದ ಸದ್ಭಕ್ತ ಶರಣಗಣಂಗಳ ಭಾವಮನದೃಷ್ಟ ಅವಸ್ಥೆಗಳೆಲ್ಲ ಪರಶಿವಲಿಂಗ ಪ್ರಕಾಶ ನೋಡಾ. ಅಂದಿಂದು ಎಂಬ ಸಂದೇಹವಳಿದು ಶೃತಿಗುರು ಸ್ವಾನು ಭಾವದಿಂದ ಅಂಗಲಿಂಗವೆಂಬುಭಯ ಭೇದವಳಿದು ತ್ರಿವಿಧದೀಕ್ಷೆ ತ್ರಿವಿಧ ಸ್ವಸ್ವರೂಪು ನಿಲುಕಡೆ ತ್ರಿವಿಧ ಗುರುಲಿಂಗಜಂಗಮ ತ್ರಿವಿಧ ಪಾದೋದಕ ಪ್ರಸಾದ ತ್ರಿವಿಧ ಚಿದ್ವಿಭೂತಿ ರುದ್ರಾಕ್ಷಿ ಮಂತ್ರ ತ್ರಿವಿಧಾಚಾರ ಭಕ್ತಿ ಜ್ಞಾನ ವೈರಾಗ್ಯವಿಡಿದಾಚರಿಸುವ ಭಕ್ತಗಣಂಗಳ ಕಾಯವೇ ಚಿತ್ಕಾಯ. ಅವರಂಗಮನಃ ಪ್ರಾಣಭಾವಂಗಳೇ ಮಹಾಘನ ನಿಜಪ್ರಸಾದಪಾದೋದಕ ನೋಡಾ ಸಂಗನ ಬಸವೇಶ್ವರಾ.

೪. ಅಷ್ಟಾಷಷ್ಟಿಕೋಟಿ ತೀರ್ಥಮಿಂದರಿಲ್ಲ ಕಾಣಿರಣ್ಣಾ. ಲಕ್ಷಕೋಟಿ ಜಪವ ಮಾಡಿದರಿಲ್ಲ. ಧ್ಯಾನ ಮೌನ ಹೋಮನೇಮ ಅನುಷ್ಠಾನವ ಮಾಡಿ

ದರಿಲ್ಲ ಕಾಣಿರಣ್ಣ. ಅನಂತ ವೇಳೆ ಸೂರ್ಯಚಂದ್ರ ಭೂಪ್ರದಕ್ಷಿಣೆ ಮಾಡಿದರಿಲ್ಲ. ಕಾಶಿ ಕೇದಾರ ಹಂಪೆ ಗಯಾ ಪ್ರಯಾಗ ರಾಮೇಶ್ವರ ಶ್ರೀಶೈಲ ಹೇಮಾದ್ರಿ ರಜತಾದ್ರಿ ಮಹಾಮೇರು ಹಿಮವತ್ಕೇದಾರ ವೀರಣ್ಣ ಶಿವಗಂಗೆ ಅಮರಗುಂಡ ಗೋಕರ್ಣ ಹೋದರಿಲ್ಲ ಕಾಣಿರಣ್ಣ. ಇವೆಲ್ಲ ಕುಚಿತ್ತ ಕುಬುದ್ಧಿ ಅಹಂಕಾರ ಕುಮನ ಅಜ್ಞಾನ ದುರ್ಭಾವ ಮೊದಲಾದ ಕರಣೇಂದ್ರಿಯಂಗಳು ತನ್ನ ತನು ತುಂಬಿ, ಬರಿಯ ಭ್ರಾಂತು ಕಾಣಿರಣ್ಣ. ಇನ್ನು ನಿಜವಸ್ತು ಪರಶಿವಲಿಂಗವಿಪ್ಪ ಠಾವಹೇಳಿಹೆ. ಶ್ರೀಗುರು ಕರುಣಾಕಟಾಕ್ಷೆಯಿಂ ಕರುಣಿಸಿಕೊಟ್ಟ ಪರಶಿವಲಿಂಗವ ಮನತುಂಬಿ ಭಾವತುಂಬಿ ಕರತುಂಬಿ ಕಂಗಳುತುಂಬಿ ಹೃದಯತುಂಬಿ ಸರ್ವಾಂಗತುಂಬಿ ಹಲವು ಕಡೆಗೆ ಹರಿದಾಡುವ ಹಂಸನಾತ್ಮ ಜೀವಧ್ಯಾನ ಮೌನ ನೇಮ ನಿತ್ಯ ಸತ್ಯ ಸದ್ಭಾವವೆಂಬ ಹಸ್ತದಲ್ಲಿ ಪಿಡಿದು, ಆ ಮಹಾಲಿಂಗವೆಂಬ ಸ್ತಂಭದಲ್ಲಿ ಕಟ್ಟಿ, ಆ ಹಸ್ತದಲ್ಲಿಪ್ಪ ಘನಮಹಾ ಪರಶಿವಲಿಂಗವ ಕೂಡಿ ನೆರೆಯ ಬಲ್ಲರೆ ಇದೇ ನಿಶ್ಚಯ ಕಾಣಾ. ಶ್ರೀಗುರು ಲಿಂಗ ಜಂಗಮದ ಕರುಣಾ ಕಟಾಕ್ಷೆಯಿಂದ ಅಂಗದ ಮೇಲೆ ಪರಶಿವಲಿಂಗವ ಧರಿಸಿದ ಶಿವಭಕ್ತ ಶಿವಭಕ್ತೆ ಶಿವಪುತ್ರರಿಗೆ ಶ್ರೀಗುರು ದೇವನೇ ಕುಲದೈವವಯ್ಯಾ. ಚಿಪ್ಪನ ಇಷ್ಟಮಹಾಲಿಂಗವೇ ಮನೆ ದೈವವಯ್ಯಾ. ಇಂತೀ ಕುಲದೈವ ಮನೆದೈವವ ಕಂಡು, ಅರ್ಥ ಪ್ರಾಣಾಭಿಮಾನಂಗಳ ಸಮರ್ಪಿಸಿ ಕಾಯದ ಮಧ್ಯದಲ್ಲಿ ನೆಲಿಸಿರ್ಪ ಇಷ್ಟಲಿಂಗದೇವಂಗೆ ಕಾಯವನರ್ಪಿಸಿ, ಮನ ಮಧ್ಯದಲ್ಲಿ ನೆಲಿಸಿರ್ಪ ಪ್ರಾಣಲಿಂಗ ದೇವಂಗೆ ಮನವನರ್ಪಿಸಿ, ಭಾವದಮಧ್ಯದಲ್ಲಿ ನೆಲಿಸಿರ್ಪ ಭಾವಲಿಂಗದೇವಂಗೆ ಭಾವವನರ್ಪಿಸಿ, ಪ್ರಾಣದಲ್ಲಿ ನೆಲಿಸಿರ್ಪ ಆಚಾರ ಲಿಂಗದೇವಂಗೆ ಸುಗಂಧವನರ್ಪಿಸಿ, ಜಿಹ್ವೆಯ ಮಧ್ಯದಲ್ಲಿ ನೆಲಿಸಿರ್ಪ ಗುರುಲಿಂಗದೇವಂಗೆ ಸುರಸವನರ್ಪಿಸಿ, ನೇತ್ರ ಮಧ್ಯದಲ್ಲಿ ನೆಲಿಸಿರ್ಪ ಜಂಗಮ ಮಹಾಲಿಂಗ ದೇವಂಗೆ ಸುಸ್ಪರ್ಶನವನರ್ಪಿಸಿ, ಶ್ರೋತ್ರದ ಮಧ್ಯದಲ್ಲಿ ನೆಲಿಸಿರ್ಪ ಪ್ರಸಾದ ಲಿಂಗದೇವಂಗೆ ಸುಶಬ್ದವನರ್ಪಿಸಿ, ಹೃದಯ ಮಧ್ಯದಲ್ಲಿ ನೆಲಿಸಿರ್ಪ ಮಹಾಲಿಂಗದೇವಂಗೆ ಸುತೃಪ್ತಿಯನರ್ಪಿಸಿ, ಅರುಹಿನ ಮಧ್ಯದಲ್ಲಿ ನೆಲಿಸಿರ್ಪ ನಿಃಕಲ ಲಿಂಗದೇವಂಗೆ ತನ್ನ ನಿತ್ಯ ಸುನಿಜವನರ್ಪಿಸಿ, ಸುಜ್ಞಾನದ ಮಧ್ಯದಲ್ಲಿ ನೆಲಿಸಿರ್ಪ ಶೂನ್ಯ ಲಿಂಗದೇವಂಗೆ ಮಹಾಸಂತೃಪ್ತಿಯ ಪರಿಣಾಮವನರ್ಪಿಸಿ ಇಂತೀ ಏಕಾದಶ ಸ್ಥಾನದಲ್ಲಿ ನೆಲಿಸಿರ್ಪ ಜ್ಯೋತಿರ್ಮಯ ಪರತತ್ವಲಿಂಗಕ್ಕೆ ಏಕಾದಶ ಭಕ್ತಿವಿಡಿದು ಏಕಾದಶ ಸುಪದಾರ್ಥವನರ್ಪಿಸಿ ನಿಜಸದ್ಭಕ್ತಿ ನೈಷ್ಠೆ

ಕರಿಗೊಂಡು ಅವರ ಒಕ್ಕುಮಿಕ್ಕ ಪರಿಣಾಮ ಪ್ರಸಾದದಲ್ಲಿ ನಿಮ್ಮ ಶರಣರು ಲೋಲುಪ್ತರಲ್ಲದೆ ಉಳಿದ ಜಡಜೀವಿಕರ್ಮ ಭೂಭಾರಿ ಕಣ್ಣಗೆಟ್ಟಣ್ಣಗಳೆತ್ತ ಬಲ್ಲರಯ್ಯ ನಿಮ್ಮ ನಿಜಾಚರಣೆಯ ನಿಲುಕಡೆಯ ನಿಜಪ್ರಸಾದವ? ಇಂತು ಮಹಾ ಪ್ರಮಥ ಗಣಂಗಳೆಲ್ಲ ಆಚಾರದನುವನರಿದು ಸನ್ಮಾರ್ಗದಿಂದಾಚರಿಸಿ ನುಡಿದಂತೆ ನಡೆದು ಎರಡೆಂಬತ್ತುಕೋಟಿ ವಚನವ ನುಡಿದು ಜ್ಞಾನೋದಯವಾಗಿ ಬಂದ ಸದ್ಭಕ್ತ ಶಿಷ್ಯೋತ್ತಮಂಗೆ ಪಂಚಮಹಾ ಪಾತಕ ಸೂತಕಂಗಳ ಬಿಡಿಸಿ, ಇಷ್ಟಲಿಂಗ ಬಾಹ್ಯವಾದ ಶಿವಮಾರ್ಗವ ಹರಿದು ತ್ರಿವಿಧ ದೀಕ್ಷಾಕರ್ತುವಾದ ಇಷ್ಟಲಿಂಗವ ಸರ್ವಾಂಗದಲ್ಲಿ ಸಂಬಂಧಿಸಿ ನಿಜ ವೀರ ಶೈವ ಸನ್ಮಾರ್ಗವ ಬೋಧಿಸಿ ಸದ್ಭಕ್ತಿ ಸತ್ಕಾಯಕ ಸತ್ಕ್ರಿಯೆ ಸಮ್ಯಜ್ಞಾನ ಸದ್ಭಾವ ಸದಾಚಾರವೆಂಬ ಷಟ್‌ಸ್ಥಲ ಸಂಪದವನಿತ್ತರು ನೋಡಾ ಸಂಗನ ಬಸವೇಶ್ವರಾ.

೫. ಇಂತು ಸದ್ಗುರು ಕರಜಾತರು ಪಂಚಪಾತಕ ಪಂಚಸೂತಕವ ಹೊದ್ದಲಾಗದು. ಶೈವಮಾರ್ಗವ ಮೆಟ್ಟಲಾಗದು. ಪ್ರಮಥರಾಚರಿಸಿದ ಸನ್ಮಾರ್ಗವನುಳಿದು ಶೈವ ಜಡಜೀವಿಗಳ ಮಾರ್ಗದ ಸೋಂಕಿನಲ್ಲಿ ಅರ್ಚನಾರ್ಪಣ ಕ್ರಿಯೆಗಳನಾಚರಿಸಲಾಗದು. ದಾಕ್ಷಿಣ್ಯದಿಂದ ಅನಾಚಾರದುರ್ಜೀವಿಗಳ ಸಮಪಂಕ್ತಿಯಲ್ಲಿ ಅರ್ಪಿತವ ಮಾಡಲಾಗದು. ಷಡ್ವಿಧ ಶೀಲ ವ್ರತಾಚಾರ ಹೀನರಲ್ಲಿ ಪಾದೋದಕ ಪ್ರಸಾದವಕೊಳಲಾಗದು. ಪ್ರಮಥರಾಚರಿಸಿದ ಪೂಜಾ ಪೂಜಕತ್ವವ ತಿಳಿದು, ತ್ರಿಕೂಟಗಿರಿ ಸಂಗಮದಲ್ಲಿ ನೆಲಿಸಿರ್ಪ ಮಹಾಪ್ರಭು ತಾನೇ ನೋಡಾ ಸಂಗನ ಬಸವೇಶ್ವರಾ.

## ಇಷ್ಟ ಲಿಂಗಾರ್ಪಣ.

ಅಯ್ಯಾ ಚಿದ್ಘನ ತೀರ್ಥವ ಇಷ್ಟಲಿಂಗಾರ್ಪಿತವ ಮಾಡುವ ವಿಚಾರವೆಂತೆಂದೊಡೆ, ಗುರುಲಿಂಗ ಮುಖದಲ್ಲಿ ಅಚ್ಚ ಪ್ರಸಾದ ಸ್ವರೂಪವಾದ ಇಷ್ಟಲಿಂಗಕ್ಕರ್ಪಿತವಯ್ಯ. ಗುರುಲಿಂಗ ಶಿವಲಿಂಗ ಮುಖದಲ್ಲಿ ಆಚರಣೆ ಸಂಬಂಧದಿಂದೆ ನಿಚ್ಚಪ್ರಸಾದ ಸಮಯಪ್ರಸಾದ ಸ್ವರೂಪವಾದ ಇಷ್ಟಲಿಂಗಕ್ಕರ್ಪಿತವಯ್ಯ. ಗುರುಲಿಂಗ ಶಿವಲಿಂಗ ಜಂಗಮಲಿಂಗ ಮುಖದಲ್ಲಿ ತ್ರಿವಿಧಾಚರಣೆಯ ಕರ್ತೃವಾದುದರಿಂದ ಸ್ವಯಚರ ಪರಗುರು ಮೂರ್ತಿ ಚಿತ ಲಾಪ್ರಸಾದ ಸ್ವರೂಪವಾದ ಇಷ್ಟಲಿಂಗ ದೇವಂಗೆ ಅರ್ಪಿತವಯ್ಯ. ಆ ನಿಲುಕಡೆ ಎಂತೆಂದೊಡೆ ಶ್ರೀಗುರುಲಿಂಗಜಂಗಮವು ಹಸ್ತಮಸ್ತಕ ಸಂಯೋ

ಗವ ಮಾಡಿ ವೇಧಾಮಂತ್ರ ಕ್ರಿಯಾದೀಕ್ಷೆಯ ಕರುಣಿಸುವಲ್ಲಿ ಕರಕಮಲದ ದಶಾಂಗುಳಮಧ್ಯ ಮೊದಲಾಗಿ ದ್ವಾದಶಪ್ರಣವಲಿಂಗಮೂರ್ತಿಗಳ ಮೂವತ್ತಾರು ಪ್ರಣವರೂಪಿನಿಂದ ಸಂಬಂಧಿಸಿರ್ಪರಯ್ಯ. ಇಂತು ಸಂಬಂಧವ ಗುರುಕಟಾಕ್ಷೆಯಿಂದ ತಿಳಿದು ಷಡಕ್ಷರ ಮಂತ್ರಸ್ವರೂಪವಾದ ದಕ್ಷಿಣಹಸ್ತದಿಂದ ಷಡಕ್ಷರ ಮಂತ್ರಸ್ವರೂಪವಾದ ವಾಮಹಸ್ತ ಕಮಲದಲ್ಲಿ ನೆಲಿಸಿರ್ಪ ಚಿದ್ಘನ ಇಷ್ಟಲಿಂಗ ದೇವಂಗೆ ಆಯಾಸ್ಥಲ ಬಂದು ಒದಗಿದಲ್ಲಿ ಮಕಾರ ಶಿಕಾರ ವಕಾರ ಅನಾಮಿಕ ಮಧ್ಯಾಂಗುಳಿ ತರ್ಜನಿ ಮೊದಲಾದ ತ್ರಿವಿಧಂಗುಳಿಗಳಲ್ಲಿ ತ್ರಿವಿಧಲಿಂಗ ಮಂತ್ರಗಳಿಂದ ಇಷ್ಟಮಹಾಲಿಂಗ ರೂಪಿತವ ಮಾಡಿ ಭೋಗಿಸ ಬಲ್ಲಡೆ ಅಚ್ಚ ಸ್ವಯಂಭು ಪ್ರಸಾದಲಿಂಗ ಶರಣನೆಂಬೆ ನೋಡಾ ಸಂಗನ ಬಸವೇಶ್ವರಾ.

## ಚಿದ್ಘನ ಲಿಂಗಾರ್ಪಣ.

ಅಯ್ಯಾ ಗುರು ಜಂಗಮದ ಪಾದೋದಕ ಪ್ರಸಾದವ ಚಿದ್ಘನಲಿಂಗಕ್ಕರ್ಪಿತವ ಮಾಡಿಕೊಂಬಲ್ಲಿ, ಆಲಿಂಗ ಮೊದಲೋ ಗುರುಚರ ಮೊದಲೋ ಆ ವಿಚಾರವೆಂತೆಂದೊಡೆ, ಅನಾದಿ ಗುರು ಜಂಗಮದ ಪಾದೋದಕ ಪ್ರಸಾದವ ಚಿದ್ಘನ ಲಿಂಗಕ್ಕೆ ಅರ್ಪಿತವ ಮಾಡಿಕೊಂಬಲ್ಲಿ ಬೀಜಲಿಂಗ ಆದಿಬೀಜ ಗುರುಚರ ಇಂತು ಉಭಯುವನರಿತಲ್ಲಿ ಗುರುಚರಕ್ಕೆ ಚಿದ್ಘನಲಿಂಗವೇ ಆದಿ ಅನಾದಿ. ಚಿದ್ಘನ ಲಿಂಗಕ್ಕೆ ಗುರುಚರವೇ ಆದಿ ಅನಾದಿ. ಇಂತೀ ವಿಚಾರವತಿಳಿದಲ್ಲಿ, ಚಿದ್ಘನಲಿಂಗವ ಬಿಟ್ಟು ಗುರುಚರ ಉಂಟೆ? ಗುರುಚರನಬಿಟ್ಟು ಚಿದ್ಘನ ಲಿಂಗ ಉಂಟೆ? ಇವು ಮೂರು ಒಂದೇ ವಸ್ತುವಯ್ಯ. ಅವರಿಂದ ಆಚರಣೆಗೋಸ್ಕರ ಗುರುಭಕ್ತನಾಗಿ ಪೂಜೆಗೆ ನಿಂತಿರ್ಪುದಯ್ಯ. ಲಿಂಗಜಂಗಮವಾಗಿ ಪೂಜ್ಯಕ್ಕೆ ನಿಂತಿರ್ಪುದಯ್ಯ. ಅದೆಂತೆಂದೊಡೆ, "ಅಕಾಯಂ ಭಕ್ತಕಾಯಂಚ ಮಹಾಕಾಯಸ್ತು ಭಕ್ತಯೋಃ" ಇಂತೆಂದುದಾಗಿ ಗುರುಭಕ್ತನಾಗಿರ್ಪುದಯ್ಯ. "ಮಹತೋ ಲಿಂಗರೂಪೇಣ ಮಹತೋ ಜಂಗಮಸ್ತಥಾ" ಇಂತೆಂದುದಾಗಿ ಲಿಂಗಜಂಗಮವಾಗಿರ್ಪುದಯ್ಯ. ಇಚ್ಛೆಅನಿಚ್ಛೆ ಬೇಕು ಬೇಡೆನ್ನದೆ ಗುರುಭಕ್ತರಿಂದ ಬಂದುದ ಕೈಕೊಂಡು ಸಂತೃಪ್ತಿಯಲ್ಲಿರ್ಪುದೆ ಲಿಂಗ ಜಂಗಮ. ಇದನರಿದ ಮೇಲೆ ಮತ್ತೊಂದು ಪ್ರಕಾರ ಪ್ರಸಾದ ಉಂಟು. ಅದರವಿಚಾರವೇನೆಂದೊಡೆ, ಗುರುವುಮುಟ್ಟಿದ್ದು ಪ್ರಸಾದವೆಂಬೆನೆ? ಅಲ್ಲಲ್ಲ ಅದೇನು ಕಾರಣವೆಂದೊಡೆ, ಅನಾದಿ ಲಿಂಗ ತೋರಲರಿಯನಾಗಿ.

ಲಿಂಗ ಮುಟ್ಟಿದ್ದು ಪ್ರಸಾದವೆಂಬೆನೆ? ಅಲ್ಲಲ್ಲ. ಅದೇನು ಕಾರಣವೆಂದೊಡೆ, ಅಷ್ಟವಿಧಾರ್ಚನೆ ಷೋಡಶೋಪಚಾರಕ್ಕೆ ಒಳಗಾಯಿತ್ತಾಗಿ. ಜಂಗಮ ಮುಟ್ಟಿದ್ದು ಪ್ರಸಾದವೆಂಬೆನೆ? ಅಲ್ಲಲ್ಲ. ಅದೇನು ಕಾರಣವೆಂದೊಡೆ, ಆಶೆ ಆಮಿಷಕ್ಕೊಳಗಾಯಿತ್ತಾಗಿ. ಮತ್ತೆಂತುಂಟು? ಗುರು ಲಿಂಗ ಜಂಗಮ ಪ್ರಸಾದ ಅನಾದಿ ಲಿಂಗವನರಿತು ಅಷ್ಟತನುವೇ ಅಷ್ಟವಿಧಾರ್ಚನೆಯಾಗಿ ಮಲಮಾಯಾ ಪಾಶದಾಶಯುವ ನೀಗಿ ನಿಂದಡೆ ಗುರುಲಿಂಗಜಂಗಮ. ಆತತಟ್ಟಿದ್ದು ಮುಟ್ಟಿದ್ದೆಲ್ಲ ಮಹಾ ಪ್ರಸಾದ ನೋಡಾ. ಲಿಂಗವಿಲ್ಲದ ಜಂಗಮ ಜಂಗಮವಿಲ್ಲದ ಲಿಂಗ ಈ ಲಿಂಗ ಜಂಗಮ, ಜಂಗಮ ಲಿಂಗವೆಂಬ ವಿಚಾರವನರಿಯದ ಗುರುಭಕ್ತರೆಂತೋ ಮರುಳೆ? ಅದಕ್ಕೆ ಸಾಕ್ಷಿ" ಉಭೌ ಕಾಮಾದಿಚಶಕ್ತಿ ಉಭಯಾಶ್ರಮ ಆಶ್ರಮಃ। ಲಿಂಗಜಂಗಮ ತೀರ್ಥಂಚ ಜಂಗಮಂ ಲಿಂಗ ಶೇಷಯೋಸಿ ॥೧॥ ಇಂತೆಂದುದಾಗಿ ಲಿಂಗಜಂಗಮದಲ್ಲಿ ಚಿದ್ಘನ ತೀರ್ಥವಕೊಂಡು ಜಂಗಮಲಿಂಗದಲ್ಲಿ ಚಿದ್ಘನ ಮಹಾ ಪ್ರಸಾದವ ಮುಗಿಯಬಲ್ಲಾತನೇ ಆದಿ ಅನಾದಿಯಿಂದತ್ತತ್ತ, ಮೀರಿತೋರುವ ಗುರುಭಕ್ತ ಶರಣಪ್ರಸಾದ ಲಿಂಗಮೂರ್ತಿ ತಾನೆ ನೋಡಾ ಸಂಗನಬಸವೇಶ್ವರಾ.

## ನಿಜಪ್ರಸಾದಿ.

೧. ಅಯ್ಯಾ ನಿರಾಲಂಬ ನಿಃಕಳಂಕ ನಿಃಪ್ರಪಂಚತ್ವದಿಂದ ನಾಲ್ವತ್ತೆಂಟು ಪ್ರಣವ ಸ್ಮರಣೆಯಿಂದ ಏಕಾದಶ ಲಿಂಗಂಗಳಿಗೆ ಏಕಾದಶ ಪ್ರಸಾದವ ಸಮರ್ಪಿಸಿ ತಾನಾ ಸಂತೃಪ್ತಿ ಮಹಾ ಪ್ರಸಾದದಲ್ಲಿ ಲೋಲುಪ್ತನಾದಡೆ ನಿಜಪ್ರಸಾದಿ ಎಂಬೆ ನೋಡಾ. ಅದರ ವಿಚಾರವೆಂತೆಂದೊಡೆ, ನಾಲ್ವತ್ತೆಂಟು ಪ್ರಣವದೊಳಗೆ ದ್ವಾದಶ ಪ್ರಣವ ಸ್ಮರಣೆಯಿಂದ ಪಂಚೇಂದ್ರಿಯ ವಿರಹಿತ ಪ್ರಸಾದ. ಕರಣ ಚತುಷ್ಟಯ ವಿರಹಿತ ಪ್ರಸಾದಲಿಂಗಪ್ರಸಾದವ ಶಿವಲಿಂಗ ಜಂಗಮಲಿಂಗ ಪ್ರಾಣಲಿಂಗ ದೇವಂಗೆ ನಿರಹಂಕಾರ ಸುಮನ ನಿರಾಲಂಬ ಹಸ್ತದಿಂದ ಸಮರ್ಪಿಸಿ ಆ ತೃಪ್ತಿಯ ಲೋಲುಪ್ತಿಯಲ್ಲಿ ತಾನಾದೊಡೆ ಅನಾದಿ ನಿಃಕಾಮ್ಯ ಶೂನ್ಯಲಿಂಗಸ್ವರೂಪ ಚನ್ನಬಸವರಾಜನೆಂಬೆ ನೋಡಾ. ಇಪ್ಪತ್ತುನಾಲ್ಕು ಪ್ರಣವದೊಳಗೆ ದ್ವಾದಶ ಪ್ರಣವ ಸ್ಮರಣೆಯಿಂದ ಸಮತಾಪ್ರಸಾದ ಪ್ರಸಾದಿಯ ಪ್ರಸಾದ ಜಂಗಮಪ್ರಸಾದವ ಪ್ರಸಾದಲಿಂಗ ಮಹಾಲಿಂಗ ಭಾವಲಿಂಗ ದೇವಂಗೆ ಜ್ಞಾನ ಸದ್ಭಾವ ನಿಃಪ್ರ

ಪಂಚ ಹಸ್ತದಿಂದ ಸಮರ್ಪಿಸಿ ಆ ಪರಿಣಾಮ ಲೋಲುಪ್ತಿಯಲ್ಲಿ ತಾನಾದೊಡೆ, ಅನಾದಿ ನಿರಂಜನ ಜಂಗಮ ಸ್ವರೂಪು ಪ್ರಭುದೇವನೆಂಬೆ ನೋಡಾ. ಇನ್ನುಳಿದ ದ್ವಾದಶ ಪ್ರಣವ ಸ್ಮರಣೆಯಿಂದ ಸದ್ಭಾವಪ್ರಸಾದ ಜ್ಞಾನಪ್ರಸಾದವ ಇಂತು ನವಲಿಂಗಪ್ರಸಾದ ಪಾದೋದಕಂಗಳ ಸಂತೃಪ್ತಿಯಲ್ಲಿ ಸಾಕಾರ ನಿರಾಕಾರನಾದ ಪರತತ್ವ ಜ್ಯೋತಿರ್ಮಯಲಿಂಗದೇವಂಗೆ ನಿಜಾನಂದ ಹಸ್ತದಿಂದ ಸಮರ್ಪಿಸಿ ಮತ್ತು ಅನಾದಿಕುಲ ಸಮ್ಮತವಾದ ದಶವಿಧ ಪಾದೋದಕ ಏಕಾದಶ ಪ್ರಸಾದದಲ್ಲಿ ಕೂಡಿ ಘನಸಾರದಂತಾದೊಡೆ ಅನಾದಿ ಪೂರ್ಣಮಯ ನಿಜವಸ್ತು ತಾನೇ ನೋಡಾ ಸಂಗನಬಸವೇಶ್ವರಾ.

೨. ಅಯ್ಯಾ ನಿರ್ವಂಚಕತ್ವದಿಂದ ದಶವಿಧಲಿಂಗಂಗಳಿಗೆ ಏಕವಿಂಶತಿ ಮಂತ್ರ ಸ್ಮರಣೆಯಿಂದ ದಶವಿಧ ಪಾದೋದಕವನರ್ಪಿಸಿ ಸಂತೃಪ್ತಾನಂದ ಜಲದಲ್ಲಿ ಪರಿಣಾಮಿಸಬಲ್ಲಡೆ, ನಿಜಪ್ರಸಾದಿ ಎಂಬೆನಯ್ಯಾ. ಅದರ ವಿಚಾರವೆಂತೆಂದೊಡೆ, ಏಕವಿಂಶತಿ ಪ್ರಣವದೊಳಗೆ ಷಡ್ವಿಧ ಪ್ರಣವ ಸ್ಮರಣೆಯಿಂದ ಆಪ್ಯಾಯನೋದಕ ಹಸ್ತೋದಕ ಲಿಂಗಪಾದೋದಕ ಶಿವಲಿಂಗ ಜಂಗಮಲಿಂಗ ಪ್ರಾಣಲಿಂಗದೇವಂಗೆ ಸಮರ್ಪಿಸಿ ತಾನಾ ಪರಿಣಾಮದಲ್ಲಿ ಲೋಲುಪ್ತನಾದೊಡೆ, ಅನಾದಿ ಜಂಗಮಸ್ವರೂಪವಾದ ಅಲ್ಲಮಪ್ರಭುರಾಯ ನೋಡಾ. ಇನ್ನುಳಿದ ತ್ರಿವಿಧ ಪ್ರಣವ ಸ್ಮರಣೆಯಿಂದ ನವವಿಧೋದಕವನೊಳಕೊಂಡ ಸತ್ಯೋದಕವ ನವವಿಧ ಲಿಂಗಕ್ಕೆ ಮಾತೃಸ್ವರೂಪವಾದ ನಿಃಕಲ ಪರತತ್ವ ದೇವಂಗೆ ಸಮರ್ಪಿಸಿ ನಿತ್ಯತೃಪ್ತತ್ವದಿಂದ ಸರ್ವಾವಸ್ಥೆಯ ನೀಗಬಲ್ಲಡೆ, ಅನಾದಿ ಶರಣಪ್ರಸನ್ನ ಮೂರ್ತಿ ಎಂಬೆ ನೋಡಾ ಸಂಗನಬಸವೇಶ್ವರಾ.

## ಶುದ್ಧ, ಸಿದ್ಧ ಪ್ರಸಿದ್ಧ ಪ್ರಸಾದ.

ಇಂದ್ರಿಯಂಗಳ ದುರ್ವರ್ತನ ಗುಣಂಗಳ ಜಯಿಸಿದಾತಂಗೆ ಬ್ರಹ್ಮನುತ್ಪತ್ತಿಗೆ ಹೊರಗಾಗಿ ಶ್ರೀ ಗುರುವಿನಿಂದ ಸರ್ವಾಂಗವೆಲ್ಲಾ ಶುದ್ಧಪ್ರಸಾದವಾಗುವದಯ್ಯಾ. ಸಮಸ್ತ ವಿಷಯಂಗಳ ದುರ್ವರ್ತನ ಗುಣಂಗಳ ಜಯಿಸಿದಾತಂಗೆ ವಿಷ್ಣುವಿನ ಸ್ಥಿತಿ ಹೊರಗಾಗಿ ಚಿದ್ಘನ ಮಹಾಲಿಂಗದಿಂದ ಸರ್ವಾಂಗವೆಲ್ಲ ಸಿದ್ಧಪ್ರಸಾದವೆನಿಸುವದಯ್ಯಾ. ಸಮಸ್ತ ಕರಣಂಗಳ ದುರ್ವರ್ತನ ಗುಣಂಗಳ ಜಯಿಸಿದಾತಂಗೆ ರುದ್ರನ ಲಯಕ್ಕೆ ಹೊರಗಾಗಿ ನಿರಾ

ಲಂಬ ನಿಃಕಲ ಜಂಗಮದಿಂದ ಸರ್ವಾಂಗವೆಲ್ಲ ಪ್ರಸಿದ್ಧ ಪ್ರಸಾದವಾಗು ವದಯ್ಯ. ಇಂತು ಇಂದ್ರಿಯ ವಿಷಯ ಕರಣ ಗುಣಧರ್ಮಗಳಳಿದು ಲಿಂಗೇಂದ್ರಿಯ ವಿಷಯ ಕರಣಗಳಾಗಿ ಬ್ರಹ್ಮನುತ್ಪತ್ಯ ವಿಷ್ಣುವಿನ ಸ್ಥಿತಿ ರುದ್ರನ ಲಯಕ್ಕೆ ಹೊರಗಾಗುವದಲ್ಲದೆ ಮಹಾ ಪ್ರಸಾದಿಸ್ಥಲದೊಳಗಣ ಷಟ್ಸ್ಥಲ ದೊರೆಯದು ನೋಡಾ ಸಂಗನಬಸವೇಶ್ವರಾ.

## ಸರ್ವಾಂಗ ಪಾದೋದಕ ಪ್ರಸಾದ ಮಯದ ರೀತಿ.

ಅಯ್ಯಾ ಏಕವಿಂಶತಿ ದೀಕ್ಷೆಯ ನಿಲುಕಡೆ ದ್ವಾದಶಾಚಾರ ವೊದಲಾಗಿ ಸರ್ವಾಚಾರ ಸಂಪತ್ತಿನಾಚರಣೆಯ ಅರ್ಪಿತಾವಧಾನವನರಿದು ಆಚರಿಸಿದೊಡೆ, ನಿನ್ನ ಸರ್ವಾಂಗವೆಲ್ಲ ಪಾದೋದಕ ಪ್ರಸಾದ ಮಂತ್ರಮಯ ಪರಬ್ರಹ್ಮ ಸ್ವರೂಪ ನೋಡಾ. ಅದರ ವಿಚಾರವೆಂತೆಂದೊಡೆ, ಕಾಯದ ಮಧ್ಯದಲ್ಲಿ ಅನಾದಿ ಗುರು ಬಸವೇಶ್ವರ ಸ್ವಾಮಿಗಳೇ ಇಷ್ಟಲಿಂಗ ಮಂತ್ರ ಚಿದ್ವಿಭೂತಿ ರುದ್ರಾಕ್ಷಿ ದೀಕ್ಷಾ ಪಾದೋದಕ ಶುದ್ಧ ಪ್ರಸಾದವಾಗಿ ನೆಲಿಸಿರ್ಪರು ನೋಡಾ. ನಿನ್ನ ಮನದ ಮಧ್ಯದಲ್ಲಿ ಅನಾದಿ ಚರರೂಪ ಚನ್ನಬಸವೇಶ್ವರ ಸ್ವಾಮಿಗಳೇ ಪ್ರಾಣಲಿಂಗ ಸಪ್ತಕೋಟಿ ಮಹಾಮಂತ್ರ ಶಿಕ್ಷಾ ಪಾದೋದಕ ಸಿದ್ಧ ಪ್ರಸಾದ್ರವಾಗಿ ನೆಲಿಸಿರ್ಪರು ನೋಡಾ. ನಿನ್ನ ಭಾವ ಮಧ್ಯದಲ್ಲಿ ಅನಾದಿ ಪರಶಿವರೂಪ ಅಲ್ಲಮ ಪ್ರಭು ಸ್ವಾಮಿಗಳೇ ಭಾವ ಲಿಂಗ ಅಗಣಿತ ಮಂತ್ರ ಜ್ಞಾನ ಪಾದೋದಕ ಪ್ರಸಿದ್ಧ ಪ್ರಸಾದವಾಗಿ ನೆಲಿಸಿರ್ಪರು ನೋಡಾ. ನಿನ್ನಾಧಾರ ಚಕ್ರ ಮಧ್ಯದಲ್ಲಿ ಆಚಾರ ಮೂರ್ತಿ ಮಡಿವಾಳ ಸ್ವಾಮಿಗಳ ಪಂಚಾಚಾರ ಮೂರ್ತಿ ಆಚಾರಲಿಂಗ ಮಂತ್ರ ಸ್ಪರ್ಶನೋದಕ ಆಪ್ಯಾಯನ ಪ್ರಸಾದವಾಗಿ ನೆಲಿಸಿರ್ಪರು ನೋಡಾ. ನಿನ್ನ ಸ್ವಾಧಿಷ್ಠಾನ ಚಕ್ರಮಧ್ಯದಲ್ಲಿ ಸತ್ಕ್ರಿಯಾ ಮೂರ್ತಿ ಮರುಳ ಶಂಕರ ಸ್ವಾಮಿಗಳೇ ಮಂತ್ರ ಮೂರ್ತಿ ಗುರುಲಿಂಗ ಮಂತ್ರ ಅವಧಾನೋದಕ ಸಮಯ ಪ್ರಸಾದವಾಗಿ ನೆಲಿಸಿರ್ಪರು ನೋಡಾ. ನಿನ್ನ ಮಣಿ ಪೂರಕ ಚಕ್ರ ಮಧ್ಯದಲ್ಲಿ ಸಮ್ಯಜ್ಞಾನ ಮೂರ್ತಿ ಸಿದ್ಧರಾಮೇಶ್ವರ ಸ್ವಾಮಿಗಳೇ ನಿರೀಕ್ಷಣ ಮೂರ್ತಿ ಶಿವಲಿಂಗ ಮಂತ್ರ ಆಪ್ಯಾಯನೋದಕ ಪ್ರಸಾದಿಯ ಪ್ರಸಾದ ವಾಗಿ ನೆಲಿಸಿರ್ಪರು ನೋಡಾ. ನಿನ್ನ ಅನಾಹತ ಚಕ್ರಮಧ್ಯದಲ್ಲಿ ಷಡ್ಗುಣೈಶ್ವರ್ಯ ಸಂಪನ್ನ ನೀಲಲೋಚನೆ ತಾಯಿಗಳ ಯಜನ ಸ್ವರೂಪ ಮೂರ್ತಿ ಜಂಗಮಲಿಂಗ ಮಂತ್ರ ಹಸ್ತೋದಕ ಪಂಚೇಂದ್ರಿಯ ವಿರಹಿತ ಪ್ರಸಾ

ದವಾಗಿ ನೆಲಿಸಿರ್ಪರು ನೋಡಾ. ನಿನ್ನ ವಿಶುದ್ಧಿ ಚಕ್ರಮಧ್ಯದಲ್ಲಿ ಪರಮ ವಿರಾಗತನುವುಳ್ಳ ಮಹಾದೇವಿ ತಾಯಿಗಳೇ ಈಳನ ಸ್ವರೂಪವಾದ ಪ್ರಸಾದಲಿಂಗ ಮಂತ್ರ ಪರಿಣಾಮೋದಕ ಕರಣ ಚತುಷ್ಟಯ ವಿರಹಿತ ಪ್ರಸಾದವಾಗಿ ನೆಲಿಸಿರ್ಪರು ನೋಡಾ. ನಿನ್ನ ಆಜ್ಞಾಚಕ್ರದ ಮಧ್ಯದಲ್ಲಿ ಷಟ್ಸ್ಥಲ ಸಂಪನ್ನೆಯಾದಂಥಾ ಅಕ್ಕನಾಗಲಾಂಬಿಕೆ ತಾಯಿಗಳೇ ವೇದ್ಯಸ್ವರೂಪವಾದ ಮಹಾಲಿಂಗ ಮಂತ್ರ ನಿರ್ನಾಮೋದಕ ಸಮತಾ ಪ್ರಸಾದವಾಗಿ ನೆಲಿಸಿರ್ಪರು ನೋಡಾ. ನಿನ್ನ ಬ್ರಹ್ಮಚಕ್ರ ಮಧ್ಯದಲ್ಲಿಸರ್ವಾಚಾರ ಸಂಪನ್ನೆಯಾದಂಥ ಮುಕ್ತಾಯಕ್ಕಗಳೇ ನಿರಾಲಂಬ ಮೂರ್ತಿಯಾದಂಥ ನಿಃಕಳಲಿಂಗ ಮಂತ್ರ ಸತ್ಯೋದಕ ಸದ್ಭಾವ ಪ್ರಸಾದ ಜ್ಞಾನಪ್ರಸಾದವಾಗಿ ನೆಲಿಸಿರ್ಪರು ನೋಡಾ. ನಿನ್ನ ಶಿಖಾ ಪಶ್ಚಿಮ ಚಕ್ರಮಧ್ಯದಲ್ಲಿ ಪರಿಪೂರ್ಣಾನಂದಮೂರ್ತಿ ಅಜಗಣ್ಣ ತಂದೆಗಳು ನಿಃಪ್ರಪಂಚ ಮೂರ್ತಿ ಶೂನ್ಯ ನಿರಂಜನ ಲಿಂಗಮಂತ್ರ ಕರುಣಜಲ ವಿನಯಜಲ ಸಮತಾಜಲ ಚಿತ್ಕಲಾ ಪ್ರಸಾದ ನಿಜಪ್ರಸಾದ ಚಿದ್ರೂಪ ಪ್ರಸಾದವಾಗಿ ನೆಲಿಸಿರ್ಪರು ನೋಡಾ. ಇಂತು ನಿನ್ನ ಕಳಾಚೈತನ್ಯನಾಗಿ ನಿನ್ನ ಸರ್ವಾಂಗವೆಲ್ಲ ಪ್ರಮಥ ಗಣಂಗಳ ಪಾದೋದಕ ಪ್ರಸಾದಲಿಂಗ ಮಂತ್ರವಾಗಿರ್ಪುದು ನೋಡಾ ಸಂಗನಬಸವೇಶ್ವರಾ.

## ಪಾದೋದಕ ವಿಧಿಯ ತತ್ವಗಳು.

೧. ಅಯ್ಯಾ ನೀನು ಅಷ್ಟಭೋಗಂಗಳ ತ್ಯಜಿಸಿ ನಿನ್ನ ನಿಜದಿಂದ ನಿನ್ನಾದಿ ಮಧ್ಯಾವಸಾನವ ತಿಳಿದು ನೋಡಿದರೆ ನಿನ್ನ ಕಣ್ಣಮುಂದೆ ಬಂದಿರ್ಪುದು ನೋಡಾ ಮಹಾಪ್ರಸಾದ. ಅದೆಂತೆಂದೊಡೆ, ಮಹಾಜ್ಞಾನ ತಲೆದೋರಿ ಸರ್ವಾಂಗ ಪರಿತ್ಯಾಗವ ಮಾಡಿ ಗುರೂಪಾವಸ್ಥೆಯ ಮಾಡಿದ ಶಿಷ್ಯೋತ್ತಮಂಗೆ ಸೇವ್ಯರ ಭೃತ್ಯದಿಂದ ಪಂಚಕಲಶಂಗಳ ಸ್ಥಾಪಿಸಿ ಸೂತ್ರವ ಹಾಕಿಸಿ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿಸಿ, ತಮ್ಮ ಕೃಪಾಹಸ್ತವನಿಟ್ಟು ಜಂಗಮ ಮೂರ್ತಿಗಳ ಸಿಂಹಾಸನದ ಮೇಲೆ ಮೂರ್ತವ ಮಾಡಿಸಿ ಶ್ರೀಗುರುಲಿಂಗವು ಎಂದು ಪ್ರಮಥರೊಡಗೂಡಿ ಕುಮಾರ ಠಾವಮಾಡಿದಂಗಲಿಂಗವ ತನ್ನ ಚರಣತಳಕ್ಕೆ ಸೂತ್ರವ ಹಿಡಿಸಿ, ಗುರು ಶಿಷ್ಯತ್ವವೆಂಬ ಉಭಯ ಭೇದವಳಿದು ಏಕ ರೂಪಾಗಿ ನಿರಂಜನ ಮೂರ್ತಿಗೆ ಅಭಿವಂದಿಸಿ ಅಷ್ಟಾಂಗ ಪ್ರಣತರಾಗಿ ಅಪ್ಪಣೆಯ ಬೆಸಗೊಂಡು,

ಆ ನಿರಂಜನ ಮೂರ್ತಿಗೆ ಪ್ರತಿ ಸಿಂಹಾಸನವ ಮಾಡಿಸಿ, ಗುರು ಶಿಷ್ಯರಭಿಮುಖವಾಗಿ, ಗುರುವಿನ ಹೃಕ್ಕು ಶಿಷ್ಯನ ಮಸ್ತಕದಲ್ಲಿ ಸೂಸೆ, ಶಿಷ್ಯನ ಹೃಕ್ಕು ಗುರುವಿನ ಚರಣ ಕಮಲದಲ್ಲಿ ಸೂಸೆ, ಏಕಲಿಂಗ ನಿಷ್ಠೆಯಿಂದ ಸಾವಧಾನ ಭಕ್ತಿಕರಿಗೊಂಡು, ಆ ಲಿಂಗಾಂಗದ ಭಾಳದ ಪೂರ್ವಲಿಖಿತವ ಜಂಗಮ ಚರಣೋದ್ಧೂಳನದಿಂದ ತೊಡೆದು, ಲಿಂಗಾಂಗಕ್ಕೆ ೨೧ ಪೂಜೆಯ ಮಾಡಿಸಿ, ಲಿಂಗಕ್ಕೆ ಅಂಗವ ತೋರಿ, ಅಂಗಕ್ಕೆ ಲಿಂಗವ ತೋರಿ, ಪಾಣಿಗ್ರಹಣವ ಮಾಡಿ ಮಂತ್ರ ವರ್ಣದಲ್ಲಿ ಉಸುರಿ ಪ್ರಮಥರೊಡಗೂಡಿ ಸೇಸೆಯನೆರೆದು ಕಂಕಣವಕಟ್ಟಿ ನಿಮಿಷಾರ್ಧವಗಲಬೇಡೆಂದು ಅಭಯ ಹಸ್ತವಿಟ್ಟು ಸರ್ವಾಂಗದಲ್ಲಿ ಚಿದ್ಘನಲಿಂಗವನಿತ್ತುದೇ ಪ್ರಥಮದಲ್ಲಿ ಗುರು ಪ್ರಸಾದ ನೋಡಾ. ಅದರಿಂ ಮೇಲೆ ಕ್ರಿಯಾಮಂತ್ರವ ಹೇಳಿದ ದಶವಿಧ ಪಾದೋದಕ ಏಕಾದಶ ಪ್ರಸಾವವ ಕರುಣಿಸಿದ್ದುದೇ ದ್ವಿತೀಯದಲ್ಲಿ ಲಿಂಗಪ್ರಸಾದ ನೋಡಾ. ಅದರಿಂ ಮೇಲೆ ಲಿಂಗಾಂಗ ಷಟ್ಸ್ಥಾನಂಗಳಲ್ಲಿ ಅಷ್ಟವಿಧ ಸಕೀಲು ಮೊದಲಾಗಿ ಸಮಸ್ತ ಸಕೀಲಮರ್ಮವ ಕರುಣಿಸಿದ್ದುದೇ ತೃತೀಯದಲ್ಲಿ ಜಂಗಮ ಪ್ರಸಾದ ನೋಡಾ. ಅದರಿಂದತ್ತತ್ತ ಲಿಂಗಾಂಗವೆರಡಳಿದು ಸರ್ವಾಚಾರ ಸಂಪತ್ತಿನ ಆಚರಣೆಯ ತೋರಿ ಮಹಾಪ್ರಸಾದ ಶಿವಾನುಭಾವರೂಪವ ಬೋಧಿಸಿ ಶ್ರೀಗುರುಲಿಂಗ ಜಂಗಮದಂತರಂಗದಲ್ಲಿ ಬೆಳಗುವ ಚಿಜ್ಜ್ಯೋತಿ ಶರಣನೇ ಚತುರ್ಥದಲ್ಲಿ ನಿಜಪ್ರಸಾದ ನೋಡಾ. ಈ ಚತುರ್ವಿಧ ಪ್ರಸಾದ ಸ್ವರೂಪವೇ ನೀನೆಂದರಿದು ಇನ್ನಾವ ಭಯಕ್ಕೆ ಹೆದರಬೇಡಯ್ಯ. ಪ್ರಮಥರಾಚರಿಸಿದ ಆಚಾರ ಕ್ರಿಯಾಜ್ಞಾನಾಚರಣ ಸಂಬಂಧಕ್ಕೆ ಬಂದುದಕೊಂಡು ಬಾರದುದನುಳಿದು ಚಿದ್ಘನ ಮಹಾಲಿಂಗದಲ್ಲೇಕವಾಗಿ ಬಾರಾ ಸಂಗನ ಬಸವೇಶ್ವರಾ.

೨. ಅಯ್ಯಾ ಜಗತ್ಪಾವನ ನಿಮಿತ್ಯಾರ್ಥವಾಗಿ ಸಾಕಾರ ಲೀಲೆಯ ಧರಿಸಿದ ಸ್ವಯಚರಪರ ಗುರುಮೂರ್ತಿಗಳ ಅರ್ಪಿತಾವಧಾನದ ನಿಲುಕಡೆ ಎಂತೆಂದೊಡೆ, ಲಿಂಗಾಚಾರ ಮೊದಲಾದ ಸದ್ಭಕ್ತಶರಣಗಣಂಗಳಲ್ಲಿ ಲಿಂಗಾರ್ಪಿತ ಭಿಕ್ಷಲೀಲೆಯ ಧರಿಸಿ ಹೋದವೇಳೆಯೊಳು ಆ ಭಕ್ತಗಣಂಗಳು ಶರಣುಹೊಕ್ಕು ಸಮಸ್ತ ಆಚರಣೆಯ ಒದಗಿಸಿ ಕೊಟ್ಟಲ್ಲಿ ದಶವಿಧ ಪಾದೋದಕ ಏಕಾದಶ ಪ್ರಸಾದದಾಚರಣೆಯಾಗುವವಯ್ಯ. ಇಂತು ಲಿಂಗಾಚಾರ ಭಕ್ತಗಣಂಗಳು ದೊರೆಯದಿರ್ದೊಡೆ, ವೇದಾಂತಿ ಸಿದ್ಧಾಂತಿ ಭಿನ್ನಯೋಗಿ ಮೊದಲಾದ ಸಮಸ್ತ ಮತದಿಂದ ಏಕಶಬ್ದ ಭಿಕ್ಷಸಪ್ತಗ್ರಹವ ಬೇಡಿ

ದುರ್ಗಂಧಯುಕ್ತವಾದ ಅಯೋಗ್ಯ ದ್ರವ್ಯವನುಳಿದು ಸದ್ಗುಣಯುಕ್ತವಾದ ಯೋಗ್ಯ ದ್ರವ್ಯವಕೈಕೊಂಡು ಧೂಳಸಾದ ಜಲದಿಂದ ಭವಿತನವ ಕಳೆದು ಭಕ್ತ ಪದಾರ್ಥವೆನಿಸಿ ಅರ್ಘ್ಯ ಪಾದ್ಯಾಚಮನವ ಮಾಡಿ ಧಾನ್ಯವಾದೊಡೆ ಪರಿಣಾಮ ಜಲದಿಂ ಶೋಧಿಸಿ, ಪಾಕವಮಾಡಿ, ಫಲಾಹಾರವಾದೊಡೆ ಶೋಧಿಸಿ ಪಕ್ವವ ಮಾಡಿಟ್ಟು, ಆ ಮೇಲೆ ಅಯ್ಯ ನಿನಗೆ ಭಕ್ತಗಣಂಗಳು ದೊರೆಯುದ ಸಮಯದಲ್ಲಿ ಚತುರ್ವಿಧ ಪಾದೋದಕವೆಂತೆಂದೊಡೆ ಏಕಾಂತವಾಸದಲ್ಲಿ ಪರಿಣಾಮತರವಾದ ಹಳ್ಳ ಹೊಳೆ ಕೆರೆ ಬಾವಿ ಮಡು ಹೊಂಡ ಚಿಲುಮೆ ಕೊಳ ಮೊದಲಾದ ಸ್ಥಾನಕ್ಕೆ ಹೋಗಿ ಪ್ರಥಮದಲ್ಲಿ ಶಿವಶಿವ ಹರಹರಾ ಗುರುಬಸವಲಿಂಗಾ ಎಂಬ ಮಂತ್ರಸ್ಮರಣೆ ಧ್ಯಾನದಿಂದ ಪಾದವಿಟ್ಟು ಚರಣ ಸೋಂಕಿನಿಂ ಪವಿತ್ರವಾದುದುಕವೆ ಪಾದೋದಕವೆನಿಸುವದಯ್ಯ. ಆ ಮೇಲೆ ತಂಬಿಗೆಯೊಳಗೆ ಶೋಧಿಸಿ ಬಸವಾಕ್ಷರವ ಲಿಖಿಸುವೊಡೆ ಗುರುಪಾದೋದಕವೆನಿಸುವದಯ್ಯ. ಇಂತು ಗುರುಪಾದೋದಕದಿಂದ ಇಷ್ಟಮಹಾಲಿಂಗ ದೇವಂಗೆ ಅಭಿಷೇಕ ಮುಖದಿಂದ ಲಿಂಗೋದಕವೆನಿಸುವದಯ್ಯ. ಆ ಮೇಲೆ ಅರ್ಚನಾ ಕ್ರಿಯೆಗಳ ತೀರ್ಚಿಕೊಂಡು ನಿಚ್ಚ ಪ್ರಸಾದಿ ಸಂಬಂಧ ಆಚರಣೆಯಂತೆ ಮುಗಿದಲ್ಲಿ ಜಂಗಮ ಪಾದೋದಕವೆನಿಸುವದಯ್ಯ. ಇಂತು ಚತುರ್ವಿಧ ಪಾದೋದಕದೊಳಗೆ ಷಡ್ವಿಧ ಪಾದೋದಕ ಉಂಟು. ಅದೆಂತೆಂದೊಡೆ ಹಸ್ತವಿಟ್ಟು ಸ್ಪರ್ಶನವಮಾಡೆ ಸ್ಪರ್ಶನೋದಕವೆನಿಸುವದಯ್ಯ. ಲಿಂಗಕ್ಕೆ ಧಾರೆಯಿಂದ ಅಭಿಷೇಕವನೆರೆದಲ್ಲಿ ಅವಧಾನೋದಕವೆನಿಸುವದಯ್ಯ. ಅರ್ಪಿತ ಮುಖದಲ್ಲಿ ಹಸ್ತವ ಪ್ರಕ್ಷಾಳಿಸಿ ಖಂಡಿತ ಮಾಡಿದಲ್ಲಿಗೆ ಹಸ್ತೋದಕವೆನಿಸುವದಯ್ಯ. ಲಿಂಗಕ್ಕೆ ಸಂತೃಪ್ತಿ ಪರಿಯಂತರವು ಅರ್ಪಿತವ ಮಾಡಿದೊಡೆ ಪರಿಣಾಮೋದಕವೆನಿಸುವದಯ್ಯ. ತಟ್ಟೆಬಟ್ಟಲ ಲೇಹ್ಯವ ಮಾಡದಲ್ಲಿ ನಿರ್ನಾಮೋದಕವೆನಿಸುವದಯ್ಯ. ಲೇಹ್ಯವಮಾಡಿದ ಮೇಲೆ ದ್ರವವನಾರಿಸಿ ಸರ್ವಾಂಗದಲ್ಲಿ ಲೇಪಿಸಿದೊಡೆ ಸತ್ಯೋದಕವೆನಿಸುವದಯ್ಯ. ಇಂತೀ ದಶವಿಧ ಪಾದೋದಕದ ವಿಚಾರವ ತಿಳಿದು ಆ ಮೇಲೆ ನಿಚ್ಚ ಪ್ರಸಾದಿಯ ಸಂಬಂಧವಾಚರಣೆಯಂತೆ ಪ್ರಸಾದವ ಮುಗಿವುದಯ್ಯ. ಅದರೊಳಗೆ ಏಕಾದಶ ಪ್ರಸಾದ ವಿವರವೇತೆಂದೊಡೆ, ಪ್ರಥಮದಲ್ಲಿ ಸ್ಪರ್ಶನವ ಮಾಡಿದಂಥಾದ್ದೆ ಗುರುಪ್ರಸಾದವೆನಿಸುವದಯ್ಯ. ಇಷ್ಟ ಮಹಾಲಿಂಗಕ್ಕೆ ಮಂತ್ರ ಸ್ಮರಣೆಯಿಂದ ಮೂರು ವೇಳೆ ರೂಪವನರ್ಪಿಸಿದಲ್ಲಿಗೆ ಲಿಂಗಪ್ರಸಾದವೆನಿಸುವದಯ್ಯ. ಎರಡುವೇಳೆ

ಇಷ್ಟ ಮಹಾಲಿಂಗದೇವಂಗೆ ರೂಪವನರ್ಪಿಸಿ ಜಿಹ್ವೆಯುಲಿಟ್ಟಲ್ಲಿ ಜಂಗಮ ಪ್ರಸಾದವೆನಿಸುವದಯ್ಯ. ಆ ಮೇಲೆ ಲಿಂಗದೇವಂಗೆ ತೋರಿ ಭೋಜ್ಯ ಗಟ್ಟಿ, ಲಿಂಗದೇವಂಗೆ ತೋರಿ ಜಿಹ್ವೆಯಲ್ಲಿಟ್ಟಂಥಾದ್ದೇ ಪ್ರಸಾದಿಯ ಪ್ರಸಾದವೆನಿಸುವದಯ್ಯ. ಆ ಭೋಜ್ಯರೂಪಾದ ಪ್ರಸಾದಿಯ ಪ್ರಸಾದ ದೊಳಗೆ ಮಧುರ ಒಗರು ಕಾರ ಆಮ್ಲ ಕಹಿತೃಪ್ತಿ ಮಹಾತೃಪ್ತಿಯೆ ಆಪ್ಯಾ ಯನ ಸಮಯ ಪಂಚೇಂದ್ರಿಯ ವಿರಹಿತ ಕರಣಚತುಷ್ಟಯ ವಿರಹಿತ ಸಮತೆ ಸದ್ಭಾವ ಜ್ಞಾನಪ್ರಸಾದ ಮೊದಲಾದ ಸಪ್ತವಿಧ ಪ್ರಸಾದನೆನಿಸುವ ದಯ್ಯ. ಇಂತು ಪರಾಧೀನದಿಂ ಭಿಕ್ಷವ ಬೇಡಲಾರದಿದ್ದೊಡೆ ಅರಣ್ಯದಲ್ಲಿ ಫಲರಸಯುಕ್ತವಾದ ಹಣ್ಣು ಕಾಯಿಗಳ ಲಿಂಗಾರ್ಪಿತ ಭಿಕ್ಷ ಎಂದು ಆ ಫಲಾದಿಗಳ ತೆಗೆದುಕೊಂಡು ಶೋಧಿಸಿ ಪವಿತ್ರಮಾಡಿ ಲಿಂಗಾರ್ಪಿತ ಭೋಗಿ ಯಾದಾತನೆ ಸ್ವಯಂಭು ಪ್ರಸಾದಿ ಚಿತ್ಕಲಾಪ್ರಸಾದಿ ನೋಡಾ. ಇಂತು ಶ್ರೀಗುರುಲಿಂಗ ಜಂಗಮ ಕರುಣಾಕಟಾಕ್ಷೆಯಿಂದ ಅಚ್ಚಪ್ರಸಾದಿ ನಿಚ್ಚ ಪ್ರಸಾದಿ ಸಮಯಪ್ರಸಾದಿ ಚಿತ್ಕಲಾಪ್ರಸಾದಿ ನೋಡಾ. ಶರಣಗಣಂಗಳು ಆಚರಿಸುವ ದಶವಿಧ ಪಾದೋದಕ ಏಕಾದಶ ಪ್ರಸಾದದ ನಿಲುಕಡೆಯ ಅರಿದಾನಂದಿಸಿದೊಡೆ ನಿನ್ನ ಸರ್ವಾಂಗವೆಲ್ಲಾ ಚಿಪ್ಘನ ಶರಣ ಪ್ರಸಾದಲಿಂಗ ಸ್ವರೂಪು ನೋಡಾ ಸಂಗನ ಬಸವೇಶ್ವರಾ.

## ಪಾದೋದಕ ಪ್ರಸಾದಗಳ ಮಹಾತ್ಮೆ.

೧. ಶ್ರೀಗುರುಲಿಂಗಜಂಗಮದ ಧೂಳಪಾದೋದಕದಿಂದ ಸಮಸ್ತ ಲೋಕದ ಪ್ರಾಣಿಗಳ ಭವತ್ವವಳಿದು ಭೃತ್ಯ ಭಕ್ತಿಮಾರ್ಗವ ತೋರುವ ದಯ್ಯ. ಶ್ರೀಗುರು ಲಿಂಗಜಂಗಮದ ದೀಕ್ಷಾ ಪಾದೋದಕದಿಂದೆ ಸಮಸ್ತ ಪದಾರ್ಥಂಗಳೆಲ್ಲವ ಶಿವಗಣಪದಕ್ಕೆ ಯೋಗ್ಯವಾಗುವಂತೆ ಮಾಡುವದಯ್ಯ ಶ್ರೀಗುರುಲಿಂಗಜಂಗಮದ ಶಿಕ್ಷಾಪಾದೋದಕದಿಂ ಬ್ರಹ್ಮನುತ್ಪತ್ತಿ, ವಿಷ್ಣು ವಿನ ಸ್ಥಿತಿ, ರುದ್ರನ ಲಯ, ಈಶ್ವರನ ತಿರೋಧಾನ, ಸದಾಶಿವನನುಗ್ರಹವ ಕೊಡುವದು, ಶಿವಶರಣಗಣಂಗಳ ನಿಜನಿವಾಸವ ತೋರುವದಯ್ಯ. ಶ್ರೀಗು ರುಲಿಂಗಜಂಗಮದ ಮಹಾಜ್ಞಾನ ಪಾದೋದಕದಿಂದ ಷಡ್ವಿಧ ದೀಕ್ಷಾತ್ರ ಯವ ಕರುಣಿಸಿ ಷಟ್‌ಸ್ಥಲ ಮಾರ್ಗವ ತೋರುವದಯ್ಯ ಶ್ರೀಗುರುಲಿಂಗ [illegible] ಜಂಗಮದ ಹಸ್ತೋದಕ ಪರಿಣಾಮೋದಕ ನಿರ್ನಾಮೋದಕದಿಂದ ಷಡ್ವಿಧ ಲಿಂಗಾಂಗ ಸಮರಸಾಚರಣೆಯ ಮಾರ್ಗವ ಮೀರಿದ ಕ್ರಿಯಾಜ್ಞಾನವ

ತೋರುವದಯ್ಯಾ. ಶ್ರೀಗುರುಲಿಂಗ ಜಂಗಮದ ಸತ್ಯೋದಕ ಕರುಣಜಲ ವಿನಯಜಲ ಸಮತಾಜಲದಿಂದ ಸಮಸ್ತ ಪ್ರಮಥ ಗಣಂಗಳೆಲ್ಲ ಜ್ಯೋತಿರ್ಮಯರಾದರು ನೋಡಾ. ಅದೆಂತೆಂದೊಡೆ ಅಂಗುಷ್ಠಾಗ್ರೆ ಅಷ್ಟಷಷ್ಟಿ ತೀರ್ಥಾ ನಿತ್ಯಂವಸಂತಿವೈ । ಸಪ್ತಸಾಗರ ಪಾದಾರ್ಥೆ ತದಾರ್ಥೆ ಕುಲಿಸರ್ವತಃ ॥೧॥ ಸಪ್ತಸಾಗರ ಪರಿಯಂತಂ ತೀರ್ಥಸ್ನಾನ ಫಲಂ ಯಥಾ ಗುರೋರಂಘ್ರಿ ಜಲೇರ್ಬಿಂದು ಸಹಸ್ರಾಂಶೇನ ಪೂರಯೇತ್ ॥೨॥ ಪಾದೋದಕ ಪರಬ್ರಹ್ಮಂ ನಿರ್ಮಲಂ ಅಘನಾಶನಂ । ಅಜಡಂ ಜಡಮಿಚ್ಛಂತಿ ಸಪಾಪಿ ಬ್ರಹ್ಮಘಾತಕಃ ॥೩॥ ಭವಭೂಜ ಕುಠಾರಾಯ ರೋಗಪಂಕಸ್ಯ ಭಾನುವೆ । ಅನ್ಯಾಯ ಗಿರಿವಜ್ರಾಯ ಪಾದತೀರ್ಥಾಯತೇನಮಃ ॥೪॥ ಇಂತೆಂದುದಾಗಿ ಶ್ರೀ ಗುರು ಲಿಂಗ ಜಂಗಮದ ಪಾದೋದಕವೇ ಪರಮಾರಾಧ್ಯ ಶರಣಗಣಂಗಳಾಚಾರ ಸಂಪದಕ್ಕೆ ಪರಬ್ರಹ್ಮ ಜ್ಯೋತಿರ್ಮಯವಸ್ತು ನೋಡಾ ಸಂಗನಬಸವೇಶ್ವರಾ.

೨. ಶ್ರೀ ಗುರುಲಿಂಗಜಂಗಮದ ಪಾದೋದಕದಿಂದ ತನುವಿನ ಜಡತ್ವವಳಿದು ಶಿವಭಕ್ತಿಯ ಪಥವ ತೋರುವದಯ್ಯಾ. ಪಾದೋದಕದಿಂದ ಇಂದ್ರಿಯಂಗಳ ಜಡತ್ವವಳಿದು ಲಿಂಗೇಂದ್ರಿಯಂಗಳ ಮಾಡುವದಯ್ಯಾ. ಪಾದೋದಕದಿಂದೆ ಕರಣಂಗಳ ಕಾಮವಿಕಾರವಳಿದು ಲಿಂಗನಡೆ ಲಿಂಗನುಡಿ ಲಿಂಗನೋಟ ಲಿಂಗಕೂಟ ಲಿಂಗಭೋಗ ಲಿಂಗಾಚಾರವ ತೋರುವದಯ್ಯಾ. ಪಾದೋದಕದಿಂದೆ ಪ್ರಾಣನಸಂಚಲ ಗುಣವಳಿದು ಮಂತ್ರ ಧ್ಯಾನದಲ್ಲಿ ನಿಲಿಸುವದಯ್ಯಾ. ಪಾದೋದಕದಿಂದೆ ಅಜ್ಞಾನ ಜಡತ್ವವಳಿದು ಅಜಡಸ್ವರೂಪವ ಮಾಡಿ ಸುಜ್ಞಾನ ಸುಖವ ತೋರುವದಯ್ಯಾ. ಪಾದೋದಕದಿಂದೆ ಬಹು ಜನ್ಮದ ಪರಮ ಪಾತಕದ ಮಹಾ ಪಾಪವ ತೊಳೆದು ನಿರ್ಮಲ ಲಿಂಗ ಶರೀರವೆನಿಸುವದಯ್ಯಾ. ಪಾದೋದಕದಿಂದೆ ಜೀವನ ಜಡತ್ವವಳಿದು ಅಜಡಸ್ವರೂಪವ ಮಾಡಿ ಗಣಸಮ್ಮೇಳದಲ್ಲಿರಿಸುವದಯ್ಯಾ. ಪಾದೋದಕದಿಂದ ಮಲಮಾಯಾ ಕರ್ಮ ಪಾಶವ ಹರಿದು ನಿರ್ಮಲ ನಿರ್ಮಾಯ ಸ್ವರೂಪವ ಮಾಡಿ ಚಿಜ್ಜ್ಯೋತಿ ಸ್ವರೂಪನೆಂದೆನಿಸುವದು ನೋಡಾ. ಅದೇತೆಂದೊಡೆ “ಅಗಮ್ಯ ಗಮನಶ್ಚೈವ ಪಾಪಾಚಾರಸ್ಯಯೋ ಶುಭಾ । ತಪಿಸೂತ ಭವಂತ್ಯಾಸು ಸದ್ಯಃಪಾದಾಂಬು ಧಾರಣಾತ್ ॥೧॥ ಶಂಭು ಪಾದೋದಕಂಪೀತ್ವಾ ಪಶ್ಚದಾ ಶುಚಿ ಶಂಕಯಃ ಅಯಾಚಮತಿ ಮೋಹೇಚ ತಂವಿದ್ಯ ಬ್ರಹ್ಮಘಾತಕಃ ॥೨॥” ಎಂದುದಾಗಿ ಶ್ರೀ ಗುರುಲಿಂಗ

ಜಂಗಮದ ಪಾದೋದಕವೇ ಪರಾತ್ಪರ ದೇವಲೋಕದ ದೇವಗಂಗಾಜಲ ಶಿವಲೋಕದ ಶಿವಗಂಗಾಜಲ ಶಾಂಭವಲೋಕದ ಪರಮಗಂಗಾಜಲವಾಗಿ ನೆಲಿಸಿರ್ಪುದು ನೋಡಾ ಸಂಗನಬಸವೇಶ್ವರಾ.

೩. ಅಯ್ಯಾ ಪಾದಪೂಜೆ ಎಂಬುದು ಅಗಮ್ಯ ಅಗೋಚರ ಅಪ್ರಮಾಣ ಮಹಾ ಅಸಾಧ್ಯವು. ಶ್ರೀ ಗುರು ಬಸವೇಶ್ವರ ದೇವರು ತಮ್ಮ ಅಂತರಂಗದೊಳಗಣ ಪಾದಪೂಜೆಯಿಂದಾದ ತೀರ್ಥ ಪ್ರಸಾದವಂ ಗಣ ಸಮೂಹಕ್ಕೆ ಸಲ್ಲಲಿ ಎಂದು ನಿರ್ಮಿಸಿ ಭಕ್ತಿಯ ತೊಟ್ಟು ಮೆರೆದು ಇಂತಪ್ಪ ತೀರ್ಥಪ್ರಸಾದವ ಸೇವಿಸುವ ಕ್ರಮವೆಂತೆಂದೊಡೆ. “ಗ್ರಾಮ ಸೇವಾ ಕರಂ ರಂಭಾಗೀತ ವಾದ್ಯನೃತ್ಯಸ್ತಥಾ ಅನಾಚಾರ ವಿಕಾರಂಚನ ಪಾದತೀರ್ಥ ಪ್ರಸಾದಕಃ ॥೧॥” ಇಂತೆಂದುದಾಗಿ ತಂಬೂರಿ ಕಿನ್ನರಿವಿಡಿದು ಮನೆಮನೆಯ ಬೇಡುವಾತ ಹಲವು ವೇಷವ ತೊಟ್ಟು ಆಡುವಾತ ನಗಾರಿ ಸಮ್ಮೇಳ ನೌಬತ್ತು ಕರ್ನೆ ಕಹಳೆ ಶಂಖ ಬಾರಿಸುವಾತ ಅಷ್ಟಾವರಣ ಪಂಚಾಚಾರದಲ್ಲಿ ಅಂಹಕರಿಸುವಾತ ಹಸ್ತಪಾದ ಬೆರಳುಗಳು ನನೆದಾತ ಮೂಕೊರೆಯ ಸೋಟೆ ಹರುಕ ನೇತ್ರಪ್ರಕಾಶ ಹೀನ ಕಿವಿಹರಕ ಅನಾಚಾರಿ ಪರ್ವತನ ಕಂಬಿ ಮಹಾ ಧ್ವಜವ ಹೊರುವಾತ, ಕತ್ತಿ ಕಠಾರಿ ಡೊಣ್ಣೆಗಳ ಹಿಡಿವಾತ, ಗುರು ಪಾದಸ್ತೋತ್ರದಿಂದ ಅಡ್ಡಬಿದ್ದು ದೀಕ್ಷೆಯಾಗದಾತ ರಾಜಾರ್ಥದಲ್ಲಿ ಅಹುದು ಅಲ್ಲವಮಾಡಿ, ಅಲ್ಲವ ಅಹುದು ಮಾಡಿ ಲಂಚಕ್ಕೆ ಕೈಯ್ಯಾಂತು ಅನಾಚಾರ ಹೇಳುವಾತ, ಸದಾಚಾರ ನುಡಿಗೆ ಇದಿರುತ್ತರ ಕೊಟ್ಟು, ಭಕ್ತಗಣಂಗಳ ನಿಂದೆಯ ಮಾಡುವಾತ, ಸದಾಚಾರ ಸದ್ಭಕ್ತ ಗಣಂಗಳ ಕಂಡರೆ ಗರ್ವಿಸುವಾತ, ಧಾನ್ಯ ಅರಿವೆ ಬೆಳ್ಳಿ ಬಂಗಾರಂಗಳ ಕ್ರಯವಿಕ್ರಯವ ಮಾಡಿ ಪ್ರತಿಯಾಗಿ ಮಾರಿ ವ್ಯವಹಾರವ ಮಾಡುವಾತ, ಧನ ಧಾನ್ಯ ದ್ರವ್ಯವ ಡೊಂಬ'ಜಾತಿಗಾರ ಮೊದಲಾದ ಭವಿ ಜನರಿಗೆ ತ್ಯಾಗವ ಮಾಡುವಾತ, ಆನೆ ಕುದುರೆ ಮಹಿಷ ಎತ್ತುಗಳು ಮೊದಲಾಗಿ ವ್ಯಾಪಾರ ಮಾಡುವಾತ, ಗುರುಹಿರಿಯರಲ್ಲಿ ಹಾಸ್ಯರಸವ ಮಾಡುವಾತ, ಪರದ್ರವ್ಯ ಪರಧನವ ಪರಸ್ತ್ರೀ ಗಮಿಸುವಾತ, ಸೂಳೆ ಬಸಿವೆಯರ ಗೃಹದಲ್ಲಿರುವಾತ, ಆಚಾರ ಭ್ರಷ್ಟಮಾನಹೀನರ ಸಂಗವ ಮಾಡುವಾತ, ಇಂಥವರುಳ ಮಂಕುಗಳ ಗುರುಲಿಂಗಜಂಗಮವೆಂದು ನುಡಿಯಲಾಗದು. ಅದೆಂತೆಂದೊಡೆ, “ನದೀನಾಂ ರಣಶ್ಚೈವ ಸಿಂಧು ಯಾನಾಚ ದುಃಕ್ರಿಯಾ । ಜಂಗಮಾನಾನ್ಯ ಕರ್ತವ್ಯಂ ಕರ್ತವ್ಯಂ ತತ್ವ ಚಿಂತನಂ ॥೧॥ ಖೇಟ

ಕೋದಂಡ ಚಕ್ರಾಸಿ ಗದಾ ತೋಮರಧಾರಣಂ । ಜಂಗಮಾನಾಮ್ನ ಕರ್ತವ್ಯಂ ಕರ್ತವ್ಯ ಸ್ವಯ ಲಕ್ಷಣಾ ‖೨‖ ಅಶಾಷ್ಟ ವೇಷಧಾರೀಚ ವೇಷಶ್ಚಗ್ರಾಸ ಪೋಷಕಃ । ಗ್ರಾಸಸ್ಚದೋಷ ಮಾದಾಯ ಇತಿ ಭೇದಮರಾನನೆ ‖೩‖ ಅನಾಚಾರ ವಿಭಾವೇನ ಆಚಾರಶ್ಚ ವಿವರ್ಜಯೇತ್ । ಸದಾಚಾರ ಭಕ್ತಾನಾಂಚ ಪಾದತೀರ್ಥ ಪ್ರಸಾದನಂ ‖೪‖ ಮಹಾ ಭೋಗಿ ಮಹಾತ್ಯಾಗೀ ಲೋಲುಪ್ತಂ ವಿಷಯಾತುರಂ । ನಾನಾ ಅಂಗ ವಿಕಾರಂಚ ಪಾದತೀರ್ಥನಕಾರಯೇತ್ ‖೫‖ ಪೃಷ್ಟಶ್ಚ ಕರ್ಣ ಹೀನಸ್ಯ ಬಧಿರಂ ಕಲಹಪ್ರಿಯಾ । ವ್ಯಾಧೀನಾಂ ಅಂಗಹೀನಂಚ ತಸ್ಯಾಚಾರ ವಿವರ್ಜಯೇತ್ ‖೬‖ ಇಂತಿದು ಮಾರ್ಗ ನಡತೆಗಳಿಲ್ಲದೆ, " ಶಿವಶಾಸ್ತ್ರಂ ಶಿವಜ್ಞಾನಂ ಶಿವಭಕ್ತಸಮ್ಮೇಳನಂ । ಶಿವಧ್ಯಾನ ಶಿವಪೂಜಂಚ ಜಂಗಮಾನಾಂಚ ಲಕ್ಷಣಂ ‖೧‖ ಪಾಣಿಪಾತ್ರೆ ಸದಾ ಭಿಕ್ಷಂ ಭಕ್ತಿಜ್ಞಾನ ವಿರಾಗತಃ । ಸತ್ಯ ನಿತ್ಯಂ ಜಿತೇಂದ್ರಿಯಂ ವಿರಕ್ತಸ್ಯ ಸುಲಕ್ಷಣಂ ‖೨‖ ಪಾಣಿ ಪಾತ್ರಂಚ ಕೌಪೀನಂ ಭೂಷಾಯಭೂತಿ ಲೇಪನಂ ನಿತ್ಯೇ ಕಾಂತ ಶೀಲತ್ವ ಮುತ್ತಮಂ ಜಂಗಮಸ್ಥಲಂ ‖೩‖ ಲಿಂಗಾರ್ಪಿತಂ ಸತ್ಯ ಮೋಕ್ಷಂ ಭಿಕ್ಷಾನ್ನೇನ ಪರಂ ನಿಜಂ । ತತ್ವಜ್ಞಾನ ಸಮಾರೂಢಂ ವಿರಕ್ತಸ್ಯ ಸುಲಕ್ಷಣಂ ‖೪‖ ಗುರು ಕಲ್ಪಿತ ಭಿಕ್ಷಾನ್ನಂ ಅಕಲ್ಪಿತ ಶಿವಾಜ್ಞಯಾ । ದ್ವಯಹೀನ ಭಕ್ತದೇಹೀ ಸಪಾಪೀ ಜಂಗಮಾಧಮಃ ‖೫‖ ಇಂತು ಎಂದುದಾಗಿ ಅಯೋಗ್ಯವಾದ ಜಂಗಮವನಳಿದು ಯೋಗ್ಯವಾದ ಜಂಗಮವ ವಿಚಾರಿಸಿ ತನುಮನಧನವ ವಂಚನೆ ಇಲ್ಲದೆ ಸಮರ್ಪಿಸಿ ಅವರ ತೀರ್ಥಪ್ರಸಾದವ ಕೊಳಬೇಕಲ್ಲದೆ, ದುರ್ಮಾರ್ಗದಲ್ಲಿ ಆಚರಿಸುವಾತನಲ್ಲಿ ತ್ರಿನೇತ್ರವಿದ್ದರೂ ತೀರ್ಥ ಪ್ರಸಾದದುಪದೇಶವ ಕೊಳ್ಳಲಾಗದು ಕಾಣಾ ಸಂಗನಬಸವಣ್ಣ. ಇಂತು ಗುರುವಾಕ್ಯವ ತಿಳಿದು ನೋಡಾ ಸಂಗನಬಸವೇಶ್ವರಾ.

೪. ಶ್ರೀಗುರುಲಿಂಗ ಜಂಗಮದ ನೋಟ ಪರುಷಪ್ರಸಾದದಿಂದೆ, ಸಮಸ್ತ ಲೋಕದ ಮನುಮುನಿ ಋಷಿಗಳೆಲ್ಲ ಪರಮ ಸುಖಿಗಳಾದರಯ್ಯಾ. ಶ್ರೀಗುರುಲಿಂಗ ಜಂಗಮದ ಹಸ್ತಪರುಷ ಪವಿತ್ರವಾದ ಶುದ್ಧ ಪ್ರಸಾದದಿಂದೆ ತನುವಿನ ಕಾಮವಿಕಾರವಳಿವುದಯ್ಯ. ಶ್ರೀಗುರುಲಿಂಗ ಜಂಗಮದ ಸಿದ್ಧ ಪ್ರಸಾದದಿಂದ ಮನದ ಕಾಂಕ್ಷೆ ಹರಿವುದಯ್ಯಾ. ಶ್ರೀಗುರುಲಿಂಗ ಜಂಗಮ ಪ್ರಸಿದ್ಧ ಪ್ರಸಾದದಿಂದೆ ಭಾವದ ಭ್ರಮೆ ಕೆಡುವುದಯ್ಯ. ಶ್ರೀಗುರುಲಿಂಗ ಜಂಗಮದ ಪ್ರಸಾದಿ ಪ್ರಸಾದದಿಂದೆ ಪ್ರಾಣನ ಪ್ರಪಂಚು ನಷ್ಟ

ವಾಗುವನಯ್ಯಾ. ಶ್ರೀಗುರುಲಿಂಗ ಜಂಗಮದ ಘನಾಪ್ಯಾಯನ ಪ್ರಸಾದ ದಿಂದೆ ಇಂದ್ರಿಯಂಗಳೆಲ್ಲಾ ಲಿಂಗೇಂದ್ರಿಯಂಗಳಾಗುವವಯ್ಯಾ ಶ್ರೀಗುರು ಲಿಂಗ ಜಂಗಮದ ಸಮಯ ಪ್ರಸಾದದಿಂದೆ ವಿಷಯಂಗಳೆಲ್ಲ ಲಿಂಗವಿಷ ಯಂಗಳಾಗುವವಯ್ಯಾ. ಶ್ರೀಗುರುಲಿಂಗ ಜಂಗಮದ ಪಂಚೇಂದ್ರಿಯವಿರ ಹಿತ ಪ್ರಸಾದದಿಂದ ಕರಣಂಗಳೆಲ್ಲ ಲಿಂಗಕರಣಂಗಳಾಗುವವಯ್ಯಾ. ಶ್ರೀಗುರುಲಿಂಗ ಜಂಗಮದ ಕರಣ ಚತುಷ್ಟಯ ವಿರಹಿತ ಪ್ರಸಾದ, ಸಮ ತಾಪ್ರಸಾದ ಸದ್ಭಾವಪ್ರಸಾದ ಜ್ಞಾನ ಪ್ರಸಾದದಿಂದ ಸರ್ವಸಂಗ ಪರಿತ್ಯಾಗ ರಾಗಿ ಬಯಲನೇ ಹಾಸಿ ಬಯಲನೇ ಹೊದ್ದು ಬಯಲನೇ ಅರ್ಚಿಸಿ ಬಯ ಲನೇ ಭೋಗಿಸಿ ಬಸವ ಮೊದಲಾದ ಪ್ರಮಥ ಗಣಂಗಳೆಲ್ಲ ಬಯಲೊಳಗೆ ಮಹಾಬಯಲಾದರು ನೋಡಾ, ಅದೆಂತೆಂದೊಡೆ “ ಜಂಗಮಾದಿ ಗುರೂ ಣಾಂಚ ಅನಾದಿಸ್ವಯಲಿಂಗವಾನ್ । ಆದಿಪ್ರಸಾದೇನ ಭುಕ್ತಿ ಇಷ್ಟಸ್ಪ್ರಾಣ ಪ್ರಸಾದಕಂ ॥೧॥ ಜಂಗಮಸ್ಯ ಪ್ರಸಾದೇನ ನೈವೇದ್ಯಂಚ ಸಮರ್ಪಣಂ। ಪ್ರಸಾದೇನತು ಶುದ್ಧಾತ್ಮಾಪ್ರಸಾದಂ ಲಿಂಗರೂಪಕಂ ॥೨॥ ಭಕ್ತಿಜಿಹ್ವಾಗ್ರೆ ತೇಲಿಂಗಂ ಜಿಹ್ವಾಗ್ರತೇರುಚಿ। ರುಚಿಜಿಹ್ವಾ ಪ್ರಸಾದಂಚ ಪ್ರಸಾದಂ ಪರಮಂ ಪದಂ ॥೩॥ ಪ್ರಸಾದಂ ಪರಬ್ರಹ್ಮಂಚ ಬ್ರಹ್ಮಪ್ರಸಾದಮೇವಚ । ಕೇವಲಂ ಶಿವಮೌನಂಚ ಮನಂಚ ಶಿವಲಿಂಗಕಂ ॥೪॥ ” ಇಂತೆಂದು ಹೇಳುತ್ತಿಹ್ಯು ದಾದ ಕಾರಣ ಶ್ರೀಗುರು ಲಿಂಗಜಂಗಮದ ಪ್ರಸಾದವೆ ಪರಮಾಮೃತ ಸುಧಾ ಜ್ಯೋತಿರ್ಮಯಲಿಂಗ ನೋಡಾ ಸಂಗನಬಸವೇಶ್ವರಾ.

೫. ಶ್ರೀಗುರುಲಿಂಗ ಜಂಗಮದ ಪ್ರಸಾದದಿಂದ ನಿಜವೀರಪರಾ ಕ್ರಮ ಉಂಟಾಗುವವಯ್ಯಾ. ಪ್ರಮಥಗಣಂಗಳ ಸದ್ಭಕ್ತಿ ದಾಸೋಹ ದೊರೆ ವುದಯ್ಯಾ. ಪ್ರಸಾದದಿಂದೆ ಸದಾಚಾರ ಲಿಂಗನಡೆ ಲಿಂಗನುಡಿ ದೊರೆವು ದಯ್ಯ. ಕಾಲಕಾಮರು ಹೊದ್ದಲಮ್ಮರು. ಉರಗ ವೃಶ್ಚಿಕ ವ್ಯಾಘ್ರ ಭಲ್ಲೂಕ ಗಜ ಗರುಡ ಸಿಂಹ ಸೋಂಕಲಮ್ಮವಯ್ಯಾ. ಪ್ರಸಾದದಿಂದೆ ಕುಷ್ಠರೋಗ ಮೊದಲಾಗಿ ಸಮಸ್ತ ವ್ಯಾಧಿಗಳು ಪಾವನರೂಪವಾಗುವವಯ್ಯಾ. ಪ್ರಸಾ ದದಿಂದೆ ಸತ್ಕ್ರಿಯೆ ಸಮ್ಯಜ್ಞಾನದ ಚಿತ್ಕಾಂತಿ ಹೆಚ್ಚುವದಯ್ಯ. ಮಹಾಪಾತ ಕಂಗಳು ಬಿಟ್ಟೋಡುವವಯ್ಯ. ಪ್ರಸಾದದಿಂದೆ ರುದ್ರಲೋಕದ ಗಣಂಗಳು ನಾಗಲೋಕದ ನಾಗಗಣಂಗಳೆಲ್ಲ ಶಿಖಿಕರ್ಪೂರ ಬೆರೆದಂತಾದರಯ್ಯಾ. ಶಿವ ಲೋಕದ ಶಿವಗಣಂಗಳೆಲ್ಲ ಕ್ಷೀರ ಕ್ಷೀರವ ಬೆರೆದಂತಾದರಯ್ಯಾ. ಪ್ರಸಾದ ದಿಂದ ದೇವಲೋಕದ ದೇವ ಗಣಂಗಳು, ಶಾಂಭವಲೋಕದ ಶಾಂಭವ

ಗಣಂಗಳು ಜ್ಯೋತಿ ಜ್ಯೋತಿಯು ಬೆರೆದಂತಾದರಯ್ಯಾ. ಶ್ರೀಗುರುಲಿಂಗ ಜಂಗಮದ ಪ್ರಸಾದದಿಂದೆ ಮರ್ತ್ಯಲೋಕದ ಮಹಾಗಣಂಗಳೆಲ್ಲ ನಿಃಶ್ಚಿಂತ ನಿಃಕಾಮ್ಯ ನಿಃಪ್ರಪಂಚಿಗಳಾಗಿ ಬಯಲು ಬಯಲು ಬೆರೆದಂತಾದರಯ್ಯಾ. ಅದೆಂತೆಂದೊಡೆ "ವಸು ಅರ್ಕ ರುದ್ರರೂಪೋ ಮಧ್ಯಪಿಂಡಸ್ತು ಪುತ್ರತಾ। ವಕ್ತ್ರರುದ್ರನಿರ್ಮಾಲ್ಯಂಚ ಕಿಂಪುನರ್ಬಹುಭಾಷಣಂ॥೧॥ ಗ್ರಾಹ್ಯಂ ಜಂಗಮ ಶೇಷಂಚ ಗುರುರ್ಲಿಂಗಂತು ಜಂಗಮಂ। ಸಂತೃಪ್ತಿ ಶೇಷರೂಪಂಚ ಭವೇನ್ಮುಕ್ತಿ ಯಥಾಭವೇತ್ ॥೨॥" ಎಂದುದಾಗಿ ಶ್ರೀಗುರುಲಿಂಗ ಜಂಗಮದ ಪ್ರಸಾದವೆ ನಿತ್ಯನಿಷ್ಕಳ ಲಿಂಗತಾನೇ ನೋಡಾ ಸಂಗನಬಸವೇಶ್ವರಾ.

---

## ಚಿದ್ವಿಭೂತಿ.

೧. ಹರಹರಾ ಶಿವಶಿವಾ ಮತ್ಪ್ರಾಣನಾಥಾ ಅನಾದಿ ಮಹಾಪ್ರಭು ಶ್ರೀಗುರುಲಿಂಗ ಜಂಗಮದ ಚರಣೋದ್ಧೂಳನವೆ ಚಿದ್ಬ್ರಹ್ಮ. ಚಿದೈಶ್ವರ್ಯ ನೋಡಾ. ಶ್ರೀಗುರುಲಿಂಗ ಜಂಗಮದ ಕ್ರಿಯಾ ಚಕ್ಷುವಿನ ಕ್ರಿಯಾ ಪ್ರಕಾಶವೇ ಕ್ರಿಯಾಭಸಿತವಾಗಿಪ್ಪುದಯ್ಯ. ಶ್ರೀಗುರುಲಿಂಗಜಂಗಮದ ಜ್ಞಾನ ಚಕ್ಷುವಿನ ಜ್ಞಾನಪ್ರಕಾಶವೇ ಮಹಾಜ್ಞಾನ ಭಸಿತವಾಗಿರ್ಪುದಯ್ಯ. ಇಂಥ ಚಿತ್ಪ್ರಕಾಶ ಸ್ವರೂಪವಾದ ಚಿದ್ಭಸಿತವ ಅನಾದಿ ಬಸವದಂಡ ಪ್ರಮಥರು ತಮ್ಮ ಗೋಷ್ಯ ಮುಖದಲ್ಲಿ ಸಕಲ ಕ್ರಿಯಂಗಳನಾಚರಿಸುತ್ತಿರಲು, ಆಗ ಶಿವನು ತನ್ನ ಪಂಚಮುಖದಿಂದ ಪಂಚವರ್ಣದ ಗೋವನಿರ್ಮಿಸಿ ಎಲೈ ಎಲ್ಲ ಚಿಚ್ಚೈತನ್ಯ ಮೂರ್ತಿ ಬಸವದಂಡನಾಯಕರೇ ಈ ಪಂಚಗೋವುಗಳ ಈರೇಳು ಲೋಕಕ್ಕೆ ಪಾವನಸ್ವರೂಪವಮಾಡಿ, ನಿಮ್ಮ ಶರಣ ಗಣಂಗಳಿಗ ರ್ಪಿತವಾಗುವಂತೆ ಮಾಡಿರಯ್ಯಾ ಎಂದು ಅಭಿವಂದಿಸಲು, ಆಗ ಬಸವ ದಂಡ ಪ್ರಮಥರು ಆ ಗೋವಿನ ಸಗಣವ ಕ್ರಿಯಾಗ್ನಿಯಿಂದ ಶ್ರೀಗುರುಲಿಂಗ ಜಂಗಮದ ಚಿತ್ಪ್ರಭೆಯ ವೇಧಿಸಿ ಸಕಲ ಲೋಕಂಗಳಿಗೆ ಸಕಲ ಮುನಿಜನ ಕ್ಕೆಲ್ಲಾ ಕಾಲಹರ ಭಸಿತ, ಕರ್ಮಹರ ಭಸಿತ, ದುರಿತಹರ ಭಸಿತ, ಪಾಪ ಹರ ಭಸಿತವೆನಿಸಿ ಕೊಟ್ಟರು ನೋಡಾ. ಆ ಗೋವಿನ ಜಲಮಲ ವೀರ್ಯ ದಿಂದೆ ಭೂಮಿಗೆ ಸಮ್ಮಾರ್ಜನೆಗೆ ಯೋಗ್ಯವೆನಿಸಿದರಯ್ಯ. ಆ ಗೋವಿನ ಕುಚಕ್ಷೀರವ ಸರ್ವಲೋಕಂಗಳಿಗೆ ಪಂಚಾಮೃತವೆನಿಸಿದರಯ್ಯ. ಆ ಗೋವಿನ ಪುತ್ರನಿಂದ ಸಕಲ ಪ್ರಾಣಿಗಳು ಬದುಕುವಂತೆ ಮಾಡಿದರಯ್ಯ.

ಆ ಗೋವಿನ ಮಾಂಸವ ದುರಾಚಾರ ಭವಿಜನಾತ್ಮರು ಭುಂಜಿಸುವಂತೆ ಮಾಡಿದರಯ್ಯ. ಆ ಗೋವಿನ ಚರ್ಮವ ಶಿವಗಣಂಗಳ ಪಾದರಕ್ಷೆ ಎನಿಸಿದರಯ್ಯ. ಇತ್ತಲಾಗಿ ಸಕಲ ಪ್ರಮಥ ಗಣಂಗಳೆಲ್ಲ ಶ್ರೀಗುರು ಬಸವೇಶ್ವರ ಸ್ವಾಮಿಗಳ ಚಿತ್ಪ್ರಕಾಶ ಭಸಿತವ ಬೆಸಗೊಂಡು, ಆ ವಿಭೂತಿಯು ಶ್ರೀಗುರು ಲಿಂಗ ಜಂಗಮದ ದೀಕ್ಷಾಜಲ ಶಿಕ್ಷಾಜಲದಿಂದ ಸಮ್ಮಿಶ್ರವಮಾಡಿ ಇಪ್ಪತ್ತೊಂದು ದೀಕ್ಷಾಸ್ವರೂಪವಾದ ಮಹಾಪ್ರಣವವ ಸ್ಥಾಪಿಸಿ ಸಕಲಾಚಾರ ಕ್ರಿಯೆಗಳಿಗೆ ಶುಭತಿಲಕವಿದೇ ಚಿದ್ವಿಭೂತಿ ಎಂದು ನಿರಂತರ ಸ್ನಾನ ಧೂಳನ ಧಾರಣವ ಮಾಡಿದರು ನೋಡಾ. ಆದರಿಂ ಮೇಲೆ ಆ ಗೋವಿನ ಕುಚಕ್ಷೀರವ ಈ ಭಸಿತದಿಂದ ಪಾವನವ ಮಾಡಿ ಪರಮಾಮೃತವೆನಿಸಿ ಶ್ರೀಗುರು ಲಿಂಗಜಂಗಮಕ್ಕೆ ಸಮರ್ಪಿಸಿ ಅವರ ಒಕ್ಕು ಮಿಕ್ಕ ಪ್ರಸಾದ ಪರಮಾಮೃತ ಶೇಷವ ನಿಜನೈಷ್ಠೆಯಿಂದ ಲಿಂಗಾರ್ಪಿತವ ಮಾಡಿದರು ನೋಡಾ ಅದೆಂತೆಂದೊಡೆ " ವಿಭೂತಿ ವಿಭವಶ್ಚೈವ ವಿಧಿಕರ್ಮ ವಿನಾಶನಂ। ಯಮಲೋಕ ಭಯಂನಾಸ್ತಿ ಶಿವಲೋಕಂ ಮಹೀಯತೆ॥೧॥ ಪಾದಭಿನ್ನಾಹಿಲೋಕಾನಾಂ ಮೌಳಿ ಬ್ರಹ್ಮಾಂಡ ಭಿತ್ತಯೆ । ಭುಜಪ್ರಾಂತದಿಗಂತಾನಾಂ ಭೂತಾಯ ಪತಯೆನಮಃ ॥೨॥ ಇಂತೆಂದುದಾಗಿ ಶ್ರೀಗುರುಲಿಂಗ ಜಂಗಮದ ಚಿತ್ಪ್ರಕಾಶ ಭಸಿತವ ಬಹಿಷ್ಕರಿಸಿ ಸಕಲ ಪ್ರಮಥಗಣಂಗಳಿಗೆ ಪರಮಪದ ಮೋಕ್ಷದ ಕಣಿ ಎಂದು ಬೋಧಿಸಿದಂಥ ಬಸವದಂಡನಾಥನ ಚರಣಕ್ಕೆ ನಮೋ ನಮೋ ಎಂಬೆನು ನೋಡಾ ಸಂಗನ ಬಸವೇಶ್ವರಾ.

## ಚಿದ್ವಿಭೂತಿಯ ಮಹತ್ವ.

೧. ಶ್ರೀಗುರುಲಿಂಗ ಜಂಗಮದ ದೀಕ್ಷಾಭಸಿತವ ನಂಬಿಗೆಯಿಂದ ಅಷ್ಟೈಶ್ವರ್ಯವಿದೆಂದು ಶ್ರೀಗುರು ಸ್ಮರಣೆಯಿಂದ ಲಲಾಟದಲ್ಲಿ ಧರಿಸಿದಾಕ್ಷಣವೆ ವಿಧಿಬರೆದ ಲಿಖಿತವಂ ತೊಡೆದು ಶಿವಲಿಖಿತವ ಲಿಖಿಸುವದಯ್ಯ. ಶ್ರೀಗುರುಲಿಂಗ ಜಂಗಮದ ಶಿಕ್ಷಾಭಸಿತವ ಅಷ್ಟವಿಧಸ್ಥಾನ ಷೋಡಶಸ್ಥಾನಗಳಲ್ಲಿ ಧರಿಸಿದವರಿಗೆ ಗುರುತ್ವವಕೊಟ್ಟು ಲಿಂಗನಿಷ್ಠಾ ಪರಭಕ್ತಿಯ ತೋರುವದಯ್ಯ. ಶ್ರೀಗುರುಲಿಂಗ ಜಂಗಮದ ದೀಕ್ಷಾ ಶಿಕ್ಷಾಜ್ಞಾನ ಭಸಿತವ ಸರ್ವಾಂಗದಲ್ಲಿ ಸ್ನಾನ ಧೂಳನವ ಮಾಡಿ ನಾಲ್ಕು ಸ್ಥಾನಂಗಳಲ್ಲಿ ಮಂತ್ರ ಸ್ಮರಣೆಯಿಂದ ಧರಿಸಿದ ಲಿಂಗಶರಣರಿಗೆ ಸರ್ವಾಚಾರ ಸಂಪತ್ತಿನ ಜಂಗಮಾನುಭಾವ ತೋರುವದಯ್ಯ. ಸಕಲ ಕ್ರಿಯೆಗಳಿಗೆ ಈ ಕ್ರಿಯೆ

ಚಿದ್ಭಸಿತವೇ ಕಾರಣ ಸ್ವರೂಪವಯ್ಯ. ಸಕಲಾಚಾರಂಗಳಿಗೆ ಈ ಕ್ರಿಯಾ ಚಿದ್ಭಸಿತವೆ ಶುಭ ತಿಲಕವಯ್ಯ. ಶ್ರೀಗುರುಲಿಂಗ ಜಂಗಮದ ಪಾದೋದಕ ಪ್ರಸಾದ ಚಿದ್ಭಸಿತಕಿಂತ ಪರವಸ್ತುವಿಲ್ಲ ನೋಡಾ. ಅದೆಂತೆಂದೊಡೆ "ಅನಾದಿ ಶಾಶ್ವತಂ ಶಾಂತಂ ಚೈತನ್ಯಂ ಚಿತ್ಸ್ವರೂಪಕಂ। ಚಿದಂಗಂ ವೃಷಭಾಕಾರಂ ಚಿದ್ಭಸ್ಮಂ ಲಿಂಗಸ್ನಾನಯೇತ್ ॥೧॥ ಆಪಾದಮಸ್ತಕಂ ಚೈವ ರೋಮ ರೋಮೋದ್ಭವೇಶಿವಂ । ಸ್ವಕಾಯ ಮುಚ್ಯತೆಲೀಗಂ ವಿಭೂತಿಧೂಳನಂ ಭವೇತ್ ॥೨॥ ಪ್ರಥಮಂ ಗೂಢನಿರ್ನಾಮಂ ದ್ವಿತೀಯಂ ಚಿತ್ಸ್ವರೂಪಕಂ। ತೃತೀಯಂ ಚಿದ್ವಿಲಾಸಂಚ ಚತುರ್ಥಂ ಭಸ್ಮಧಾರಣಾತ್ ॥೩॥" ಎಂದುದಾಗಿ ಶ್ರೀಗುರುಲಿಂಗ ಜಂಗಮದ ಚಿತ್ಪ್ರಕಾಶ ಚಿದ್ಭಸಿತವೆ ಪರಾತ್ಪರ ವಸ್ತು ನೋಡಾ ಸಂಗನ ಬಸವೇಶ್ವರಾ.

---

## ಚಿದ್ರುದ್ರಾಕ್ಷಿ.

೧. ಹರಹರಾ ಶಿವಶಿವಾ ಮತ್ಪ್ರಾಣನಾಥ ಮಹಾ ಪರಾತ್ಪರ ಬ್ರಹ್ಮ ಪ್ರಭು ಶ್ರೀ ಗುರುಲಿಂಗಜಂಗಮದ ಕರುಣಾಕಟಾಕ್ಷೆಯಿಂದ ಹರನ ತ್ರಿವಿಧನೇತ್ರದಿಂದುದಯವಾದ ತ್ರಿವಿಧ ವರ್ಣದ ಬಿಂದುಗಳ ಅನಾದಿ ಚಿತ್ಪ್ರಭು ಬಸವೇಶ್ವರ ಸ್ವಾಮಿಗಳವರು ಆ ಬಿಂದುಗಳ ತಮ್ಮ ಅನಿಮಿಷ ದೃಷ್ಟಿಯಿಂದ ನಿರೀಕ್ಷಿಸಿ ಚಿದ್ಬಿಂದು ಚಿನ್ಮಂತ್ರ ಮಣಿ ಮಾಲಿಕೆ ಎಂದು ತಮ್ಮ ತತ್ತತ್ ಸ್ಥಾನಂಗಳಲ್ಲಿ ಧರಿಸಿ, ಮಹಾ ಪ್ರಭು ನಿರಂಜನ ಜಂಗಮಕ್ಕೆ ಇಪ್ಪತ್ತೊಂದು ಲಕ್ಷ ಮಣಿಗಳಿಂದ ಶೂನ್ಯ ಸಿಂಹಾಸನದ ಮೇಲೆ ಮಹಾ ಪ್ರಭು ನಿರಂಜನ ಜಂಗಮವ ಮೂರ್ತವ ಮಾಡಿಸಿ, ಮಹಾ ವೈಭವದಿಂದ ಸಕಲ ಮಹಾ ಪ್ರಮಥಗಣಂಗಳಿಗೆ ಆ ಚಿದ್ಬಿಂದುಗಳ ಮೂಲದಲ್ಲಿ ಅನಾದಿ ಗುರು ಅನಾದಿ ಪ್ರಣವುವ ಸಂಬಂಧವ ಮಾಡಿ ನಾಳದಲ್ಲಿ ಅನಾದಿ ಜಂಗಮ ಚಿತ್ಪ್ರಕಾಶ ಚಿದ್ಭಸಿತವ ಸಂಬಂಧವ ಮಾಡಿ ಮಹಾ ಸಂತೋಷವೆಂಬ ಹರುಷಾನಂದ ಜಲ ಉಕ್ಕಿ ಕಡಗ ಕಂಠಮಾಲೆ ಕರ್ಣಾಭರಣ ಹಾರ ಹೀರಾವಳಿಗಳ ಮಾಡಿ ಧರಿಸಿ ಚಿಂತಾಮಣಿ ಎಂದು ಪ್ರಮಥಗಣ ರುದ್ರಗಣ ಷೋಡಶಗಣ ತೇರಸಗಣ ಮರ್ತ್ಯಲೋಕದ ಮಹಾಗಣಸಮೂಹಕ್ಕೆಲ್ಲಾ ಬೋಧಿಸಿದರು ನೋಡಾ. ಅದೆಂತೆಂದೊಡೆ "ನೇತ್ರಾತ್ ಸೂರ್ಯಾತ್ ಮನಃ ಶಂಭೋಃ ಕಪಿಲಾ ದ್ವಾದಶಾವೃತಃ । ಶ್ವೇತಷೋಡಶ ಸಂಜಾತಂ ಸೋಮರೂಪ ದ್ವಿಲೋಚನಾತ್ ॥೧॥ ಕೃಷ್ಣೋದಶ ವಿಧೋ

ಜಾತಾವನ್ಹಿರೂಪತ್ರಿ ಲೋಚನಾತ್ । ರುದ್ರನಯನಾಂಬು ಜಾತಾನಿ ರುದ್ರಾಕ್ಷಾಣಿ ಸರ್ವೋತ್ತಮಾ ||೨|| ಯೋಧತ್ತೆ ಭಸ್ಮ ರುದ್ರಾಕ್ಷಂ ಸರುದ್ರೋನಾತ್ರ ಸಂಶಯಃ ಎಂದುದಾಗಿ ಶ್ರೀ ಗುರುಲಿಂಗಜಂಗಮದ ಕರುಣಾಕಟಾಕ್ಷೆಯಿಂದುದಯವಾದ ಚಿನ್ಮಂತ್ರ ಮಾಲಿಕೆಯೇ ಪರಮಚಿಂತಾಮಣಿ ನೋಡಾ ಸಂಗನಬಸವೇಶ್ವರಾ.

## ಚಿದ್ರುದ್ರಾಕ್ಷಿಯ ಮಹತ್ವ.

೧. ಶ್ರೀ ಗುರುಲಿಂಗಜಂಗಮದ ಕರುಣಾ ಕಟಾಕ್ಷೆಯಿಂದುದಯವಾದ ಮಂತ್ರಮಣಿಯೇ ಅಷ್ಟ ಮಹದೈಶ್ವರ್ಯ ಮಹಾರುದ್ರಾಕ್ಷಿಯ ಸಂಗದಿಂದೆ ಶಿವಗಣಂಗಳ ಭೃತ್ಯಾಚಾರ ಭಕ್ತಿ ದೊರೆವುದಯ್ಯಾ. ರುದ್ರಾಕ್ಷಿಯ ಸಂಗದಿಂದೆ ನಿಷ್ಕಳಂಕ ಮಹಾಲಿಂಗದ ರತಿ ಸಂಯೋಗ ದೊರೆವುದಯ್ಯಾ. ಶ್ರೀ ಮಹಾ ರುದ್ರಾಕ್ಷಿಯ ಸಂಗದಿಂದ ಚತುರ್ವಿಧ ಷಡ್ವಿಧ ದ್ವಾದಶ ಷೋಡಶ ತರದ ಭಕ್ತಿ ಮೊದಲಾಗಿ ೪೮ ತರದ ಸದ್ಭಕ್ತಿ ದೊರೆವುದಯ್ಯಾ. ರುದ್ರಾಕ್ಷಿಯ ಸಂಗದಿಂದ ನಿಜಕೈವಲ್ಯ ದೊರೆವುದಯ್ಯಾ. ರುದ್ರಾಕ್ಷಿಯ ಸಂಗದಿಂದೆ ನಿಜ ಮೋಕ್ಷ ದೊರೆವುದಯ್ಯಾ. ರುದ್ರಲೋಕದ ರುದ್ರಗಣಂಗಳು, ಶಿವಗಣಂಗಳು, ಶಾಂಭವ ಗಣಂಗಳು ನಾಗ ಗಣಂಗಳು ಪ್ರತ್ಯಕ್ಷವಾಗಿ ಅವರು ಪಾದೋದಕ ಪ್ರಸಾದಕ್ಕೆ ಯೋಗ್ಯನೆಂದೆನಿಸುವರಯ್ಯಾ. ಶ್ರೀ ಮಹಾರುದ್ರಾಕ್ಷಿಯು ಘನಕ್ಕೆ ಘನಮಹದೈಶ್ವರ್ಯ ನೋಡಾ. ಅದೆಂತೆಂದೊಡೆ " ಹಸ್ತೆ ಚೋರಸಿ ಕಂಠೆ ಮಸ್ತಕೇವಾಪಿ ಧಾರಯೇತ್ । ನಶ್ಯಂತಿ ಸರ್ವಪಾಪೇಭ್ಯೋ ರುದ್ರಾಕ್ಷಸ್ಯಚ ಧಾರಣಾತ್ ||೧|| ರುದ್ರಾಕ್ಷಧಾರಣಂ ಹಸ್ತೆವಕ್ಷಸ್ಥೋಪಿಚ ಮಸ್ತಕೇ । ಚಿನ್ಹಂ ಶಿವಾತ್ರಮಾಸ್ಥಾನಂ ಭಸ್ಮನಾಚ ತ್ರಿಪುಂಡ್ರಕಂ ||೨|| ಇಂತೆಂದುದಾಗಿ ಶ್ರೀ ಗುರುಲಿಂಗಜಂಗಮದ ಕರುಣಾಕಟಾಕ್ಷ ಮಣಿಯೆ ಪರಮ ಚಿದಾಭರಣ ನೋಡಾ ಸಂಗನಬಸವೇಶ್ವರಾ.

---

## ಮಂತ್ರ.

೧. ಹರಹರಾ ಶಿವಶಿವಾ ಮತ್ಪ್ರಾಣನಾಥಾ ಮಹಾಮಂತ್ರ ಸ್ವರೂಪ ಅನಾದಿ ಮಹಾ ಪ್ರಭು ಶ್ರೀ ಗುರುಲಿಂಗಜಂಗಮದ ಕರುಣಾಕಟಾಕ್ಷೆ

ಯಿಂದುದಯುವಾದ ಮಹಾ ಪ್ರಣವುವೇ ನಿಜವಸ್ತು ನೋಡಾ. ಆ ಪ್ರಣವುದಿಂದುದಯುವಾದ ತ್ರ್ಯಕ್ಷರ ಪಂಚಾಕ್ಷರ ಷಡಕ್ಷರಗಳೇ ಮಹಾಮಂತ್ರ ನೋಡಾ. ಆ ಮಹಾಮಂತ್ರವೇ ಪರಬ್ರಹ್ಮವಸ್ತು ನೋಡಾ. ಆ ಮಹಾಮಂತ್ರವೇ ನಿಷ್ಕಲ ನಿಶ್ಶೂನ್ಯ ನಿರಂಜನ ಗುರುಲಿಂಗಜಂಗಮದ ಪಾದೋದಕ ಪ್ರಸಾದ ಚಿದ್ವಿಭೂತಿ ರುದ್ರಾಕ್ಷಿಗಳಿಗೆಲ್ಲಾ ಮೂಲ ಬೀಜಾಂಕುರ ನೋಡಾ. ಆ ಮಹಾಮಂತ್ರವೆ ಅನಾದಿ ಶರಣನ ಚಿದೈಶ್ವರ್ಯ ಚಿದಾಭರಣ ನೋಡಾ. ಅದೆಂತೆಂದೊಡೆ "ಓಂಕಾರಂ ಪ್ರಭವಾವೇದಂ ಓಂಕಾರಂ ಪ್ರಭವಸ್ವರಂ । ಓಂಕಾರ ಪ್ರಭವಾತ್ಸರ್ವಂ ತ್ರೈಲೋಕ್ಯಂ ಸಚರಾಚರಂ ॥೨॥ ಸಪ್ತಕೋಟಿ ಮಹಾ ಮಂತ್ರ ಚಿತ್ತವ್ಯಾಕುಳ ಕಾರಣಂ ಏಕನೇಕಾಕ್ಷರಂ ದೇವಿ ತೂರ್ಯಾತೀತ ಮನೋರ್ಲಯಂ ||೨|| ಇಂತೆಂದುದಾಗಿ ಮಹಾಮಂತ್ರವೇ ಸಕಲಾಚಾರ ಕ್ರಿಯಾಜ್ಞಾನಂಗಳಿಗೆ ಸಂಜೀವನ ನೋಡಾ ಸಂಗನಬಸವೇಶ್ವರಾ.

೨. ಆ ಇಷ್ಟಮಹಾಲಿಂಗವೇ ಅನಾದಿ ಶರಣನ ಆಧಾರಚಕ್ರದಲ್ಲಿ ನಕಾರಮಂತ್ರ ಮೂರ್ತಿಯಾಗಿ ನೆಲಿಸಿರ್ಪುದು ನೋಡಾ. ಅನಾಹತ ಚಕ್ರದಲ್ಲಿ ವಕಾರ, ಸ್ವಾಧಿಷ್ಠಾನ ಚಕ್ರದಲ್ಲಿ ಕಾರಮಂತ್ರ ಮೂರ್ತಿಯಾಗಿ ನೆಲಿಸಿರ್ಪುದಯ್ಯಾ. ಆ ಮಹಾಲಿಂಗವೆ ಮಣಿಪೂರಕ ಚಕ್ರದಲ್ಲಿ ಶಿಕಾರಮಂತ್ರ ಮೂರ್ತಿಯಾಗಿ ನೆಲಿಸಿರ್ಪುದಯ್ಯಾ. ವಿಶುದ್ಧಿ ಚಕ್ರದಲ್ಲಿ ಯಕಾರಮಂತ್ರ ಮೂರ್ತಿಯಾಗಿ ನೆಲಿಸಿರ್ಪುದಯ್ಯಾ. ಆ ಮಹಾಲಿಂಗವೇ ಆಜ್ಞಾಚಕ್ರದಲ್ಲಿ ಓಂಕಾರಮಂತ್ರ ಮೂರ್ತಿಯಾಗಿ ನೆಲಿಸಿರ್ಪುದು ನೋಡಾ. ಬ್ರಹ್ಮರಂಧ್ರದಲ್ಲಿ ಓಂಕಾರ ಮೂರ್ತಿಯಾಗಿ ನೆಲಿಸಿರ್ಪುದು ನೋಡಾ. ಶಿಖಾಚಕ್ರದಲ್ಲಿ ಕ್ಷಕಾರ ಮಂತ್ರ ಮೂರ್ತಿಯಾಗಿ ನೆಲಿಸಿರ್ಪುದು ನೋಡಾ. ಪಶ್ಚಿಮಚಕ್ರದಲ್ಲಿ ವ್ಯಂಜನವಿಲ್ಲದ ಹಕಾರಮಂತ್ರ ಮೂರ್ತಿಯಾಗಿ ನೆಲಿಸಿರ್ಪುದು ನೋಡಾ. ಈ ಪ್ರಕಾರದಿಂದ ಅನಾದಿಶರಣನ ಸರ್ವಾಂಗದಲ್ಲಿ ಕಿಷ್ಕಿಂಧಮಯವಾಗಿ ತುಂಬಿಕೊಂಡಿರ್ಪುದು ನೋಡಾ. ಅದೆಂತೆಂದೊಡೆ, "ಅರೂಪಂ ನಿಷ್ಕಲ ಬ್ರಹ್ಮಭಾವಾತೀತಂ ನಿರಂಜನಂ। ಶಬ್ದಾದಿ ವಿಷಯಾತೀತಂ ಮೂಲಲಿಂಗ ಮೋಹೋಚ್ಯತೆ ॥೧॥ ಮೂಲಮಂತ್ರ ಸ್ವರೂಪಾಯ ಮೂಲಮಂತ್ರಾತ್ಮರೂಪಿಣೆ। ಮೂಲಪ್ರಕೃತಿ ಸಂಜ್ಞಾಯ ಮೂಲಸ್ತಂಭಾಯ ಶಂಭವೇ ||೨|| ಸ್ವಯಂಭು ಸರ್ವಚೈತನ್ಯಂ ತತ್ವ ಮೂಲಾಧರಾಂಕಿತಂ। ಪರಶಕ್ತಿಸಮಾಯೋಗಂ ಜಗತ್ಸೃಷ್ಟ್ಯರ್ಥ ಕಾರಣಂ ॥೩॥ ಎಂದುದಾಗಿ ಇಂತಪ್ಪ ಪರಂ

# ಶಿವಾನುಭವ.

(ತ್ರೈಮಾಸಿಕವು.)



ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ.

ಬಿ. ಎ. ಎಲ್‌ಎಲ್. ಬಿ.



ವಿಜಾಪುರ.

೬ ನೇ ಸಂಚಿಕೆ.

ಜೂನ ೧೯೨೬

# ವಿಷಯಾನುಕ್ರಮಣಿಕೆ.


| ವಿಷಯಗಳು. | ಲೇಖಕರ ಹೆಸರುಗಳು. | ಪುಟ. |
|---|---|---|
| ೧. ಲಿಂಗಧಾರಣವೂ ವೇದಮಂತ್ರಗಳೂ | ವೇ॥ ಚಂದ್ರಶೇಖರ ಶಾಸ್ತ್ರೀ ವ್ಯಾಕರಣ ತೀರ್ಥ ಯಾದಗಿರಿ. | ೧-೧೦ |
| ೨. ಕೊಡಗಿನ ವೀರರಾಜೇಂದ್ರನು | ರಾ। ಸಾ। ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. | ೧೧-೩೨ |
| ೩. ಕೊಲ್ಲಿಪಾಕಿ | ವೇ॥ ಚಂದ್ರಶೇಖರ ಶಾಸ್ತ್ರಿ ವ್ಯಾಕರಣ ತೀರ್ಥ ಯಾದಗಿರಿ. | ೩೩-೪೫ |
| ೪. ಹರಿಗಡಿದ ಹೊಳೆಯು (ಕವಿತೆ) | ಶ್ರೀ. ಲ. ಅ. ಶಿರಹಟ್ಟಿ ಮಾಸ್ತರ ವಿಜಾಪುರ. | ೪೬-೪೭ |
| ೫. ಶ್ರೀಸುರದುಂಡೇಶ್ವರ ಮಠವು | ಶ್ರೀ. ಎಸ್. ಸಿ. ನಂದೀಮಠ. ಎಮ್. ಎ ರಾಜಾರಾಮ ಕಾಲೇಜ ಕೊಲ್ಲಾಪುರ | ೪೮-೫೭ |
| ೬. ಕಂಡ ಕದಲಿದನು (ಕವಿತೆ) | ಶ್ರೀ. ಬಿ. ಎಮ್. ಕುಲಕರ್ಣಿ ಬಿ. ಎ. | ೫೭-೫೮ |
| ೭. ಬಿಳಗಿಯ ಮಹಾ ಕವಿಗಳು | ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ ಹುಲ್ಕುಂಟೆ ಮಠ ತುಮಕೂರ. | ೫೯-೬೫ |
| ೮. ಆಂಗ್ಲಕವಿ ವರ್ಡ್ಸ್‌ವರ್ಥನ ಮತ್ತು ಲಿಂಗವಂತ ಕವಿಗಳ ಭಾಷಾಪದ್ಧತಿ | ಶ್ರೀ. ಆರ್. ಬಿ. ಅಲಬಾಳ. ಬಿ. ಎ. ಮಾಸ್ತರ ವಿಜಾಪುರ | ೬೬-೭೨ |
| ೯. ಶ್ರೀ ಬಸವ ನವರತ್ನಮಾಲಾ (ಕವಿತೆ) | ಶ್ರೀ. ಬಸವರಾಜ ಶಾಸ್ತ್ರಿ ಕೋಡಿಕೊಪ್ಪ | ೭೩-೭೪ |
| ೧೦. ವೀರಶೈವ ಧರ್ಮ ಗ್ರಂಥ ಪ್ರಸಾರಕ ಸಂಘ ವಿಜಾಪುರ | | ೭೫-೭೯ |
| ೧೧. ಸಂಗನಬಸವೇಶ್ವರ ವಚನ | | ೫೧-೭೧ |
| ೧೨. ಘನಲಿಂಗನ ವಚನ (ಅಪೂರ್ಣ) | | ೧-೧ |
| ೧೩ ಬಿಳಗಿ ವಂಶಾವಳಿ (ಅಪೂರ್ಣ) | | ೧-೧ |
| ೧೪. ಏಕೋತ್ತರ ಶತಸ್ಥಲ (ಅಪೂರ್ಣ) | | ೧೭-೨ |


## ಶಿವಾನುಭವ.

ಈ ಪತ್ರಿಕೆಯು ಮಾರ್ಚ, ಜೂನ, ಸಪ್ಟಂಬರ, ದಿಸಂಬರ ತಿಂಗಳಗ ಮಧ್ಯಕ್ಕೆ ಹೊರಡುತ್ತದೆ.

## ವರ್ಗಣೀ ದರ.

**ಪೋಷಕರು.** ೧೦ ರೂ. ೮ ಆ. **ಆಶ್ರಯದಾತರು.** ೫ ರೂ. ೮ ಆ. **ವರ್ಗಣೀದಾರರು.** ೩ ರೂ. ೮ ಆ. **ಬಿಡಿಸಂಚಿಕೆಗೆ.** ೧ ರೂ. ೪ ಆ. ವ್ಹಿ. ಪಿ. ಚಾರ್ಜು ಬೇರೆ.

**ವಿಜಾಪುರ.** **ಮ್ಯಾನೇಜರ ಶಿವಾನುಭವ.**

# ಲಿಂಗಧಾರಣವೂ ವೇದಮಂತ್ರಗಳೂ.

ಲೇಖಕಃ—ಚಂದ್ರಶೇಖರಶಾಸ್ತ್ರೀ ವ್ಯಾಕರಣತೀರ್ಥ ಹೊಳಲು ಪ್ರಿನ್ಸಿಪಾಲ
ಶಂಕರಕಾಲೇಜು ಯಾದಗಿರಿ. ಜಿ|| ರಾಯಚೂರ



ನಮ್ಮ ಭಾರತ ಭೂಮಿಯಲ್ಲಿ ಅನೇಕ ಮತಸ್ಥಾಪನಾಚಾರ್ಯರು ಅವತರಿಸಿ ತಮ್ಮ ತಮ್ಮ ಸಿದ್ಧಾಂತಗಳನ್ನು ಸ್ಥಾಪಿಸಿ ಪರಮತಗಳನ್ನು ಖಂಡಿಸುತ್ತ ಬಂದಿರುವದು ಪ್ರಸಿದ್ಧವಿರುತ್ತದಷ್ಟೆ! ಇಂತಹ ಮತಗಳಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ (ಇದು ವೀರಶೈವ ಮತದ ಸಿದ್ಧಾಂತವು.) ಇವುಗಳೇ ಈಗ ಬಹಳ ಪ್ರಬಲ ಸ್ಥಿತಿಯಲ್ಲಿರುತ್ತವಲ್ಲದೆ, ಪ್ರಾಯಃ ಭರತಖಂಡತುಂಬ ವ್ಯಾಪಿಸಿರುತ್ತವೆ. ಈ ಮೇಲೆ ಹೇಳಿದ ಮತಗಳ ಪ್ರತಿಷ್ಠಾಪನಾಚಾರ್ಯರೆಲ್ಲರೂ ವೇದಮಂತ್ರಗಳಿಗೂ ವ್ಯಾಸಸೂತ್ರಗಳಿಗೂ ತಮ್ಮ ತಮ್ಮ ಅಭೀಷ್ಟದಂತೆ ಅರ್ಥವನ್ನು ಮಾಡಿ ಸಿದ್ಧಾಂತವನ್ನು ಮಾಡಿರುತ್ತಾರೆ. ಯಾಕಂದರೆ ವೇದಗಳು ಸರ್ವ ಹಿಂದೂ ಆಸ್ತಿಕ ಮತಗಳಿಗೆ ಮೂಲಾಧಾರಗಳಾಗಿರುತ್ತವೆ. ಆದ್ದರಿಂದಲೇ ವೀರಶೈವಮತದ ಎಷ್ಟೋಜನ ಆಚಾರ್ಯವರ್ಯರು ವೇದಮಂತ್ರಗಳಿಗೆ ಲಿಂಗಧಾರಣಪರ ಭಾಷ್ಯಗಳನ್ನು ಬರೆದಿರುತ್ತಾರೆ. ಮತ್ತು ಅನೇಕ ಆಧಾರಗಳಿಂದ ಲಿಂಗಧಾರಣವು ವೇದಸಮ್ಮತವೆಂದು ಸಿದ್ಧಾಂತಗೊಳಿಸಿರುತ್ತಾರೆ. ಈ ವಿಷಯಕ್ಕೆ ವೀರಶೈವರ ಧರ್ಮಗ್ರಂಥಗಳಲ್ಲಿ ಚನ್ನಾಗಿ ವಿವೇಚನೆ ಮಾಡಲ್ಪಟ್ಟಿರುತ್ತದೆ. ಆದರೆ ಇತ್ತಿತ್ತಲಾಗಿ ವೀರಶೈವರು ವಿದ್ಯಾವಿಹೀನರಾದ ಕಾರಣ, ತಮ್ಮ ಸಿದ್ಧಾಂತವು ತಮಗೆ ತಿಳಿಯದಂತೆ ಆಗಿ, ಬಹಳ ಹೀನಾವಸ್ಥೆಯಲ್ಲಿ ಉಳಿದ ಕಾರಣದಿಂದ

ಎಷ್ಟೋ ಗ್ರಂಥಗಳು ನಷ್ಟವಾಗಿರುತ್ತವೆ. ಇದ್ದವುಗಳೂ ಕೂಡ ಪ್ರಕಾಶಕ್ಕೆ ಬಾರದೆ ಇರುವ ಕಾರಣ ಅನ್ಯ ಸಮಾಜದವರ ಸಿಂದೆಗೂ ಈ ಮತವು ಪಾತ್ರವಾ ... ನ್ನಡ ಸಂಸ್ಕೃತ ಗಳೆರಡು ... ಸಮಾಜವಲ್ಲಿ ಜನಿಸಿದ್ದ ... ುತವು ಒನ್ಮೆ ವಿದ್ವಾವಂತರಿಗೆ ತವರುಮ ... ು ಆಗಿತ್ತೆಂದು ಹೇಳಬಹುದಾಗಿದೆ. ಅವರ ಇನ್ನೂ ಶೋಧ ಮಾಡಿದ ... ಗ್ರಂಥಕಾರರು ಸಿಗಬಹುದು. ಇರಲಿ. ಸದ್ಯಕ್ಕೆ ಶಿವಾನುಭವದ ... ಗ ಕೆಲವು ಮಂತ್ರಗಳ ಪರಿಚಯು ವನ್ನು ಮಾಡಿ ಕೊಡುವದೇ ಈ ಲೇಖನ ಮುಖ್ಯೋದ್ದೇಶವಾಗಿದೆ. ಈಗ ಕೆಲವು ವೇದಮಂತ್ರಗಳನ್ನು ತೆಗೆದುಕೊಂಡು ಅವುಗಳಿಗೆ ಯಾವಯಾವ, ಆಚಾರ್ಯರು ಹೇಗೆ ಅರ್ಥವನ್ನು ಮಾಡಿರುತ್ತಾರೆಂಬುವವನ್ನು ನೋಡೋಣ.

ಪವಿತ್ರಂತೆ ವಿತತಂ ಬ್ರಹ್ಮಣ ಸ್ಪತೆ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ
ಅತಪ್ತ ತನೂರ್ನತ ದಾಮೋಅಶ್ನುತೆ ಶೃತಾಸಯಿದ್ವ ಹಂತಸ್ತತ್ಸಮಾಗತ ॥
(ಋಗ್ವೇದ ಮಂತ್ರ ೭-೩-೮)

ಈ ಮೊದಲಾದ ಋಗ್ವೇದದ ಮಂತ್ರಗಳು ಮಧ್ವಾಚಾರ್ಯರು ಸೋಮಯಾಗ ವಿಷಯದಲ್ಲಿ ಉಕ್ತವಾಗಿರುವವೆಂಬುದನ್ನು ಸಹ ಖಂಡಿಸಿ ತಪ್ತಮುದ್ರಾಧಾರಣಾದಿ ವಿಷಯಪರವಾಗಿ ಅರ್ಥವನ್ನ ಮಾಡಿರುತ್ತಾರೆ. ತಪ್ತ ಮುದ್ರಾಧಾರಣವನ್ನು ಅರ್ಥಾತ್ ಮಧ್ವಾಚಾರ್ಯರ ಮತವನ್ನು ರಾಮಾನುಜಾಚಾರ್ಯರೇ ಮೊದಲಾದವರು ಖಂಡಿಸಿರುವರು. ಭಟ್ಟೋಜಿದೀಕ್ಷಿತಾದಿಗಳು ಲಿಂಗಧಾರಣವನ್ನು ಖಂಡಿಸಿ ಸೋಮಯಾಗದ ವಿಷಯವನ್ನೇ ಪ್ರತಿಪಾದಿಸಿರುವರು. ಸ್ವಲ್ಪ ದಿನಗಳ ಕೆಳಗೆ ಆಗಿಹೋದ ದಯಾನಂದರಂತೂ. ಸರ್ವರ ಮತಗಳನ್ನು ಖಂಡಿಸಿ ಬೇರೆ ಅರ್ಥವನ್ನು ಮಾಡಿರುವರು. ಇದರಂತೆ ಎಲ್ಲ ಮಂತ್ರಗಳಿಗೂ ಸರ್ವಮತಗಳ ಸ್ಥಾಪನಾಚಾರ್ಯರು ಅನ್ಯಮತಗಳನ್ನು ಖಂಡಿಸಿ ತಮ್ಮ ಸಿದ್ಧಾಂತವನ್ನು ಮಾಡಿರುವದು ಸರ್ವರಿಗೂ ಸ್ವಭಾವ ಸಿದ್ಧವಾದ ವಿಷಯವೇ ಆಗಿರುವದು. ಅದರಂತೆಯೇ ವೀರಶೈವ ಮತದ ಆಚಾರ್ಯರೂ ಅನ್ಯಮತಗಳನ್ನು ಖಂಡಿಸಿ ಲಿಂಗಧಾರಣ ಪರ ಅರ್ಥವನ್ನು ಮಾಡಿರುತ್ತಾರೆ. ಇದನ್ನು ಅನ್ಯಮತದ ಆಚಾರ್ಯರು ಖಂಡನೆ ಮಾಡಿದಾಕ್ಷಣವೇ ಇವರ ಲಿಂಗಧಾರಣ ವಿಷಯಕ್ಕೂ ಇವರ ವೈದಿಕತ್ವಕ್ಕೂ ಏನೂ ಬಾಧೆಯು ಬರಲಾರದು. ಹಾಗ

ಲ್ಲದ ಪಕ್ಷದಲ್ಲಿ ಶ್ರೀಮತಷ್ಠ ಬ್ರಹ್ಮಣರ ಬ್ರಾಹ್ಮಣ್ಯಕ್ಕೂ ಚ್ಯುತಿಯು ಬಂದೀತು. ಯಾಕಂದರೆ ಶಂಕರಾಚಾರ್ಯರ ಮತವನ್ನು ಮಧ್ವಾಚಾರ್ಯರೂ, ಮಧ್ವಾಚಾರ್ಯರ ಮತವನ್ನು ರಾಮಾನುಜಾಚಾರ್ಯರೂ, ಖಂಡಿಸಿರುವ ... ಪ್ರಸಂಗದಲ್ಲಿ ಯಾವ ಆಚಾರ್ಯರ ಮತವು ನಿಜವೆಂದು ತಿಳಿಯಬೇಕು? ವೇದಮಂತ್ರ ಗೆ ಹೀಗೆಯೇ ಅರ್ಥವಾಗುತ್ತದೆಂದು ಹೇಳುವ ಧೈರ್ಯವು ಯಾ... ಇರುವದು? ವೇದಮಂತ್ರಗಳು ಸರ್ವರಿಗೂ ಅನುಕೂಲಿಸುವ ಪದ್ಧ... ಳುಳ್ಳವುಗಳಾಗಿರುತ್ತವೆ. ಆದ್ದರಿಂದಲೇ ವೇದವ್ಯಾಸರು ಉಪಬೃಂಹಣವಾಕ್ಯಗಳಿಂದಲೇ ವೇದದ ಮುಖ್ಯ ತಾತ್ಪರ್ಯವನ್ನು ಸ್ಪಷ್ಟೀಕರಿಸಬೇಕೆಂದು ಹೇಳಿರುತ್ತಾರೆ.

"ಪವಿತ್ರಂತೆ" ಈ ಋಗ್ವೇದದ ಮಂತ್ರವು ಸೋಮಯಾಗದೊಳಗೆ ದಶಾ ಪವಿತ್ರವನ್ನು ಧರಿಸುವ ವಿಷಯದಲ್ಲಿ ವಿನಿಯೋಗಿಸಿರುವದರಿಂದ, ಲಿಂಗಧಾರಣ ಪರ ಅರ್ಥವು ಹೇಗೆ ಯುಕ್ತವಾಗುತ್ತದೆಂದು ನಮ್ಮ ಪ್ರತಿವಾದಿಗಳ ಪ್ರಶ್ನದ ಅಭಿಪ್ರಾಯವು. ಯಾವ ಮಂತ್ರವು ಎಲ್ಲಿ ವಿನಿಯೋಗಿಸಲ್ಪಟ್ಟಿರುವದೊ ಆ ಮಂತ್ರಕ್ಕೆ ಅಲ್ಲಿಯೇ ವಿನಿಯೋಗಿಸುವದು ಯುಕ್ತವು, ಸೋಮಯಾಗ ಪ್ರಕರಣದಲ್ಲಿ ಪಠಿತವಾದ ಈ ಮಂತ್ರಕ್ಕೆ ಲಿಂಗಧಾರಣ ಪರತ್ವವು ಪ್ರಕರಣ ವಿರೋಧವಾಗುವದು, ಆದ್ದರಿಂದ ಈ ಮಂತ್ರಕ್ಕೆ ಲಿಂಗಧಾರಣ ಪರ ಅರ್ಥವೂ ವಿರೋಧವಾಗುವದು, ಎನ್ನುವ ಇವರ ಪ್ರಶ್ನಕ್ಕೆ ಉತ್ತರವೇನಂದರೆ, ಯಾವ ಮಂತ್ರವು ಎಲ್ಲಿ ವಿನಿಯೋಗಿಸಲ್ಪಟ್ಟಿರುವದೊ, ಆ ಮಂತ್ರವನ್ನು ಅಲ್ಲಿಯೇ ವಿನಿಯೋಗಿಸತಕ್ಕದ್ದು ಎನ್ನುವ ನಿರ್ಬಂಧವಿಲ್ಲ. ಯಾಕೆಂದರೆ ಚಯನಯಾಗದಲ್ಲಿ ವಿನಿಯೋಗಿಸಿದ ರುದ್ರ ಸೂಕ್ತವು ರುದ್ರಾಭಿಷೇಕದಲ್ಲಿಯೂ ಸಹ ವಿನಿಯೋಗಿಸಲ್ಪಟ್ಟಿರುವದರಿಂದ ವಿನಿಯೋಗ ನೇಮವು ಒಂದೇಕಡೆಗೆ ಇರಬೇಕೆಂಬುವದು ನೇಮವಿಲ್ಲ. ಮತ್ತು ಒಂದು ದೇವತಾವಿಷಯಕವಾದ ಮಂತ್ರವನ್ನು ಮತ್ತೊಂದು ದೇವತಾ ವಿಷಯದಲ್ಲಿ ಉಪಯೋಗಿಸಬಾರದು ಎಂಬುವದು ಕಲ್ಪಸೂತ್ರಾಭಿಪ್ರಾಯವು ಆದಕಾರಣ ಅಗ್ನಿ ಚಯನವು ರುದ್ರದೇವತಾಕವಾದದ್ದರಿಂದ ಅಲ್ಲಿ ವಿನಿಯೋಗಿಸಿದ ರುದ್ರಸೂಕ್ತವು ರುದ್ರದೇವತಾಕವಾದ ರುದ್ರಾಭಿಷೇಕದಲ್ಲಿ ವಿನಿಯೋಗಿಸುವದು ವಿರುದ್ಧವಲ್ಲ ಎಂಬುವದೇ ಕಲ್ಪಸೂತ್ರಾಭಿಪ್ರಾಯವಿದ್ದರೂ ಅಗ್ನಿದೇವತಾಕವಾದ ಅಗ್ನಿ ಮೂರ್ಧಾದಿ ಮಂತ್ರಗಳನ್ನು ವಾಸ್ತೋಷ್ಪತ್ಯಧಿದೇವತಾಕವಾದ ಗೃಹಯಜ್ಞದಲ್ಲಿ ಅಂದರೆ

ಭಿನ್ನದೇವತಾಕವಾದ ಮಂತ್ರವು ಭಿನ್ನದೇವತಾಕವಾದ ಕರ್ಮದಲ್ಲಿ ವಿನಿಯೋಗಿಸುವಂತೆ, ಸೋಮಯಾಗ ಪ್ರಕರಣ ಪಠಿತವಾದ ಪವಿತ್ರಂತೇ, ಎಂಬುವ ಋಗ್ವೇದದ ಮಂತ್ರವನ್ನು ಲಿಂಗಧಾರಣ ಪರತ್ವದಲ್ಲಿ ವಿನಿಯೋಗಿಸುವದು ಕಲ್ಪಸೂತ್ರದ ಅಭಿಪ್ರಾಯಕ್ಕೆ ವಿರುದ್ಧವಲ್ಲವು. ಬ್ರಹ್ಮಣಸ್ಪತೇ ಎಂಬುವಲ್ಲಿ ಬ್ರಹ್ಮ ಶಬ್ದಕ್ಕೆ ಲಿಂಗ ಪರತ್ವವನ್ನು ತಿರಸ್ಕರಿಸುವದು ದಶಾಪವಿತ್ರದ ವಿನಿಯೋಗಕ್ಕೆ ಯೋಗ್ಯತೆಯುಂಟಾಗಲಾರದು. 'ಯದ್ಯತ್ರವಿನಿಯುಕ್ತಂ, ಈ ನೇಮವಾದರೂ ಪ್ರಕೃತಾರ್ಥವನ್ನು ಬೋಧಿಸುವ ಮಂತ್ರದ ವಿನಿಯೋಗಸ್ಥಲದಲ್ಲಿಯೇ ಹೊರತು ಸರ್ವತ್ರವಿರುವದಿಲ್ಲ. ಮತ್ತು ಪವಿತ್ರ ಶಬ್ದಕ್ಕೆ ಸೋಮಯಾಗದಲ್ಲಿ ಪಠಿತವಾದ ದಶಾಪವಿತ್ರ ಎಂಬುವ ಅರ್ಥವು ನೇಮವಲ್ಲ, ಇನ್ನು ಪ್ರಕರಣವಿರೋಧವೂ ಸಂಭವಿಸುವದಿಲ್ಲ. ಯಾಕಂದರೆ-

> ಸೋಮಃ ಪವತೇ ಜನಿತಾಮತೀನಾಂ ಜನಿತಾದಿವೋ ಜನಿತಾಪೃಥಿವ್ಯಾ
> ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತವಿಷ್ಣೋಃ ॥

ಎನ್ನುವಲ್ಲಿ ಜಡೀಭೂತವಾದಲತೆಗೆ ( ಜಡವಾದ ಬಳ್ಳಿಗೆ ) ನಾರಾಯಣಾದಿ ಸಕಲ ಜನಕತ್ವವು ಅಸಂಭವವಾದದ್ದರಿಂದ ಉಮಯಾಸಹಿತೋದೇವಸ್ಸೋಮ ಇತ್ಯುಚ್ಯತೇ ಬುಧೈಃ ಎನ್ನುವ ಉಪಬೃಂಹಣ ವಚನಾನುಸಾರವಾಗಿ ಸೋಮಪದದ ಶ್ಲೇಷ ಮಹಿಮೆಯಿಂದ ಶಿವನಿಗೂ ಕೂಡ ಸೋಮ ಶಬ್ದವು ಸಂಭವವಿರುವದರಿಂದ ಈ ಅರ್ಥವನ್ನು ಗ್ರಹಿಸುವದರಿಂದ ಪ್ರಕರಣವಿರೋಧವೂ ಇಲ್ಲ. ಅದ್ದರಿಂದ ಸೋಮಯಾಗ ಪ್ರಕರಣದಲ್ಲಿ ಪಠಿತವಾದ ಪವಿತ್ರಂತೇ ಎಂಬುವ ಮಂತ್ರಕ್ಕೆ ಲಿಂಗಧಾರಣ ವಿಷಯದಲ್ಲಿ ವಿರೋಧವಾಗಲಾರದು. ಮತ್ತು 'ಅಯಂ ಸೋಮಃ ಕಪರ್ದಿನಃ' ಎನ್ನುವ ಶೃತಿಯಿಂದ ಸೋಮಯಾಗಕ್ಕೆ ಉತ್ಪತ್ತಿ ವಿಶಿಷ್ಟಶಿವ ಸಂಬಂಧಿತ್ವ ಬೋಧನದಿಂದಲೂ ( ರುದ್ರ ಆಹೂತಃ ) ಎಂಬುವ ಶೃತಿಯಿಂದ ಸೋಮಪದದ ಸ್ಥಾನದಲ್ಲಿ ರುದ್ರಪದವು ಪ್ರಕ್ಷೇಪಿಸಲ್ಪಟ್ಟಿರುವದರಿಂದ ಸೋಮಯಾಗಕ್ಕೆ ರುದ್ರತಾದಾತ್ಮ್ಯ ಬೋಧವಾಗುವದರಿಂದಲೂಃ—

> ಅಹಂಹಿಸರ್ವಹವಿಷಾಂ ಭೋಕ್ತಾಚೈವ ಫಲಪ್ರದಃ ।
> ಸರ್ವದೇವತನುರ್ಭೂತ್ವಾ ಸರ್ವಾತ್ಮಾ ಸರ್ವಸಂಸ್ಥಿತಃ ॥

ಎಂಬುವ ಕೂರ್ಮ ಪುರಾಣದ ವಚನದಲ್ಲಿ ಶಿವ ವಚನವಿರುವದರಿಂದ ಶಿವನಿಗೆ ಸರ್ವ ಹವಿರ್ಭೋಕ್ತೃತ್ವ, ಸರ್ವ ಕರ್ಮ ಫಲಪ್ರದಾಯಕತ್ವ ಪದನದಿಂದ ಸೋಮಯಾಗಕ್ಕೆ ರುದ್ರದೇವತಾಕತ್ವ ಉಪಪಾದನ

ದಿಂದ ಮತ್ತು ರುದ್ರ ದೇವತಾಕತ್ವವು ನಿಶ್ಚಿತವಾದದ್ದರಿಂದ ಆ ಪ್ರಕರಣ ದಲ್ಲಿ ಪಠಿತವಾದ ಪವಿತ್ರಂತೇ, ಎಂಬುವ ಮಂತ್ರಕ್ಕೆ ಲಿಂಗಧಾರಣಪರತ್ವಾರ್ಥವು ಎಂದಿಗೂ ವಿರೋಧವಾಗಲಾರದು.

ಓಂ ಊರ್ಧ್ವಾಯನಮಃ ಊರ್ಧ್ವಲಿಂಗಾಯನಮಃ, ಇತ್ಯಾದಿ
ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿ
ಮಂತ್ರಂ ಪವಿತ್ರಂ.

ಇತ್ಯಂತವಾಗಿ ನಮಸ್ಕಾರ ಪರಾಮರ್ಶಕ ಪೂರ್ವೋಕ್ತನಮಃ ಈ ಶಬ್ದದಿಂದ ಸೂರ್ಯ ಚಂದ್ರರಿಗೆ ನಮಸ್ಕಾರವು ಹೇಳಿರುವದರಿಂದ ಲಿಂಗ ಧಾರಣಪರ ಅರ್ಥವನ್ನು ಮಾಡಿರುವದು ವಿರೋಧವೆಂತಲೂ ಕೆಲವರ ಆಕ್ಷೇಪವು. ಪ್ರಕರಣ ವಿರೋಧವಾಗುವದಿಲ್ಲವೆಂದು ಮೇಲಿನ ಮಂತ್ರದ ಲ್ಲಿಯೇ ವಿಸ್ತಾರವಾಗಿ ವಿವೇಚಿಸಲ್ಪಟ್ಟಿರುತ್ತದೆ. ಮತ್ತು ಉಪಕ್ರಮೋಪ ಸಂಹಾರಗಳಲ್ಲಿ ಶಿವಪರತ್ವವೇ ಇರುವದರಿಂದ ಮಧ್ಯದಲ್ಲಿ ಹೇಳಿರುವ ಚಂದ್ರ ಸೂರ್ಯರಿಗೆ ನಮಸ್ಕಾರವನ್ನು ಹೇಳುವದು ಸಂದರ್ಭವಿರೋಧವು ಸಂಭವಿಸುವದು. ಆದ್ದರಿಂದ ಸೋಮ ಸೂರ್ಯ ಶಬ್ದಗಳಿಗೆ ಕೆಳಗೆ ಬರೆ ದಂತೆ ಅರ್ಥವನ್ನು ಮಾಡಬೇಕು.

ಉಮಯಾಸಹಿತೋ ದೇವಸ್ಸೋಮ ಇತ್ಯುಚ್ಯತೆ ಬುಧೈಃ
ಸಯೇನಕಾರಣವಿನಾನ್ಯೋ ವಿಷ್ಣೋರಪಿಚ ವೈಶ್ರುತಿಃ ॥

ಈ ಉಪಬೃಂಹಣ ಪ್ರಮಾಣದಿಂದ ಸೋಮಶಬ್ದಕ್ಕೆ ಶಿವಪರತ್ವವೂ ಸೂರ್ಯಶಬ್ದಕ್ಕೆ ಸೂರ್ಯ ಮಂಡಲಾಂತವೃತ್ತಿತ್ವ ರೂಪಾರ್ಥವನ್ನು ಸೋಮ ಶಬ್ದವಾಚ್ಯನಾದ ಶಿವನಿಗೆ ಕಲ್ಪಿಸಿ ವಿಶೇಷಣ ವಿಶೇಷ್ಯಗತಿಯಿಂದ ಶಿವಪರತ್ವವನ್ನೇ ಪ್ರತಿಪಾದಿಸುವದು ಅವಶ್ಯಕವಿರುವದರಿಂದ ಈ ಮಂತ್ರಕ್ಕೆ ಲಿಂಗಧಾರಣಾರ್ಥವನ್ನು ಹೇಳುವದು ಸಂದರ್ಭವಿರೋಧವು ಇರುವದಿಲ್ಲ.

ಮಂತ್ರ—ಅಯಂಮೆಹಸ್ತೊಭಗವಾನ್ ಅಯಂಮೆ ಭಗವತ್ತರಃ ।
ಅಯಂಮೆ ವಿಶ್ವಭೇಷಜೊಯನ್ಂ ಶಿವಾಭಿಮರ್ಶನಃ ॥
ಅಯಂಮಾತಾ ಅಯಂಪಿತಾ ಅಯಂಜೀವಾತುರಾಗಮತ್ ।
ಇದಂತವ ಪ್ರಸರ್ಪಣಂ ಸುಬಂಧವೇಹಿಸಿರೀಹೇತಿ ।

ಋಗ್ವೇದ ೮-೧ ೨೫

ಈ ಮಂತ್ರಕ್ಕೆ ಸವಿತೃ ದೇವತಾಕತ್ವದಿಂದ ಶಿವಲಿಂಗ ದೇವತಾಕ ಮಂತ್ರವಲ್ಲೆಂದು ಸಂದರ್ಭ ವಿರೋಧವನ್ನು ತೋರಿಸುವದನ್ನು ನೋಡಿದರೆ

ಪೂರ್ವಾಪರ ವಿಚಾರಶೂನ್ಯರೆಂದು ಕಂಡು ಬರುವದು. ಹೇಗೆಂದರೆ ಈ ಮಂತ್ರದಲ್ಲಿ ಉಕ್ತವಾಗಿರುವ ಭಗವಚ್ಛಬ್ದದಿಂದ ಪರಶಿವನೆಂದಲೇ ಅರ್ಥವಾಗುತ್ತದೆ.

ಅಥೈನಂ ಭಗವಂತಂ ರುದ್ರಂ ಕುಮಾರಃ ಪಪ್ರಚ್ಛ ಅಥಕಾಲಾಗ್ನಿರುದ್ರಂ
ಭಗವಂತಂ ಸನತ್ಕುಮಾರಃ ಪಪ್ರಚ್ಛೇತ್ಯಾದಿ

ಲಿಂಗಧಾರಣ ಚಂದ್ರಿಕಾ ಪುಟ ೩೩

ಶೃತಿಗಳಲ್ಲಿ ಇತಿ ಸಸ್ತೂಯಮಾನೋಽಸ್ತು ಭಗವಾನ್ ವೃಷಭಧ್ವಜಃ ಎಂಬುವ ಹರಿವಂಶಾದಿಗಳಲ್ಲಿ ಭಗವಚ್ಛಬ್ದವನ್ನು ಪರಶಿವಪರವಾಗಿಯೇ ಪ್ರಯೋಗಿಸಿರುವದು.

ಆದಿತ್ಯೋ ಭಗವಾನ್ ಸೂರ್ಯೋ ನೀಲಗ್ರೀವ ಸ್ತ್ರಿಲೋಚನಃ ।
ಅಧೀಯಂತೇ ಸಹಸ್ರಾಂಶು ಸಾಮಗಾಧ್ವರ್ಯುರ್ಹೋತೃಭಿಃ ॥

ಎನ್ನುವ ಆದಿತ್ಯ ಪುರಾಣದ ವಚನದಿಂದ ಭಗವಚ್ಛಬ್ದ ಪ್ರಯೋಗವು ಸವಿತೃದೇವತಾ ವಿಷಯದಲ್ಲಿ ಉಪಯೋಗಿಸಿರುವದರಿಂದ ಪರಶಿವಪರವಾಗುವದಿಲ್ಲೆಂದು ಹೇಳುವದಾದರೂ ಯೋಗ್ಯವಿರುವದಿಲ್ಲ. ಯಾಕಂದರೆ-

ಯ ಏಷೋ ಅಂತರಾದಿತ್ಯೆ ಹಿರಣ್ಮಯಃ ಪುರುಷೋ ದೃಶ್ಯತೆ ಇತ್ಯಾರಭ್ಯ
ಅಂಬಿಕಾಪತಯೆ, ಉಮಾಪತಯೆ, ಪಶುಪತಯೆ, ನಮೋನಮಃ

[ಲಿಂಗಧಾರಣ ಚಂದ್ರಿಕಾ]

ಇತ್ಯಂತವಾಗಿ ಹೇಳಿರುವ ತೈತ್ತರೀಯ ವಚನದಿಂದಲೂ ಮತ್ತು ಸೌರಮಂಡಲ ಮಧ್ಯಸ್ಥಂ, ಸಾಂಬಂ ಸಂಸಾರಭೇಷಜಂ ಹೀಗೆಂದೂ ಮಂಡಲಾಂತರ್ಗತ ಹಿರಣ್ಮಯಂ, ಭ್ರಾಜಮಾನವಪುಷಂ ಶುಚಿಸ್ಮಿತಂ, ಇತ್ಯಾದಿ ವಚನಗಳಿಂದ ಪರಶಿವನಿಗೆ ಆದಿತ್ಯಮಂಡಲ ಮಧ್ಯವರ್ತಿತ್ವವನ್ನು ಪ್ರತಿಪಾದಿಸುವದರಿಂದ ಆದಿತ್ಯನಿಗೂ, ಶಿವನಿಗೂ ಅವಿಭಾಜ್ಯಮಾನ ಸಂಬಂಧವನ್ನು ತೋರಿಸುವದಕ್ಕಾಗಿ ಆದಿತ್ಯಗತ ಸ್ತ್ರೀಲೋಚನಃ ಎಂದು ಹೇಳುವದನ್ನು ಬಿಟ್ಟು ಆದಿತ್ಯಸ್ತ್ರಿಲೋಚನಃ ಎಂಬುವ ಉಕ್ತಿಯಂತೆ ಅಯಂ ಮೇ ಹಸ್ತೋ ಭಗವಾನ್ ಎಂಬುವ ಮಂತ್ರದಲ್ಲಿಯಾದರೂ ಹಸ್ತ ಶಿವಲಿಂಗಗಳಿಗೆ ಅವಿಭಾಜ್ಯಮಾನ ಸಂಬಂಧವನ್ನು ತಿಳಿಸುವದಕ್ಕಾಗಿ ಹಸ್ತಗತವೆಂದು ಹೇಳದೆ ಹಸ್ತೋ ಭಗವಾನ್ ಎಂದು ಹೇಳಿರುವದು ಯುಕ್ತವು. ಅಂದ ಮೇಲೆ ಕೇವಲ ಸವಿತೃದೇವತಾಕತ್ವವನ್ನು ಹೇಳುವದೂ ಹಸ್ತಗತವೆಂದು ಹೇಳುವದೂ ಸಂದರ್ಭವಿರೋಧವಾಗುವದು. ಆದಕಾರಣ,

ಸಂಸ್ಕೃತ್ಯ ಗುರುಣಾದತ್ತಂ, ಷಡಧ್ವನ್ಯಾಸ ಪೂರ್ವಕಂ।
ವಾಮಹಸ್ತಗತಂ ಲಿಂಗಂ, ಸಾವಧಾನೇನ ಪೂಜಯೇತ್,।
ಧಾರಯೇನ್ಯಸ್ತು ಹಸ್ತಾದೌ, ಲಿಂಗಾಕಾರಂ ಶಿವಂಸದಾ।
ತಸ್ಯಹಸ್ತಸ್ಥಿತಂ ವಿದ್ಧಿ ಮತ್ಪದಂ ಸಂಪದಾಂ ಪದಂ ॥

ಎಂಬ ವಾತುಲಾಗಮ ವೀರಾಗಮಾದಿ ಉಪಬೃಂಹ್ಮಣ ವಚನಾನು ಸಾರವಾಗಿ ಹಸ್ತಾದಿಗಳಲ್ಲಿ ಅವಿಭಾಜ್ಯ ಸಂಬಂಧದಿಂದ ಧಾರಣವು ಸಂಭವಿಸುವದು. ಆವಕಾರಣ ಶಿವಪರತ್ವವು ವಿರೋಧವಾಗಲಾರದು.

ಸರ್ವಾನನ ಶಿರೋಗ್ರೀವಃ। ಸರ್ವಭೂತಗುಹಾಶಯಃ।
ಸರ್ವವ್ಯಾಪೀಚಭಗವಾನ್। ತಸ್ಮಾತ್ಸರ್ವಗತಶ್ಶಿವಃ ॥

ಈ ಶ್ವೇತಾಶ್ವತರ ಶೃತಿಯು ಕೇವಲ ಪರಮಾತ್ಮಕ ವರ್ಣನೆಯು ಇರುವದರಿಂದ ಲಿಂಗಧಾರಣ ವಿಷಯಕವು ಅಲ್ಲೆನ್ನುವದಂತೂ ಕೇವಲ ಅಜ್ಞಾನವೇ ಸರಿ. ಹೇಗಂದರೆ—

ತಸ್ಯಾಭಿಧ್ಯಾನಾತ್ ॥ ಯೋಜನಾತ್ ॥ ತತ್ವಭಾವಾತ್ ॥ ಎನ್ನುವ ಶ್ವೇತಾಶ್ವತರೋಪನಿಷತ್ತಿನ ಪೂರ್ವ ಮಂತ್ರದಲ್ಲಿ ತಸ್ಯಾಭಿಧ್ಯಾನಾತ್ ಅಂದರೆ ಜ್ಯೋತಿರ್ಲಿಂಗರೂಪವಾಗಿ ಅನುಸಂಧಾನ ಮಾಡುವದರಿಂದ ಯೋಜನಾತ್ ಅಂದರೆ ಇಷ್ಟಲಿಂಗರೂಪವಾಗಿ ಧರಿಸುವದರಿಂದ ಎಂಬುವದನ್ನು ತೋರಿಸುವಲ್ಲಿ ಎಲ್ಲಿ ಧರಿಸತಕ್ಕದ್ದೆಂಬ ಸಂದೇಹ ಉಂಟಾದಲ್ಲಿ ಧಾರಣಾಧಿಕರಣವನ್ನು ತೋರಿಸುವದಕ್ಕಾಗಿ, "ಸರ್ವಾನನ ಶಿರೋಗ್ರೀವಃ" ಎಂಬುವ ಮಂತ್ರವು ಪ್ರವರ್ತಕವಾಯಿತು. "ಗುಹಾಶಯಃ" ಎನ್ನುವಲ್ಲಿ ಅಂತರ್ಲಿಂಗಧಾರಣ ಸ್ಥಾನವನ್ನು ಹೇಳಿ ಬಹಿರ್ಲಿಂಗ ಧಾರಣ ಸ್ಥಾನವನ್ನು ತೋರಿಸದೇ ಇದ್ದರೆ ಸಂದರ್ಭವಿರೋಧವಾಗುವದು. ಪಕ್ಷಾಂತರ ತೋರಿಸದೇ ಇದ್ದರೆ, ಸರ್ವಾನನ ಶಿರೋಗ್ರೀವಃ ಎಂಬುವ ಪದವು ನಿರರ್ಥಕವಾಗುವದು. ಅದು ಹೇಗೆಂದರೆ ಸರ್ವಾನನ ಶಿರೋಗ್ರೀವಃ ಎಂಬುವ ಈ ವಾಕ್ಯದಿಂದ ಶಿವನಿಗೂ ಆತನ ಶಿರೋಗ್ರೀವಗಳಿಗೂ ಅಭೇದವನ್ನು ಹೇಳುವಿರೋ? ಅಥವಾ ತದ್ವ್ಯಕ್ತಿತ್ವವನ್ನು ಹೇಳುವಿರೋ? ಮೊದಲನೇದು ಆಗುವದಿಲ್ಲ. ಯಾಕಂದರೆ, ಸರ್ವಂ ವಾಕ್ಯಂ ಸಾಧಾರಣಂ, ಎಂಬುವ ನ್ಯಾಯದಿಂದ ಸರ್ವಾನನ ಶಿರೋಗ್ರೀವ ಮಾತ್ರಕ್ಕೇನೆ ಅಭೇದವನ್ನು ಹೇಳುವದಾದರೆ, ಸರ್ವೋಹ್ಯೇಷರುದ್ರಃ ಎಂಬೀ ಶೃತಿವಿಹಿತವಾದ ಸರ್ವಾತ್ಮತ್ವವು ಭಂಗವಾಗುವದು. ಸರ್ವಾನನ ಶಿರೋಗ್ರೀವ ವ್ಯಕ್ತಿತ್ವವನ್ನು ಹೇಳುವದಾ

ದರೆ, ತಸ್ಮಾತ್ಸರ್ವಗತ ಶ್ಶಿವಃ ಎಂಬೀ ವಾಕ್ಯದಲ್ಲಿ ಹೇಳಿದ ಸರ್ವಗತತ್ವರೂಪವು ಬ್ರಹ್ಮಲಿಂಗಕ್ಕೆ ಸಂಕೋಚವಾಗ ಬೇಕಾಗುವದು. ನಮ್ಮ ಮತದಲ್ಲಿ ಸರ್ವವಾಕ್ಯಗಳು ಸಾರ್ಥಕವಾಗುವವು. ಆದ್ದರಿಂದ ಸರ್ವಾನನ ಶಿರೋಗ್ರೀವಾಧಿಕರಣಕ ಲಿಂಗಧಾರಣವು ಸಂದರ್ಭ ವಿರೋಧವಾಗಲಾರದು.

**ಮಂತ್ರ**:—ತ್ವಂದೇವೇಷು ಬ್ರಾಹ್ಮಣಃ ಎಂಬುವ ಮಂತ್ರಕ್ಕೆ ಪತಿಗೆ ಪ್ರಾಣವನ್ನೇ ಅರ್ಪಣ ಮಾಡುವ ವೀರಪತ್ನಿಯಂತೆ ಪತಿಯಾದ ಶಿವಲಿಂಗಕ್ಕೆ ಪ್ರಾಣವನ್ನು ಒಪ್ಪಿಸಿ ಶಿವಲಿಂಗರೂಪಿಯಾದ ಪರಬ್ರಹ್ಮದ ಸೇವೆಯನ್ನು ಮಾಡುತ್ತ ಮತ್ತೊಂದು ಬೇರೆ ದೇವರನ್ನು ಮನಸ್ಸಿನಲ್ಲಿಯೂ ಕೂಡ ನೆನಿಸದೆ ಇರತಕ್ಕ ವೀರಶೈವರೇ ವೈದಿಕರು. ಆದ ಕಾರಣ ಲಿಂಗವಿಲ್ಲದವರು ಭವಿಗಳೇ ಸರಿ.

ಮುಖೇಮಂತ್ರಂ ಹೃದಿಧ್ಯಾನಂ ಮಸ್ತಕೇಲಿಂಗಧಾರಣಂ ।
ಶಿಖಾರುದ್ರಾಕ್ಷ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ ॥

ಎಂದು ಹೇಳುವ ಗೌತುಮ ಸ್ಮೃತಿಯಲ್ಲಿ ಯಜ್ಞೋಪವೀತ ಲಿಂಗಧಾರಣ ಈ ಎರಡನ್ನು ಧರಿಸಿದವನು ಬ್ರಾಹ್ಮಣನೆಂದು ಹೇಳದೆ, ಕೇವಲ ಮಂತ್ರಧ್ಯಾನ ರುದ್ರಾಕ್ಷ ಭಸ್ಮ ಲಿಂಗಗಳಿಂದ ಕೂಡಿದವನು ಬ್ರಾಹ್ಮಣನೆಂದು ಹೇಳುವದರಿಂದ ಆರಾಧ್ಯರ ಪರವೆಂದು ಹೇಳುವದು ಎಂಥ ವಿಪರೀತ ಬುದ್ಧಿಯುಳ್ಳವರಿಗೂ ಅರ್ಥವಾಗದು.

ವಿವಿಕ್ತದೇಶೇಚ ಸುಖಾಸನಸ್ಥಃ ಶುಚಿಸ್ಸಮಗ್ರೀವ ಶಿರಶ್ಶರೀರಃ ಅತ್ಯಾಶ್ರಮಸ್ಥಃ (ಕೈವಲ್ಯೋಪನಿಷತ್) ಎಂಬುವ ಮಂತ್ರದ ಉಪಬೃಂಹಣ ವಾಕ್ಯದಲ್ಲಿ.

ಭವಿಸಂಸರ್ಗರಹಿತೇ ವಿವಿಕ್ತೇಚ ಸುಖಾವಹೇ
ಸುಖಾಸನಸ್ಥಿತಃಸಿದ್ಧಃ ಸಮಗ್ರೀವ ಶಿರೋಂಗವಾನ್
ವಿರಜಾನಲಜಂ ಭಸ್ಮ ಗೃಹೀತ್ವಾತ್ಯಂತ ಪಾವನಂ
ಅಗ್ನಿರಿತ್ಯಾದಿಭಿರ್ಮಂತ್ರೈಸ್ಸಪ್ತಭಿಶ್ಚಾಭಿಮಂತ್ರಿತಂ
ಶರೀರೋದ್ಧೂಲನಂ ಕೃತ್ವಾ, ತ್ರಿಪುಂಡ್ರಸ್ಯತು ಧಾರಣಂ
ರುದ್ರಾಕ್ಷ ಧಾರಣಶ್ಚೈವ ಷಡಕ್ಷರ ಜಪಸ್ತಥಾ
ಧೃತೇಷ್ಟಲಿಂಗಪೂಜಾಚ ಸಂಸ್ಕಾರಾಃ ಪಂಚಕೀರ್ತಿತಾಃ
ಅತ್ಯಾಶ್ರಮ ಇತಿಖ್ಯಾತೇ ಮುನಿಭಿಸ್ತತ್ವದರ್ಶಿಭಿಃ

[ಸಂಸ್ಕೃತ ಬಸವಪುರಾಣ]

ಎಂಬುವ ಪ್ರಮಾಣದಿಂದ ಬ್ರಹ್ಮವಿದ್ಯಾಧಿಕಾರಿಯನ್ನು ಹೇಳುವ ವಿಷಯದಲ್ಲಿ ಭಸ್ಮಧಾರಣ, ರುದ್ರಾಕ್ಷಧಾರಣ, ಪಂಚಾಕ್ಷರಮಂತ್ರ, ಜಪ ಭಸ್ಮೋದ್ಧೂಲನ ಇಷ್ಟಲಿಂಗಪೂಜಾ, ಈ ಐದು ಸಂಸ್ಕಾರವುಳ್ಳ ಅತ್ಯಾಶ್ರಮಿಯೇ ಅಧಿಕಾರಿ ಎಂದು ಬ್ರಹ್ಮನು ಅಶ್ವಲಾಯನ ಋಷಿಗೆ ಹೇಳಿರುವನು. ಅದರಲ್ಲಿ ಯಜ್ಞೋಪವೀತವು ಬಾರದೇ ಇರುವದರಿಂದ ಅದು ಲಿಂಗಜನಿವಾರವಿರುವ ಆರಾಧ್ಯಪರವಾಗದೆ ಕೇವಲ ಲಿಂಗವನ್ನು ಧರಿಸಿದ ವೀರಶೈವರ ಪರವಾಗಿಯೇ ಇರುತ್ತದೆ. ಮತ್ತು ವೇದವ್ಯಾಸರು ಲಿಂಗಪುರಾಣದ ಉತ್ತರ ಭಾಗದಲ್ಲಿ ಲಿಂಗಧಾರಣ ವಿಷಯಕವಾಗಿ ವೇದಮಂತ್ರಗಳಿಗೆ ಹೇಗೆ ಅರ್ಥವನ್ನು ಮಾಡಿರುತ್ತಾರೆ, ಏನೆಂದರೆಃ—

ವೇದೇಷು ಶಾಸ್ತ್ರಸಂಘೇಷು । ಪುರಾಣೇಷ್ವಾಗಮೇಷುಚ ॥
ಬ್ರಾಹ್ಮಣಸ್ಯ ಸಮಾಖ್ಯಾತಂ । ಲಿಂಗಧಾರಣಮುತ್ತಮಂ ॥
ಬ್ರಹ್ಮೇತಿಲಿಂಗಮಾಖ್ಯಾತಂ । ಬ್ರಾಹ್ಮಣಃ ಪತಿರೀಶ್ವರಃ ॥
ಪವಿತ್ರಂತದ್ಧಿ ವಿಖ್ಯಾತಂ । ತತ್ಸಂಪರ್ಕಾತ್ತನುಶ್ಶುಚಿ: ॥
ಋಗಿತ್ಯಾಹ ಪವಿತ್ರಂತೆ ವಿತತಂ ಬ್ರಹ್ಮಣಸ್ಪತೆ ।
ತಸ್ಮಾತ್ಪವಿತ್ರಂ ತಲ್ಲಿಂಗಂಧಾರ್ಯಂ ಶೈವಮನಾಮಯಂ ॥
ಅತಪ್ತತನುರಜ್ಞೋವೈ ಅಮುಸ್ಸಂಸ್ಕಾರ ವರ್ಜಿತಃ ।
ದೀಕ್ಷಯಾ ರಹಿತಃ ಸಾಕ್ಷಾತ್ ನಾಪ್ನುಯಾತ್
ಯಃ ಕರೋತಿ ತಪಃ ಪೂರ್ವಂ, ಸತಪ್ತ ತನುರುಚ್ಯತೆ,
ಪರಿಪಕ್ವೋ ವಿಮೋಕ್ಷಾಯ ಸೊಶ್ನುತೇ ಲಿಂಗಧಾರಣಂ ॥

ಅಂದರೆ ವೇದಶಾಸ್ತ್ರ ಪುರಾಣಾದಿಗಳಲ್ಲಿ ಬ್ರಾಹ್ಮಣನಿಗೆ ಲಿಂಗಧಾರಣವು ಶ್ರೇಷ್ಠವೆಂದು ಹೇಳಿದೆ. ಯಾಕಂದರೆ ಬ್ರಹ್ಮವೆಂದರೆ ಲಿಂಗಕ್ಕೆ ಅರ್ಥವಾಗುವದು. ಬ್ರಹ್ಮಣಸ್ಪತಿ ಎಂದರೆ ಪರಶಿವಲಿಂಗವು. ಈ ಲಿಂಗವು ಪವಿತ್ರವಾದದ್ದು ಇದು ನಿಶ್ಚಯವು. ಈ ಶಿವಲಿಂಗದ ಸಂಬಂಧದಿಂದ ಸ್ಥೂಲ ಸೂಕ್ಷ್ಮ ಕಾರಣರೂಪವಾದ ತನುವು ಶುದ್ಧವಾಗುವದು ಎಂದು ಋಗ್ವೇದವು ಹೇಳುವುದು. ಆದ ಕಾರಣ ಪವಿತ್ರವಾದ ಆ ಶಿವಲಿಂಗವನ್ನು ಯಾವಾಗಲೂ ಧರಿಸತಕ್ಕದ್ದು. ಆದ್ದರಿಂದ ಅವನ ಭವರೋಗವೂ ಭವಿತ್ವವೂ ನಾಶವಾಗಿ ಹೊರಟು ಹೋಗುವವು. ಜನ್ಮಾಂತರದಲ್ಲಿಯೇ ಆಗಲಿ, ಈ ಜನ್ಮದಲ್ಲಿಯೋ ಆಗಲಿ, ಯಾವಾತನು ಚಿತ್ತಶುದ್ಧಿಯಾಗುವ ತಪಸ್ಸನ್ನಾಚರಿಸಿರುವದಿಲ್ಲವೋ ಆತನು ಈ ಪರಶಿವಲಿಂಗವನ್ನು ಧರಿಸಲಿಕ್ಕೆ ಅಧಿಕಾರಿಯಲ್ಲವು. ಯಾವನು ಈ ಜನ್ಮದಲ್ಲಿಯೇ ಆಗಲಿ, ಪೂರ್ವಜನ್ಮದಲ್ಲಿಯೇ ಆಗಲಿ, ತಪಸ್ಸನ್ನು ಆಚರಿ

ಸುವನೋ ಅವನಿಗೆ ತಪ್ತತನುವೆಂದೂ ಪರಿಪಕ್ವ ಹೃದಯದವನೆಂದೂ, ಹೇಳುತ್ತಾರೆ. ಅಂಥವನು ಮೋಕ್ಷವನಪಡೆಯುವುದಾಗಿ ಶಿವಲಿಂಗವನ್ನು ಧರಿಸ ತಕ್ಕದ್ದು ಎಂದು, 'ಪವಿತ್ರಂತೆ ವಿತತಂ' ಎಂಬುವ ಋಗ್ವೇದದ ಮಂತ್ರಕ್ಕೆ ವ್ಯಾಸ ಮಹರ್ಷಿಗಳು ಲಿಂಗಧಾರಣ ವಿಷಯಕ್ಕೆ ಪ್ರತಿಪಾದಿಸಿರುವರು. ಇದರಂತೆ ಋಗ್ವೇದದ ತೈತ್ತಿರೀಯ ಶ್ರುತಿಗಾದರೂ ಇದೇ ಲಿಂಗಪುರಾಣದ ೧೦೩ನೇ ಶ್ಲೋಕದಲ್ಲಿ—

ಯಜುರಪ್ಯಾಹಸರ್ವಂವ್ಯೈ ಲಿಂಗಂ ಸ್ಥಾಪಯತೀತಿಚ
ತಸ್ಮಾದ್ಧಾರ್ಯಂ ಮಹಾಲಿಂಗಂ ಪಾಣಿಮಂತ್ರೇತಿ
ಮಂತ್ರತಃ, ಪಾಣಾಲಿಂಗಂ ವಿನಿಕ್ಷಿಪ್ಯ ದೀಕ್ಷಾಕಾಲೇ
ಗುರುಶ್ಶಿವೇ, ಏನಸ್ಸ್ವತಿತನ್ಮಂತ್ರ ಪಾಣಿಮಂತ್ರಂ ವದಂತಿಹಿ

ಅಂದರೆ ಸಮಸ್ತಗಳಾದ ಇಷ್ಟಾದಿ ದಶಲಿಂಗಗಳನ್ನು ಧರಿಸತಕ್ಕದ್ದು. ದೀಕ್ಷಾಕಾಲದಲ್ಲಿ ಗುರುಮೂರ್ತಿಯು ಲಿಂಗವನ್ನು ತನ್ನ ಹಸ್ತದಲ್ಲಿಟ್ಟು ಕೊಂಡು ಷಡಧ್ವ ಶೋಧನಾದಿ ಸಂಸ್ಕಾರಗಳನ್ನು ಮಾಡಿ, ಶಿಷ್ಯನ ಹಸ್ತ ದಲ್ಲಿ ಆ ಶಿವಲಿಂಗವನ್ನು ಧರಿಸಿ, ಯಾವ ಮಂತ್ರವನ್ನು ಪಠಿಸುವನೋ ಆ ಮಂತ್ರಕ್ಕೆ ಪಾಣಿಮಂತ್ರವೆಂದು ಅನ್ನುತ್ತಾರೆ. ಉಮಾಸಹಿತವಾದ ಆ ಶಿವಲಿಂಗವನ್ನು ಶಿಷ್ಯನಿಗೆ ಭಾವ, ಮನ, ದೃಷ್ಟಿದ್ವಾರದಿಂದ ತೆಗೆದು ಕೊಂಡು, ಗುರುಮೂರ್ತಿಯು ಪಾಣಿಮಂತ್ರದಿಂದ ಧರಿಸುವ ಕಾರಣ, "ಏತತ್ಸೋಮಸ್ಯ ಸೂರ್ಯಸ್ಯ ಪಾಣಿಮಂತ್ರಂ ಪವಿತ್ರಂ" ಎನ್ನುವ ಶ್ರುತಿಗೆ ಲಿಂಗಧಾರಣ ವಿಷಯಕವಾಗಿ ವ್ಯಾಸ ಮಹರ್ಷಿಗಳೇ ಸಿದ್ಧಾಂತ ಪಡಿಸಿರು ತ್ತಾರೆ. ಹೀಗೆಯೇ! ಇನ್ನೂ ಅನೇಕ ವೇದಮಂತ್ರಗಳಿಗೆ ವ್ಯಾಸರೇ ಮೊದ ಲಾದ ಘನ ವಿದ್ವಾಂಸರು ಲಿಂಗಧಾರಣಪರ ಅರ್ಥವನ್ನು ಮಾಡಿ, ಲಿಂಗ ಧಾರಕರು ವೈದಿಕರೆಂದು ಸಿದ್ಧ ಮಾಡಿರುವಾಗ, ಏನೊಂದೂ ತಿಳಿಯದ ಕೆಲವು ಅಸೂಯಾಪರರಾದ ಕೂಪಮಂಡೂಕಗಳು ಮನಬಲ್ಲಂತೆ ನಿಂದಿ ಸುವದನ್ನು ನೋಡಿದರೆ, ಇವರನ್ನು ಯಾವ ಮಾಲಿಕೆಯಲ್ಲಿ ಸೇರಿಸಬೇಕೋ ತಿಳಿಯದಾಗಿದೆ.

---

# ಕೊಡಗಿನ ವೀರರಾಜೇಂದ್ರನು.

ಲೇಖಕಃ— ರಾ॥ ಸಾ॥ ಫ. ಗು. ಹಳಕಟ್ಟಿ ಬಿ, ಏ, ಎಲ್ ಎಲ್, ಬಿ, ವಿಜಾಪುರ.

(ಈ ಲೇಖವು ಕೆಳಗೆ ಕಾಣಿಸಿದ ಗಂಥಗಳ ಆಧಾರದಿಂದ ಬರೆಯಲ್ಪಟ್ಟದೆ (೧) ಹಿಸ್ಟರಿ ಆಫ ಮೈಸೂರು (೨) ಕೂರ್ಗ ಇನಸ್ಕ್ರಿಪ್ಶನ್ಸ-ಲುವಿ ರಾಯಸ್ (೩) ಟೀಪು ಸುಲ್ತಾನ- ಕರ್ನಲ್ ನಾಯಲ್ಸ (೪) ಕೊಡಗು ವಿವರಣೆ (೫) ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ.)

ಕರ್ನಾಟಕ ಭೂಮಾತೆಯ ಉದರದಲ್ಲಿ ಅನೇಕ ಮಾನವ ರತ್ನಗಳು ಉದಯವಾಗಿ ಪ್ರಕಾಶವನ್ನುಂಟುಮಾಡಿ ಅವು ಅಡಗಿ ಹೋದರೂ ಅವುಗಳ ಜ್ಯೋತಿಯು ಜನರ ಕಣ್ಣನ್ನು ಕುಕ್ಕಿಸುತ್ತಲಿದೆ. ಬದಾಮಿ ಕಲ್ಯಾಣ ಪಟ್ಟಣಗಳಲ್ಲಿ ಚಾಲುಕ್ಯ ಅರಸರೂ, ಮಲಖೇಡದಲ್ಲಿ ರಾಷ್ಟ್ರ ಕೂಟ ರಾಜರೂ, ದ್ವಾರ ಸಮುದ್ರದಲ್ಲಿ ಒಲ್ಲಾಳರೂ, ದೇವಗಿರಿಯಲ್ಲಿ ಯಾದವರೂ ಅನೇಕ ಶತಮಾನಗಳ ವರೆಗೆ ಅತ್ಯಂತ ವೈಭವದಿಂಧ ರಾಜ್ಯವಾಳಿದರು. ಇವರಲ್ಲಿ ಅನೇಕ ಅರಸರು ವೀರಮಣಿಗಳಾಗಿದ್ದರು. ಚಾಲುಕ್ಯರು ಬಹಳ ಕಾಲದಿಂದ ಅತಿ ವಿಸ್ತಾರವಾದ ರಾಜ್ಯವನ್ನು ಆಳಿದ್ದಲ್ಲದೆ ಉತ್ತರ ಹಿಂದುಸ್ತಾನದಲ್ಲಿ ಸಹ ತಮ್ಮ ವಿಜಯ ಧ್ವಜವನ್ನು ಮೆರಿಸಿ "ಪರಮೇಶ್ವರ" ಎಂಬ ಬಿರುದನ್ನು ತಾಳಿದರು. ಈ ಪುರಾತನ ರಾಜ ವಂಶಗಳ ಪ್ರಜ್ವಲಿತವಾದ ಕಿರೀಟ ಪ್ರಕಾಶವು ಮಂದವಾಗುವಷ್ಟರಲ್ಲಿಯೇ ವಿಜಯನಗರದ ಸಾಮ್ರಾಜ್ಯ ರೂಪವಾದ ಮತ್ತೊಂದು ದೇದೀಪ್ಯ ಮಾನವಾದ ರತ್ನವು ಪ್ರಕಾಶ ಮಾನವಾಗಿ ಬೆಳಗಹತ್ತಿ ಮುಸಲ್ಮಾನರ ಕಣ್ಣನ್ನು ಕುಕ್ಕಿಸಹತ್ತಿತು. ಮಹಮ್ಮದೀಯರಿಗೆ ಈ ಪ್ರಕಾಶವು ಸಹನವಾಗದ್ದರಿಂದ ಹೇಗಾದರೂ ಮಾಡಿ ಇದನ್ನು ಅಡಗಿಸಬೇಕೆಂದು ಬಹು ದಿವಸಗಳಿಂದ ಪ್ರಯತ್ನಿಸಿ ಕಡೆಗೆ ನಾಲ್ವರು ಯವನ ಬಾದಶಹರು ಕೂಡಿ ಇದನ್ನು ನುಂಗಿ ಬಿಟ್ಟರು. ಆದರೂ ಕರ್ನಾಟಕದ ಪ್ರಕಾಶವು ಸಂಪೂರ್ಣ ನಾಶವಾಗಲಿಲ್ಲ. ಅದರ ಜ್ಯೋತಿಗಳು ಅಲ್ಲಲ್ಲಿ ಉದ್ಭವಿಸಿ ಕರ್ನಾಟಕದ ಸಂಸ್ಕೃತಿಯನ್ನು ರಕ್ಷಿಸಿದವು. ಇವುಗಳಲ್ಲಿ ಒಂದಾದ ಇಕ್ಕೇರಿಯ ರಾಜ್ಯವು ಹೆಸರಿಗೆ ಬಂದು ೨೦೦ ವರ್ಷ ಅಭ್ಯುದಯದಿಂದ ಬಾಳಿತು. ಇನ್ನೊಂದು ಜ್ಯೋತಿಯು

ಕೊಡಗು ರಾಜ್ಯರೂಪದಿಂದ ಹೊಳೆಯುಹತ್ತಿತು. ಈ ಅರಸರಲ್ಲಿ ನಮ್ಮ ಚರಿತ್ರ ನಾಯಕನಾದ ವೀರ ರಾಜೇಂದ್ರನು ಅತ್ಯಂತ ಪ್ರಸಿದ್ಧನಾಗಿದ್ದಾನೆ. ಈತನ ಚರಿತ್ರೆಯನ್ನು ಈಗ ನಾವು ವಿವರಿಸುವೆವು.

ಕೊಡಗರು ಕರ್ನಾಟಕಸ್ಥರಲ್ಲಿ ಅತ್ಯಂತ ವೀರಾಗ್ರಣಿಗಳೆಂದು ಹೆಸರು ಗೊಂಡಿದ್ದಾರೆ. ಇವರಿಗೆ ಹಿಂದುಸ್ಥಾನದ 'ಹೈಲಂಡರ' ರೆಂಬ ಹೆಸರು ಬಂದಿದೆ. ಅಥವಾ ಅವರನ್ನು ಹಿಂದುಸ್ಥಾನದ 'ಗೂರ್ಖ'ರೆಂತಲೂ ಕರೆಯಬಹುದು. ಇವರು ಕಾಡುಗಳಲ್ಲಿ ವಾಸಿಸುತ್ತಿದ್ದು ಎಂದಿಗಾದರೂ ಇವರು ತಮ್ಮ ಸ್ವಾತಂತ್ರ್ಯವನ್ನು ರಕ್ಷಿಸಿಕೊಂಡಿರುವರು. ಹೈದರಅಲ್ಲಿ ಮತ್ತು ಟೀಪು ಸುಲ್ತಾನರು ಇವರನ್ನು ಸಮೂಲ ನಾಶಮಾಡಬೇಕೆಂದು ಬಗೆದರು. ಕೊಡಗವು ಪಶ್ಚಿಮ ಸಮುದ್ರ ತೀರಕ್ಕೂ ಮೈಸೂರಿಗೂ ಮಧ್ಯವರ್ತಿ ದೇಶವು. ಆದ್ದರಿಂದ ಪಶ್ಚಿಮಕ್ಕೆ ತಮ್ಮ ರಾಜ್ಯವನ್ನು ಬೆಳಿಸಲು ಈ ಕೊಡಗು ದೇಶವು ಯಾವಾಗಲೂ ಪ್ರತಿಬಂಧಕವಾಗಿದ್ದದರಿಂದ ಈ ಉಭಯ ಮುಸಲ್ಮಾನ ಬಾದಶಹರು ಈ ರಾಜ್ಯವನ್ನು ತಮ್ಮ ಕೈವಶ ಮಾಡಕೊಳ್ಳ ಬೇಕೆಂದು ಬಹಳ ಕಾಂಕ್ಷಿಸಿದರು. ಅವರು ದೊಡ್ಡ ದೊಡ್ಡ ದಂಡುಗಳನ್ನು ತೆಗೆದುಕೊಂಡು ಕೊಡಗುರಾಜ್ಯದ ಮೇಲೆ ಅನೇಕ ಸಾರೆ ದಾಳಿ ಇಟ್ಟರು. ಆದರೆ ಕೊಡಗರು ಅರಣ್ಯವನ್ನು ಸೇರಿ, ಅಲ್ಲಿಂದ ವೈರಿಗಳಮೇಲೆ ಎರಗುತ್ತ ಈ ಮುಸಲ್ಮಾನ ಅರಸರ ಆಟವೇನೂ ಸಾಗಗೊಡುತ್ತಿದ್ದಿಲ್ಲ. ಹೀಗೆ ಮುಸಲ್ಮಾನರೊಡನೆ ಒಂದು ಬಿಕ್ಕಟ್ಟಿನ ಸಮಯದಲ್ಲಿ ಅತ್ಯದ್ಭುತವಾಗಿ ಹೋರಾಡಿ ಕೊಡಗರ ಸ್ವಾತಂತ್ರ್ಯವನ್ನು ರಕ್ಷಿಸಿದಂಥ ಮಹಾ ಪುರುಷನು ಈಗಿನ ನಮ್ಮ ಚರಿತ್ರನಾಯಕನೇ ಇದ್ದಾನೆ. ಈತನ ಚರಿತ್ರೆಯು ಮನೋವೇಧಕವಾಗಿದೆ. ಅದು ಒಂದು ಕಾದಂಬರಿಯಂತೆ ಭಾಸವಾಗುತ್ತದೆ. ಹ್ಯಾಗೆ ಪ್ರತಾಪ ಸಿಂಹನು ಕಡೆಗೂ ಮೊಗಲರಿಗೆ ಶರಣು ಹೊಗದೆ ಘೋರಾರಣ್ಯವನ್ನು ಪ್ರವೇಶಿಸಿ ತನ್ನ ರಾಜಪುತ್ರರ ಸ್ವಾತಂತ್ರ್ಯವನ್ನು ರಕ್ಷಿಸಿದನೋ, ಅಥವಾ ಹ್ಯಾಗೆ ಶಿವಾಜಿಯು ಮಾವಳಿಗಳ ಸಹಾಯದಿಂದ ವಿಜಾಪುರ ಮತ್ತು ದಿಲ್ಲಿಯ ಮುಸಲ್ಮಾನ ರಾಜರ ಕಾಟದಿಂದ ಮಹಾರಾಷ್ಟ್ರವನ್ನು ಕಾಪಾಡಿದನೋ ಹಾಗೆಯೇ ಈ ವೀರಶೈವ ರಾಜನು ಕೊಡಗರ ಸ್ವಾತಂತ್ರ್ಯವನ್ನು ಕಾಯ್ದನು. ಈತನು ಕರ್ನಾಟಕದ ಪ್ರತಾಪಸಿಂಹನೆಂದು ನಾವು ಹೇಳ ಬಹುದು.

# ಪೂರ್ವಸ್ಥಿತಿ.

ವೀರರಾಜೇಂದ್ರನು ಪಟ್ಟವೇರುವ ಪೂರ್ವದಲ್ಲಿ ಕೊಡಗಿನ ಸ್ಥಿತಿಯನ್ನು ವಾಚಕರು ಅರಿಯುವದು ಅತ್ಯಂತ ಅವಶ್ಯವಿದೆ. ಇದರಿಂದ ವೀರರಾಜೇಂದ್ರನಿಗೆ ಎಂಥ ಬಿಕ್ಕಟ್ಟಿನ ಸಮಯವು ಪ್ರಾಪ್ತವಾಗಿತ್ತೆಂಬದು ವಾಚಕರಿಗೆ ತಿಳಿದು ಬರುವದು. ಹೈದರಅಲ್ಲಿಯು ಬಿದನೂರು ರಾಜ್ಯವನ್ನು ಹಾಳು ಮಾಡಿದ ಬಳಿಕ ಅವನು ಕೊಡಗು ರಾಜ್ಯವನ್ನೂ ತನ್ನ ಅಧೀನ ಮಾಡಿಕೊಳ್ಳಲು ಯತ್ನಿಸ ಹತ್ತಿದನು. ಅವನು ೧೭೭೩ನೇ ಇಸ್ವಿಯಲ್ಲಿ ಒಂದು ದೊಡ್ಡ ದಂಡಿನೊಡನೆ ಕೊಡಗವನ್ನು ಒಳಹೊಕ್ಕು ಅದರ ರಾಜಧಾನಿಯಾದ ಮಡಿಕೇರಿಯನ್ನು ಕೈವಶ ಮಾಡಿಕೊಂಡನು. ಆಗ ಕೊಡಗರ ರಾಜನಾದ ದೇವಪ್ಪ ರಾಜನು ಓಡಿ ಹೋಗ ಬೇಕಾಯಿತು. ಹೈದರನು ಅವನನ್ನು ಹಿರಿಕೆರೆ ಎಂಬಲ್ಲಿ ಹಿಡಿದು, ಶ್ರೀರಂಗ ಪಟ್ಟಣಕ್ಕೆ ಒಯ್ದು ಅವನನ್ನು ಕೊಲ್ಲಿಸಿದನು. ತರುವಾಯ ಹೈದರನು ನಮ್ಮ ಚರಿತ್ರನಾಯಕನ ತಂದೆಯಾದ ಲಿಂಗರಾಜನನ್ನು ಪಟ್ಟಕ್ಕೆ ಕೂಡ್ರಿಸಿ, ಕೊಡಗ ರಾಜ್ಯದ ದೊಡ್ಡ ಭಾಗವನ್ನು ಮೈಸೂರಿಗೆ ಸೇರಿಸಿಕೊಂಡನು. ಆದರೆ ಹೈದರನು ಕೊಡಗರ ಕೂಡ ಮುಂದೆ ಕ್ರೂರತನದಿಂದ ವರ್ತಿಸಿದ್ದರಿಂದ ಕೊಡಗರು ಮೂರು ವರ್ಷವೇ ದಂಗೆಯನ್ನು ಎಬ್ಬಿಸಿದರು. ಹೈದರನು ಅಲ್ಲಲ್ಲಿ ಸ್ಥಾಪಿಸಿದ ಪಾಳ್ಯಗಳನ್ನು ಅವರು ಕಿತ್ತು ಹಾಕಿದರು. ಮತ್ತು ಹೈದರನು ಮಡಿಕೇರಿಯಲ್ಲಿಟ್ಟಿದ್ದ ಸೈನ್ಯವನ್ನು ಸಹ ಮುತ್ತಿದರು. ಆಗ ಹೈದರನು ಒಂದು ದೊಡ್ಡ ಸೇನೆಯನ್ನು ತೆಗೆದುಕೊಂಡು ಕೊಡಗು ದೇಶವನ್ನು ನುಗ್ಗಿದನು. ಇಷ್ಟು ದೊಡ್ಡ ದಂಡಿನೊಡನೆ ಕೊಡಗರಿಗೆ ಕಾದಾಡುವದು ಅಸಾಧ್ಯವಾಯಿತು. ಆಗ ಹೈದರನು ದಂಗೆ ಎಬ್ಬಿಸಿದ ಕೊಡಗರ ಪ್ರಮುಖರನ್ನೆಲ್ಲ ಕ್ರೂರತನದಿಂದ ಕೊಲ್ಲಿಸಿ, ದೇಶದಲ್ಲೆಲ್ಲ ಕೋಟೆಗಳ ಸಾಲುಗಳನ್ನು ಕಟ್ಟಿಸಿ, ಒಬ್ಬ ಫೌಜದಾರನನ್ನು ಮಡಿಕೇರಿಯಲ್ಲಿಟ್ಟು ಹಿಂದಿರುಗಿದನು. ಈ ಕಾಲಕ್ಕೆ ಲಿಂಗರಾಜನು ತನ್ನ ಮನೆತನದವರೊಂದಿಗೆ ಹಗೆಗಳ ಕೈಗೆ ಸೆರೆ ಸಿಕ್ಕಿಬಿದ್ದನು. ಹೀಗೆ ಕೈಸೆರೆ ಸಿಕ್ಕವರಲ್ಲಿ ವೀರರಾಜೇಂದ್ರನೂ ಇದ್ದನು. ಇವರನ್ನೆಲ್ಲ ಹೈದರಲ್ಲಿಯು ಕಡೂರಲ್ಲಿ ಸೆರೆಮನೆಯಲ್ಲಿ ಇಟ್ಟನು.

## ಬಂಧಿವಾಸ.

ಆಗ ವೀರ ರಾಜೇಂದ್ರನು ತನ್ನ ತಂದೆಯಾದ ಲಿಂಗರಾಜನೊಡನೆ ಕಾರಾಗೃಹದಲ್ಲಿಯೇ ಉಳಿದನು. ಮುಂದೆ ಲಿಂಗರಾಜನು ೧೭೮೦ರಲ್ಲಿ ತೀರಿ ಕೊಂಡನು. ಆಗ ವೀರರಾಜೇಂದ್ರನು ೧೨ ವರುಷದ ಚಿಕ್ಕ ಬಾಲಕನು. ಆಸ್ಥಿತಿಯಲ್ಲಿ ಅವನಿಗೆ ಏನು ಮಾಡುವದು ಶಕ್ಯವು? ಮುಂದೆ ೧೭೮೩ರಲ್ಲಿ ಒಂದು ಸಮಯಕ್ಕೆ ಟೀಪುವು ಕಡೂರಿನ ಬಳಿಯಿಂದ ಪ್ರಯಾಣ ಮಾಡುತ್ತಿದ್ದಾಗ ಕೊಡಗು ಅರಸು ಮನೆತನದವರು ಅಲ್ಲಿದ್ದದ್ದನ್ನು ನೋಡಿ, ಸಮೀಪದಲ್ಲಿದ್ದ ಬಿದನೂರು ಜನರು ಅವರಿಗೆ ಸಹಾಯವಾಗಿ ಏನಾದರೂ ತೊಂದರೆ ಮಾಡ ಬಹುದೆಂದು ಶಂಕಿಸಿ ಅವರನ್ನು ಆ ಸ್ಥಳದಿಂದ ತೆಗೆದು ಕೊಡಗಿನ ಮೇರೆಯಲ್ಲಿದ್ದ ಪಿರಿಯಾ ಪಟ್ಟಣದಲ್ಲಿ ಸೆರೆ ಇಡಲು ಅಪ್ಪಣೆ ಕೊಟ್ಟನು.

ಈ ಕಾಲಕ್ಕೆ ದುರ್ಭಾಗ್ಯರಾದ ಕೊಡಗರ ಮೇಲೆ ಭಯಂಕರ ವಿಪತ್ತುಗಳು ಮೇಲಿಂದ ಮೇಲೆ ಬಂದೊದಗ ಹತ್ತಿದವು. ಅವುಗಳನ್ನು ಕೇಳಿದೊಡನೆಯೇ ಎಂಥ ನಿರ್ದಯನ ಮೈಮೇಲೆಯಾದರೂ ರೋಮಾಂಚನಗಳೇಳುವಂತೆ ಇದೆ. ಈ ಕಾಲಕ್ಕೆ ಮಡಿಕೇರಿಯಲ್ಲಿ ಜೈನುಲ್ ಅಬಾದೀನ ಎಂಬವನು ಟೀಪುವಿನ ಫೌಜದಾರನಾಗಿದ್ದನು. ಅವನು ವಿಷಯಾಂಧನಾಗಿ ಕೊಡಗು ಸ್ತ್ರೀಯರ ಮೇಲೆ ಬಲಾತ್ಕಾರ ಇನೇ ಮೊದಲಾದ ದುಷ್ಕೃತ್ಯಗಳಲ್ಲೆಸಗಿದನು. ಆಗ ಕೊಡಗರು ಅವನ ಜುಲುಮೆಯನ್ನು ತರಹರಿಸದೆ ಮುಮ್ಮಟಿ ಮತ್ತು ರಂಗ ಎಂಬ ಇಬ್ಬರು ಪಾಳೆಯಗಾರರನ್ನು ತಮ್ಮ ಪ್ರಮುಖರನ್ನಾಗಿ ಮಾಡಿ ದಂಗೆ ಎಬ್ಬಿಸಿದರು. ಅವರು ಕೊಡಗಿನಲ್ಲಿ ಟೀಪುವು ಸ್ಥಾಪಿಸಿದ ಠಾಣ್ಯಗಳ ಮೇಲೆ ಬಿದ್ದು ಅಲ್ಲಿಯ ದಂಡಾಳುಗಳನ್ನು ಓಡಿಸಿದರು. ಮತ್ತು ಕಟ್ಟ ಕಡೆಗೆ ಜೈನುಲ್ ಅಬಾದೀನನನ್ನೂ ಸಹ ಮಡಿಕೇರಿಯ ಕೋಟೆಯಲ್ಲಿ ಮುತ್ತಿದರು. ಆಗ ಟೀಪುವು ಅವನ ಸಹಾಯಕ್ಕೋಸ್ಕರ ೧೫೦೦೦ ದಂಡಾಳುಗಳನ್ನು ಕೊಟ್ಟು ಝುನೋಲುದೀನ ಎಂಬ ಸರದಾರನನ್ನು ಕಳಿಸಿದನು. ಆದರೆ ಅವನು ಗಟ್ಟದ ಕೆಳಗೆ ಬಂದೊಡನೆಯೇ ೪೦೦೦ ಕೊಡಗರು ಅವನನ್ನು ಅಡ್ಡಗಟ್ಟಿ ಅವನನ್ನು ಹಿಂದಿರುಗಿಸಿದರು. ಆಗ ಟೀಪುವು ಕೋಪಾವಿಷ್ಟನಾಗಿ ಕೊಡಗ ಜನಾಂಗವನ್ನೇ ಸಂಪೂರ್ಣವಾಗಿ ನಾಶ ಮಾಡುವೆನೆಂದು ಪ್ರತಿಜ್ಞೆಯನ್ನು ತೊಟ್ಟು ೪೨೦೦೦ ದಂಡಾಳುಗಳನ್ನೂ ೨೨ ತೋಫು

ಹೀಗನ್ನೋಡಿಸಿ ಕೊಡಗವನ್ನು ಸ್ವಂತವಾಗಿ ಅಭಿಯೋಗಿಸಿದನು. ಆಗ ಕೊಡಗರು ತಮ್ಮ ಗ್ರಾಮಗಳನ್ನು ತೊರೆದು ಅರಣ್ಯವನ್ನು ಸೇರ ಬೇಕಾಯಿತು. ಮತ್ತು ಅರಣ್ಯಗಳಲ್ಲಿ ಅವರು ಭದ್ರವಾಗಿದ್ದುಕೊಂಡು ಟೀಪುವಿನ ದಂಡಾಳುಗಳ ಮೇಲೆ ಬಿದ್ದು ಮೇಲಿಂದ ಮೇಲೆ ಅವರನ್ನು ಕಂಗೆಡಿಸ ಹತ್ತಿದರು. ಅವರನ್ನು ಹಣ್ಣಿಗೆ ತರುವದು ಟೀಪುವಿಗೆ ಕಷ್ಟವಾಗಹತ್ತಿತು. ಆಗ ಟೀಪುವು ತನ್ನ ದಂಡಾಳುಗಳಿಂದ ಕೊಡಗಿನ ಮೇರೆಯನ್ನು ವರ್ತುಳಾಕಾರವಾಗಿ ಸುತ್ತಿದನು. ಮತ್ತು ಆ ವರ್ತುಳವನ್ನು ಬರುಬರುತ್ತ ಆಕುಂಚಿತ ಮಾಡುತ್ತ, ಅಡವಿಯ ಆಶ್ರಯದಲ್ಲಿದ್ದ ಕೊಡಗರನ್ನು ಕಾಡುಮೃಗಗಳಂತೆ ಸುತ್ತುಗಟ್ಟುತ್ತ ಅವರನ್ನು ಮುಂದಕ್ಕೆ ನೂಕುತ್ತ ತಲಕಾವೇರಿಯ ಹತ್ತರ ೮೫೦೦೦ ಜನರನ್ನು ಸುತ್ತುಗಟ್ಟಿದನು. ಈ ಗುಂಪಿನಲ್ಲಿ ಕೊಡವ ಲಿಂಗಾಯತ ಬ್ರಾಹ್ಮಣ ಮೊದಲ್ಗೊಂಡು ಪುರುಷರೂ ಹುಡುಗರೂ ಹೆಂಗಳೆಯರೂ ಇದ್ದರು. ಆಗ ಈ ಜನ ಸಮುದಾಯವನ್ನೆಲ್ಲ ಟೀಪುವು ಸೆರೆಹಿಡಿದು ಕಟುಕರು ದನಗಳನ್ನು ಹ್ಯಾಗೆ ಹಿಡಿದೆಳೆದೊಯ್ಯುತ್ತಾರೋ ಹಾಗೆ ಟೀಪುವು ಅವರನ್ನು ನಾನಾಬಗೆಯಾಗಿ ಹಿಂಸಿಸುತ್ತ ಶ್ರೀರಂಗ ಪಟ್ಟಣಕ್ಕೆ ನಡೆಯಿಸಿಕೊಂಡು ಹೋದನು. ಅಲ್ಲಿಗೆ ಹೋದ ಬಳಿಕ ಅವನು ಈ ಕೊಡಗರಲ್ಲಿ ಬಹುಜನರನ್ನು ಬಲಾತ್ಕಾರದಿಂದ ಮುಸಲ್ಮಾನ ಧರ್ಮಕ್ಕೆ ಸೇರಿಸಿದನು. ಮತ್ತು ಅವರಿಗೆ 'ಮಹಮ್ಮದೀ ಚೇಲಾ' ಎಂಬ ಹೆಸರನ್ನಿಟ್ಟು ಅವರನ್ನು ತನ್ನ ದಂಡಿನಲ್ಲಿ ಸೇರಿಸಿದನು. ಇಷ್ಟೇ ಅಲ್ಲ, ಟೀಪುವು ಕೊಡಗು ದೇಶದ ಭೂಮಿಯನ್ನೆಲ್ಲ ಕೊಡಗರ ಕಯ್ಯಿಂದ ತಪ್ಪಿಸಬೇಕೆಂದು ಬಗೆದು ಮುಸಲ್ಮಾನ ಜನರ ವಸಾಹತನ್ನು ಅಲ್ಲಿ ಮಾಡತೊಡಗಿದನು. ಮತ್ತು ಅವರಿಗೆ ಕೊಡಗರ ಭೂಮಿಯನ್ನು ಕೊಟ್ಟನು. ಆದರೆ ಭೂಮಿಯನ್ನು ಸಾಗ ಮಾಡುವ ಜನರೇ ಸೀಮೆಯಲ್ಲಿ ಉಳಿದಿದ್ದಿಲ್ಲ. ಆದ್ದರಿಂದ ಆದವಾನಿಯ ಕಡೆಗಿನ ಎಷ್ಟೋ ಜನರನ್ನು ಬಲಾತ್ಕಾರದಿಂದ ಹಿಡಿತರಿಸಿ ಅಲ್ಲಿ ಇಡತೊಡಗಿದನು. ಒಟ್ಟಿಗೆ ಟೀಪುವು ಕೊಡಗರನ್ನು ಸಂಪೂರ್ಣವಾಗಿ ನಿರ್ವಂಶ ಮಾಡಬೇಕೆಂದು ತಾನು ತೊಟ್ಟಿದ್ದ ಪ್ರತಿಜ್ಞೆಯನ್ನು ಭಯಂಕರ ರೀತಿಯಿಂದ ಕೊನೆಗಾಣಿಸಲು ಉದ್ಯುಕ್ತನಾದನು. ಈ ಕಾಲಕ್ಕೆ ಕೊಡಗರ ಸ್ಥಿತಿಯು ಏನಾಗಿರಬಹುದೆಂಬದನ್ನು ವಾಚಕರೇ ಊಹಿಸಲಿ.

ಇದ್ದೇ ಸಮಯಕ್ಕೆ ವೀರರಾಜೇಂದ್ರನು ಪಿರಿಯಾ ಪಟ್ಟಣದ ಕಾರಾಗೃಹದಲ್ಲಿದ್ದನು. ಈ ಪಟ್ಟಣವು ಕೊಡಗಿನಿಂದ ಶ್ರೀರಂಗ ಪಟ್ಟಣಕ್ಕೆ

ಹೋಗುವ ಮಾರ್ಗಕ್ಕೆ ಸಮೀಪದಲ್ಲಿಯೇ ಇದೆ. ಟೀಪುವು ಮೇಲೆ ಹೇಳಿದ ೮೫೦೦೦ ಕೊಡಗರನ್ನು ತನ್ನ ರಾಜಧಾನಿಗೆ ಎಳೆದೊಯ್ಯುವಾಗ ಅವರ ಪಟ್ಟ ಕಷ್ಟವನ್ನು ಕಣ್ಣಾರೆ ಕಂಡಿದ್ದನು. ಅವನು ಧೀರೋದಾತ್ತ ಸ್ವಭಾವದವನು. ತನ್ನ ಜನಾಂಗವನ್ನು ಈ ಪರಿ ಕಷ್ಟಬಡಿಸುತ್ತಿದ್ದ ಶತ್ರುವಿನ ಸೇಡನ್ನು ಹ್ಯಾಗೆ ತೀರಿಸುವೆನೆಂದು ತಳಮಳಿಸಿದನು ಮತ್ತು ಸೆರೆಮನೆಯಿಂದ ಹೊರಬೀಳಲು ಯತ್ನಿಸ ಹತ್ತಿದನು. ಈ ಕಾಲಕ್ಕೆ ಅವನು ಅರಣ್ಯದಲ್ಲಿ ಮುಸಲ್ಮಾನರ ಕಣ್ಣು ತಪ್ಪಿಸಿ ತಿರುಗಾಡುತ್ತಿದ್ದ ಕೆಲವು ಮಿತ್ರರೊಡನೆ ಗುಪ್ತವಾಗಿ ಸಂಬಂಧವನ್ನಿಟ್ಟನು. ಮತ್ತು ಅವರ ಸಹಾಯದಿಂದ ಅವನು ಒಂದು ದಿನ ಪೆರಿಯಪಟ್ಟಣದ ಸೆರೆಮನೆಯಿಂದ ತಪ್ಪಿಸಿಕೊಂಡು ಓಡಿ ಹೋದನು. ಇದು ೧೭೮೫ ನೇ ಇಸ್ವಿಯಲ್ಲಿ ಸಂಭವಿಸಿತು. ಟೀಪುವು ಈ ಸುದ್ದಿಯನ್ನು ತಿಳಿದೊಡನೆಯೇ ವೀರರಾಜೇಂದ್ರನ ಉಳಿದ ಮನೆಯವರನ್ನು ಶ್ರೀರಂಗ ಪಟ್ಟಣಕ್ಕೆ ತರಿಸಿ ಅಲ್ಲಿ ಅವರನ್ನು ಭದ್ರವಾಗಿ ಬಂಧನದಲ್ಲಿಟ್ಟನು.

## ಸ್ವಾತಂತ್ರ್ಯಯುದ್ಧ.

ಹೀಗೆ ವೀರರಾಜೇಂದ್ರನು ಪಾರಾಗಿ ಬಂದಬಳಿಕ ಅವನು ಟೀಪುವಿನೊಡನೆ ಸ್ವಾತಂತ್ರ್ಯ ಯುದ್ಧವನ್ನು ಪ್ರಾರಂಭಿಸಿದನು. ಅವನು ಆಗ ೨೦ ವರ್ಷದ ಎಳೆವಯಸ್ಸಿನವನು. ಆ ಕಾಲಕ್ಕೆ ಅವನ ಸ್ಥಿತಿಯು ಏನಾಗಿರಬಹುದೆಂಬದನ್ನು ವಾಚಕರೇ ತರ್ಕಿಸಲಿ. ಆದರೆ ನರಪುಂಗವರ ಗುಣಗಳು ಇಂಥ ಸಮಯದಲ್ಲಿಯೇ ಹೊರಬೀಳುತ್ತವೆ. ಆಗ ದೇಶದಲ್ಲೆಲ್ಲ ಕೊಡಗರಾರೂ ಉಳಿದಿರಲಿಲ್ಲ. ಅವರು ನಾನಾಕಡೆ ದೇಶಾಂತರವಾಸಿಗಳಾಗಿ ತೊಳಲಾಡುತ್ತಿದ್ದರು ನಾಡಿನ ಭೂಮಿ ಎಲ್ಲವೂ ಮುಸಲ್ಮಾನರ ಕೈವಶವಾಗಿತ್ತು. ಅಲ್ಪಸ್ವಲ್ಪ ತಪ್ಪಿ ಉಳಿದ ಕೊಡಗರು ಅರಣ್ಯ ಮಧ್ಯದಲ್ಲಿ ಕದ್ದುಮುಚ್ಚಿ ಅಲೆದಾಡುತ್ತಿದ್ದರು. ಮುಸಲ್ಮಾನರು ಅವರನ್ನು ಕಂಡೊಡನೆಯೇ ಯಮಸದನಕ್ಕೆ ಅಟ್ಟುತ್ತಿದ್ದರು. ಇಂಥ ಸ್ಥಿತಿಯಲ್ಲಿ ಬಲಾಢ್ಯನಾದ ಶತ್ರುವಿನೊಡನೆ ವೀರರಾಜೇಂದ್ರನು ಹೋರಾಡುವದು ಹೇಗೆ? ಆದರೂ ಅವನು ಧೈರ್ಯ ಬಿಡಲಿಲ್ಲ. ಎಂಥ ಕಷ್ಟಕರ ಸ್ಥಿತಿಯು ಇದ್ದರೂ ನಿರಾಶೆ ಹೊಂದದೆ ಪ್ರಯತ್ನಪಡುವದು ಶ್ರೇಷ್ಠ ಪುರುಷರ ಸ್ವಭಾವವದೆ. ಆಗ ವೀರರಾಜೇಂದ್ರನು ಅಲ್ಲಲ್ಲಿ ಉಳಿದಿದ್ದ ಕೊಡಗರನ್ನು ಒತ್ತಟ್ಟಿಗೆ ಕೂಡಿಸಹ

ತ್ತಿದನು. ಮತ್ತು ಅವರ ಸಹಾಯದಿಂದ ಸಮಯ ಸಿಕ್ಕಹಾಗೆ ವೈರಿಗಳ ಠಾಣ್ಯಗಳ ಮೇಲೆ ಬೀಳಹತ್ತಿದನು. ಹ್ಯಾಗೆ ಶಿವಾಜಿಯು ಬೆಟ್ಟ ಗುಡ್ಡ ಗಳಲ್ಲಿದ್ದು ಮೊಗಲರ ದಂಡಾಳುಗಳನ್ನು ಕಂಗೆಡಿಸುತ್ತಿದ್ದನೋ ಹಾಗೆಯೇ ವೀರರಾಜೇಂದ್ರನು ತನ್ನ ಶೂರ ಕೊಡಗರ ಸಹಾಯದಿಂದ ವೈರಿಗಳ ಮೇಲೆ ಬೀಳತೊಡಗಿದನು. ಅವನ ಉರವಣೆಗಳು ಕೊಡಗದ ತುಂಬೆಲ್ಲ ಕೂಡಲೆ ವ್ಯಾಪಿಸಿದವು. ಅವನು ಏಕಕಾಲಕ್ಕೆ ಎಲ್ಲಕಡೆಗೂ ಇದ್ದಂತೆ ಮುಸ ಲ್ಮಾನರಿಗೆ ಭಾಸವಾಗುವದು. ಅವರು ಅವನನ್ನು ಹಿಡಿಯಲಿಕ್ಕೆ ಬಹಳ ಪ್ರಯತ್ನಿಸಿದರು. ಆದರೆ ಅದು ಏನೂ ಸಾಧ್ಯವಾಗಲಿಲ್ಲ. ಹೀಗೆ ಒಬ್ಬ ಪುಂಡ ಗಾರನಂತೆ ವೀರರಾಜೇಂದ್ರನು ಕೆಲವು ಕಾಲಕಳೆದನು. ಆದರೆ ಇದರಿಂದ ತಾನು ಕೈಕೊಂಡ ಕಾರ್ಯವು ನೀಗುವದು ಹ್ಯಾಗೆ? ಆದ್ದರಿಂದ ಅವನು ತನ್ನ ಚಾರರನ್ನು ಮೈಸೂರಿನ ಬೇರೆ ಬೇರೆ ಭಾಗಗಳ ಕಡೆಗೆ ಕಳಿಸಿ, ಅಲ್ಲಲ್ಲಿ ವಾಸವಾಗಿದ್ದ ಕೊಡಗರನ್ನು ತನ್ನಕಡೆಗೆ ಬರಮಾಡಿಕೊಳ್ಳಹತ್ತಿ ದನು. ಇಷ್ಟರಲ್ಲಿ ವೀರರಾಜೇಂದ್ರನ ಪ್ರತಾಪದ ಕೀರ್ತಿಯೂ ಸುತ್ತಲೂ ಹಬ್ಬಿತ್ತು. ಆದ್ದರಿಂದ ಕೊಡಗರು ಮೆಲ್ಲನೆ ಮೆಲ್ಲಗೆ ಕೊಡಗಿಗೆ ಬಂದು ವೀರ ರಾಜೇಂದ್ರನನ್ನು ಕೂಡಿಕೊಳ್ಳಹತ್ತಿದರು. ಮತ್ತು ಅವರೆಲ್ಲರೂ ತಮ್ಮ ಜೀವದ ಹಂಗು ದೊರೆದು ಸ್ವದೇಶ ರಕ್ಷಣಾರ್ಥವಾಗಿ ಕಾದಾಡಲು ಸನ್ನದ್ಧರಾ ದರು. ಈ ಕಾಲಕ್ಕೆ ವೀರರಾಜೇಂದ್ರನಿಗೆ ಅನೇಕ ಭಯಂಕರ ಪ್ರಸಂಗ ಗಳು ಒದಗಿದವು. ಅವುಗಳಲ್ಲಿ ಕೆಲವುಗಳನ್ನು ಅವನು ತಾನು ಬರೆಯಿ ಸಿದ ಕೊಡಗು ಇತಿಹಾಸದಲ್ಲಿ ಕಾಣಿಸಿದ್ದಾನೆ. ಅವುಗಳಲ್ಲೊಂದನ್ನು ನಾವು ಇಲ್ಲಿ ಕೊಡುತ್ತೇವೆ.

ಒಂದುಸಾರೆ ಮುಸಲ್ಮಾನ ದಂಡಾಳುಗಳು ವೀರರಾಜೇಂದ್ರನನ್ನು ಹಿಡಿಯಲು ಬೆನ್ನಟ್ಟಿದರು. ಆಗ ಅವನು ಅವರಿಂದ ತಪ್ಪಿಸಿಕೊಂಡು ಕೊಡ ಗಿನ ದಕ್ಷಿಣದಿಕ್ಕಿಗಿರುವ ಕೋಟಿಂಗಡಿ ಅರಸನ ಆಶ್ರಯಕ್ಕೆ ಹೋದನು. ಆಗ ಅವನು ಸಹಾಯವನ್ನೀಯುವೆನೆಂದು ಅವನಿಗೆ ಅಭಿವಚನ ಕೊಡಲು ಅವನನ್ನು ನಂಬಿ ಅವನ ರಾಜ್ಯದಲ್ಲಿದ್ದ ಪೌಳಿ ಎಂಬ ಸ್ಥಳಕ್ಕೆ ತೆರ ಳಿದನು.

ಆದರೆ ಈ ಕೋಟಿಂಗಡಿ ರಾಜನ ಮನೆತನಕ್ಕೂ ಕೊಡಗು ಮನೆ ತನಕ್ಕೂ ಬಹುಕಾಲದಿಂದ ವೈರಭಾವವು ಇದ್ದಿತು. ಹೀಗೆ ವೀರರಾ ಜೇಂದ್ರನು ತನ್ನ ಹಸ್ತಗತನಾದಕೂಡಲೇ ಈ ಕೋಟಿಂಗಡಿ ರಾಜನು

ಅವನಿಗೆ ಉದ್ದೇಶಿಸಿಃ- "ಎಲೋ ವೀರರಾಜೇಂದ್ರನೇ, ನಿನ್ನ ಅಜ್ಜನು ನನ್ನ ವಂಶದವನೊಬ್ಬನನ್ನು ಕೊಂದಿದ್ದಾನೆ. ಅವನ ಬದಲು ನಿನ್ನ ತಲೆಯನ್ನು ಈಗ ಕತ್ತರಿಸುತ್ತೇನೆ" ಅನ್ನಲು ಆಗ ವೀರರಾಜೇಂದ್ರನುಃ- "ನಿನ್ನ ಹಿರಿಯನು ಒಂದುನೂರು ವರ್ಷಗಳ ಹಿಂದೆ ನನ್ನ ಅಜ್ಜನೊಡನೆ ರಣರಂಗದಲ್ಲಿ ಕಾದಿ ಮಡಿದನು. ಈಗ ನಾನು ನಿನ್ನ ಅತಿಥಿಯು. ನೀನು ಕೊಟ್ಟವಚನ ಮತ್ತು ನಿನ್ನ ಮಾನ ಇವುಗಳ ಮೇಲೆ ವಿಶ್ವಾಸವಿಟ್ಟು ಬಂದಿದ್ದೇನೆ. ಇಂಥ ಸಮಯದಲ್ಲಿ ನೀನು ನನಗೆ ರಕ್ಷಣೆಯನ್ನು ಕೊಡದೆ, ಹಿಂದಿನ ರಕ್ತದ ಮುಯ್ಯವನ್ನು ನನ್ನಮೇಲೆ ತೀರಿಸಲಿಕ್ಕೆ ಹವಣಿಸುತ್ತೀ. ಈಗ ನಾನು ನಿನ್ನ ಕಯ್ಯಲ್ಲಿ ಇದ್ದೇನೆ. ಇಷ್ಟೇ ನಾನು ನಿನಗೆ ಹೇಳುವದು" ಎಂದು ನುಡಿದನು. ಆಗ ಕೋಟಂಗಡಿ ರಾಜನು ಅವನ ಮುಂದೆ ಒಂದು ಕಾಗದವನ್ನು ಇಟ್ಟುಃ- "ಈ ಕಾಗದದ ಮೇಲೆ ನೀನು ನಿನ್ನ ಸಹಿ ಹಾಕಬೇಕು. ಇಲ್ಲವೆ ನಿನ್ನ ಶಿರಸ್ಸನ್ನು ಕೊಡಬೇಕು" ಎಂದು ನುಡಿದನು. ಈ ಕಾಗದದಲ್ಲಿ ಗಟ್ಟದ ಮೇಲಿನ ಸೀಮೆಯನ್ನು ವೀರರಾಜೇಂದ್ರನು ಬಿಟ್ಟು ಕೊಡಬೇಕೆಂದು ಬರೆದಿತ್ತು. ಇದಕ್ಕೆ ವೀರರಾಜೇಂದ್ರನು ಸಹಿ ಹಾಕಿದಬಳಿಕ ಕೋಟಂಗಡಿ ರಾಜನು ಅವನನ್ನು ಬಿಟ್ಟುಕೊಟ್ಟನು. ಮತ್ತು ಕೂಡಲೇ ಅವನು ತನ್ನ ದಂಡಿನೊಡನೆ ಗಟ್ಟವನ್ನೇರಿ 'ವಾಯನಾಡ' ಪ್ರಾಂತವನ್ನು ಆಕ್ರಮಿಸಿದನು.

ವೀರರಾಜೇಂದ್ರನು ಅತ್ಯಂತ ದುರ್ಬಲ ಸ್ಥಿತಿಯಲ್ಲಿ ಇದ್ದದ್ದನ್ನು ನೋಡಿ, ಅವನೊಡನೆ ಈ ಕೋಟಂಗಡಿ ರಾಜನು ಹೀಗೆ ದ್ರೋಹವನ್ನು ಬಗೆದನು. ಆದರೆ ಕೋಟಂಗಡಿ ರಾಜನು ತನಗೆ ಹೀಗೆ ವಿಶ್ವಾಸ ಘಾತ ಮಾಡಿದ್ದಕ್ಕೆ ವೀರರಾಜೇಂದ್ರನು ಬೇಗನೇ ಅವನ ಮೇಲೆ ತನ್ನ ಮುಯ್ಯವನ್ನು ತೀರಿಸಿಕೊಳ್ಳದೆ ಬಿಡಲಿಲ್ಲ. ಅವನು ಸ್ವಲ್ಪ ದಿವಸಗಳಲ್ಲಿಯೇ ಕೋಟಂಗಡಿ ರಾಜನ ಮೇಲೆ ಹೊಂಚುಹಾಕಿ ಅವನನ್ನು ಅಕಸ್ಮಾತ್ತಾಗಿ ತನ್ನ ೫೦೦ ದಂಡಾಳುಗಳಿಂದ ಮುತ್ತಿ ಸೆರೆಹಿಡಿದನು. ಆಗ ವರ್ಣಿಸಿದ ಸಂಗತಿಗಳನ್ನು ವೀರರಾಜೇಂದ್ರನು ಕೆಳಗೆ ಬರೆದಂತೆ ವಿವರಿಸಿದ್ದಾನೆ. ವೀರರಾಜೇಂದ್ರನು ಕೋಟಂಗಡಿ ರಾಜನಿಗೆಃ- "ಗಟ್ಟದ ಮೇಲಿನ ನನ್ನ ರಾಜ್ಯವನ್ನು ನೀನು ಯಾಕೆ ಆಕ್ರಮಿಸಿದಿ?" ಕೋಟಂಗಡಿ ರಾಜನುಃ- "ನೀನು ನಿನ್ನ ತಲೆಯನ್ನು ಉಳಿಸಿಕೊಳ್ಳಲಿಕ್ಕೆ ಈ ಪ್ರದೇಶವನ್ನು ನನಗೆ ಬಿಟ್ಟು ಕೊಟ್ಟಿರುವಿ. ಆದ್ದರಿಂದ ನಾನು ನನ್ನ ರಾಜ್ಯದಲ್ಲಿ ಇದ್ದೇನೆ."

ವೀರರಾಜೇಂದ್ರನು:- "ಒಂದು ನೂರುವರ್ಷದ ಕೆಳಗೆ ನನ್ನ ಅಜ್ಜನು ಧರ್ಮಯುದ್ಧದಲ್ಲಿ ನಿನ್ನ ಹಿರಿಯನನ್ನು ಕೊಂದಿರುವನು. ಅವನನ್ನು ಕೊಂದದ್ದಕ್ಕೆ ನಿನ್ನ ಮನೆಯವರು ಎಂದೂ ಮುಯ್ಯನ್ನು ಕೇಳಿಲ್ಲ. ಆದರೆ ನಾನು ನಿನ್ನ ಅತಿಥಿಯಾಗಿ ಬಂದ ಸಮಯಕ್ಕೆ ಅತಿಥಿಗೆ ಮಾಡ ತಕ್ಕ ಸತ್ಕಾರಕ್ಕೆ ವಿರೋಧವಾಗಿ ವರ್ತಿಸಿ ಜುಲುಮೆಯಿಂದ ಕಾಗದಕ್ಕೆ ನನ್ನ ಸಹಿಯನ್ನು ತೆಗೆದುಕೊಂಡಿರುವಿ. ಆದರೆ ನೀನು ವಾಯನಾಡಿನಲ್ಲಿ ನನ್ನ ಮನೆತನದ ಇಬ್ಬರು ರಾಜಪುತ್ರರನ್ನು ಕೊಂದಿರುವಿ. ಈ ಸಂಗ ತಿಯನ್ನು ನಾನು ಆ ಕಾಲಕ್ಕೆ ನಿನ್ನ ನೆನಪಿಗೆ ತರಲು ಶಕ್ಯವಿದ್ದಿದ್ದಿಲ್ಲ. ಈಗ ನೀನು ನನ್ನ ಅತಿಥಿಯಲ್ಲ. ನನ್ನ ಕೈಯ್ಯಲ್ಲಿ ಸಿಕ್ಕಿರುವಿ. ನನ್ನ ಆ ರಾಜ ಪುತ್ರನ ತಲೆಗೆ ನಿನ್ನ ಹಿರಿಯನ ರಕ್ತವು ಸಮವಾಯಿತು. ಇನ್ನೊಬ್ಬ ರಾಜಪುತ್ರನ ತಲೆಗೆ ನಿನ್ನ ತಲೆಯನ್ನು ಈಗ ಸಮಮಾಡುವೆನು." ಆದಕ್ಕೆ ಕೋಟಂಗಡಿ ರಾಜನು:- "ನೀನು ಹೇಳುವದು ಸತ್ಯವು. ಆದರೆ ನನ್ನ ತಲೆಯ ಬದಲು ವಾಯನಾಡ ಪ್ರಾಂತವನ್ನು ನಿನಗೆ ಕೊಡುವೆನು. ಮತ್ತು ನೀನು ಸಹಿ ಹಾಕಿದ ಕಾಗದವನ್ನು ನಾನು ರದ್ದು ಮಾಡು ವೆನು." ಎಂದು ನುಡಿದನು. ಇದಕ್ಕೆ ವೀರರಾಜೇಂದ್ರನು ಒಪ್ಪಿ ಈ ಯಾವತ್ತು ಶರ್ತುಗಳನ್ನು ಕಾಣಿಸಿ ಬೇರೊಂದು ಕಾಗದವನ್ನು ಮಾಡಿ ಕೊಂಡನು. ಈ ಶರ್ತುಗಳನ್ನು ವೀರರಾಜೇಂದ್ರನು ತನ್ನ ಕೊಡಗದೇ ಶದ ಚರಿತ್ರೆಯಲ್ಲಿ ವಿಸ್ತಾರವಾಗಿ ಬರೆದಿರುವನು.

ವೀರರಾಜೇಂದ್ರನ ಶೌರ್ಯ ಸಾಹಸಾದಿಗಳ ವಾರ್ತೆಯು ದಿನೇ ದಿನೇ ಹಬ್ಬುತ್ತ ಹೋದ ಹಾಗೆ ಅವನ ಸೇನೆಯೂ ಹೆಚ್ಚುತ್ತ ನಡೆಯಿತು. ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಅವನ ಸುತ್ತಲು ನಾಲ್ಕು ಸಾವಿರ ಶೂರ ಭಟರು ಅವನ ಗೂಡ ಹೋರಾಡಲು ಸನ್ನದ್ಧರಾದರು. ಆ ಮೇಲೆ ವೈರಿಗಳ ಮೇಲೆ ಗುಪ್ತ ರೀತಿಯಿಂದ ಕಾದಾಡುವದನ್ನು ಬಿಟ್ಟುಕೊಟ್ಟು ಬಹಿರಂಗ ವಾಗಿ ಮುಸಲ್ಮಾನರ ಮೇಲೆ ಬೀಳತೊಡಗಿದನು. ಆಗ ಅವರಲ್ಲಿ ಹಾಹಾಕಾ ರವು ಒದಗಿ ಅವರು ತಮ್ಮ ಕೋಟೆ ಕೊತ್ತಳಗಳ ಆಶ್ರಯವನ್ನು ಹಿಡಿದಿರ ಬೇಕಾಯಿತು. ಅವರು ಹೊರಬೀಳಲು ಸಹ ಅಸಾಧ್ಯವಾಯಿತು. ಹೀಗೆ ವೀರ ರಾಜೇಂದ್ರನು ತನ್ನ ನಾಡನ್ನು ಆಕ್ರಮಿಸ ತೊಡಗಿದನು. ದೇಶವನ್ನು ಆಕ್ರ ಮಿಸಿದ ಹಾಗೆ, ಅಲ್ಲಿದ್ದ ಮುಸಲ್ಮಾನ ವಸಾಹತುಗಾರರನ್ನು ತಳ್ಳಲಿಕ್ಕೆ ಪ್ರಾರಂಭಿಸಿದನು. ಅವರನ್ನು ಶತ್ರುಗಳೆಂದು ಭಾವಿಸಿ, ಸಮಯ ದೊರೆದೊ

ಡನೆಯೇ ಅವರನ್ನು ಘಾತಿಸುವನು. ಆಗ ಮುಸಲ್ಮಾನರು ತಮ್ಮ ಭೂಮಿಗಳನ್ನು ಬಿಟುಕೊಟ್ಟು ಓಡಿ ಹೋಗಹತ್ತಿದರು. ಆದರೆ ಆದನಾಸಿಯಿಂದ ತರಲ್ಪಟ್ಟ ಜನರನ್ನು ಮಾತ್ರ ಅವನು ಮಿತ್ರರಂತೆ ಭಾವಿಸಿದನು. ಅವರನ್ನು ರಾಜನು ಏನೂ ಹಿಂಸಿಸಲಿಲ್ಲ. ಇಷ್ಟೇ ಅಲ್ಲ, ಅವರು ತಮ್ಮ ದೇಶಕ್ಕೆ ಹೋಗಲು ಅವರಿಗೆ ಎಲ್ಲ ತರದ ಸಾಮುಗ್ರಿಗಳನ್ನು ಒದಗಿಸಿ ಕೊಟ್ಟನು. ಹೀಗೆ ವೀರರಾಜೇಂದ್ರನು ತನ್ನ ಕೇವಲ ಬಾಹುಬಲದಿಂದ ಯಾರೊಬ್ಬರ ಸಹಾಯವಿಲ್ಲದೆ ತನ್ನ ನಾಡನ್ನು ಪುನಃ ಆಕ್ರಮಿಸತೊಡಗಿದನು. ಆದರೆ ಭೂಮಿಗಳು ಕೊಡಗರ ಕೈಸೇರಿದ ಹಾಗೆ ಅವುಗಳನ್ನು ಸಾಗ ಮಾಡುವದು ಬಹು ಕಷ್ಟವಾಯಿತು. ಯಾಕಂದರೆ ಒಕ್ಕಲುತನಕ್ಕೆ ಬೇಕಾಗುವ ದನಕರುಗಳು, ಬೀಜ ಮೊದಲಾದ ಒಕ್ಕಲುತನ ಸಾಮುಗ್ರಿಗಳು ದೇಶದಲ್ಲಿ ಏನೂ ಇರಲಿಲ್ಲ. ಇಷ್ಟೇ ಅಲ್ಲ, ದೇಶದಲ್ಲಿ ಧಾನ್ಯಾದಿಗಳು ಸಹ ಇದ್ದಿಲ್ಲವಾದ್ದರಿಂದ ಕೊಡಗರು ಉಪವಾಸ ಸಾಯುವ ಹೊತ್ತು ಬಂದಿತು. ಆದ್ದರಿಂದ ವೀರರಾಜೇಂದ್ರನು ವೈರಿಗಳ ರಾಜ್ಯವಾದ ಮೈಸೂರು ಮತ್ತು ಮಂಗಳೂರು ಜಿಲ್ಹೆಗಳಲ್ಲಿ ಕೊಳ್ಳೆ ಇಡಹತ್ತಿದನು. ಮತ್ತು ಅಲ್ಲಿಂದ ತನಗೆ ಬೇಕಾಗುವ ಒಕ್ಕಲುತನದ ಸಾಮಾನುಗಳನ್ನು ದೊರಕಿಸಿ ಕೊಂಡನು. ಈ ಕೊಳ್ಳೆಗಳಲ್ಲಿ ವೀರರಾಜೇಂದ್ರನು ತೋರಿಸಿದ ಧೈರ್ಯ, ಸಾಹಸಗಳಿಗೆ ಎಣೆಯೇ ಇಲ್ಲ. ಈ ಪ್ರಕಾರ ವೀರರಾಜೇಂದ್ರನು ಒಂದು ವರ್ಷದವರೆಗೆ ಯುದ್ಧ ಮಾಡಿ ಬಹುತರ ಎಲ್ಲ ಕೊಡಗನಾಡನ್ನು ಅಂಕಿತ ಮಾಡಿಕೊಂಡನು. ಮತ್ತು ಮೊದಲಿನಂತೆ ತನ್ನ ದೇಶವನ್ನು ಕೊಡಗರಿಂದ ಪುನಃ ವಸಾಹತು ಮಾಡಿದನು.

ಈ ಕಾಲಕ್ಕೆ ಟೀಪುವು ಮಲಬಾರ ತ್ರಾವಣಕೋರ ಈ ಭಾಗಗಳಲ್ಲಿ ನಾಯರರ ಗೂಡ ಘೋರ ಯುದ್ಧಗಳಲ್ಲಿ ತೊಡಗಿದ್ದನು. ಆದ್ದರಿಂದ ಅವನಿಗೆ ವೀರರಾಜೇಂದ್ರನನ್ನು ಕೆಣಕಲಿಕ್ಕೆ ಶಕ್ಯವಿರಲಿಲ್ಲ. ಒಂದು ಸಾರೆ ಮೈಸೂರಿನಿಂದ ಒಂದು ದಂಡು ಟೀಪುವಿನ ಸಹಾಯಕ್ಕೋಸ್ಕರ ಮಲಬಾರಕ್ಕೆ ಹೋಗುವಕಾಲಕ್ಕೆ ವೀರರಾಜೇಂದ್ರನು ಅಕಸ್ಮಾತ್ತಾಗಿ ಅದರ ಮೇಲೆ ಬಿದ್ದು ಅವನ ೧೨೦೦ ದಂಡಾಳುಗಳನ್ನು ನಾಶ ಮಾಡಿದನು. ಮತ್ತೊಂದು ಸಾರೆ ಟೀಪುವಿನ ಪ್ರಸಿದ್ಧ ಸರದಾರನಾದ ಬುರ್ಹಾಣುದ್ದೀನನು ಟೀಪುವಿನ ದಂಡಿಗೆ ಧಾನ್ಯ ಪೂರೈಸಿಕೊಡಲು ಒಂದು ದೊಡ್ಡ ದಂಡನ್ನೇ ತೆಗೆದುಕೊಂಡು ಹೋಗುತ್ತಿದ್ದನು. ಆಗ್ಗೆ ಆದರ ಒಂದು ಭಾಗದ ಮೇಲೆ ವೀರರಾಜೇಂದ್ರನು

ಬಿದ್ದು ಅದನ್ನು ಮುರಿದೋಡಿಸಿದನು. ಮತ್ತೊಂದು ಭಾಗವು ಬಹಳ ಕಷ್ಟದಿಂದ ಅವನ ಕಯ್ಯಿಂದ ಪಾರಾಗಿ ಟೀಪೂವಿನ ದಂಡನು ಸೇರಿತು. ಆ ಮೇಲೆ ಅವನು ಕುಶಾಲ್ ನಗರದ ಕೋಟೆಯನ್ನು ಮುತ್ತಿ ಹಿಡಿದುಕೊಂಡನು. ಅನಂತರ ಬೆಪ್ಪುನಾಡು ಕೋಟೆಯನ್ನು ಹಿಡಿದುಕೊಂಡು ನಾಶಮಾಡಿದನು. ಭಾಗಾಮಂಡಲವು ಐದು ದಿವಸಗಳ ಯುದ್ಧವಾದ ನಂತರ ಇವನ ಕೈವಶವಾಯಿತು. ಹೀಗೆ ವೀರರಾಜೇಂದ್ರನು ಟೀಪೂವಿನ ದಂಡುಗಳನ್ನು ಸಹ ಚದರಿಸುವಷ್ಟು ಸಾಮರ್ಥ್ಯವನ್ನೂ ತಾಳಿದನು. ಮತ್ತು ಅವನು ಮುಸಲ್ಮಾನರ ಠಾಣ್ಯಗಳನ್ನು ಒಂದರ ಹಿಂದೊಂದು ಕೈವಶಮಾಡಿಕೊಳ್ಳುತ್ತ ಸಾಗಿದನು. ಮತ್ತು ಕಟ್ಟಕಡೆಗೆ ಟೀಪೂವಿನ ಫೌಜದಾರನನ್ನು ಮಡಿಕೇರಿಯಲ್ಲಿ ಮುತ್ತಿದನು. ಈ ಪ್ರಕಾರ ವೀರರಾಜೇಂದ್ರನು ಜಯಶಾಲಿಯಾಗಿ ನಡೆದ ಕಾಲಕ್ಕೆ ಅವನ ಮನೆತನಕ್ಕೆ ಒಂದು ಘೋರ ವಿಪತ್ತು ಸಂಭವಿಸಿತು. ಇದಕ್ಕೆ ಅವನ ವೈರಿಯಾದ ಕೋಟಂಗಡಿ ರಾಜನೇ ಕಾರಣನಾದನು. ವೀರರಾಜೇಂದ್ರನು ತನ್ನ ಮನೆಯವರನ್ನು ಕಿಗ್ಗಟ್ನಾಡಿನಲ್ಲಿ ಕುರ್ಚಿ ಎಂಬಲ್ಲಿ ಸುರಕ್ಷಿತೆಗೋಸ್ಕರ ಇಟ್ಟಿದ್ದನು. ಆಗ ಕೋಟಂಗಡಿ ರಾಜನು ಆ ಗ್ರಾಮದ ಮೇಲೆ ಬಿದ್ದು ಕಾವಲುಗಾರರನ್ನು ಸಂಹರಿಸಿ ವೀರರಾಜೇಂದ್ರನ ಇಬ್ಬರು ಹೆಂಡಿರನ್ನೂ ಅವನ ಮಕ್ಕಳನ್ನೂ, ತಮ್ಮನವುಗನನ್ನೂ ಕೊಂದು ಹೊರಟುಹೋದನು. ಈ ಪ್ರಕಾರ ವೀರರಾಜೇಂದ್ರನಿಗೆ ನಾನಾ ಸಂಕಟಗಳು ಪ್ರಾಪ್ತವಾದವು. ಆದರೆ ಅವನು ಯಾವದನ್ನೂ ಲಕ್ಷಿಸದೆ ಶತ್ರುಗಳ ನಿವಾರಣೆಯಲ್ಲಿಯೇ ತೊಡಗಿದನು. ಮುಂದೆ ಸ್ವಲ್ಪ ದಿನಗಳಲ್ಲಿ ವೀರರಾಜೇಂದ್ರನಿಗೆ ಸುದಿನಗಳು ಪ್ರಾಪ್ತವಾಗುವ ಶುಭಚಿನ್ಹಗಳು ಕಂಗೊಳಿಸ ಹತ್ತಿದವು.

ಟೀಪುವು ತ್ರಾವಣಕೋರ ಮತ್ತು ಮಲಬಾರ ರಾಜ್ಯಗಳ ಮೇಲೆ ಬಿದ್ದಕಾರಣ ಇಲ್ಲಿಯ ರಾಜರಕೂಡ ಇಂಗ್ಲಿಷರು ಒಪ್ಪಂದು ಮಾಡಿಕೊಂಡ ಪ್ರಕಾರ ಅವರು ಅವನಕೂಡ ಯುದ್ಧಕ್ಕೆ ಸನ್ನದ್ಧರಾಗಬೇಕಾಯಿತು. ಇದಲ್ಲದೆ ಈ ಕಾಲಕ್ಕೆ ಟೀಪುವು ನೆಪೋಲಿಯನ್ ಬೋನಾಪಾರ್ಟ ಈತನ ಕೂಡ ಸಂಧಿಯನ್ನು ಮಾಡಲು ಯತ್ನಿಸಿದ್ದರಿಂದ ಗವರ್ನರ ಜನರಲ್ಲನಾದ ಕಾರ್ನವಾಲೀಸನು ಟೀಪುವಿನೊಡನೆ ಯುದ್ಧವನ್ನು ಸಾರಿದನು. ಮತ್ತು ಪಶ್ಚಿಮತೀರದಿಂದ ಟೀಪುವಿನ ರಾಜ್ಯವನ್ನು ಒಳನುಗ್ಗಲಿಕ್ಕೆ ತನ್ನ ಮುಂಬಯಿ ದಂಡಿನವರಿಗೆ ಅಪ್ಪಣೆ ಕೊಟ್ಟನು. ಆಗ

ಮುಂಬಯಿ ಗವ್ಹರ್ನರ ಆ್ಯಬರಕ್ರೋಂಬಿ ಈತನ ಕೆಳಗೆ ಇಂಗ್ಲೀಷರ ಒಂದು ದಂಡು ತೆಲಿಚೇರಿಗೆ ಬಂದಿಳಿಯಿತು. ಆ ಮೇಲೆ ಅವರು ಪಶ್ಚಿಮ ಗಟ್ಟದ ಮಾರ್ಗವಾಗಿ ಶ್ರೀರಂಗ ಪಟ್ಟಣದ ಕಡೆಗೆ ಬರಲು ಪ್ರಯತ್ನಿಸ ಹತ್ತಿದರು. ಈ ಸಂಗತಿಯು ವೀರರಾಜೇಂದ್ರನಿಗೆ ತಿಳಿದ ಕೂಡಲೆ ಅವನು ಇಂಗ್ಲೀಷರೊಡನೆ ಸಂಬಂಧವನ್ನಿಟ್ಟನು. ಆಗ ಅವರಿಬ್ಬರಲ್ಲಿ ಒಂದು ಒಪ್ಪಂದ ವಾಯಿತು. ಇದರಿಂದ ವೀರರಾಜೇಂದ್ರನೂ ಇಂಗ್ಲಿಷರೂ ಟೀಪುವಿನ ವಿರುದ್ಧ ಪರಸ್ಪರ ಸಹಾಯ ಮಾಡಬೇಕೆಂದು ಗೊತ್ತಾಯಿತು.

ಆಗ ಇಂಗ್ಲೀಷರು ಕೊಡಗಿನ ಮಾರ್ಗವಾಗಿ ಟೀಪುವಿನ ರಾಜ್ಯ ವನ್ನು ಅಭಿಯೋಗಿಸಬೇಕೆಂದು ನಿಶ್ಚಯಿಸಿದರು. ಆಗ ಅವರು ತಮ್ಮ ಭಾರವಾದ ತೋಫುಗಳನ್ನು ಗಟ್ಟದ ಮೇಲಿಂದ ಎಳೆದುಕೊಂಡು ಹೋಗಲು ಎತ್ತುಗಳನ್ನು ಪೂರೈಸಲಿಕ್ಕೆ ವೀರರಾಜೇಂದ್ರನಿಗೆ ಹೇಳಿದರು. ಆದರೆ ಅವು ಗಳನ್ನು ಎಳೆಯುವಷ್ಟು ಬಲವುಳ್ಳ ಎತ್ತುಗಳು ಅವನಲ್ಲಿ ಇರಲಿಲ್ಲ. ಆದರೆ ಧೀರನಾದ ವೀರರಾಜೇಂದ್ರನು ಟೀಪುವಿನ ರಾಜ್ಯವನ್ನು ಒಳನುಗ್ಗಿ ರಾಜ ಧಾನಿಯವರೆಗೂ ಹೋಗಿ ಅವನ ಪ್ರಸಿದ್ಧವಾದ ದನಗಳನ್ನು ಹಿಡಿದು ತಂದು ಇಂಗ್ಲೀಷರಿಗೆ ಒಪ್ಪಿಸಿದನು ಹೀಗೆ ಅವನು ಅನೇಕ ಸಾರೆ ಅವರಿಗೆ ಸಹಾಯ ಮಾಡಿದನು. ಜನರಲ್ ಆ್ಯಬರ ಕ್ರೋಂಬಿಯು ಎಲ್ಲ ಸಿದ್ಧತೆಯನ್ನು ಮಾಡಿದಬಳಿಕ ೧೭೯೧ ಫೇಬರವಾರಿಯಲ್ಲಿ ಗಟ್ಟವನ್ನು ಏರಲಿಕ್ಕೆ ಸನ್ನದ್ಧನಾದನು.

ಈ ಕಾಲಕ್ಕೆ ಮಡಿಕೇರಿ ರಾಜಧಾನಿಯು ಇನ್ನೂ ಶತ್ರುಗಳ ವಶ ದಲ್ಲಿಯೇ ಇತ್ತು. ಅದಕ್ಕೆ ವೀರರಾಜೇಂದ್ರನು ಮುತ್ತಿಗೆ ಹಾಕಿದ್ದನು. ಆಗ ಟೀಪುವು ಇಂಗ್ಲೀಷರು ಗಟ್ಟವನ್ನೇರಿ ಕೊಡಗಿನಲ್ಲಿ ಬರುವರೆಂಬ ಸುದ್ದಿಯನ್ನು ಕೇಳಿದಕೂಡಲೆ ಅವನು ಕಾದಿರಖಾನನೆಂಬ ತನ್ನ ಪ್ರೀತಿಯ ಸರದಾರನ ಕೈಕೆಳಗೆ ಒಂದು ದೊಡ್ಡ ದಂಡನ್ನು ಕೊಟ್ಟು, ಮಡಿಕೇ ರಿಯಲ್ಲಿ ಮುತ್ತಲ್ಪಟ್ಟ ತನ್ನ ಸೈನ್ಯದ ಸಹಾಯಕ್ಕೋಸ್ಕರ ಕಳಿಸಿದನು. ಆಗ ವೀರರಾಜೇಂದ್ರನು ಕಾದಿರಖಾನನ ದಂಡಿನೊಡನೆ ಕುಶಾಲನಗರದ ಹತ್ತಿರ ಮುಳ್ಳುಸೋಗೆ ಎಂಬಗ್ರಾಮದ ಹತ್ತಿರ ಯುದ್ಧ ಹೂಡಿದನು. ಈ ಯುದ್ಧದಲ್ಲಿ ಕಾದಿರಖಾನನ ೭೦೦ದಂಡಾಳುಗಳು ಮಡಿದರು. ಮತ್ತು ವೀರರಾಜೇಂದ್ರನು ಅವನ ದಂಡನ್ನು ಸುತ್ತುಗಟ್ಟಿದನು. ಮತ್ತು ಮರುದಿನ ಕೊಡಗರು ಶಸ್ತ್ರ

ಪಾಣಿಗಳಾಗಿ ಮುಸಲ್ಮಾನರ ದಳದ ಮೇಲೆ ಹಲ್ಲೆ ಮಾಡತಕ್ಕದ್ದೆಂದು ಆಜ್ಞಾಪಿಸಿದನು. ಆದರೆ ಹಲ್ಲೆಯಲ್ಲಿ ಕಾದಿರಖಾನನನ್ನು ಮಾತ್ರ ಯಾರೂ ಕೊಲ್ಲಬಾರದು, ಅವನು ನನಗೆ ಉಪಕಾರ ಮಾಡಿದ್ದಾನೆ ಎಂದು ಸಾರಿಸಿದನು.

ಇಲ್ಲಿ ಕಾದಿರಖಾನನು ವೀರರಾಜೇಂದ್ರನ ಮೇಲೆ ಈ ಯಾವ ಉಪಕಾರ ಮಾಡಿದ್ದನೆಂಬದನ್ನು ವಿವರಿಸುವದು ಅವಶ್ಯವದೆ. ವೀರರಾಜೇಂದ್ರನು ಪಿರಿಯಾಪಟ್ಟಣದ ಕಾರಾಗ್ರಹದಿಂದ ತಪ್ಪಿಸಿಕೊಂಡು ಹೋದ ಬಳಿಕ ಟೀಪುವು ಅವನ ಉಳಿದ ಮನೆಯವರನ್ನು ಶ್ರೀರಂಗ ಪಟ್ಟಣಕ್ಕೆ ಒಯ್ದುದ್ದು ವಾಚಕರ ನೆನಪಿನಲ್ಲಿರಬಹುದು. ಆಗ ಈ ಮನೆತನದಲ್ಲಿಯ ಕೆಲವು ಹೆಣ್ಣುಮಕ್ಕಳನ್ನು ಟೀಪುವು ತನ್ನ ಅಂತಃಪುರಕ್ಕೆ ಸೇರಿಸಿಕೊಂಡನು. ಇವರಲ್ಲಿ ವೀರರಾಜೇಂದ್ರನ ತಂಗಿಯೂ ಈ ಅಪಮಾನಕ್ಕೆ ಗುರಿಯಾಗುವ ಪ್ರಸಂಗವು ಬಂದಿತು. ಆಗ ಈ ಕಾದಿರಖಾನನು ಆಕೆಯನ್ನು ಈ ಅವಮಾನದಿಂದ ತಪ್ಪಿಸಿ ಆಕೆಯ ಪರಿಚಾರಕರೊಂದಿಗೆ ಆಕೆಯನ್ನು ಪುನಃ ವೀರರಾಜೇಂದ್ರನ ಕಡೆಗೆ ಸುರಕ್ಷಿತವಾಗಿ ಕಳಿಸಿಕೊಟ್ಟಿದ್ದನು. ಕಾದಿರಖಾನನು ತನಗೆ ಮಾಡಿದ ಈ ಉಪಕಾರವನ್ನು ಸ್ಮರಿಸಿ ಅವನನ್ನು ಯುದ್ಧದಲ್ಲಿ ಕೊಲ್ಲಬಾರದೆಂದು ಮೇಲ್ಕಂಡ ರೀತಿಯಾಗಿ ವೀರರಾಜೇಂದ್ರನು ತನ್ನ ದಂಡಿನಲ್ಲಿ ಆ ದಿನ ಸಾರಿಸಿದನು.

ಹೀಗೆ ಸಾರಿದ್ದನ್ನು ಕಾದಿರಖಾನನು ತಿಳಿದ ಕೂಡಲೆ ತಾನು ಮಡಿಕೇರಿಯ ದಂಡಿಗೆ ಸಹಾಯ ಮಾಡದೆ ತಾನೊಬ್ಬನೇ ಹೀಗೆ ಜೀವದಿಂದ ಪಾರಾಗಿ ಟೀಪುವಿನ ಕಡೆಗೆ ಬಂದರೆ ಅವನು ತನ್ನನ್ನೂ ತನ್ನ ಮನೆಯವರನ್ನೂ ನಿಶ್ಚಯವಾಗಿ ನಾಶಮಾಡುವನೆಂದು ವೀರರಾಜೇಂದ್ರನಿಗೆ ಹೇಳಿಕಳಿಸಿಕೊಟ್ಟನು. ಇದು ವೀರರಾಜೇಂದ್ರನಿಗೆ ನಿಜವೆಂದು ತೋರಿತು. ಆಗ ಅವನು ಕಾದಿರಖಾನನ ಮೇಲೆ ಹಲ್ಲೆಯನ್ನು ಮಾಡುವದನ್ನು ಬಿಟ್ಟುಕೊಟ್ಟನು, ಇಷ್ಟೇ ಅಲ್ಲ, ಅವನು ತನ್ನ ಮುತ್ತಿಗೆಯನ್ನು ಎಬ್ಬಿಸಿ ಕಾದಿರಖಾನನು ತನ್ನ ದಂಡಿನೊಂದಿಗೆ ಮಡಿಕೇರಿಯಲ್ಲಿ ಸುತ್ತುಗಟ್ಟಲ್ಪಟ್ಟ ತನ್ನ ಮುಸಲ್ಮಾನ ದಂಡನ್ನು ಕೂಡಲೂ ಸಹ ಕೊಟ್ಟನು! ವಾಚಕರೇ, ವೀರರಾಜೇಂದ್ರನ ಈ ಔದಾರ್ಯದಿಂದ ಪರಿಪೂರ್ಣವಾದ ಅತ್ಯದ್ಭುತ ವರ್ತನೆಯನ್ನು ನೋಡಿದಿರಾ. ತನ್ನ ರಾಜಧಾನಿಯನ್ನು ವೈರಿಗಳು ಆಕ್ರಮಿಸಿದ್ದಾರೆ. ಅವರ ಸಹಾಯಕ್ಕೋಸ್ಕರ ತನ್ನ ಕಡುವೈರಿಯು ಒಂದು

ಸೈನ್ಯವನ್ನು ಕಳಿಸಿದ್ದಾನೆ. ಆ ಸೈನ್ಯವನ್ನು ತುಂಡು ತುಂಡು ಮಾಡುವಷ್ಟು ತನ್ನಲ್ಲಿ ಸಾಮರ್ಥ್ಯವಿದೆ. ಆದರೂ ತನ್ನ ಮನೆತನದ ಒಬ್ಬ ಸ್ತ್ರೀಯಳ ಅಭಿಮಾನ ಕಾಯ್ದುದ್ದರ ಉಪಕಾರವನ್ನು ಅವನು ಮನ್ನಿಸಿ ತನ್ನ ಎದು ರಾಳಿಯನ್ನು ಸಹ ತಡವದೆ ಬಿಟ್ಟು ಕೊಡುತ್ತಾನೆ. ಇದು ನಿಜವಾದ ಧರ್ಮವಲ್ಲವೇ? ಈ ತರದ ಉದಾಹರಣೆಯು ಪೃಥ್ವಿಯ ಇತಿಹಾಸದಲ್ಲಿ ಬಹು ಸ್ವಲ್ಪ ಸಿಗಬಹುದು.

ಇತ್ತ ಇಂಗ್ಲೀಷರು ಮಡಿಕೇರಿಯು ರಾಜನ ಕೈಗೆ ಎಂದು ಬೀಳ ಬಹುದೋ ಎಂಬದನ್ನು ನಿರೀಕ್ಷಿಸುತ್ತಲಿದ್ದರು. ಕಾದಿರಖಾನನು ಕಡು ಗಾಳಗದಲ್ಲಿ ಸೋತಿರುವನೆಂತಲೂ ಅವರು ಸುದ್ದಿಯನ್ನು ಕೇಳಿದ್ದರು. ಅಷ್ಟರಲ್ಲಿ ವೀರರಾಜೇಂದ್ರನು ಜನರಲ್ ಅಬರ ಕ್ರೊಂಬೀಯ ಕಡೆಗೆ ತಾನೇ ಮೊದಲಿಗೆ ಬಂದು, ಕಾದಿರಖಾನನು ತನ್ನ ಕೈಗೆ ಸಿಕ್ಕಿದ್ದರೂ ಅವನನ್ನು ಮಡಿಕೇರಿಗೆ ಬಿಟ್ಟುಕೊಟ್ಟೆನೆಂದು ಹೇಳಿದನು. ಆಗ ಜನರಲ್ ಅಬರ ಕ್ರೊಂಬಿಗೆ ಕೊಡಗರಾಜನು ತನಗೆ ದ್ರೋಹ ಬಗೆದನೆಂಬ ಸಂಶಯವು ಹುಟ್ಟಿತು. ಆದರೆ ವೀರರಾಜೇಂದ್ರನು ತಾನು ಹೀಗೆ ಬಿಟ್ಟುಕೊಟ್ಟ ನಿಜ ವಾದ ಕಾರಣವನ್ನು ತಿಳಿಸಲು ಮನಸ್ಸು ಮಾಡದೆ, ತಾನು ಪಿರಿಯಾ ಪಟ್ಟಣದಲ್ಲಿ ಸೆರೆ ಸಿಕ್ಕಾಗ, ಒಂದು ದಿನ ಬೇಟೆಯಾಡಲಿಕ್ಕೆ ಹೋಗಿದ್ದು ರಾತ್ರೆಯಾಗಲು ಕಾದಿರಖಾನನು ರಾತ್ರಿಯಲ್ಲಿ ತನಗೆ ಆಶ್ರಯಕೊಟ್ಟು ಸತ್ಕರಿಸಿದನು. ಮತ್ತು ಈ ಉಪಕಾರ ಸ್ಮರಣೆಗೋಸ್ಕರ ತಾನು ಕಾದಿರಖಾ ನನನ್ನು ಬಿಟ್ಟೆನೆಂದು ಬೇರೊಂದು ಕಾರಣವನ್ನು ಹೇಳಿದನು. ಆದರೆ ಇಷ್ಟರಲ್ಲಿ ಅಬರ ಕ್ರೊಂಬಿಯು ವೀರರಾಜೇಂದ್ರನ ಅತ್ಯುಚ್ಚ ಸ್ವಭಾವವನ್ನು ಚನ್ನಾಗಿ ಅರಿತವನಾಗಿದ್ದನು. ಆದ್ದರಿಂದ ಅವನಲ್ಲಿ ಯಾವತರದ ದ್ರೋಹವು ಇರಲಾರದೆಂದು ತಿಳಿದು ಅವನ ಮೇಲೆ ವಿಶ್ವಾಸವಿಟ್ಟನು.

ಆ ಮೇಲೆ ವೀರರಾಜೇಂದ್ರನು ಮಡಿಕೇರಿಯ ಕೋಟೆಯನ್ನು ಮುತ್ತ ಲಿಕ್ಕೆ ಹೊರಟನು. ಜನರಲ್ ಅಬರಕ್ರೊಂಬಿಯು ಅವನ ಸಹಾಯಕ್ಕೆ ತನ್ನ ಕೆಲವು ದಂಡು ಕಳಿಸಿ ಕೊಡುವೆನೆಂದು ಹೇಳಿದನು. ಆದರೆ ವೀರ ರಾಜೇಂದ್ರನು ಅದಕ್ಕೆ ಒಪ್ಪಲಿಲ್ಲ. ಅವನು ತನ್ನ ಕೊಡಗರೊಂದಿಗೆ ಮುಸಲ್ಮಾನರನ್ನು ಮಡಿಕೇರಿಯಲ್ಲಿ ಮುತ್ತಿದನು. ಆದರೆ ಮುತ್ತಿಗೆಯು ಬಹಳ ದಿವಸ ಸಾಗಲಿಲ್ಲ. ಮುಸಲ್ಮಾನರು ರಾಜಧಾನಿಯನ್ನು ವೀರರಾ ಜೇಂದ್ರನಿಗೆ ಬಿಟ್ಟುಕೊಟ್ಟು ತಮ್ಮ ದೇಶಕ್ಕೆ ಹೊರಟರು. ಆಗ ವೀರರಾ

ಜೇಂದ್ರನು ಈ ಮುಸಲ್ಮಾನ ದಂಡಾಳುಗಳನ್ನು ಏನೂ ಹಿಂಸೆಮಾಡಲಿಲ್ಲ, ಇಷ್ಟೇ ಅಲ್ಲ, ಅವರಿಗೆ ಶ್ರೀರಂಗ ಪಟ್ಟಣಕ್ಕೆ ಹೋಗಲು ಯಾವತ್ತು ಸಾಮುಗ್ರಿಗಳನ್ನೂ ಹಣವನ್ನೂ ಸಹ ಕೊಟ್ಟು ಸುರಕ್ಷಿತವಾಗಿ ಕಳುಹಿಸಿದನು! ಯಾಕಂದರೆ ಈ ದಂಡಾಳುಗಳ ಅಧಿಪತಿಯು ಕಾದೀರಖಾನನಾಗಿದ್ದನು.

ಈ ಮೇರೆಗೆ ವೀರರಾಜೇಂದ್ರನು ತನ್ನ ಸ್ವಂತ ಪರಾಕ್ರಮದಿಂದ ೧೭೮೮ ರಿಂದ ೧೭೯೧ ರ ವರೆಗೆ ಅಂದರೆ ಮೂರುವರ್ಷಗಳವರೆಗೆ ಒಂದೇ ಸವನೇ ವೈರಿಗಳೊಡನೆ ಕಾದಾಡಿ ಅವರನ್ನು ತನ್ನ ದೇಶದ ಹೊರಗೆ ಅಟ್ಟಿದನು. ಮತ್ತು ಕಡೆಗೆ ಕೊಡಗ ದೇಶವನ್ನು ಕೊಡಗರಿಗೆ ಮಾಡಿದನು. ಯಾವ ಬಲಾಢ್ಯ ಬಾದಶಹನು ಕೊಡಗರನ್ನು ನಿರ್ಮೂಲ ಮಾಡಬೇಕೆಂದು ಎಣಿಸಿದ್ದನೋ ಅವನ ಪ್ರಯತ್ನಗಳನ್ನು ಅವನು ನಿಷ್ಫಲ ಮಾಡಿದನು. ಇದರಲ್ಲಿ ಅವನು ತೋರಿಸಿದ ಅತುಲ ಪರಾಕ್ರಮ ಮತ್ತು ಅಸದೃಶ ಸಾಹಸ ಇವುಗಳನ್ನು ನೋಡಿ ಪ್ರತಿಯೊಬ್ಬ ಕರ್ನಾಟಕಸ್ಥನು ಈ ವೀರಶೈವ ರಾಜನ ಬಗ್ಗೆ ಅಭಿಮಾನ ತಾಳಬಹುದಾಗಿದೆ.

ಆಮೇಲೆ ಅಬರ ಕ್ರೋಂಬಿಯು ಗಟ್ಟವನ್ನೇರಿ ಕೊಡಗಿನೊಳಗಿಂದ ಹಾಯ್ದು ಲಾರ್ಡ ಕಾರ್ನವಾಲೀಸನನ್ನು ಕೂಡಿದನು. ಅವರೊಡನೆ ವೀರರಾಜೇಂದ್ರನೂ ಇದ್ದನು. ಆಗ ಟೀಪುವು ವೀರರಾಜೇಂದ್ರನಿಗೆ ಇಂಗ್ಲೀಷರ ಪಕ್ಷವನ್ನು ಬಿಟ್ಟು ತನಗೆ ಸಹಾಯ ಮಾಡುವದಾದರೆ ಮೈಸೂರು ಸೀಮೆಯ ಪಶ್ಚಿಮ ದಿಕ್ಕಿನಲ್ಲಿರುವ ತಾಲೂಕುಗಳನ್ನೆಲ್ಲ ಬಿಟ್ಟು ಕೊಡುವೆನೆಂದು ಕಾದೀರಖಾನನ ಸಂಗಡ ಹೇಳಿ ಕಳುಹಿಸಿದನು. ಅದಕ್ಕೆ ವೀರರಾಜನು- "ನೀನು ಮೊದಲು ಹೀಗೆಯೇ ಒಳ್ಳೆಯ ಮಾತನಾಡಿ ಕೊಡಗರನ್ನು ಮೋಸಗೊಳಿಸಿ ಸೆರೆ ಹಿಡಿದು ಕೊಡಗು ದೇಶವನ್ನು ಹಾಳು ಮಾಡಿದಿ. ನಿನ್ನ ಹಾಗೆ ಸುಳ್ಳು ಹೇಳಲಿಕ್ಕೆ ನನ್ನಿಂದ ಆಗದು. ನನಗೆ ಒಂದೇ ನಾಲಿಗೆ. ನಿನ್ನಹಾಗೆ ಎರಡಿಲ್ಲ. ನಾನು ಇಂಗ್ಲಿಷರಿಗೆ ಸಹಾಯ ಮಾಡುವೆನೆಂದು ಒಪ್ಪಿದ್ದೇನೆ. ಅದರಂತೆ ನಡೆಯುವೆನು" ಎಂದು ಪ್ರತ್ಯುತ್ತರ ಹೇಳಿ ಕಳುಹಿಸಿದನು. ಮುಂದೆ ಲಾರ್ಡಕಾರ್ನವಾಲೀಸನು ಶ್ರೀರಂಗ ಪಟ್ಟಣದಮೇಲೆ ಲಗ್ಗೆ ಏರಿದನು. ಆ ಗೊಂದಲದಲ್ಲಿ ಟೀಪುವಿನ ದಂಡಿನಲ್ಲಿದ್ದ ೧೦,೦೦೦ ಕೊಡಗರು ತಮ್ಮ ಹೆಂಡರು ಮಕ್ಕಳನ್ನು ತೆಗೆದುಕೊಂಡು ಟೀಪುವಿನ ದಂಡನ್ನು ಬಿಟ್ಟುಕೊಟ್ಟು ತಮ್ಮ ಕೊಡಗುನಾಡನ್ನು

ಸೇರಿದರು. ಆ ಮೇಲೆ ಟೀಪುವು ಇಂಗ್ಲೀಷರೊಂದಿಗೆ ಒಪ್ಪಂದ ಮಾಡಿಕೊಂಡನು. ಇದರಿಂದ ಟೀಪುವು ತನ್ನ ಅರ್ಧರಾಜ್ಯವನ್ನು ಬಿಟ್ಟುಕೊಡಬೇಕು, ಎಂದು ಗೊತ್ತಾಯಿತು. ಅದರಲ್ಲಿ ಕೊಡಗು ದೇಶವೂ ಸಮಾವೇಶವಾಗಿತ್ತು. ಇದಕ್ಕೆ ಟೀಪುವು ಬಹಳ ವಿರೋಧಿಸಿದನು. "ಕೊಡಗು ದೇಶವನ್ನು ಬೇಡುವವರಕಿಂತ ನನ್ನ ಶ್ರೀರಂಗ ಪಟ್ಟಣದ ಕೋಟೆಯ ಕೀಲೀಕೈಯ್ಯನ್ನು ಬೇಡಿರಿ. ಕೊಡಗನ್ನು ಸರ್ವಥಾ ಬಿಡಲಾರೆನು" ಎಂದು ಹಟಹಿಡಿದನು. ಆಗ ಇಂಗ್ಲೀಷರು ಪುನಃ ಯುದ್ಧವನ್ನು ಪ್ರಾರಂಭಿಸುವೆವೆಂದು ನಿಷ್ಠುರವಾಗಿ ಹೇಳಿದಬಳಿಕ ಈ ಶರ್ತಿಗೆ ಟೀಪುವು ಒಪ್ಪಿಕೊಂಡನು.

ಆ ಮೇಲೆ ವೀರರಾಜೇಂದ್ರನು ತನ್ನ ದೇಶವನ್ನು ಸಮಾಧಾನವಾಗಿ ಆಳತೊಡಗಿದನು. ಆದರೆ ಟೀಪುವು ಇಷ್ಟುದಿವಸ ತನಗೆ ತೊಂದರೆ ಕೊಟ್ಟ ವೀರರಾಜೇಂದ್ರನನ್ನು ಹೇಗಾದರೂ ಮಾಡಿ ಕೊಲ್ಲಿಸಬೇಕೆಂದು ಆಲೋಚಿಸಿದನು. ಆಗ ಅರಸನ ಆಪ್ತರಲ್ಲಿ ಒಬ್ಬನಾದ ಲಿಂಗರಾಜನನ್ನು ತನ್ನಂತೆ ಮಾಡಿಕೊಂಡು ಅರಸನು ಬೇಟೆಗೆ ಹೋದ ಕಾಲದಲ್ಲಿ ಮೋಸದಿಂದ ಗುಂಡು ಹೊಡೆದು ಕೊಲ್ಲಬೇಕೆಂದು ಅವನನ್ನು ಕಳಿಸಿದನು. ಆದರೆ ಆ ಪ್ರಯತ್ನವು ಸಫಲವಾಗಲಿಲ್ಲ. ಟೀಪುವು ರಾಜನನ್ನು ಹೊಡೆಯಲಿಕ್ಕೆ ಪುನಃ ತನ್ನ ಸೈನಿಕರಲ್ಲಿ ಗಟ್ಟಿಗರಾದ ಇಬ್ಬರು ಶಿಸ್ತುಗಾರರನ್ನು ಲಿಂಗರಾಜನಲ್ಲಿಗೆ ಕಳುಹಿಸಿದನು. ರಾಜನು ಶಿವರಾತ್ರಿ ಹಬ್ಬದಲ್ಲಿ ನಾಲ್ಕು ನಾಡು ಅರಮನೆಯಿಂದ ಮಡಿಕೇರಿಗೆ ಬರುವ ದಾರಿಯಲ್ಲಿ ಇವರು ಹೊಂಚು ಹಾಕಿಕೊಂಡು ಕುಳಿತಿದ್ದರು. ಆದರೆ ರಾಜನು ಇದನ್ನು ತಿಳಿದು ಲಿಂಗರಾಜನನ್ನೂ ಅವನ ಹೆಂಡಿರು ಮಕ್ಕಳನ್ನೂ ಅದೇ ರಾತ್ರಿ ತಲೆ ಹೊಡಿಸಿ, ಶಿಸ್ತುಗಾರರನ್ನು ಸೆರೆ ಹಿಡಿಸಿ ಅವರ ಒಂದೊಂದು ಕಾಲನ್ನು ಕಡಿಸಿ ಹಾಕಿಸಿದನು.

ಮುಂದೆ ೧೭೯೯ ರಲ್ಲಿ ಮೈಸೂರಿನ ಕಡೆಯ ಯುದ್ಧವು ಪ್ರಾರಂಭವಾಯಿತು. ಆಗಲೂ ವೀರರಾಜೇಂದ್ರನು ಇಂಗ್ಲಿಷರಿಗೆ ಸಹಾಯ ಮಾಡಿದನು. ಸಿದ್ಧೇಶ್ವರದಲ್ಲಿ ಟೀಪುವಿನೊಡನೆ ಆದ ಕಾಳಗದಲ್ಲಿ ವೀರರಾಜೇಂದ್ರನೂ ಇದ್ದನು. ಮುಂದೆ ಶ್ರೀರಂಗ ಪಟ್ಟಣದ ಮುತ್ತಿಗೆಯಲ್ಲಿ ಟೀಪುವು ಮರಣಹೊಂದಿದನು. ಇಂಗ್ಲಿಷರು ಮೈಸೂರು ಸಂಸ್ಥಾನವನ್ನು ಪೂರ್ವದ ಹಿಂದೂ ರಾಜರಿಗೆ ಬಿಟ್ಟುಕೊಟ್ಟರು. ಆ ಮೇಲೆ ವೀರರಾಜೇಂದ್ರನು ಅಬಾಧಿತವಾಗಿ ತನ್ನ ದೇಶವನ್ನು ಆಳತೊಡಗಿದನು.

## ಕಡೆಯ ದಿವಸಗಳು ಮತ್ತು ಮರಣ.

ವೀರರಾಜೇಂದ್ರನು ತನ್ನ ಅಂತ್ಯಕಾಲವನ್ನು ಸುಖದಿಂದ ಕಳೆಯ ಲಿಲ್ಲ. ವೀರರಾಜೇಂದ್ರನಿಗೆ ಪುತ್ರಸಂತಾನವಿದ್ದಿದ್ದಿಲ್ಲ. ಆದ್ದರಿಂದ ೧೭೯೬ ರಲ್ಲಿ ಮಹಾದೇವಮ್ಮ ಎಂಬವಳನ್ನು ಮದುವೆ ಮಾಡಿಕೊಂಡನು. ಇವ ಳಿಂದಲೂ ಗಂಡುಮಕ್ಕಳಾಗಲಿಲ್ಲ. ಗಂಡುಮಕ್ಕಳಿಲ್ಲದೆ ಸತ್ತರೆ ರಾಜ್ಯವನ್ನು ದಾಯಾದಿಗಳು ಕಿತ್ತುಕೊಳ್ಳುವರು. ಅಥವಾ ಅವರು ಒಂದುವೇಳೆ ವಿಷ ವನ್ನು ಹಾಕಿ ತನ್ನನ್ನೇ ಕೊಲ್ಲುವರು ಎಂದು ಸಂಶಯ ಪಡಹತ್ತಿದನು. ೧೮೦೭ ರಲ್ಲಿ ಇವನ ಮೋಹದ ರಾಣಿಯೂ ತೀರಿ ಹೋದಳು. ಅನಂತರ ಈತನಿಗೆ ವ್ಯಸನವು ಪ್ರಾಪ್ತನಾಯಿತು. ಅಂದಿನಿಂದ ಇವನ ನಡತೆಯೇ ಬೇರೆಯಾಯಿತು. ಸಂಶಯ ಗ್ರಸ್ತನಾಗಿ ಅನೇಕರು ತನ್ನನ್ನು ದ್ವೇಷಿಸು ತ್ತಾರೆಂದು ತಿಳಿದುಕೊಂಡನು. ಅವನ ತಲೆಯೇ ತಿರುಗಿತು. ಮುಂದೆ ಅವನು ಬಹಳ ಕ್ರೂರತನದಿಂದ ವರ್ತಿಸಹತ್ತಿದನು. ಇದನ್ನು ಸಹಿಸಲಾರದೆ ಕೆಲವು ಜನರು ಅವನನ್ನು ಕೊಲ್ಲಲಿಕ್ಕೆ ಸಂಚು ಮಾಡಿದರು. ಇಂಥಾ ದಿವಸ ಇಂತಿಷ್ಟು ಹೊತ್ತಿಗೆ ಅರಸನನ್ನು ಕೊಲ್ಲಬೇಕೆಂದು ನಿಶ್ಚಯಿಸಿ ದರು. ಆದರೆ ಈ ಸಂಗತಿಯು ಅರಸನಿಗೆ ಹೇಗೋ ತಿಳಿಯಿತು. ಆದರೆ ಅವನು ಎದೆಗುಂದದೆ ಕೆಲವು ಬಟ್ಟೆಗಳನ್ನು ಗಂಟು ಕಟ್ಟಿ ತನ್ನ ಹಾಸಿ ಗೆಯಲ್ಲಿಟ್ಟು ಅದರ ಮೇಲೆ ಕಂಬಳಿಯನ್ನು ಹೊದ್ದಿಸಿ ತಾನೂ ಎಲ್ಲಿಯೋ ಅವಿತುಕೊಂಡನು. ಸರಿಯಾದ ಹೊತ್ತಿಗೆ ೩೦೦ ಜನ ಸಂಚುಗಾರರು ಅರ ಮನೆಯನ್ನು ಪ್ರವೇಶಿಸಿ ರಾಜನು ನಿದ್ದೆ ಹೋಗಿರಬಹುದೆಂದು ತಿಳಿದು ಕೊಂಡು ಕಂಬಳಿಯ ಕೆಳಗಿಟ್ಟ ಬಟ್ಟೆ ಗಂಟನ್ನು ಚೂರುಚೂರಾಗಿ ಕತ್ತರಿಸಿದರು. ಅಷ್ಟರಲ್ಲಿ ವೀರರಾಜೇಂದ್ರನು ಹೊರಗೆ ಓಡಿ ಹೋಗಿ ತನ್ನ ಕಾವಲುಗಾರರನ್ನು ಕರಿಸಿ, ಕೋಟೆಯ ಬಾಗಿಲುಗಳನ್ನು ಭದ್ರಪಡಿಸಿ, ಒಳಗೆ ಕೂಡಿದ್ದ ೩೦೦ ಜನ ಸಂಚುಗಾರರ ತಲೆ ಹೊಡೆಯಲಿಕ್ಕೆ ಆಜ್ಞಾ ಪಿಸಿ ತಾನೂ ಒಂದು ಕಿಟಕಿಯ ಹಿಂದೆ ಕುಳಿತುಕೊಂಡನು. ಆಗ ಅವನು ಗುಂಡು ಹಾರಿಸಿ ೨೫ ಜನರನ್ನು ಕೊಂದನು. ಉಳಿದವರೆಲ್ಲ ಅವನ ಕಾವ ಲುಗಾರರು ಕಡಿದು ಹಾಕಿದರು. ಆಗ ರಾಜಾಂಗಣದಲ್ಲಿ ರಕ್ತದ ಕಾವ ಲಿಯು ಹರಿಯಿತು. ಈ ಸಂಗತಿಯು ೧೮೦೭ ರಲ್ಲಿ ಸಂಭವಿಸಿತು.

ಈ ಸಂಗತಿಯು ವರ್ತಿಸಿದಬಳಿಕ ರಾಜನು ಹುಚ್ಚು ಹುಚ್ಚಾಗಿ ನಡೆಯಹತ್ತಿದನು. ಆದರೆ ಅವನು ಮುಂದೆ ಬಹಳ ದಿವಸ ಬಾಳಲಿಲ್ಲ. ಅವನು ೧೮೦೯ ರಲ್ಲಿ ಕಾಲವಾದನು. ಆಗ ಅವನಿಗೆ ನಾಲ್ಕು ಮಂದಿ ಹೆಣ್ಣುಮಕ್ಕಳು ಮಾತ್ರ ಇದ್ದರು. ಅವನು ಸಾಯುವ ಮುಂದೆ ತನ್ನ ಹಿರಿಯ ಮಗಳಾದ ದೇವಮ್ಮಾಜಿಯು ಪಟ್ಟವೇರಬೇಕೆಂತಲೂ ಸ್ವಾದಿಯ ರಾಜನು ಆಕೆಯ ದಿವಾನನಾಗಿ ರಾಜ್ಯಭಾರ ಮಾಡಬೇಕೆಂತಲೂ ವ್ಯವಸ್ಥೆ ಮಾಡಿದನು. ಆ ಮೇರೆಗೆ ದೇವಮ್ಮಾಜಿಯು ಪಟ್ಟವೇರಿ, ಸ್ವಾದಿಯ ಅರಸನ ಸಹಾಯದಿಂದ ರಾಜ್ಯವಾಳ ತೊಡಗಿದಳು.

## ವೀರರಾಜೇಂದ್ರನು ಮಾಡಿದ ಕಾರ್ಯಗಳು ಮತ್ತು ಅವನ ಗುಣಗಳು.

ಮೇಲ್ಕಂಡ ವಿವರಣೆಯಿಂದ ವೀರರಾಜೇಂದ್ರನು ಎಂಥ ಅಲೌಕಿಕ ಪುರುಷನಾಗಿದ್ದನೆಂಬದನ್ನು ನಾವು ವಾಚಕರಿಗೆ ಹೇಳುವ ಅವಶ್ಯವಿಲ್ಲ. ಕರ್ನಾಟಕದ ಮಹಿಮೆ ಮತ್ತು ಅಸ್ತಿತ್ವವನ್ನು ಕಾಪಾಡಲು ಅತ್ಯದ್ಭುತವಾಗಿ ಹೋರಾಡಿದ ಮಹಾ ಪುರುಷರಲ್ಲಿ ಇವನನ್ನು ನಾವು ನಿಸ್ಸಂದೇಹವಾಗಿ ಗಣಿಸಬಹುದು. ತನ್ನ ರಾಜ್ಯದ ಮೇಲೆ ಮಹತ್ತರವಾದ ಸಂಕಟವು ಪ್ರಾಪ್ತವಾಗಿರಲು ಅವನು ಎದೆಗೊಟ್ಟು ಕಾದಾಡಿ ಅದನ್ನು ರಕ್ಷಿಸಿದನು. ಅವನ ವೈರಿಯು ಅತ್ಯಂತ ಬಲಾಢ್ಯನು. ಅವನ ರಾಜ್ಯವು ಆ ಕಾಲಕ್ಕೆ ಕೃಷ್ಣಾನದಿಯಿಂದ ದಕ್ಷಿಣಕ್ಕೆ ತ್ರಾವಣ ಕೋರದವರೆಗೂ ಪಸರಿಸಿ ಆಗಿನ ಹಿಂದುಸ್ತಾನ ದೇಶದಲ್ಲಿ ಅತ್ಯಂತ ಬಲಾಢ್ಯನೆಂದು ಹೆಸರುಗೊಂಡಿದ್ದನು. ಆದರೆ ಕೊಡಗು ಚಿಕ್ಕ ದೇಶವು. ಆದರೂ ವೀರರಾಜೇಂದ್ರನು ಅವನಿಗೆ ಹೆದರದೆ ಕಾದಾಡಲು ಸನ್ನದ್ಧನಾದನು. ಟೀಪುವು ಕೊಡಗರನ್ನು ನಿರ್ಮೂಲ ಮಾಡಿ ಅವರ ದೇಶವನ್ನು ಮುಸಲ್ಮಾನಧರ್ಮಿಗಳಿಂದ ತುಂಬಲು ಪ್ರಯತ್ನಿಸಿದನು. ಆದರೆ ಅವನ ಈ ಸಂಕೇತವನ್ನು ವೀರರಾಜೇಂದ್ರನು ಸಿದ್ಧಿಗೆ ಒಯ್ಯಗೊಡಲಿಲ್ಲ ಹೀಗೆ **ಅವನು ಕೊಡಗಸೀಮೆಯನ್ನು ಕೊಡಗರಿಗಾಗಿ ಉಳಿಸಿ ಕೊಡಗ ಜನಾಂಗವನ್ನು ರಕ್ಷಿಸಿದನು. ಅವನು ಮಾಡಿದ ಈ ಕಾರ್ಯವು ಮಹತ್ವದ್ದಲ್ಲೆಂದು ಯಾರು ಅನ್ನಬಹುದು? ಅವನು ಮಾಡಿದ ಈ ಕಾರ್ಯದಿಂದ ಅವನ ಹೆಸರು ಕರ್ನಾ**

ಟಕದ ಇತಿಹಾಸದಲ್ಲಿ ಚಿರಸ್ಮರಣೀಯವಾಗಿ ಉಳಿಯುವದರಲ್ಲಿ ಏನು ಸಂದೇಹವಿಲ್ಲ.

ವೀರರಾಜೇಂದ್ರನು ಹ್ಯಾಗೆ ಶೂರನೋ ಹಾಗೆಯೇ ಅವನು ಉದಾರಿಯೂ, ಕಾರುಣ್ಯ ಪೂರಿತ ಹೃದಯನೂ, ದೀರ್ಘ ದೃಷ್ಟಿಯುಳ್ಳವನೂ, ಅತ್ಯಂತ ಕೃತಜ್ಞತಾ ಬುದ್ಧಿಯುಳ್ಳವನೂ, ಪ್ರಸಂಗಾವಧಾನಿಯೂ, ಆಗಿದ್ದನು. ಅವನು ಮಾಡಿದ ಪ್ರತಿಯೊಂದು ದೌಡಿನಲ್ಲಿ ಈ ಎಲ್ಲ ಸಂಗತಿಗಳು ಸ್ಪಷ್ಟವಾಗಿ ವ್ಯಕ್ತವಾಗುತ್ತವೆ. ಇವನು ಒಂದು ಕಾಲಕ್ಕೆ ಮಂಗಳೂರ ಜಿಲ್ಹೆ ಮತ್ತು ಮೈಸೂರು ಪ್ರಾಂತ ಇವುಗಳಲ್ಲಿ ಕೊಳ್ಳೆ ಇಟ್ಟು ಸುಲಿಗೆ ಮಾಡಿದ್ದರಿಂದ ಇವನಿಗೆ ಕೆಲವರು ದೋಷ ವಿಡುವದುಂಟು. ಆದರೆ ಇವುಗಳು ವೈರಿ ರಾಜ್ಯಗಳಾಗಿದ್ದವು. ಮತ್ತು ಅವನು ಆಗ ಅತ್ಯಂತ ವಿಪತ್ಕಾಲಕ್ಕೆ ಒಳಗಾಗಿದ್ದನು. ಇಡೀ ಕೊಡಗು ಜನಾಂಗವೆಲ್ಲ ಉಪವಾಸ ಸಾಯುವ ಹೊತ್ತು ಬಂದಿತ್ತು. ಆದ್ದರಿಂದ ಅವನು ಹಣ ಮತ್ತು ಧಾನ್ಯ ಸಂಗ್ರಹಕ್ಕೋಸ್ಕರ ಇಲ್ಲಿಯ ಪಟ್ಟಣಗಳ ಸುಲಿಗೆ ಮಾಡಬೇಕಾಯಿತು. ಅವನಿಗೆ ಒದಗಿದ ಈ ಪರಿಸ್ಥಿತಿಯಲ್ಲಿ ಅವನು ಹೀಗೆ ವರ್ತಿಸಿದ್ದು ಅರಿದಲ್ಲ. ಆದರೆ ಅವನು ನಿಜವಾಗಿ ದೊಡ್ಡ ಮನಸ್ಸಿನವನಾಗಿದ್ದನು. ಅದರಂತೆಯೇ ಅವನು ಧಾರ್ಮಿಕ ಬುದ್ಧಿಯವನೂ ಇದ್ದನು ಒಂದು ಸಾರೆ ಅವನು ಭಾಗಾ ಮಂಡಲದ ಮೇಲೆ ಹಲ್ಲೆಯನ್ನು ಮಾಡಿದಾಗ್ಗೆ ಅಲ್ಲಿಯ ದೇವಸ್ಥಾನದ ಮೇಲೆ ಹಾಕಿದ ಮೂರು ತಾಮ್ರದ ಹಂಚುಗಳು ಗುಂಡು ತಾಕಿ ಕೆಟ್ಟು ಹೋದವು. ಆದರೆ ವೀರರಾಜೇಂದ್ರನು ಅವುಗಳ ಬದಲಾಗಿ ಬೆಳ್ಳಿಯ ಹಂಚುಗಳನ್ನು ಮಾಡಿಸಿ ಹಾಕಿಸಿದನು. ಟೀಪುವು ಕೊಡಗರನ್ನೆಲ್ಲ ಶ್ರೀರಂಗ ಪಟ್ಟಣಕ್ಕೆ ಎಳೆದೊಯ್ದಾಗ ಅವರಲ್ಲಿ ಅನೇಕ ಬ್ರಾಹ್ಮಣ ಮನೆತನಗಳಿದ್ದವು. ಇದರಿಂದ ಕೊಡಗರಿಗೆ ದೇಶದಲ್ಲಿ ಧರ್ಮ ಕಾರ್ಯಗಳಿಗೆ ಪ್ರತಿಬಂಧಕ ಉಂಟಾಗಹತ್ತಿತು. ಆದ್ದರಿಂದ ಮಂಗಳೂರ ಜಿಲ್ಹೆಯಿಂದ ಅನೇಕ ಬ್ರಾಹ್ಮಣರನ್ನು ಕೊಡಗಿಗೆ ತರಿಸಿದನು. ಒಮ್ಮೊಮ್ಮೆ ಅವರನ್ನು ಬಲಾತ್ಕಾರದಿಂದಲೂ ಸಹ ತರಿಸಿದನು. ಒಂದು ಸಾರೆ ಅವನ ಸೇನಾಪತಿಯು ಬಂಟವಾಳದ ದೇವಸ್ಥಾನದಲ್ಲಿಯ ವೆಂಕಟರಮಣ ಮೂರ್ತಿಯನ್ನು ಕಿತ್ತುಕೊಂಡು ತಂದಿದ್ದನು. ಆಗ ಅಲ್ಲಿಯ ಸಾರಸ್ವತ ಬ್ರಾಹ್ಮಣನಾದ ಮಂಜಯ್ಯ ಭಾಗವತನೆಂಬವನು ಮಡಿಕೇರಿಗೆ ಹೋಗಿ, ಅಲ್ಲಿ ರಾಜಾಂಗಣದಲ್ಲಿ ಒಂದು ದಶಾವತಾರ ಆಟ ಆಡಿ ತೋರಿಸಿದನು.

ಆಗ ಅರಸನು ಮೆಚ್ಚಲಾಗಿ ಅವನಿಂದ ಆ ಪ್ರತಿಮೆಯನ್ನು ಇನಾವಾಗಿ ಪಡಕೊಂಡು ಬಂಟವಾಳಕ್ಕೆ ತಂದು ದೇವಸ್ಥಾನಕ್ಕೆ ಒಪ್ಪಿಸಿದನು. ಇದು ಈಗ್ಗೆಯೂ ಅಲ್ಲಿ ಇದೆ. ಹೀಗೆ ವೀರರಾಜೇಂದ್ರನ ವರ್ತನೆಯಲ್ಲಿ ಒಮ್ಮೊಮ್ಮೆ ಕೆಲವು ಅತಿರೇಕಗಳಾಗುತ್ತಿದ್ದವು. ಅವನು ಭಾವನಾಮಯ ಆವೇಶ ಪರಿಪೂರ್ಣ ಸ್ವಭಾವದವನಾದ್ದರಿಂದ ಅವನಿಂದ ಇಂಥ ತಪ್ಪುಗಳು ಆಗುತ್ತಿದ್ದವು. ಆದರೆ ಅವನು ದುಷ್ಟನಲ್ಲ. ವೀರರಾಜೇಂದ್ರನು ಉತ್ತಮ ಸ್ನೇಹಿತನಾಗಿದ್ದನು. ತನಗೆ ಹಿತಮಾಡಿದವರಿಗೆ ಪ್ರಾಣಕ್ಕೆ ಪ್ರಾಣ ಕೊಡುತ್ತಿದ್ದನು. ಅವನು ಕಡೆಗೂ ಇಂಗ್ಲೀಷರೊಡನೆ ಅತ್ಯಂತ ಕೃತಜ್ಞತಾ ಬುದ್ಧಿಯಿಂದ ವರ್ತಿಸಿದನು. ಅದರಂತೆಯೇ ಅವನು ತನ್ನ ಮನೆತನದವರಿಗೆ ಒಂದು ಕಾಲಕ್ಕೆ ಉಪಕಾರ ಮಾಡಿದ ತನ್ನ ವೈರಿಯಾದ ಕಾದರಖಾನನೊಡನೆ ವರ್ತಿಸಿದ ರೀತಿಯು ಎಷ್ಟು ಔದಾರ್ಯವುಳ್ಳದ್ದೂ ಕೃತಜ್ಞತಾ ಬುದ್ಧಿ ಪರಿಪೂರ್ಣವೂ ಇತ್ತೆಂಬದನ್ನು ನಾವು ಹೇಳುವದು ಅವಶ್ಯವಿಲ್ಲ. ಒಟ್ಟಿಗೆ ವೀರರಾಜೇಂದ್ರನು ಕರ್ನಾಟಕದ ಮಹಾ ಪುರುಷರಲ್ಲಿ ಒಬ್ಬನೆಂದು ನಾವು ಎಣಿಸಬಹುದು.

## ಇಂಗ್ಲಿಷರ ವರ್ತನೆ ಮತ್ತು ಇಂಗ್ಲಿಷ ಇತಿಹಾಸಕಾರರು.

ಇಲ್ಲಿ ಇಂಗ್ಲಿಷರು ವೀರರಾಜೇಂದ್ರನೊಡನೆ ಹ್ಯಾಗೆ ವರ್ತಿಸಿದರು ಮತ್ತು ಅವರ ಇತಿಹಾಸಕಾರರು ಅವನನ್ನು ಹ್ಯಾಗೆ ವರ್ಣಿಸಿದ್ದಾರೆ ಎಂಬದನ್ನು ವಾಚಕರ ಎದುರಿಗಿಡುವದು ಅವಶ್ಯ ತೋರುತ್ತದೆ. ವೀರರಾಜೇಂದ್ರನು ಇಂಗ್ಲಿಷರಿಗೆ ಅತ್ಯಂತ ಬಿಕ್ಕಟ್ಟಿನ ಸಮಯದಲ್ಲಿ ಸಹಾಯ ಮಾಡಿದನು. ಜನರಲ್ ಆ್ಯಬರ ಕ್ರೋಂಬಿಯು ಮಲಬಾರ ದಂಡೆಯ ಮೇಲೆ ಇಳಿದಾಗ ಲಾರ್ಡ ಕಾರ್ನ ವಾಲೀಸನು ಬೆಂಗಳೂರ ಪಟ್ಟಣವನ್ನು ತೆಗೆದುಕೊಳ್ಳಲಾರದೆ ಹಿಂದಿರುಗಿದ್ದನು. ಅವನ ಸಹಾಯಕ್ಕೋಸ್ಕರ ಜನರಲ್ ಅಬರ್ ಕ್ರೋಂಬಿಯು ಮುಂಬಯಿಯಿಂದ ಹೊರಟಿದ್ದನು. ಒಂದು ವೇಳೆ ವೀರರಾಜೇಂದ್ರನು ಅವನಿಗೆ ಸಹಾಯ ಮಾಡದೆ ಹೋಗಿದ್ದರೆ ಇಂಗ್ಲಿಷರು ದುರ್ಗಮವಾದ ಗಟ್ಟದ ಪ್ರದೇಶದೊಳಗಿಂದ ತಮ್ಮ ಭಾರವಾದ ತೋಫುಗಳೊಡನೆ ಹಾಯ್ದು ಹೋಗುವದು ಅಸಾಧ್ಯವಾಗುತ್ತಿತ್ತು. ಆದರೆ ವೀರರಾಜೇಂದ್ರನು ಒಳ್ಳೇ ಸಮಯದಲ್ಲಿ ಅವರಿಗೆ ಸಹಾಯವಾದನು

ಮತ್ತು ಅವರೊಡನೆ ವೈರಿಯು ಕೂಡ ಕಾದಾಡಲೂ ಶ್ರೀರಂಗ ಪಟ್ಟಣಕ್ಕೆ ಹೊರಟನು. ತನ್ನ ನಾಡಿನಿಂದ ಮುಸಲ್ಮಾನರನ್ನು ಹೊರಗೆ ಹಾಕುವ ಕಾರ್ಯದಲ್ಲಿ ಇಂಗ್ಲಿಷರಿಗೆ ಅವನು ಸಹಾಯ ಬೇಡುವ ಪ್ರಸಂಗವು ಬರಲಿಲ್ಲ. ಅವನು ಆ ಕಾರ್ಯವನ್ನು ಇಂಗ್ಲಿಷರು ಕೊಡಗಿನಲ್ಲಿ ಬರುವ ಪೂರ್ವದಲ್ಲಿಯೇ ತನ್ನ ಬಾಹು ಬಲದಿಂದ ಪೂರೈಸಿಕೊಂಡಿದ್ದನು. ಹೀಗಿದ್ದರೂ ಇಂಗ್ಲಿಷರು ಮತ್ತು ಟೀಪು ಇವರ ನಡುವೆ ಸಂಧಾನವು ಮುಗಿದಬಳಿಕ ಇಂಗ್ಲಿಷರು ವೀರರಾಜೇಂದ್ರನ ಮೇಲೆ ಕಠಿಣತರವಾದ ಶರ್ತುಗಳನ್ನು ಹಾಕಿದರು. ಇದು ಅವರ ಸ್ವಾರ್ಥ ಪರಾಯಣತೆ ಎಂದು ನಾವು ಹೇಳಬಹುದು. ವೀರರಾಜೇಂದ್ರನನ್ನು ತಾವು ಸಂರಕ್ಷಿಸಬೇಕು ಮತ್ತು ಅದಕ್ಕೆ ಅವನು ಪ್ರತಿವರ್ಷ ತಮಗೆ ೨೪ ಸಾವಿರ ರೂಪಾಯಿಗಳ ಕಪ್ಪಕೊಡಬೇಕು ಮತ್ತು ತಮ್ಮ ರೆಸಿಡೆಂಟನು ಮಡಿಕೇರಿಯಲ್ಲಿ ಇರಬೇಕು ಎಂದು ಅವರು ಗೊತ್ತುಮಾಡಿಕೊಂಡರು. ನಿಜವಾಗಿ ಇಂಗ್ಲಿಷರು ಟೀಪುವಿನೊಡನೆ ಯುದ್ಧ ಹೂಡಿದ್ದು ವೀರರಾಜೇಂದ್ರನಿಗೋಸ್ಕರವಲ್ಲ. ಅವರು ನಿಜಾಮ ಮತ್ತು ಪೇಶ್ವೆ ಇವರೆಲ್ಲರು ಟೀಪುವಿನ ಸಾಮರ್ಥ್ಯಕ್ಕೆ ಅಂಜಿ ಒಟ್ಟುಗೂಡಿ ಆತ್ಮ ಸಂರಕ್ಷಣಾರ್ಥವಾಗಿ ಅವನೊಡನೆ ಕಾಳಗ ಹೂಡಿದ್ದರು. ಅವರಂತೆಯೇ ವೀರರಾಜೇಂದ್ರನೂ ಕಾಳಗದಲ್ಲಿ ತೊಡಗಿದನು. ಆದರೆ ಇಂಗ್ಲಿಷರು ಕೊಡಗು ಶ್ರೀರಂಗ ಪಟ್ಟಣದ ಮೇಲೇರಿ ಹೋಗಲು ಒಂದು ಅನುಕೂಲ ಮಾರ್ಗವಾದ್ದರಿಂದ ಆ ದೇಶವನ್ನು ತಮ್ಮ ಕಯ್ಯಲ್ಲಿಟ್ಟುಕೊಳ್ಳಲು ಬಗೆದರು. ಆದ್ದರಿಂದ ಅವರು ಇಂಥ ಕಠಿಣ ಶರ್ತುಗಳನ್ನು ರಾಜನ ಮೇಲೆ ಹಾಕಿದರೆಂಬದು ಸ್ಪಷ್ಟವಾಗುತ್ತದೆ. ವೀರರಾಜೇಂದ್ರನು ಈ ಶರ್ತುಗಳಿಗೆ ಮೊದಲು ಒಡಂಬಡಲಿಲ್ಲ. ಆದರೆ ಇಂಗ್ಲಿಷರ ಒತ್ತಾಯದಿಂದ ಅವನು ನಿರುಪಾಯನಾಗಬೇಕಾಯಿತು.

ಆದರೆ ಇದರ ಪ್ರತೀಕಾರವನ್ನು ಅವನು ಮೈಸೂರಿನ ಕಡೆಯ ಯುದ್ಧದಲ್ಲಿ ತೀರಿಸಿಕೊಳ್ಳದೆ ಬಿಡಲಿಲ್ಲ. ಆ ಯುದ್ಧವು ಪ್ರಾರಂಭವಾದಬಳಿಕ ಅವನು ಕೂಡಲೆ ಮೈಸೂರನ್ನು ಅಭಿಯೋಗಿಸಿ ಅಲ್ಲಿಯ ಕೆಲವು ಸೀಮೆಯನ್ನು ಹಿಡಿದುಕೊಂಡನು. ಮತ್ತು ಒಪ್ಪಂದದ ಸಮಯದಲ್ಲಿ ಆ ಸೀಮೆಗಳನ್ನು ಬಿಡಲಾರೆನೆಂದು ಇಂಗ್ಲಿಷರ ಕೂಡ ಹಟತೊಟ್ಟನು ಆಗ ಇಂಗ್ಲಿಷರು ಆ ಸೀಮೆಗಳ ಬದಲು ಮಂಗಳೂರ ಜಿಲ್ಹೆಯ ಆರು ಮಾಗಣೆಗಳನ್ನು ಬಿಟ್ಟು ಕೊಡಬೇಕು, ವಾರ್ಷಿಕ ಕಾಣಿಕೆಯನ್ನು ಬೇಡಕೂಡದು, ಆದರೆ ಅದರ ಬದಲು ಒಂದ

ಆನೆಯನ್ನು ಮಾತ್ರ ಪ್ರತಿವರ್ಷ ಕೊಡಬೇಕು, ಮತ್ತು ರೆಸಿಡೆಂಟನು ಮಡಿಕೇರಿಯಲ್ಲಿ ಇರಕೂಡದು, ಎಂಬ ಶರ್ತುಗಳನ್ನು ಮಾಡಿಕೊಂಡು ಆಮೇಲೆ ತಾನು ಕೈವಶ ಮಾಡಿಕೊಂಡ ಸೀಮೆಗಳನ್ನು ಇಂಗ್ಲಿಷರಿಗೆ ಬಿಟ್ಟು ಕೊಟ್ಟನು. ತರುವಾಯ ವೀರರಾಜೇಂದ್ರನು ತಾನು ಸಾಯುವವರೆಗೂ ಇಂಗ್ಲಿಷರಿಂದ ಏನೂ ಪ್ರತಿಬಂಧವಿಲ್ಲದೆ ರಾಜ್ಯವಾಳಿದನು.

ಇಂಗ್ಲಿಷ ಇತಿಹಾಸಕಾರರು ತಮ್ಮ ಇತಿಹಾಸಗಳಲ್ಲಿ ಕೊಡಗರೆಂದರೆ ಅರ್ಧಮರ್ಧ ಸುಧಾರಿಸಿದ ಅಡವಿಯ ಜನರು ಮತ್ತು ವೀರರಾಜೇಂದ್ರನೆಂದರೆ ೧೬-೧೭ ನೇ ಶತಮಾನದಲ್ಲಿ ಹಾಯಲಂಡಗಳಲ್ಲಿ ವಾಸಿಸುತ್ತಿದ್ದ ಕಾಡು ಜನರ ಅಧಿಪತಿಯಂಥ ಒಬ್ಬ ರಾಜನು ಎಂದು ಭಾಸವಾಗುವಂತೆ ತಮ್ಮ ಇತಿಹಾಸಗಳಲ್ಲಿ ಬರೆದಿರುವರು! ಇದು ಎಷ್ಟು ಅಯೋಗ್ಯವಿರುತ್ತದೆಂಬದನ್ನು ನಾವು ವಾಚಕರಿಗೆ ಹೇಳದಿರಲಾರೆವು. ವೀರರಾಜೇಂದ್ರನು ಅತ್ಯಂತ ಶ್ರೇಷ್ಠತರವಾದ ವೀರಶೈವ ಧರ್ಮಕ್ಕೆ ಹೊಂದಿದವನು, ಮತ್ತು ನಾಗರೀಕತೆಯ ಪ್ರಸಾರದಲ್ಲಿ ಕೀರ್ತಿಯನ್ನು ಹೊಂದಿದ್ದ ಕೆಳದಿ ಮತ್ತು ಸ್ವಾದಿ ಅರಸರ ಸಂಬಂಧಿಕನು. ಇಂಥವನ ಬಗ್ಗೆ ವಾಚಕರ ಮನಸ್ಸಿನಲ್ಲಿ ವಿಪರೀತ ಭಾವನೆಯುಂಟಾಗುವಂತೆ ಇಂಗ್ಲಿಷ ಇತಿಹಾಸಕಾರರು ಇವನು ಮಾಡಿದ ಮಹತ್ಕೃತ್ಯಗಳನ್ನು ವಿವರಿಸಿರುವದು ಬಹಳ ವಿಷಾದಕರವು. ಅದರಂತೆಯೇ ಶೂರ ಧೀರರಾದ, ಸ್ವಾತಂತ್ರ್ಯ ಪ್ರೇಮಿಗಳಾದ, ಕೊಡಗರ ನಿಜಗುಣಗಳನ್ನು ಅರಿಯದೆ ಅವರು ಕಾಡು ಜನರೆಂಬ ಕಲ್ಪನೆಯು ಬರುವಂತೆ ಅವರನ್ನು ವರ್ಣಿಸಿರುವದು ಅಕ್ಷಮ್ಯವು. ನಮ್ಮ ದೇಶದ ನಡೆನುಡಿ ಮತ್ತು ಸಂಸ್ಕೃತಿಯನ್ನು ಅರಿಯದಂಥ ಮತ್ತು ಸ್ವಜನಾಂಗದ ಮಹಿಮೆಯನ್ನು ಮಾತ್ರ ಕಾಣುವಂಥ ಪರದೇಶೀಯರು ಬೇರೊಂದು ನಾಡಿನ ಇತಿಹಾಸವನ್ನು ಬರೆದದ್ದರ ಪರಿಣಾಮವಿದು.

ವೀರರಾಜೇಂದ್ರನು ತನ್ನ ಮನೆತನದ ಇತಿಹಾಸವನ್ನು "ರಾಜೇಂದ್ರನಾಮೆ" ಎಂಬ ಹೆಸರಿನಿಂದ ಬರೆಯಿಸಿದ್ದಾನೆ ಮತ್ತು ಅದನ್ನು ಅ್ಯಬರಕ್ರೋಂಬಿಯು ಇಂಗ್ಲಿಷದಲ್ಲಿ ೧೮೦೮ ನೇ ಇಸ್ವಿಯಲ್ಲಿ ಭಾಷಾಂತರಿಸಿದ್ದಾನೆಂದು ತಿಳಿಯುತ್ತದೆ.§

---

§ಈ ಗ್ರಂಥಗಳ ಅಚ್ಚು ಹಾಕಿದ ಪ್ರತಿಗಳು ಈಗ ಉಪಲಬ್ಧವಿಲ್ಲ. ಅವು ಯಾರಲ್ಲಾದರೂ ಇದ್ದರೆ ಅವುಗಳನ್ನು ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ ಇಲ್ಲಿಗೆ ಕಳಿಸಬೇಕೆಂದು ನಮ್ಮ ವಿನಂತಿ ಇದೆ. ಅವರು ಅವುಗಳನ್ನು ಅಚ್ಚು ಹಾಕುವರು,

# ಕೊಲ್ಲಿಪಾಕಿ.

ಲೇಖಕಃ—ಚಂದ್ರಶೇಖರಶಾಸ್ತ್ರೀ ವ್ಯಾಕರಣತೀರ್ಥ ಪ್ರಿನ್ಸಿಪಾಲ ಶಂಕರಕಾಲೇಜ
ಯಾದಗಿರಿ.

ವೀರಶೈವ ಧರ್ಮ ಗ್ರಂಥಗಳಲ್ಲಿ ಪರಮಗುರು ರೇಣುಕನ ಉತ್ಪತ್ತಿಯ ಸ್ಥಾನವಾದ ಕೊಲ್ಲಿಪಾಕಿಯ ಶ್ರೀ ಸೋಮೇಶ್ವರ ಲಿಂಗದ ವರ್ಣನೆಯು ಅನೇಕ ಪ್ರಕಾರವಾಗಿ ಕವಿಗಳಿಂದ ಹೃದಯಂಗಮಯವಾಗಿ ವಿವರಿಸಲ್ಪಟ್ಟಿರುವ ಸಂಗತಿಯು ಸರ್ವರಿಗೂ ಗೊತ್ತಿದ್ದ ವಿಷಯವಾಗಿರುವದಷ್ಟೇ? ಆದರೆ ಪೂರ್ವಕಾಲದಲ್ಲಿ ವೀರಶೈವರು ಇತಿಹಾಸಕ್ಕೆ ಸಾಕ್ಷಿಮಾತ್ಯರಷ್ಟು ಬೆಲೆಯನ್ನು ಕೊಡುತ್ತಿರಲಿಲ್ಲ. ಆದ್ದರಿಂದಲೇ ಈಗ ಇತಿಹಾಸವಿಲ್ಲದೆ ವೀರಶೈವರು ಅಂಧಕಾರಮಯವಾದ ಸ್ಥಿತಿಯಲ್ಲಿರಬೇಕಾಗಿದೆ. ನಮ್ಮಾ ಭಾರತ ಭೂಮಿಯು ಮಹಾತ್ಮರ ಅಥವಾ ಆದರ್ಶ ಪುರುಷರಿಗೆ ತವರುಮನೆಯಾಗಿದ್ದರಿಂದಲೇ ವೀರಶೈವ ಸಮಾಜದಲ್ಲಿ ಅನೇಕ ವಿಭೂತಿಗಳು ಜನಿಸಿ ಬಯಲಾಗಿ ಹೋಗಿರುವರು. ಅಂಥ ಪುರಷಪುಂಗವರ ಚರಿತ್ರೆಗಳು ಸಾಮಾನ್ಯ ಜನರಿಗೆ ಮಾರ್ಗದರ್ಶಕಗಳಾಗಿರುತ್ತವೆ. ಆದ್ದರಿಂದ ಅಂಥ ಮಹಾತ್ಮರ ಚರಿತ್ರೆಗಳನ್ನು ಆದಷ್ಟು ಮಟ್ಟಿಗೆ ಶೋಧಿಸುವದು ಪ್ರತಿಯೊಬ್ಬ ವೀರಶೈವನ ಕರ್ತವ್ಯಕರ್ಮವಾಗಿರುತ್ತದೆ. ಇಂಥ ಮಹನೀಯರಲ್ಲಿ ಶ್ರೇಷ್ಠನೂ ವೀರಶೈವ ಸಮಾಜ ಸ್ಥಾಪಕನೂ, ಅನೇಕ ಮನು, ಮುನಿ, ಸಿದ್ಧ ಋಷಿಗಳಿಗೆ ವೀರಶೈವ ಸಿದ್ಧಾಂತೋಪದೇಶವನ್ನು ಮಾಡಿ ಈ ಮತವನ್ನು ಅನೇಕ ಪ್ರಕಾರವಾಗಿ ಉದ್ಧಾರ ಮಾಡಿದವನೂ ಆದ ಗುರು ರೇಣುಕನ ಚರಿತ್ರೆಯನ್ನು ಇದುವರೆಗೂ ವೀರಶೈವರು ಪ್ರಸಿದ್ಧಿಸದೇ ಇರುವದು ಶೋಚನೀಯವೇ ಸರಿ. ಇಂಥ ಜಗನ್ಮಾನ್ಯರ ಚರಿತ್ರೆಯು ಹಾಡೇ ಇಷ್ಟಾದ ಮೇಲೆ ಉಳಿದವರ ಚರಿತ್ರೆಯನ್ನು ಶೋಧಿಸುವರಾರು? ಕರ್ನಾಟಕ ದೇಶದಲ್ಲಿ ಆಗಿ ಹೋದ ಮಧ್ವ, ರಾಮಾನುಜ, ಶಂಕರ ಮೊದಲಾದ ಆಚಾರ್ಯರ ಚರಿತ್ರೆಗಳು ಜನರ ನಾಲಿಗೆಯ ತುದಿಯಲ್ಲಿ ಕುಣಿಯುತ್ತಿರುವಾಗ ಅವರ ಪಂಕ್ತಿಯಲ್ಲಿಯೇ ಸೇರಿ ಶ್ರೀ ಶಂಕರಾಚಾರ್ಯರಿಗೂ ಕೂಡ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟ ಅಗಣಿತ ಮಹಿಮಾಶಾಲಿಯಾದ ವರಗುರು ರೇಣುಕಾಚಾರ್ಯರ ಚರಿತ್ರೆಯು ಇಲ್ಲವೆಂಬುದು ಆತನ ನಾಮಸ್ಮರಣೆ

ಆನೆಯನ್ನು ಮಾತ್ರ ಪ್ರತಿವರ್ಷ ಕೊಡಬೇಕು, ಮತ್ತು ರೆಸಿಡೆಂಟನು ಮಡಿಕೇರಿಯಲ್ಲಿ ಇರಕೂಡದು, ಎಂಬ ಶರ್ತುಗಳನ್ನು ಮಾಡಿಕೊಂಡು ಆಮೇಲೆ ತಾನು ಕೈವಶ ಮಾಡಿಕೊಂಡ ಸೀಮೆಗಳನ್ನು ಇಂಗ್ಲಿಷರಿಗೆ ಬಿಟ್ಟು ಕೊಟ್ಟನು. ತರುವಾಯ ವೀರರಾಜೇಂದ್ರನು ತಾನು ಸಾಯುವವರೆಗೂ ಇಂಗ್ಲಿಷರಿಂದ ಏನೂ ಪ್ರತಿಬಂಧವಿಲ್ಲದೆ ರಾಜ್ಯವಾಳಿದನು.

ಇಂಗ್ಲಿಷ ಇತಿಹಾಸಕಾರರು ತಮ್ಮ ಇತಿಹಾಸಗಳಲ್ಲಿ ಕೊಡಗರೆಂದರೆ ಅರ್ಧಮರ್ಧ ಸುಧಾರಿಸಿದ ಅಡವಿಯ ಜನರು ಮತ್ತು ವೀರರಾಜೇಂದ್ರನೆಂದರೆ ೧೬-೧೭ ನೇ ಶತಮಾನದಲ್ಲಿ ಹಾಯಲಂಡಗಳಲ್ಲಿ ವಾಸಿಸುತ್ತಿದ್ದ ಕಾಡು ಜನರ ಅಧಿಪತಿಯಂಥ ಒಬ್ಬ ರಾಜನು ಎಂದು ಭಾಸವಾಗುವಂತೆ ತಮ್ಮ ಇತಿಹಾಸಗಳಲ್ಲಿ ಬರೆದಿರುವರು! ಇದು ಎಷ್ಟು ಅಯೋಗ್ಯವಿರುತ್ತದೆಂಬದನ್ನು ನಾವು ವಾಚಕರಿಗೆ ಹೇಳದಿರಲಾರೆವು. ವೀರರಾಜೇಂದ್ರನು ಅತ್ಯಂತ ಶ್ರೇಷ್ಠತರವಾದ ವೀರಶೈವ ಧರ್ಮಕ್ಕೆ ಹೊಂದಿದವನು, ಮತ್ತು ನಾಗರೀಕತೆಯ ಪ್ರಸಾರದಲ್ಲಿ ಕೀರ್ತಿಯನ್ನು ಹೊಂದಿದ್ದ ಕೆಳದಿ ಮತ್ತು ಸ್ವಾದಿ ಅರಸರ ಸಂಬಂಧಿಕನು. ಇಂಥವನ ಬಗ್ಗೆ ವಾಚಕರ ಮನಸ್ಸಿನಲ್ಲಿ ವಿಪರೀತ ಭಾವನೆಯುಂಟಾಗುವಂತೆ ಇಂಗ್ಲಿಷ ಇತಿಹಾಸಕಾರರು ಇವನು ಮಾಡಿದ ಮಹತ್ಕೃತ್ಯಗಳನ್ನು ವಿವರಿಸಿರುವದು ಬಹಳ ವಿಷಾದಕರವು. ಅದರಂತೆಯೇ ಶೂರ ಧೀರರಾದ, ಸ್ವಾತಂತ್ರ್ಯಪ್ರೇಮಿಗಳಾದ, ಕೊಡಗರ ನಿಜಗುಣಗಳನ್ನು ಅರಿಯದೆ ಅವರು ಕಾಡು ಜನರೆಂಬ ಕಲ್ಪನೆಯು ಬರುವಂತೆ ಅವರನ್ನು ವರ್ಣಿಸಿರುವದು ಅಕ್ಷಮ್ಯವು. ನಮ್ಮ ದೇಶದ ನಡೆನುಡಿ ಮತ್ತು ಸಂಸ್ಕೃತಿಯನ್ನು ಅರಿಯದಂಥ ಮತ್ತು ಸ್ವಜನಾಂಗದ ಮಹಿಮೆಯನ್ನು ಮಾತ್ರ ಕಾಣುವಂಥ ಪರದೇಶೀಯರು ಬೇರೊಂದು ನಾಡಿನ ಇತಿಹಾಸವನ್ನು ಬರೆದದ್ದರ ಪರಿಣಾಮವಿದು.

ವೀರರಾಜೇಂದ್ರನು ತನ್ನ ಮನೆತನದ ಇತಿಹಾಸವನ್ನು "ರಾಜೇಂದ್ರನಾಮೆ" ಎಂಬ ಹೆಸರಿನಿಂದ ಬರೆಯಿಸಿದ್ದಾನೆ ಮತ್ತು ಅದನ್ನು ಅ್ಯಬರಕ್ರೋಂಬಿಯು ಇಂಗ್ಲಿಷದಲ್ಲಿ ೧೮೦೮ ನೇ ಇಸ್ವಿಯಲ್ಲಿ ಭಾಷಾಂತರಿಸಿದ್ದಾನೆಂದು ತಿಳಿಯುತ್ತದೆ.§

---

§ಈ ಗ್ರಂಥಗಳ ಅಚ್ಚು ಹಾಕಿದ ಪ್ರತಿಗಳು ಈಗ ಉಪಲಬ್ಧವಿಲ್ಲ. ಅವು ಯಾರಲ್ಲಾದರೂ ಇದ್ದರೆ ಅವುಗಳನ್ನು ಹಿತಚಿಂತಕ ಪ್ರಿಂಟಿಂಗ ಪ್ರೆಸ್ ವಿಜಾಪುರ ಇಲ್ಲಿಗೆ ಕಳಿಸಬೇಕೆಂದು ನಮ್ಮ ವಿನಂತಿ ಇದೆ. ಅವರು ಅವುಗಳನ್ನು ಅಚ್ಚು ಹಾಕುವರು,

# ಕೊಲ್ಲಿಪಾಕಿ.

ಲೇಖಕಃ—ಚಂದ್ರಶೇಖರಶಾಸ್ತ್ರೀ ವ್ಯಾಕರಣತೀರ್ಥ ಪ್ರಿನ್ಸಿಪಾಲ ಶಂಕರಕಾಲೇಜ
ಯಾದಗಿರಿ.



ವೀರಶೈವ ಧರ್ಮ ಗ್ರಂಥಗಳಲ್ಲಿ ಪರಮಗುರು ರೇಣುಕನ ಉತ್ಪತ್ತಿಯ ಸ್ಥಾನವಾದ ಕೊಲ್ಲಿಪಾಕಿಯ ಶ್ರೀ ಸೋಮೇಶ್ವರ ಲಿಂಗದ ವರ್ಣನೆಯು ಅನೇಕ ಪ್ರಕಾರವಾಗಿ ಕವಿಗಳಿಂದ ಹೃದಯಂಗಮಯವಾಗಿ ವಿವರಿಸಲ್ಪಟ್ಟಿರುವ ಸಂಗತಿಯು ಸರ್ವರಿಗೂ ಗೊತ್ತಿದ್ದ ವಿಷಯವಾಗಿರುವದಷ್ಟೇ? ಆದರೆ ಪೂರ್ವಕಾಲದಲ್ಲಿ ವೀರಶೈವರು ಇತಿಹಾಸಕ್ಕೆ ಪಾಶ್ಚಿಮಾತ್ಯರಷ್ಟು ಬೆಲೆಯನ್ನು ಕೊಡುತ್ತಿರಲಿಲ್ಲ. ಆದ್ದರಿಂದಲೇ ಈಗ ಇತಿಹಾಸವಿಲ್ಲದೆ ವೀರಶೈವರು ಅಂಧಕಾರಮಯವಾದ ಸ್ಥಿತಿಯಲ್ಲಿರಬೇಕಾಗಿದೆ. ನಮ್ಮಾ ಭಾರತ ಭೂಮಿಯು ಮಹಾತ್ಮರ ಅಥವಾ ಆದರ್ಶ ಪುರುಷರಿಗೆ ತವರುಮನೆಯಾಗಿದ್ದರಿಂದಲೇ ವೀರಶೈವ ಸಮಾಜದಲ್ಲಿ ಅನೇಕ ವಿಭೂತಿಗಳು ಜನಿಸಿ ಬಯಲಾಗಿ ಹೋಗಿರುವರು. ಅಂಥ ಪುರಷಪುಂಗವರ ಚರಿತ್ರೆಗಳು ಸಾಮಾನ್ಯ ಜನರಿಗೆ ಮಾರ್ಗದರ್ಶಕಗಳಾಗಿರುತ್ತವೆ. ಆದ್ದರಿಂದ ಅಂಥ ಮಹಾತ್ಮರ ಚರಿತ್ರೆಗಳನ್ನು ಆದಷ್ಟು ಮಟ್ಟಿಗೆ ಶೋಧಿಸುವದು ಪ್ರತಿಯೊಬ್ಬ ವೀರಶೈವನ ಕರ್ತವ್ಯಕರ್ಮವಾಗಿರುತ್ತದೆ. ಇಂಥ ಮಹನೀಯರಲ್ಲಿ ಶ್ರೇಷ್ಠನೂ ವೀರಶೈವ ಸಮಾಜ ಸ್ಥಾಪಕನೂ, ಅನೇಕ ಮನು, ಮುನಿ, ಸಿದ್ಧ ಋಷಿಗಳಿಗೆ ವೀರಶೈವ ಸಿದ್ಧಾಂತೋಪದೇಶವನ್ನು ಮಾಡಿ ಈ ಮತವನ್ನು ಅನೇಕ ಪ್ರಕಾರವಾಗಿ ಉದ್ಧಾರ ಮಾಡಿದವನೂ ಆದ ಗುರು ರೇಣುಕನ ಚರಿತ್ರೆಯನ್ನು ಇದುವರೆಗೂ ವೀರಶೈವರು ಪ್ರಸಿದ್ಧಿಸದೇ ಇರುವದು ಶೋಚನೀಯವೇ ಸರಿ. ಇಂಥ ಜಗನ್ಮಾನ್ಯರ ಚರಿತ್ರೆಯು ಹಾಡೇ ಇಷ್ಟಾದ ಮೇಲೆ ಉಳಿದವರ ಚರಿತ್ರೆಯನ್ನು ಶೋಧಿಸುವರಾರು? ಕರ್ನಾಟಕ ದೇಶದಲ್ಲಿ ಆಗಿ ಹೋದ ಮಧ್ವ, ರಾಮಾನುಜ, ಶಂಕರ ಮೊದಲಾದ ಆಚಾರ್ಯರ ಚರಿತ್ರೆಗಳು ಜನರ ನಾಲಿಗೆಯ ತುದಿಯಲ್ಲಿ ಕುಣಿಯುತ್ತಿರುವಾಗ ಅವರ ಪಂಕ್ತಿಯಲ್ಲಿಯೇ ಸೇರಿ ಶ್ರೀ ಶಂಕರಾಚಾರ್ಯರಿಗೂ ಕೂಡ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟ ಅಗಣಿತ ಮಹಿಮಾಶಾಲಿಯಾದ ವರಗುರು ರೇಣುಕಾಚಾರ್ಯರ ಚರಿತ್ರೆಯು ಇಲ್ಲವೆಂಬುದು ಆತನ ನಾಮಸ್ಮರಣೆ

ಯನ್ನು ಮಾಡತಕ್ಕ ಶಿಷ್ಯ ಮಂಡಲಿಗೆ ಲಾಂಛನಾಸ್ಪದವೇ ಸರಿ. ಹೇಗೆ ಶಂಕರ ದಿಗ್ವಿಜಯ ಮಧ್ವವಿಜಯ, ಇವುಗಳೊತ್ತಟ್ಟಿಗಿರಲಿ, ಇತ್ತೀಚಿಗೆ ಆಗಿ ಹೋದ ದಯಾನಂದ ದಿಗ್ವಿಜಯವೂ ಕೂಡ ಪ್ರಕಟವಾಗಿರುವದು. ಆದರೆ ಅಗಸ್ತ್ಯ ಮೊದಲಾದ ಮುನಿಗಳಿಗೂ ಕೂಡ ಗುರುವಾಗಿದ್ದ ರೇಣು ಕಾಚಾರ್ಯರ ದಿಗ್ವಿಜಯವು ಇಲ್ಲದೇ ಇರುವದು ವೀರಶೈವರ ಹೇಡಿತನದ ಹೆಗ್ಗುರುತನ್ನು ಹೇರಳವಾಗಿ ತೋರಿಸುತ್ತದೆ. ಇರಲಿ.

ನಾನು ಪರಳಿಯ ಪ್ರಕರಣವು ಹೈದರಾಬಾದಿನಲ್ಲಿ ನಡೆದಾಗ ಮೂರು ತಿಂಗಳುಗಳವರೆಗೆ ಅಲ್ಲಿ ಇದ್ದೆನು. ಆದರೆ ಸಮೀಪದಲ್ಲಿಯೇ ಇದ್ದ ಕೊಲ್ಲೀ ಪಾಕಿಗೆ ಹೋಗಿ ಬರುವ ಸುಯೋಗವು ಒದಗಿ ಬರಲಿಲ್ಲ. ಒಂದೆರಡು ಸಾರೆ ಪ್ರಯತ್ನವನ್ನು ಮಾಡಿದರೂ ಸಾಧ್ಯವಾಗಲಿಲ್ಲ. ೫ನೇ ಶಿವಾನುಭವ ಸಂಚಿ ಕೆಯಲ್ಲಿ ಪ್ರಕಟವಾದ "ಅಗಸ್ತ್ಯ ಮತ್ತು ರೇಣುಕ" ಎಂಬುವ ಲೇಖವನ್ನು ನೋಡಿದ ಕೂಡಲೇ ಶ್ರೀ ರೇಣುಕಾಚಾರ್ಯರ ಉತ್ಪತ್ತಿ ಸ್ಥಾನವಾದ ಕೊಲ್ಲೀಪಾಕಿಯ ಸೋಮೇಶ್ವರ ಲಿಂಗವನ್ನು ದರ್ಶನ ಮಾಡಿಕೊಂಡು ಬಂದರೆ ವೀರಶೈವರ ಇತಿಹಾಸಕ್ಕೆ ಅಥವಾ ರೇಣುಕಾಚಾರ್ಯರ ಚರಿತ್ರೆಗೆ ಪುಷ್ಟೀಕಾರಕಗಳಾದ ವಿಷಯಗಳ ಸಂಗ್ರಹವು ಆಗ ಬಹುದೆಂಬುವ ಆಕಾಂಕ್ಷೆಯು ಉತ್ಪನ್ನವಾಯಿತು. ಕೂಡಲೇ ರಾವಸಾಹೇಬ ಹಳಕಟ್ಟಿಯ ವರಿಗೊಂದು ಪತ್ರವನ್ನು ಬರೆದು ನನ್ನ ಅಭಿಪ್ರಾಯವನ್ನು ತಿಳಿಸಿದೆನು. ಅವ ರಿಂದ ಉತ್ತರವಾದರೂ ಬಂದಿತು. ತೀವ್ರವಾಗಿಯೇ ತಾ. ೨೨-೩-೨೭ ನೇ ದಿನ ಯಾದಗಿರಿಯಿಂದ ಹೈದರಾಬಾದಿಗೆ ಹೋದೆನು. ಅಲ್ಲಿ ಕೊಲ್ಲೀಪಾಕಿಯ ಕೆಲವು ಮಾಹಿತಿಗಳನ್ನು ದೊರಕಿಸಿಕೊಳ್ಳಬೇಕೆಂದು ಅಪೇಕ್ಷಿಸಿದೆನು. ಯಾಕಂದರೆ ಕೊಲ್ಲೀಪಾಕಿಯು ಈಗ ಶುದ್ಧ ತೆಲುಗು ದೇಶವಾದ ಕಾರಣ ಅಲ್ಲಿ ಮರಾಠೀ, ಹಿಂದೀ, ಕನ್ನಡ ಮೊದಲಾದ ಭಾಷೆಗಳ ಸುಳಿದಾಟವೇ ಇರುವದಿಲ್ಲ. ನನಗಾದರೋ ಶುದ್ಧ ತೆಲುಗು ಭಾಷೆಯು ಚನ್ನಾಗಿ ಬಾರದೆ ಇರುವ ಕಾರಣ ತೆಲುಗು ಕನ್ನಡ ಭಾಷೆಗಳನ್ನು ಬಲ್ಲವರೊಬ್ಬರನ್ನು ಆಶ್ರ ಯಿಸಬೇಕೆಂದು ಆಲೋಚಿಸಿ ಸೋಮೇಶ್ವರರಾವ ಹೈಕೋರ್ಟ ವಕೀಲ ರೆಂಬ ವೀರಶೈವ ಸದ್ಗೃಹಸ್ಥರ ಭೆಟ್ಟಿಯಾದೆನು. ಆವರು ನನ್ನ ವೃತ್ತಾಂತ ವನ್ನು ಕೇಳಿ ಬಹಳ ಸಂತೋಷ ಬಟ್ಟು ಆಂಧ್ರಭಾಷಾ (ತೆಲಗು) ಸೇವಕ ರಾದ ಹನುಮಂತರಾವ ಹೈಕೋರ್ಟ ವಕೀಲರೆಂಬ ದೊಡ್ಡ ಮನುಷ್ಯರ ಲ್ಲಿಗೆ ಕರೆದುಕೊಂಡು ಹೋದರು. ಅಲ್ಲಿ ನಡೆದ ಕೆಲವು ಸಂಗತಿಗಳನ್ನು

ಶಿವಾನುಭವ ವಾಚಕರಿಗೆ ಹೇಳಿದರೆ ವಿಷಯಾಂತರವಾಗಲಿಕ್ಕಿಲ್ಲ. ಅವರ ಲ್ಲಿಗೆ ಹೋದ ಕೂಡಲೇ ಆ ಸದ್ಗೃಹಸ್ಥರು ಕೊಲ್ಲಿಪಾಕಿಯಲ್ಲಿರುವ ಕೆಲವು ಶಿಲಾಲಿಪಿಗಳನ್ನು ಆಂಧ್ರಭಾಷಾ ನಿಲಯದವರು ಪ್ರಿಂಟು ಮಾಡಿಕೊಂಡು ಬಂದಿರುವರಲ್ಲದೆ ವೀರಶೈವ ತಾಡವಾಲೆಯ ಅನೇಕ ಗ್ರಂಥಗಳೂ ಕೆಲವು ಕನ್ನಡ ಶಿಲಾಲಿಪಿಗಳೂ ಅಲ್ಲಿ ಇರುತ್ತವೆ, ಅವುಗಳನ್ನು ಸಾಯಂಕಾಲ ೫ ಗಂಟೆಗೆ ಆಂಧ್ರ ಭಾಷಾನಿಲಯಕ್ಕೆ ಬಂದರೆ ತೋರಿಸುತ್ತೇವೆಂದು ಹೇಳಿದರು. ಅವರು ಇಪ್ಪತ್ತು ವರ್ಷಗಳ ಕೆಳಗೆ ತಾವು ಇಲ್ಲಿಗೆ ಬಂದೆವೆಂತಲೂ ಆ ಕಾಲಕ್ಕೆ ಈ ಪ್ರಾಂತದಲ್ಲಿ ತೆಲಗು ಭಾಷೆಯು ಬಹಳ ಹೀನಾವಸ್ಥೆಯಲ್ಲಿದ್ದು ಎಲ್ಲಿ ನೋಡಿದರೂ -ಉರ್ದೂ ಇಂಗ್ಲೀಷ ಭಾಷೆಗಳ ಪ್ರಾಬಲ್ಯವೇ ಅಧಿಕವಾಗಿದ್ದಿತ್ತೆಂತಲೂ, ಅದೇ ಕಾಲಕ್ಕೆ ಕೆಲವು ಜನರ ಸಹಾಯವನ್ನು ತೆಗೆದುಕೊಂಡು ಹೈದರಾಬಾದಿನಲ್ಲಿ ಒಂದು ಆಂಧ್ರ ಗ್ರಂಥಾಲಯವನ್ನು ಸ್ಥಾಪಿಸಿ ಅಂದಿನಿಂದ ಇಂದಿನವರೆಗೂ ತಮ್ಮ ಪ್ರಯತ್ನ ವಿಶೇಷದಿಂದ ಈ ಗ್ರಂಥಾಲಯದಲ್ಲಿ ನಾಲ್ಕು ಸಾವಿರ ತೆಲಗು ಸಂಸ್ಕೃತ ಮೊದಲಾದ ಗ್ರಂಥಗಳಿರುತ್ತವೆಂತಲೂ ಇದರ ಕೆಳಗೆ ಬೇರೆ ಬೇರೆ ಊರುಗಳಲ್ಲಿ ಒಂದು ನೂರು ಲಾಯಬ್ರರಿಗಳನ್ನೂ ಕೆಲವು ಆಂಧ್ರ ಭಾಷೋತ್ತೇಜಕ ಸಂಘಗಳನ್ನೂ ಸ್ಥಾಪಿಸಿರುವೆವೆಂತಲೂ, ತಮ್ಮ ಆಂಧ್ರ ಭಾಷಾ ನಿಲಯದ ಕಟ್ಟಡಕ್ಕೆ ಈ ವರೆಗೆ ೨೦ ಸಾವಿರ ರೂಪಾಯಿಗಳು ಖರ್ಚು ಹಿಡಿದಿರುವವೆಂತಲೂ, ಇಂತಿಷ್ಟು ಕಾರ್ಯಗಳು ಸರಕಾರದವರ ಸಹಾಯವಿಲ್ಲದಲೇ ಕೇವಲ ಜನರ ಉದಾರಾಶ್ರಯದಿಂದಲೇ ನಡೆದಿರುವವೆಂತಲೂ ಹೇಳಿದರು. ಇವರ ಈ ತರದ ಸಾಹಸ ಕೃತ್ಯವನ್ನು ನೋಡಿ, ನನ್ನ ಮನಸ್ಸಿನಲ್ಲಿ ಕರ್ನಾಟಕ ಮಾತೆಯೇ, ನಿನ್ನ ಉದರದಲ್ಲಿಯೂ ಇಂಥಭಾಷಾ ಸೇವಕರು ಎಂದಿಗೆ ಜನಿಸುವರು, ಅದೆಂದು ನಮ್ಮ ಕನ್ನಡ ನಾಡು ಭಾಷಾ ಸೇವಕರಿಂದ ನಿಬಿಡವಾದೀತು, ಅದೆಂದು ನಮ್ಮ ಕನ್ನಡ ನಾಡು ಸೊಗಸಿನ ಬೀಡಾದೀತು ಎಂಬುವ ವಾಕ್ಯಗಳು ನೆನಪಿಗೆ ಬಂದವು. ಪುನಃ ೫ ಗಂಟೆಗೆ ಆಂಧ್ರಭಾಷಾ ನಿಲಯಕ್ಕೆ ಹೋದೆನು. ಅವತ್ತಿನ ದಿನವೇ ಆಂಧ್ರಭಾಷಾ ನಿಲಯದಲ್ಲಿ ತಿಕ್ಕನ್ನನೆಂಬುವ ತೆಲಗು ಕವಿಯ ಜಯಂತ್ಯುತ್ಸವವು ಇದ್ದಿತು. ಈ ಕವಿಯು ಸಂಸ್ಕೃತ ಮಹಾ ಭಾರತವನ್ನು ಸಂಪೂರ್ಣವಾಗಿ ತೆಲುಗಿನಲ್ಲಿ ಬರೆದು ತೆಲುಗು ಸಾಹಿತ್ಯಕ್ಕೆ ಆಧಾರ ಸ್ವರೂಪನಾಗಿರುವನು. ಹೇಗೆ ಕನ್ನಡ ಸಾಹಿತ್ಯೆಗೆ ಪಂಪ ಹೊನ್ನ ರನ್ನ ಷಡಕ್ಷರಿ ಮೊದಲಾದವರು ಭೂಷಣ ಪ್ರಾಯರಾ

ಗಿರುವರೋ, ಹಾಗೆಯೇ ತಿಕ್ಕನ್ನ ನನ್ನಯ್ಯ ಮೊದಲಾದವರು ತೆಲುಗು ಭಾಷೆಯ ಸಾಹಿತ್ಯಕ್ಕೆ ರತ್ನದಂತಿರುತ್ತಾರೆ. ಈ ದಿನದ ಸಭೆಗೆ ಸಿಕಂದರಾಬಾದಿನ ಶೆಶನ್ ಜಡ್ಜಿಯವರಾದ ವೆಂಕಟರಾಮಾರಡ್ಡಿ ಎಂಬುವರು ಅಧ್ಯಕ್ಷರಿದ್ದರು. ಸಭೆಯಲ್ಲಿ ಆಂಧ್ರ ಪಂಡಿತರ ಭಾಷಣಗಳಾದವು. ಎಲ್ಲರೂ ತಿಕ್ಕನ್ನ ಕವಿಯ ಗುಣಗಳನ್ನೇ ಹೊಗಳಿದರು. ಆದರೆ ಆಂಧ್ರ ಭಾಷಾ ಪ್ರಾಂತದ ಕಡೆಯ ಸರಹದ್ದಿನಲ್ಲಿಯೂ ಕೂಡ ಇಷ್ಟರ ಮಟ್ಟಿಗೆ ಉತ್ಸಾಹದಿಂದ ಕೆಲಸವನ್ನು ಮಾಡುವದನ್ನು ನೋಡಿದರೆ ಮಧ್ಯಭಾಗವಾದ ಕಾಕಿನಾಡು, ನೆಲ್ಲೂರು ಮೊದಲಾದ ಕಡೆಯಲ್ಲಿ ಆಂಧ್ರರು ತಮ್ಮ ಭಾಷೆಯ ಸಲುವಾಗಿ ಎಷ್ಟು ಪ್ರಯತ್ನ ಮಾಡುತ್ತಿರಬಹುದೆಂದು ವಾಚಕರೇ ಊಹಿಸಲಿ. ಇದರಂತೆ ನಮ್ಮ ಕನ್ನಡ ನಾಡಿನ ಪ್ರಸಿದ್ಧ ಕವಿಗಳ ಜಯಂತ್ಯುತ್ಸವವನ್ನು ಪ್ರತಿಯೊಂದು ಗ್ರಾಮದ ಕನ್ನಡಿಗರು ಏಕೆ ಮಾಡಬಾರದು? ಸಭೆಯು ರಾತ್ರಿ ಹತ್ತು ಗಂಟೆಗೆ ಮುಗಿಯಿತು. ಆಗ ಅವರು ಕೊಲ್ಲಿಪಾಕಿಯಿಂದ ತಂದ ಶಿಲಾಲಿಪಿಗಳ ಪ್ರತಿಗಳನ್ನು ತೋರಿಸಿದರು. ಆದರೆ ವೀರಶೈವ ಗ್ರಂಥಗಳ ಪಟ್ಟಿಯು ಮಾತ್ರ ಸಿಗಲಿಲ್ಲ. ಯಾಕಂದರೆ ಪ್ರೆಸಿಡೆಂಟರು ಕೆಲವು ವಿಷಯಗಳನ್ನು ಸರಿಪಡಿಸುವದಕ್ಕಾಗಿ ತೆಗೆದುಕೊಂಡು ಹೋಗಿದ್ದರೆಂದು ತಿಳಿಯಬಂತು.

ಮರುದಿನ ಮತ್ತೊಬ್ಬ ದೊಡ್ಡ ಮನುಷ್ಯರ ಭೆಟ್ಟಿಯಾಯಿತು. ಅವರ ಹೆಸರು ಸೈಯ್ಯದ ಮಹಮ್ಮದ ಕಾಶೀಮ ಜಹಗೀರದಾರ. ಇವರ ಹಿರಿಯರು ವಿಜಾಪುರದ ಬಾದಶಹರ ಕಾಲಕ್ಕೆ ಯಾವಾಗಲೂ ಮಂತ್ರಿಯ ಕೆಲಸವನ್ನು ಮಾಡುತ್ತ ಬಂದಿದ್ದರಲ್ಲದೆ ಇವರ ತಂದೆಯವರು ಹೈದರಾಬಾದಿನ ಮುಖ್ಯ ಮಂತ್ರಿಗಳಾಗಿ ಕೆಲಸವನ್ನು ಮಾಡಿದರು. ಇವರು ಕನ್ನಡ ಭಾಷೆಯನ್ನು ಚನ್ನಾಗಿ ಮಾತನಾಡುತ್ತಾರೆ. ಇವರಲ್ಲಿ ಬಹಳ ಪ್ರಾಚೀನವಾದ ಒಂದು ದೊಡ್ಡ ಗ್ರಂಥಾಲಯವು ಇರುತ್ತದೆ. ವೇದ, ವೇದಾಂಗ, ನ್ಯಾಯ, ದರ್ಶನ, ಕನ್ನಡ ಸಂಸ್ಕೃತ ತೆಲುಗು ಉರ್ದು ಮೊದಲಾದ ಭಾಷೆಗಳಲ್ಲಿ ತಾಡವಾಲೆಯ ಮೇಲೂ ಕರಡು ಕಾಗದಗಳ ಮೇಲೂ ಬರೆಯಲ್ಪಟ್ಟ ಗ್ರಂಥಗಳಿರುತ್ತವೆ. ಇವರಲ್ಲಿ ಪುಸ್ತಕಗಳ ಪಟ್ಟಿಯು ಇರುವದಿಲ್ಲವಾದ ಕಾರಣ ಇಂತಹ ಗ್ರಂಥಗಳೇ ಇರುತ್ತವೆಂಬುವದು ತಿಳಿಯುವದು ಕಠಿಣವಿರುತ್ತದೆ. ಸುಮಾರು ೫೦ ಕಪಾಟುಗಳು ತುಂಬಿದ್ದು ನನ್ನ ಕಣ್ಣಿಗೆ ಬಿದ್ದವು. ಇದರಲ್ಲಿ ವೀರಶೈವರ ಎಷ್ಟೋ ಗ್ರಂಥಗಳೂ ಇರುತ್ತವೆ. ಕೆಲವು ದಿನಗಳ ಮಟ್ಟಿಗಾದರೂ ಅಲ್ಲಿ

ಇದ್ದು ನೋಡಿದರೆ ವೀರಶೈವರ ಕೆಲವು ಗ್ರಂಥಗಳಾದರೂ ಶಿಗಬಹುದೆಂದು ನನ್ನ ನಂಬಿಕೆಯು ಇರುತ್ತದೆ. ಈ ಗ್ರಂಥಗಳ ಸಂಗ್ರಹವು ಮುಸಲ್ಮಾನ ರಾದ ನಿಮ್ಮಲ್ಲಿ ಹೇಗೆ ಸಂಗ್ರಹವಾಯಿತೆಂದು ಕೇಳಿದರೆ ವಿಜಾಪುರದಲ್ಲಿ ಮಂತ್ರಿಯ ಕೆಲಸದಲ್ಲಿದ್ದಾಗಿನಿಂದಲೂ ತಮ್ಮ ಹಿರಿಯರು ಅವುಗಳನ್ನು ಕೂಡ ಹಾಕುತ್ತ ಬಂದಿರುತ್ತಾರೆಂದು ಹೇಳಿದರು. ಸದರೀ ಡಾಕ್ಟರ ಸಾಹೇಬರು ದೊಡ್ಡ ಅಧಿಕಾರದಲ್ಲಿದ್ದರೂ ( ಇವರಿಗೆ ತಿಂಗಳಿಗೆ ೧೪೦೦ ರೂಪಾಯಿ ಪಗಾರವಿದೆ) ಇವರು ಶಾಂತಸ್ವಭಾವದವರೂ ನಿಗರ್ವಿಗಳೂ ಇರುತ್ತಾರೆ. ಇವರಿಗೆ ವೀರಶೈವರ ಭೆಟ್ಟಿಯಾದರೆ ಬಲು ಪ್ರೇಮವಿಷ್ಟೇಅಲ್ಲ, ಅವರ ಮುಂದೆ ನಾನೂ ಅರ್ಧ ಲಿಂಗಾಯತನಿರುತ್ತೇನೆಂದು ಥಟ್ಟನೇ ಉತ್ತರ ಕೊಡುತ್ತಾರೆ. ಡಾಕ್ಟರ ಸಾಹೇಬರು ಸ್ವಂತ ಕರ್ಪೂರ, ಶಿಂದೂರ, ಪೆಟ್ರೋಲ ಮೊದಲಾದ ಅನೇಕ ಪದಾರ್ಥಗಳನ್ನು ತಯಾರು ಮಾಡಿಟ್ಟಿರು ತ್ತಾರೆ. ಮೊನ್ನೆ ಅಮೇರಿಕೆಯಿಂದ ಬಂದ ಯಾತ್ರಿಕರು ಇವರ ಗ್ರಂಥಾಲಯ ವನ್ನು ೧೦ ಲಕ್ಷ ರೂಪಾಯಿಗಳಿಗೆ ಬೇಡಿದರಂತೆ. ಆದಕ್ಕೆ ಡಾಕ್ಟರ ಸಾಹೇಬರು ಒಪ್ಪಲಿಲ್ಲವಂತೆ. ನಮ್ಮ ಹಿರಿಯರು ಕನ್ನಡ ದೇಶದವರಾದ್ದರಿಂದ ಈ ಗ್ರಂಥಗಳ ಸಂಗ್ರಹವು ಕನ್ನಡ ದೇಶದಲ್ಲಿಯೇ ಇರತಕ್ಕದ್ದೆಂದು ಹೇಳಿದರಂತೆ. ಕೊಲ್ಲಿಪಾಕಿಯ ವೃತ್ತಾಂತವನ್ನು ಓದ ಬೇಕೆಂಬ ಅಪೇಕ್ಷೆಯುಳ್ಳ ವಾಚಕರನ್ನು ಹೈದರಾಬಾದಿನ ಈ ಗ್ರಂಥಾಲಯಗಳ ವೃತ್ತಾಂತಗಳಲ್ಲಿಯೇ ಬೇಸರಗೊಳಿಸಿದ ಕಾರಣ ಕ್ಷಮೆ ಇರಲಿ.

ಕೊಲ್ಲಿಪಾಕಿಯು ಹೈದರಾಬಾದಿನಿಂದ ಓರಂಗಲ್ಲ ಬೆಜವಾಡಕ್ಕೆ ಹೋಗುವ ಮಾರ್ಗದಲ್ಲಿರುತ್ತದೆ. ಅರ್ಥಾತ್ ಆರನೇ ಸ್ಟೇಶನ್ 'ಆಲೇರು' ಎಂಬುವದಿರುವದು. ಈ ಸ್ಟೇಶನ್ನಿಗೆ ಇಳಿದರೆ ಕೊಲ್ಲಿಪಾಕಿಯು ನಾಲ್ಕು ಮೈಲು ದೂರದಲ್ಲಿರುತ್ತದೆ. ಹೈದರಾಬಾದಿನಿಂದ ಪ್ರಾತಃಕಾಲ ೭ ಗಂಟೆಗೆ ಬಿಟ್ಟ ಗಾಡಿಯು ಸರಿಯಾಗಿ ಆಲೇರು ಸ್ಟೇಶನಕ್ಕೆ ೧೦ ಗಂಟೆಗೆ ಮುಟ್ಟಿತು. ಈ ಸ್ಥಳದಲ್ಲಿಯ ಒಂದು ಆಶ್ಚರ್ಯಕರವಾದ ಸಂಗತಿಯನ್ನು ನಾನು ಇಲ್ಲಿ ಹೇಳದೆ ಇರಲಾರೆನು. ಸ್ಟೇಶನಿನಲ್ಲಿ ಇಳಿದ ಕೂಡಲೇ ಓರ್ವ ಬಾಲಿಕೆಯು 'ಕಲ್ಲುತ್ರಾಗು ಚುನ್ನಾವಾ' (ಮದ್ಯವನ್ನು ಸೇವಿಸುವಿರಾ) ಎಂದು ಕೂಗಿದಳು. ಆದರ ಅರ್ಥವು ಮೊದಲು ನನಗೆ ತಿಳಿಯಲಿಲ್ಲ. ಹತ್ತರವಿದ್ದ ಹೈದರಾಬಾದಿನವನನ್ನು ಕೇಳಲಾಗಿ ಸರಿಯಾದ ಅರ್ಥವನ್ನು ಹೇಳಿದನು. ಕೂಡಲೇ ಆಶ್ಚರ್ಯವೂ ವ್ಯಸನವೂ ಆಯಿತು. ಇಂಥ ಅಶಿಷ್ಟವ್ಯವಹಾರವು

ಯಾಕೆ ಇರುವದೆಂದು ಕೇಳಲಾಗಿ ಈ ಪ್ರಾಂತದಲ್ಲಿ ಎಷ್ಟೋಜನ ವೈಶ್ಯರೂ ಬ್ರಾಹ್ಮಣರೂ ಮದ್ಯಪಾನವನ್ನು ಮಾಡುತ್ತಾರಾದ ಕಾರಣ ಪ್ರತಿಯೊಬ್ಬರಿಗೂ ಕೇಳುವ ರೂಢಿಯು ಇರುತ್ತದೆ. ಈ ದೇಶದಲ್ಲಿ ವಿಶೇಷವಾಗಿ ತಾಳದ ಹೆಂಡವನ್ನು ಮಾಡುತ್ತಿರುವ ಕಾರಣ ಈಚಲ ಗಿಡದ ಹೆಂಡದಂತೆ ನಿಷೇಧ ಮಾಡುವದಿಲ್ಲವೆಂದು ಅಂದನು. ಇದೇ ಅಲ್ಲವೇ ಪಶುವೃತ್ತಿಯ ಪರಮಾವಧಿಯು ಎಂದು ನನ್ನ ಮನಸ್ಸಿಗೆ ಅನಿಸಿತು.

ಹಾಗೆಯೇ ನಾವು ಕೊಲ್ಲೀಪಾಕಿಯ ದಾರಿಯನ್ನು ಹಿಡಿದೆವು. ಗಿಡಗಳ ಗುಂಪಿನಲ್ಲಿ ಪಕ್ಷಿಗಳ ಇಂಪಾದ ಕಿಲಿ ಕಿಲಿ ಧ್ವನಿಯನ್ನು ಕೇಳುತ್ತ ಪುಷ್ಪಗಳ ಕಂಪನ್ನು ಸೇವಿಸುತ್ತ ಸೊಂಪಾಗಿ ಹೋಗುತ್ತಿದ್ದ ಕಾಲದಲ್ಲಿ ಎಡಬಲಕ್ಕೆ ಗಗನ ಚುಂಬಿತಗಳಾದ ತಾಡವಾಲೆಯ ವೃಕ್ಷಗಳು ಮಾರ್ಗಸ್ಥರಿಗೆ ಸ್ವಾಗತವನ್ನು ಮಾಡುತ್ತವೆಯೋ ಏನೋ ಎಂಬುವಂತೆ ಮಂದಮಾರುತನಿಂದ ಕಂಪಿಸುತ್ತಿರುವದು ಕಣ್ಣಿಗೆ ಬಿದ್ದಿತು. ಮಲೆನಾಡು ಪ್ರಾಂತಗಳಾದ ಕೆಳದಿ, ಸಾಗರ, ಶಿರಸಿ ಮೊದಲಾದ ಕಡೆಯಲ್ಲಿಯ ಜನರು ತೆಂಗಿನ ಬನಗಳನ್ನೂ, ಅಡಿಕೆಯ ಆಗರಗಳನ್ನೂ ಜೋಪಾನ ಮಾಡುವಂತೆ ಇಲ್ಲಿಯ ಜನರು ತಾಳೆಯ ಗಿಡಗಳನ್ನು ಜೋಪಾನ ಮಾಡುವದು ಕಂಡು ಬಂದಿತಲ್ಲದೆ ಸ್ಟೇಶನ್ನಿನಲ್ಲಾದ ಅನುಭವವು ಸ್ಥಿರವಾಯಿತು. ನಮ್ಮಲ್ಲಿ ಜಾತ್ರೆ, ನಿಬ್ಬಣ ಮೊದಲಾದ ಸಮಯಗಳಲ್ಲಿ ಎತ್ತಿಗೆ ಹುರಿಗೆಜ್ಜೆಯ ಅಥವಾ ಗಂಟೆಯ ಸರಗಳನ್ನು ಕಟ್ಟುವಂತೆ ಒಂದೊಂದು ಗಿಡಕ್ಕೆ ಸುತ್ತಲೂ ಏಳೆಂಟು ಗಡಿಗೆಗಳನ್ನು ಕಟ್ಟಿರುವದನ್ನು ನೋಡಲಾಗಿ ಪರಮಾಶ್ಚರ್ಯವೆನಿಸಿತು. ಮತ್ತು ಮದ್ಯಪಾನದ ನಿಷೇಧವು ಈ ಪ್ರಪಂಚದಲ್ಲಿ ಶಬ್ದದಲ್ಲಿ ಮಾತ್ರ ಇರುವದೆಂದು ಅನಿಸಿತು.

ನಾವು ಹನ್ನೆರಡು ಗಂಟೆಗೆ ಸರಿಯಾಗಿ ಕೊಲ್ಲೀಪಾಕಿಗೆ ಮುಟ್ಟಿದೆವು. ಅಲ್ಲಿ ವೀರಶೈವರ ಹಿರೇಮಠದಲ್ಲಿ ಉಳಿದು ಕೊಂಡೆವು. ಇಲ್ಲಿ ನೋಡತಕ್ಕಂಥ ಕೆಲವು ಸ್ಥಲಗಳಿರುತ್ತವೆ. ಮೊದಲು ದೇವಾಲಯಗಳ ವಿಷಯ ನೋಡೋಣ.

೧ **ಸೋಮೇಶ್ವರ ದೇವಾಲಯವು**-ಇದೇ ಈ ಗ್ರಾಮದ ಮುಖ್ಯ ದೇವಾಲಯವು. ಇದೇ ನಮ್ಮ ಶ್ರೀ ಜಗದ್ಗುರು ರೇಣುಕರ ಉತ್ಪತ್ತಿ ಸ್ಥಾನವು. ಇದು ಬಹಳ ಪ್ರಾಚೀನ ಕಾಲದ್ದಿರುವದರಿಂದ ಬಹಳ ಸಿಥಿಲವಾಗಿರುತ್ತದೆ. ದೇವಾಲಯವು ಬಹಳ ವಿಸ್ತಾರವಾಗಿಯೂ ಎಲ್ಲ ಕಲ್ಲಿನಿಂದ

ಕಟ್ಟಿಸಿರುವಂಥಾದ್ದಾಗಿಯೂ ಇರುತ್ತದೆ. ಲಿಂಗಮೂರ್ತಿಯು ಉದ್ಭವಮೂರ್ತಿಯಾದಕಾರಣ ಭೂಮಿಯ ಮೇಲ್ಭಾಗಕ್ಕೆ ಬಹಳ ಎತ್ತರವಿರುವದಿಲ್ಲ. ಇಲ್ಲಿಯ ಒಂದೆರಡು ಮೂರ್ತಿಗಳನ್ನು ನೋಡಲಾಗಿ, ಕಾಶಿಯ ಹತ್ತರವಿರುವ ಸಾರನಾಥ ಎಂಬುವ ಸ್ಥಳದಲ್ಲಿ ಬುದ್ಧನು ತಪಸ್ಸನ್ನಾಚರಿಸಿದ್ದನಷ್ಟೇ, ಆತನ ಕಾಲದ ಮೂರ್ತಿಗಳನ್ನು ಸರಕಾರದವರು ಯೋಗ್ಯವ್ಯವಸ್ಥೆಯಿಂದ ಇಟ್ಟಿರುತ್ತಾರೆ, ಆ ಮೂರ್ತಿಗಳ ನೆನಪೇ ನನಗಾಯಿತು. ಅರ್ಥಾತ್ ಇವು ಬಹಳ ಪ್ರಾಚೀನ ಕಾಲದ ಮೂರ್ತಿಗಳೆಂದು ತಿಳಿಯಬರುತ್ತದೆ. ಸೋಮನಾಥನ ಗುಡಿಯ ಒಳಗೆ ಭ್ರಮರಾಂಬಾ, ಅನ್ನಪೂರ್ಣಾ. ಎಂಬುವ ಮೂರ್ತಿಗಳೂ, ಹೊರಭಾಗದಲ್ಲಿ ಲಿಂಗ ಮತ್ತು ವೀರಭದ್ರನ ಮೂರ್ತಿಗಳೂ ಇರುತ್ತವೆ. ಈ ಗುಡಿಯ ಕೆಲವು ಭಾಗಗಳು ಬಿದ್ದು ಹೋಗಿರುತ್ತವೆ. ಹೀಗೆಯೇ ಕೆಲವು ದಿವಸಗಳು ಹೋದರೆ ಇವು ನಾಮಶೇಷವಾಗಬಹುದೆಂದು ತೋರುತ್ತದೆ. ಯಾಕಂದರೆ ಈ ಪ್ರಾಂತದಲ್ಲಿ ವೀರಶೈವರ ವಸತಿಯು ಬಹಳ ಕಡಿಮೆ ಇರುತ್ತದೆ. ಸರಕಾರದವರ ಸಹಾಯವಂತೂ ಶೂನ್ಯವು. ಅಂದಮೇಲೆ ಕೇಳುವದೇನು? ಈ ಗ್ರಾಮವು. ಸರ್. ಸಾಲರ್ ಜಂಗ್ (ಕೊಪ್ಪಳದ ಜಹಗೀರ್‌ದಾರರು) ಇವರ ಅಳಿಯಂದಿರಾದ ಬಹಿರಾಮ ಜಂಗ್ ಎಂಬುವರಿಗೆ ಜಹಗೀರು ಗ್ರಾಮವಾಗಿರುತ್ತದೆ. ಸೋಮನಾಥ ದೇವಾಲಯವನ್ನು ಜೀರ್ಣೋದ್ಧಾರ ಮಾಡುವ ಪುಣ್ಯಾತ್ಮರು ಇದೂವರೆಗೂ ಹುಟ್ಟಿದೆ ಇದ್ದದ್ದನ್ನು ನೋಡಿದರೆ ದುಃಖವೆನಿಸದೆ ಇರಲಾರದು. ಈ ದೇವಾಲಯಕ್ಕೆ ಇನಾಮುಗಳೇನೂ ಇರುವದಿಲ್ಲ. ಒಂದು ವರ್ಷಕ್ಕೆ ಇಪ್ಪತ್ತು ರೂಪಾಯಿಗಳನ್ನು ಜಹಗೀರ್‌ದಾರರು ಕೊಡುತ್ತಾರಂತೆ. ಈ ಸಂಸ್ಥಾನದಲ್ಲಿ ಹಾಳು ಬಿದ್ದ ಹಿಂದೂ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಲಿಕ್ಕೆ ಸರಕಾರದವರ ಹುಕುಮು ಸಿಕ್ಕುವದೇ ಕಷ್ಟ. ಮೇಲಾಗಿ ಜಹಗೀರ್ ಗ್ರಾಮವು. ಅಂದಮೇಲೆ ಮಾಡುವದೇನು? ಇಂತಹ ಸ್ಥಿತಿಯಲ್ಲಿ ಸೋಮೇಶ್ವರ ದೇವಾಲಯವು ಕೆಲವು ಶತಮಾನಗಳಲ್ಲಿಯೇ ನಾಮಶೇಷವಾಗಬಹುದೆಂದು ನಿಶ್ಚಯವಾಗಿ ಹೇಳಬಹುದಾಗಿದೆ. ಹೋಳೀಹುಣ್ಣಿಮೆಗೆ ಸೋಮೇಶ್ವರನ ಜಾತ್ರೆಯು ಆಗುತ್ತದೆ. ಆ ಕಾಲಕ್ಕೆ ಬೇರೆ ಬೇರೆ ಪ್ರಾಂತಗಳಿಂದ ೧೦-೧೨ ಸಾವಿರ ಜನರು ಕೂಡುತ್ತಾರೆಂಬು ತಿಳಿಯುತ್ತದೆ. ಸೋಮೇಶ್ವರ ದೇವಾಲಯಕ್ಕೆ ರುದ್ರಾಭಿಷೇಕ ಮೊದಲಾದವುಗಳನ್ನು ಎಲ್ಲ ಜಾತಿಯವರಿಗೂ ಮಠದ ಅಯ್ಯನವರೇ ಮಾಡಿಸು

ಸಾರಾಂಶವೇನಂದರೆ ಕುಲ ಹದಿನೆಂಟು ಜಾತಿ ಎಂದು ಕನ್ನಡದಲ್ಲಿ ವಾಡಿ ಕೆಯುಂಟಷ್ಟೆ ಆದರಂತೆ ಎಲ್ಲ ಜಾತಿಯವರಿಗೂ ಈ ವೀರಶೈವ ಮಾಹೇಶ್ವರರೇ ಇಲ್ಲಿ ಗುರುಗಳಾಗಿ ಅವರಿಂದ (ಆ ಎಲ್ಲ ಜಾತಿಯವರಿಂದ) ಕಾಣಿಕೆಗಳನ್ನು ಎತ್ತುತ್ತಾರೆ. ಈ ಹದಿನೆಂಟು ಮಠಗಳೂ ಸ್ವಲ್ಪ ಹೆಚ್ಚು ಕಡಿಮೆ ಒಂದೆಯೇ ತರಹದವು ಆಗಿರುವವರಿಂದ ಪ್ರತ್ಯೇಕವಾಗಿ ವಿವರಿಸುವ ಆವಶ್ಯಕತೆಯು ತೋರುವದಿಲ್ಲ. ಈ ಮಠಗಳು ಯಾವರಾಜರ ಕಾಲದಲ್ಲಿ ಕಟ್ಟಿಸಿದವುಗಳೆಂದು ಹೇಳಲಿಕ್ಕೆ ಬಲವಾದ ಆಧಾರಗಳೇನೂ ಇಲ್ಲ. ಆದರೂ ಇವು ಬಹು ಪ್ರಾಚೀನ ಕಾಲದವುಗಳೆಂದು ಹೇಳಬಹುದು. ಆದರೆ ಆ ಹದಿನೆಂಟು ಮಠಗಳಲ್ಲಿಯೂ ಹದಿನೆಂಟು ದೇವಾಲಯುಗಳಿರುವವೆಂದು ಮೇಲೆ ಹೇಳಿದೆಯಷ್ಟೆ ಈ ದೇವಾಲಯುಗಳಾದರೂ ಸೋಮೇಶ್ವರನ ಸಮಾನ ಕಾಲದ ಗುಡಿಗಳೆಂದು ಧಾರಾಳವಾಗಿ ಹೇಳಬಹುದು. ಈ ಹದಿನೆಂಟು ಮಠಗಳ ರಚನೆಯನ್ನು ನೋಡಿದರೆ ವೀರಶೈವರ ಗುರುತ್ವದ ಲಕ್ಷಣವು ಮೊದಲು ಎಷ್ಟು ಬಲವತ್ತರವಾಗಿರುವದೆಂಬುವದು ಸ್ಪಷ್ಟವಾಗಿ ತೋರುತ್ತದೆ. ಈ ಹದಿನೆಂಟು ಮಠಗಳಲ್ಲಿ ೩-೪ ಮಠಗಳು ನಷ್ಟವಾಗಿರುತ್ತವೆ. ಈ ಮಠಗಳಲ್ಲಿರುವ ಜಂಗಮರ ಹೊರತು ಈ ಊರಿನಲ್ಲಿ ವೀರಶೈವರ ಮನೆಗಳೇ ಇರುವದಿಲ್ಲ. ಅವುಗಳಿಗೆ ಸರಕಾರದಿಂದ ಇನಾಮುಗಳೇನೂ ಸದ್ಯಕ್ಕೆ ಇರುವದಿಲ್ಲ. ಮೊದಲು ಇದ್ದ ಇನಾಮುಗಳೆಲ್ಲ ನಷ್ಟವಾಗಿರುತ್ತವೆಂದು ಹೇಳುತ್ತಾರೆ. ಇವರೆಲ್ಲರೂ ಕೇವಲ ಬಡತನದಿಂದ ಉಪಜೀವನವನ್ನು ಸಾಗಿಸತಕ್ಕವರಾಗಿರುತ್ತಾರೆ. ಇವರ ಆಚರಣೆಯು ಸಾಧಾರಣ ಶುದ್ಧವಾಗಿರತ್ತದೆಂದು ಹೇಳಬಹುದು.

ಸೋಮೇಶ್ವರ ದೇವರ ಗುಡಿಯ ಮುಂದೆ ನಾಲ್ಕು ಶಿಲಾಲಿಪಿಗಳು ಇರುತ್ತವೆ. ಅವುಗಳಲ್ಲಿ ಎರಡು ಕನ್ನಡ ಭಾಷೆಯಲ್ಲಿಯೂ ಎರಡು ಬೇರೆ ಭಾಷೆಗಳಲ್ಲಿಯೂ ಇರುತ್ತವೆ. ಎರಡು ಲಿಪಿಗಳು ಬಹಳ ಸ್ಪಷ್ಟವಾಗಿರುತ್ತವೆ. ಎರಡು ಲಿಪಿಗಳ ಅಕ್ಷರಗಳು ಅಷ್ಟು ಸ್ಪಷ್ಟವಾಗಿರುವದಿಲ್ಲ ಲಿಪಿಗಳು ದೊಡ್ಡವಿರುತ್ತವೆ. ಇವುಗಳನ್ನು ಹೈದರಾಬಾದಿನ ಆಂಧ್ರ ಭಾಷಾ ನಿಲಯದವರು ಪ್ರಿಂಟು ಮಾಡಿಕೊಂಡು ಬಂದಿರುತ್ತಾರೆ. ಅವುಗಳಲ್ಲಿರುವ ವಿಷಯವು ತಿಳಿದು ಬಂದಿರುವದಿಲ್ಲ. ಈ ಪ್ರಾಂತದಲ್ಲಿ ಕನ್ನಡ ಲಿಪಿಗಳಿರುವದನ್ನು ನೋಡಿ ನನಗೆ ಕೌತುಕವೆನಿಸಿತು. ಯಾಕಂದರೆ ಇದು ಈಗ ಶುದ್ಧ ತೆಲುಗು ಪ್ರಾಂತವು ಆದರೆ ಇಲ್ಲಿಯ ಕನ್ನಡ ಶಿಲಾಲೇಖ

ಗಳ ಮೇಲಿಂದ ಪೂರ್ವದ ಕನ್ನಡ ನಾಡು ಕೊಲ್ಲಿಪಾಕಿಯವರೆಗೂ ಹಬ್ಬಿತ್ತೆಂದು ಅನುಮಾನ ಮಾಡಬಹುದಾಗಿದೆ.

ಶ್ರೀ ಸೋಮೇಶ್ವರಲಿಂಗದಲ್ಲಿ ಉದ್ಭವರಾದ ರೇಣುಕರ ಸ್ಮಾರಕವೇನಾದರೂ ಇರುವದೇ ಎಂದು ವಾಚಕರು ಕೇಳಬಹುದು. ಆದರೆ ಸೋಮೇಶ್ವರಲಿಂಗದ ದಕ್ಷಿಣ ದಿಕ್ಕಿಗೆ ಸುಮಾರು ೬-೭ ಮೈಲುಗಳ ದೂರದಲ್ಲಿ ರೇಣುಕಾಚಾರ್ಯರ ಗುಡ್ಡವು ಇರುತ್ತದೆ. ಆ ಗುಡ್ಡದಲ್ಲಿ ಭಗವಾನ್ನ ರೇಣುಕರ ಗವಿಯೂ ಒಂದು ಈಶ್ವರ ದೇವಾಲಯವೂ ಇರುತ್ತದೆ. ಪೂರ್ವದಿಕ್ಕಿಗೆ ಮರುಳಸಿದ್ಧೇಶ್ವರ ಗುಡ್ಡವೂ ಒಂದು ದೇವಾಲಯವೂ ಇರುತ್ತದೆ. ಇದರಂತೆಯೇ ಉಳಿದ ಎರಡು ದಿಕ್ಕುಗಳಲ್ಲಿ ಪಂಡಿತಾಚಾರ್ಯರ ಮತ್ತು ಏಕೋರಾಮಾಚಾರ್ಯರ ಗುಡ್ಡಗಳೂ ಗವಿಗಳೂ ದೇವಾಲಯಗಳೂ ಇರುತ್ತವೆ. ಅಂದರೆ ಚತುರಾಚಾರ್ಯರ ಗುಡ್ಡಗಳು ಈ ಭಾಗದಲ್ಲಿ ಇರುತ್ತವೆ. ರೇಣುಕರ ಗುಡ್ಡ ಒಂದನ್ನು ಬಿಟ್ಟು ಉಳಿದ ಮೂರು ಆಚಾರ್ಯರ ಹೆಸರಿನ ಗುಡ್ಡಗಳು ಕೊಲ್ಲಿಪಾಕಿಗೆ ೧೨-೧೩ ಮೈಲಿಯ ಮೇಲೆ ದೂರದಲ್ಲಿರುತ್ತವೆ. ನನಗೆ ವೇಳೆಯು ಇಲ್ಲದ ಕಾರಣ ಪ್ರತಿಯೊಂದು ಗುಡ್ಡಗಳಿಗೂ ಹೋಗಿ ಬರುವದಾಗಲಿಲ್ಲವೆಂದು ವ್ಯಸನದಿಂದ ಹೇಳಬೇಕಾಗುತ್ತದೆ. ವಾಚಕರೇ ಚತುರಾಚಾರ್ಯರ ಹೆಸರಿನ ದೊಡ್ಡ ದೊಡ್ಡ ಗುಡ್ಡಗಳೂ ಗವಿಗಳೂ ಈ ಭಾಗದಲ್ಲಿ ಇರುತ್ತವೆಂದ ಮೇಲೆ ಈ ಸ್ಥಾನವು ಎಷ್ಟು ಮಹತ್ತರವಾದದ್ದಾಗಿರುತ್ತದೆಂಬುವದನ್ನು ವಾಚಕರು ಸಹಜವಾಗಿಯೇ ಊಹಿಸಬಹುದು. ಶೈವ ಧರ್ಮದ ಮೂಲಸ್ಥಾನವು ಈ ಭಾಗವೆಂತಲೇ ಹೇಳಬಹುದಾಗಿದೆ. ಇಲ್ಲಿಯೇ ಪುರಾತನ ಕಾಲದಲ್ಲಿ ವೀರಶೈವ ಆಚಾರ್ಯರು ಉತ್ಪನ್ನರಾಗಿ ಆಗಮ ಧರ್ಮವನ್ನು ಪ್ರಜ್ವಲಗೊಳಿಸಿದರೆಂದು ತೋರುತ್ತದೆ.

ಈ ಕೊಲ್ಲಿಪಾಕಿಯ ಸುತ್ತಲೂ ಲಿಂಗಗಳೇ ಇರುತ್ತವೆ. ಕೋಟಿಲಿಂಗಗಳಿದ್ದವೆಂದು ಜನರು ಹೇಳುತ್ತಾರೆ. ಏನೇ ಇರಲಿ ಈ ಪ್ರಾಂತದಲ್ಲಿ ಆಚಾರ್ಯರ ಅವತಾರವಾದ ಕಾರಣ ಶೈವಮತವು ಈ ಪ್ರಾಂತದಲ್ಲಿ ಇಂದಿಗೂ ಉಳಿದ ಮತಗಳಿಗಿಂತ ಬಹಳ ಪ್ರಬಲ ಸ್ಥಿತಿಯಲ್ಲಿರುತ್ತದೆ. ಹಾಳು ಹೊಲಗಳಲ್ಲಾಗಲೀ ರಸ್ತೆಯಲ್ಲಾಗಲೀ ಲಿಂಗಗಳೇ ಕಣ್ಣಿಗೆ ಬೀಳುತ್ತವೆ. ಇನ್ನು ಸಿದ್ದಿ ಪೇಟಿ ಜಿಲ್ಲಾ ಜನಗಾಂವ ತಾಲೂಕು ಕೊಡವೆಟೂರು ಎಂಬುವ ಗ್ರಾಮದಲ್ಲಿ ರೇಣುಕರ ಗುಡಿಯು ಇರುತ್ತದೆಂದು ಇಲ್ಲಿಯ ಜನರಿಂದ ತಿಳಿಯಬಂದಿತು. ಅಲ್ಲಿಗೆ ಈಗಲೂ ಅನೇಕ ಜನರು

ಯಾತ್ರಾರ್ಥಿಗಳಾಗಿ ಬರುತ್ತಿರುವರಂತೆ ಕೊಲ್ಲೀಪಾಕಿಯು ದಕ್ಷಿಣ ದಿಕ್ಕಿಗೆ ಆ ಗ್ರಾಮವು ೧೨ ಮೈಲು ದೂರದಲ್ಲಿರುತ್ತದೆ.

ಕೊಲ್ಲಿಪಾಕಿ ಗ್ರಾಮದಲ್ಲಿ ಸುಮಾರು ೬೦೦ ನೂರು ಮನೆಗಳಿರುತ್ತವೆ. ಇವುಗಳಲ್ಲಿ ವೀರಶೈವರ ಮನೆಗಳೆಂದರೆ ಆ ಹದಿನೆಂಟು ಮಠಗಳೇ ಸರಿ. ಬ್ರಾಹ್ಮಣರದು ಒಂದೇ ಒಂದು ಮನೆಯು ಇರುತ್ತದೆ. ಇಳಿಗೇರ ಮನೆಗಳು ಮಾತ್ರ ೧೦೦ ಇರುತ್ತವೆ. ಇಂಥ ಸಣ್ಣ ಗ್ರಾಮದಲ್ಲಿ ನೂರು ಮನೆಗಳಿರುತ್ತವೆಂದಮೇಲೆ ಮೇಲೆ ಬರೆದ ಮದ್ಯದ (ಹೆಂಡದ) ಪ್ರಾಬಲ್ಯವು ಒಡೆದು ಕಾಣುವಂತಿದೆ. ಈ ಗ್ರಾಮವು ಹಾಳು ಬೀಳುತ್ತ ನಡೆದಿರುತ್ತದೆ. ಕೊಲ್ಲೀಪಾಕಿ ಗ್ರಾಮವು ನಲಗೊಂಡ ಜಿಲ್ಲಾ ಭುವನಗಿರಿ ತಾಲೂಕಿಗೆ ಸೇರಿರುತ್ತದೆ. ಈ ಗ್ರಾಮವು ವೀರಶೈವರ ಅನೇಕ ಗ್ರಂಥಗಳಲ್ಲಿ ಬಹು ಮನೋಹರವಾಗಿ ವರ್ಣಿಸಲ್ಪಟ್ಟಿರುತ್ತದೆ. ತಿಪ್ಪೆಯು ಉಪ್ಪರಿಗೆಯಾಗಬಹುದು, ಉಪ್ಪರಿಗೆಯು ತಿಪ್ಪೆಯಾಗಬಹುದೆಂಬುವ ಗಾದೆಗೆ ಸರಿಯಾಗಿ ಈ ಗ್ರಾಮವು ಇಂಥ ದುರ್ದೆಶೆಯನ್ನು ಹೊಂದಿದೆ.

ಕೊಲ್ಲಿಪಾಕಿ ಗ್ರಾಮವು ವೀರಶೈವರಿಗೆ ಅತ್ಯಂತ ಮಹತ್ವವಾದ ಸ್ಥಾನವಾಗಿದೆ. ಇಂಥ ಸ್ಥಾನವು ಈಗ ಇಷ್ಟರಮಟ್ಟಿಗೆ ಹೀನಾವಸ್ಥೆಯಲ್ಲಿರುವದನ್ನು ನೋಡಿದರೆ ಪ್ರತಿಯೊಬ್ಬನಿಗೂ ವಿಷಾದವೆನಿಸದೆ ಇರದು. ಈಸ್ಥಲ ಮತ್ತು ಸುತ್ತಲಿನ ಭಾಗಗಳಲ್ಲಿರುವ ಪ್ರಾಚೀನ ಸ್ಮಾರಕಗಳನ್ನು ರಕ್ಷಣೆ ಮಾಡುವದು ಅತ್ಯಂತ ಆವಶ್ಯಕವಾಗಿರುತ್ತದೆ. ವೀರಶೈವರ ಇತಿಹಾಸದಲ್ಲಿ ಈ ಸ್ಥಾನವು ಮಹತ್ವದ್ದಾಗಿದೆ. ಬೀಳಗಿಯ ವೃತ್ತಾಂತವೇ ಆಗಲಿ. ಕೊಡಗಿನ ಇತಿಹಾಸವೇ ಇರಲಿ ಇಕ್ಕೇರಿಯ ಚರಿತ್ರೆಯೇ ಆಗಲಿ ಎಲ್ಲವೂ ಒಂದೇರೀತಿ ಆಗಿರುತ್ತವೆ. ಅಂತೂ ಇಂತೂ ವೀರಶೈವರಿಗೆ ಗತ ವೈಭವ ಧುರೀಣರೆಂದೆನ್ನಬಹುದಾಗಿದೆ.

ಕೊಲ್ಲಿಪಾಕಿಯ ಮಹತ್ವವೆಂಬುವ ಗ್ರಂಥವು ತೆಲುಗಿನಲ್ಲಿರುತ್ತದೆ. ಇದನ್ನು ಶೋಧಿಸುವದು ಅವಶ್ಯವಿದೆ. ಈ ವೀರಶೈವರ ಹದಿನೆಂಟು ಮಠಗಳಲ್ಲಿಯೂ ತಾಮ್ರಶಾಸನಗಳಾಗಲೀ ಪ್ರಾಚೀನ ಗ್ರಂಥಗಳಾಗಲೀ ಇರುವದಿಲ್ಲ. ಹೆಚ್ಚಿನ ಮಾಹಿತಿಯು ಬಗ್ಗೆ ಆರ್ಕಿಲಾಜಿಕಲ್ ಡಿಪಾರ್ಟಮೆಂಟ ಆಫ್ ಹೈದರಾಬಾದ ಇವರ ಕೂಡ ಪತ್ರವ್ಯವಹಾರವನ್ನು ಮಾಡಿಕೊಂಡು ತಿಳಿದುಕೊಳ್ಳಬಹುದು.

ಮೇಲ್ಕಂಡ ಸಂಗತಿಗಳಿಂದ ಕೊಲ್ಲೀಪಾಕಿ ಮತ್ತು ಅವರ ಸುತ್ತಲಿನ ಪ್ರದೇಶಗಳನ್ನು ಇನ್ನೂ ಹೆಚ್ಚಾಗಿ ಶೋಧಿಸುವದು ಎಷ್ಟು ಅವಶ್ಯವಿರುತ್ತದೆಂಬದನ್ನು ವಾಚಕರು ತರ್ಕಿಸಬಹುದು. ಇದರಿಂದ ವೀರಶೈವ ಧರ್ಮದ ಉತ್ಪತ್ತಿಯ ಬಗ್ಗೆ ಮಹತ್ತದ ಪ್ರಕಾಶವು ಬೀಳುವಂತೆ ಇದೆ. ಇಷ್ಟೇ ಅಲ್ಲ, ಕರ್ನಾಟಕದ ಗತ ವೈಭವದ ಪುರಾತನ ಗುರುತುಗಳೂ ಈ ಭಾಗದಲ್ಲಿ ಸಿಗುವಂತೆ ಇವೆ.

ಮತ್ತೊಂದು ಸಾರೆ ಕೊಲ್ಲಿಪಾಕಿ ವಿಷಯಕ್ಕೆ ಹೆಚ್ಚಾಗಿ ಸಂಗತಿಗಳನ್ನು ಶೋಧಿಸಿ ಶಿವಾನುಭವದ ವಾಚಕರೆದುರಿಗೆ ಇಡುವೆನು.



# ಹರಿಗಡಿದ ಹೂಳೆಯು.

(ಲೇಖಕಃ—ಲ. ಅ. ಶಿರಹಟ್ಟಿ ಮಾಸ್ತರ ವಿಜಾಪುರ.)

[ವಾರ್ಧಿಕ ಷಟ್ಪದಿ]

ಇನನ ತೇಜಸ್ಸಿನೊಳ್ ತನುವಿನಾಲಸ್ಯದೊಳ್ ।
ವನದ ತರುತತಿಗಳೊಳ್ ನವಕುಸುಮ ವಿಸರದೊಳ್ ।
ತನಿಗಂಪನೀಯುತಿಹತೆಂಬೆಲರ ನಲಿವಿನೊಳ್ ಮರಿದುಂಬಿಯಾವಳಿ
ಯೊಳು ॥
ಜನಕೆ ಸಲೆತೋಷವಂಬೀರ್ವ ಬೆಳದಿಂಗಳೊಳ್ ।
ಮನವನುರೆಸೆಳೆವ ಕೋಕಿಲೆಯ ಕಲರುತಿಗಳೊಳ್ ।
ಘನತೆಯಿಂ ಪ್ರಕಟವಾದತ್ತಾ ವಸಂತ ಭೂಪಾಲ ಪ್ರತಾಪದೇಳ್ಗೆ ॥೧॥
ಎನಿತೊಂದುದಿನ ನಾನು ವನಕೈದದಿರಲೊಂದು ।
ದಿನವಿನನು ದಣಿದಿರುವ ನಸುವಿಸಿಲ ಸಮಯದೊಳ್ ।
ತನುವನನುನಯದಿ ಸಿಂಗರಿಸಿ ಮನದೊಳು ವಿನೋದಂದಳೆದು ಸ್ವೇಚ್ಛೆ
ಯಿಂದ ॥
ಬಿನದದಿಂ ಪೊರಮಟ್ಟು ನಲಿನಲಿಯುತೀಕ್ಷಿಸುತ ।
ತನುಶೋಭೆಯಿಂ ಸಾರ್ದುವನದಿ ಸಂಚರಿಸಿದೆನು ।
ತನುವನನಿಲಂಗೊಡ್ಡಿ ಮೋದಿಸುತ ಪರಿಪರಿಯ ಪುಷ್ಪಗಳ ಕೊಯ್ಯುತ॥೨॥
ತಿಳಿಗೊಳದ ತಂಪಮಂ ಮಲರನರುಗಂಪಮಂ
ತಳೆದುಸುಳಿಯುತ ಸೋಂಕುವೆಳವೆಲರ್ ಸ್ಪರ್ಶದಿಂ ।
ಲಲಿತ ಕಿಸಲಯ ಚಲ್ವನೋಳ್ಪಿನಿಂ ಲಸಿತಸುಮ ಸದ್ಗಂಧವಾಸನೆಯಲಿ ॥
ಅಳಿಗಳಿಂಚರಘುಶ್ರವಣದಿಂದ ನಳನಳಿಪ ।
ಫಲಗಳಾಸ್ವಾದನಗಳಿಂದ ಪರವಶೆಯಾಗಿ ।
ವಿಲಸಿತ ಸೊಗಸಿನಿಂದ ಗೃಹಕೃತ್ಯಗಳ ಮರೆತು ವಿಹರಿಸಿದೆನು ॥೩॥
ಅನಿತಕೆ ನದೀವಧುವಿನೇಳ್ಗೆ ನೆನಪಾಗಲಾಂ ।
ಮನವೊಲಿಯೆ ನೋಡಲದನೊಡನೆ ಬಡಗಣಕೈದಿ ।
ಪೊನಲಡಗಿ ಪಾಳ್ಸುರಿವ ಪೊಳೆಯ ಪಾತ್ರವಕಂಡುಬೆರಗಾಗಿ ಭ್ರಾಂತಿ
ಯಿಂದ ॥

ತನುವಲುಗೆ ನುಡಿದೆನೀ ನುಡಿಗಳಂ ಗಡನಿಂದು ।
ವನದಹರಿ ತಿರುಗಲೆಲೆವನಿತೆ ಪ್ರಾಯದ ಸೊಬಗು ।
ಒನಪುಘನತೆಗಳೆತ್ತ ಪೋದವಿಂದೀಯಂದವೇಕೆ ನಿನಗಿದು ಸಹಜವೆ? ॥೪॥

ಮೆರೆದೆನೀಂ ಪಿಂತೊರ್ಮೆ ಮೀರ್ದ ಸರಸತೆಯಿಂದ ।
ಮಿರುಗುವೂರ್ಮಿಕೆ ಕಂಕಣಾಲಂಕೃತಿಗಳಿಂದ ।
ಸರಸುಲಿಗಳಿಂ ಸುಳಿವು ತೊಳಲುಬಳಲಿಕೆಯಿಂದ ವರಚಾರುಗಾತ್ರದಿಂದ ॥
ಪರಿಪರಿಯರಲ್ಸರಗಳಿಂದ ತಾರುಣ್ಯದಿಂ ।
ಧರೆಯೊಳಾರೆದುರಿಲ್ಲವೆಂಬಂದದಿಂದೀಗ ॥
ಹರಿದುವೇ ಹರಿಯೊಡನೆ ಯೌವನಪ್ರತಿಭೆ ಸೊಬಗುಗಳೆಲ್ಲಮಿದು ಸಾಜವೆ?
॥೫॥

ಅಳವಿನೊಳ್ ಸಾದ್ರ್ರದಂ ಸೆಳೆದೊಪ್ಪಿಯೊಳೆದೊಯ್ದು ।
ನಲಿದೆಯ್ದವರ; ವಿಮತಿ ಕ್ರೂರಾತ್ಮೆ ಕರುಗಂದಿ ।
ಗಳನಗಲಿಸಿದೆ; ನೀನು ಗಣಿಸಲಿಲ್ಲಾರನುಂ ಯೌವನೋನ್ಮತ್ತಳಾಗಿ ॥
ಅಳಿದುವಹಹಾ ನಿನ್ನ ಬಲ ಚಲ್ವುಸೊಬಗೀಗ! ।
ಒಳಿಸಾರದೇಮರಳಿ ಹರಿದಹರಿಯುದ ಪೊನಲು? ।
ತಿಳಿಯೆಯಾ ನೀನಿದನು ನಶ್ವರಾವಸ್ಥೆಯೆಂಬುದನು? ಸಖಿದುರ್ದೈವಿಯೆ ॥೬॥

ಮರಳಿಬಿದ್ದಿತು ದೃಷ್ಟಿಯಂಗ ಶೋಭೆಯೊಳಾಗ ।
ಜರಿಯಿತೀ ಸೃಷ್ಟಿದೃಷ್ಟಾಂತದಿಂದೆನ್ನುಬ್ಬೆ ।
ನೆರೆತಿರಸ್ಕರಿಸಿದೆಂ ಯೌವನದ ಭಾವಮಂ ಸೃಷ್ಟಿಯನುಗತಳೆನ್ನುತ ॥
ಹರಿವ ಕಾಲದಿ ಮೆರೆದು ಹರಿವುತೀರಿದ ಮೇಲೆ ।
ಕೊರಗಿಮರುಗುವದಲ್ಲ; ಹರಿವು ತೀರದ ಮುನ್ನ ।
ಹರಿಯದ ಸುಗತಿ ಪಡೆಯಲರನ ಗಳಿಪುದೆ ಲೇಸೆನುತ ಮನೆಗೆಬಂದೆ
ಮರಳಿ ॥೭॥

---

**ಟೀಪು**:—ಸರಸತೆ = [೧] ರಸಿಕತೆ, [೨] ನೀರು; ಊರ್ಮಿಕೆ = [೧] ಉಂಗರು (೨) ತೆರೆ; ಕಂಕಣ = [೧] ಬಳೆ [೨] ತುಷಾರ; ಹರಿಯು = [೧] ಕಾಲಗತಿ [೨] ಪ್ರವಾಹ; ಹರಿವ ಕಾಲ = ನಡೆಯುವ ಕಾಲ; ಹರಿಯು ತೀರಿದ ಮೇಲೆ = ಕೈಸಾಗುವದು ಕಟ್ಟಾದ ಮೇಲೆ; ಹರಿಯದ = ನಾಶವಾಗದ; ಅರ = ಪುಣ್ಯ;

# ಶ್ರೀದುರದುಂಡೇಶ್ವರ ಮಠವು.

ಲೇಖಕ:—ಎಸ್. ಸಿ. ನಂದೀಮಠ, ಎಮ್. ಎ ಕನ್ನಡ ಪ್ರೊಫೇಸರ.
ರಾಜಾರಾಮ ಕಾಲೇಜ. ಕೊಲ್ಹಾಪುರ.



ಉತ್ತರ ಕರ್ನಾಟಕದಲ್ಲಿ ಸುವ್ಯವಸ್ಥಿತ ರಾಜ್ಯವು ನೆಲೆಗೊಂಡು ಸುಖ ಶಾಂತಿಯಿಂದ ಅದು ಬಾಳಿದ್ದು ಅನೇಕ ಶತಮಾನಗಳಿಂದಲೂ ಕಂಡು ಬಂದಿಲ್ಲ. ಅದು ದಕ್ಷಿಣ ಕರ್ನಾಟಕ ಮತ್ತು ಮಹಾರಾಷ್ಟ್ರ ಭಾಗಗಳ ಮಧ್ಯದಲ್ಲಿ ಇರುವದರಿಂದ ಬೇರೆ ಬೇರೆ ರಾಜರು ಹೂಡಿದ ಯುದ್ಧಗಳಲ್ಲಿ ಅದು ರಣಭೂಮಿಯಾಗಿ ಉಳಿದದ್ದು ತೋರಿಬರುತ್ತದೆ. ಹೊಯಿಸಾಳ ಬಲ್ಲಾಳ ಮತ್ತು ದೇವಗಿರಿ ಯಾದವ ಇವರ ನಡುವೆ ಆದ ಯುದ್ಧಗಳು ಇಲ್ಲಿಯೇ ಆದವು. ಅದರಂತೆ ವಿಜಯನಗರ ಮತ್ತು ಮುಸಲ್ಮಾನ ರಾಜರ ನಡುವೆ ಆದ ಯುದ್ಧಗಳೂ ಮುಸಲ್ಮಾನ ಐದು ಬಾದಹರು ತಮ್ಮ ತಮ್ಮೊಳಗೆ ನಡಿಸುತ್ತಿದ್ದ ಯುದ್ಧಗಳೂ ಇಲ್ಲಿಯೇ ಆಗಿವೆ. ಮುಂದೆ ಪೇಶ್ವೆ ಮತ್ತು ಹೈದರಲ್ಲಿ ಟೀಪು ಸುಲ್ತಾನ ಇವರ ನಡುವೆ ಆದ ಸಮರಾಂಗಣಗಳೂ ಇಲ್ಲಿಯೇ ಇವೆ. ಹೀಗೆ ಕರ್ನಾಟಕದ ಉತ್ತರ ಭಾಗದಲ್ಲಿ ಮೇಲಿಂದ ಮೇಲೆ ಯುದ್ಧಗಳೂ, ದಾಳಿಗಳೂ ಉಂಟಾಗುತ್ತಿದ್ದದ್ದು ಕಂಡುಬರುತ್ತದೆ. ಇದರ ಮೇಲಿಂದ ಈ ಪ್ರಾಂತದ ಪ್ರಗತಿಯು ಮತ್ತು ನೈತಿಕ ಧಾರ್ಮಿಕ ಸ್ಥಿತಿಯು ಸಂಪೂರ್ಣವಾಗಿ ಕೆಟ್ಟು ಹೋಗಿರಬಹುದೆಂಬ ಊಹೆಗೆ ಆಸ್ಪದವಾಗುತ್ತದೆ. ಆದರೆ ಆ ಕಾಲದ ದೇಶದ ಪ್ರಗತಿಯ ಇತಿಹಾಸವನ್ನು ನೋಡಿದರೆ ಈ ಸ್ಥಿತಿಯು ನಮ್ಮ ಕಲ್ಪನೆಯಂತೆ ಒದಗಿದಂತೆ ಕಂಡುಬರುವದಿಲ್ಲ ಯಾಕಂದರೆ ಈ ಶತಮಾನಗಳಲ್ಲೆಲ್ಲ ಅನೇಕ ಸಾಧು ಸತ್ಪುರುಷರೂ ಮಹಾ ಕವಿಗಳೂ, ಗ್ರಂಥಕಾರರೂ ಆಗಿ ಹೋದಂತೆ ಕಂಡುಬರುತ್ತದೆ. ಇದೇ ಕಾಲದಲ್ಲಿಯೇ ವೀರಶೈವ ಮತ್ತು ಬ್ರಾಹ್ಮಣ ವಾಙ್ಮಯವು ಈ ಭಾಗದಲ್ಲಿ ಹೆಚ್ಚಿದ್ದು ಈ ನಾಗರೀಕತೆಯ ಸ್ಥಿತಿಯು ಅಚ್ಚಳಿಯದೆ ಉಳಿಯಲಿಕ್ಕೆ ಕಾರಣವಾವುದನ್ನು ನಾವು ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಿದರೆ ಇದಕ್ಕೆ ವೀರಶೈವ ಮಠಗಳೇ

ದೊಡ್ಡ ಕಾರಣವಾದವೆಂದು ನಮಗೆ ತೋರುತ್ತದೆ. ಈ ಮಠಗಳು ಯಾವಾಗಲೂ ವೀರಶೈವ ಅರ್ಥಾತ್ ಕರ್ನಾಟಕ ಸಂಸ್ಕೃತಿಯನ್ನು ಕಾಯಲಿಕ್ಕೆ ಬಹಳ ಸಹಾಯ ಮಾಡಿರುವವು. ಈ ಸಂಸ್ಥೆಗಳಲ್ಲಿಯೇ ಆಗಿನ ಕಾಲಕ್ಕೆ ಧಾರ್ಮಿಕ ಜ್ಞಾನವೂ ವಿದ್ಯಾದಾನವೂ ಎಲ್ಲ ಜನರಿಗೆ ಕೊಡಲ್ಪಡುತ್ತಿತ್ತು. ಇಲ್ಲಿಯೇ ಶಿವಾನುಭವದ ಮಹತ್ವದ ಬೋಧೆಗಳು ಸದಾ ನಡೆಯುತ್ತಿದ್ದವು. ಆದ್ದರಿಂದ ಈ ಮಠಾದೀಶರಲ್ಲಿಯೇ ಅನೇಕ ಕನ್ನಡ ಮತ್ತು ಸಂಸ್ಕೃತ ಗ್ರಂಥಕಾರರೂ ವಾಙ್ಮಯ ವಿಶಾರದರೂ ಉತ್ಪನ್ನರಾದರು. ಹೀಗೆ ಕರ್ನಾಟಕದ ವೀರಶೈವ ಸಂಸ್ಕೃತಿಯು ಕರ್ನಾಟಕದಲ್ಲಿ ಅಪ್ರತಿಹತವಾಗಿ ಉಳಿಯಲಿಕ್ಕೆ ಈ ಮಠಗಳೇ ಕಾರಣವಾಗಿವೆಎಂದು ನಾವು ನಿರ್ವಿವಾದವಾಗಿ ಹೇಳಬಹುದು.

ಈ ಮಠಾಧೀಶರಲ್ಲಿ ಅನೇಕರು ಇಹಲೋಕದ ಭೋಗಗಳನ್ನು ತೃಣೀಕರಿಸಿ ಜನಹಿತದಲ್ಲಿ ತೊಡಗಿಕೊಂಡು ಎಲ್ಲ ಜಾತಿಯ ಜನರಿಗೆ ಪೂಜ್ಯರಾಗಿ ಬಾಳಿದ ಉದಾಹರಣೆಗಳು ಅನೇಕ ಇವೆ. ಇವರ ಸ್ಮಾರಕಕ್ಕಾಗಿ ಬಹಳ ಹಣ ವೆಚ್ಚಮಾಡಿ ಕಟ್ಟಿದ ಭವ್ಯವಾದ ಮಠಗಳು ಜನರಲ್ಲಿ ಅವರ ಬಗ್ಗೆ ಇದ್ದ ಭಕ್ತಿ ಭಾವವನ್ನು ತೋರಿಸುತ್ತವೆ. ಈ ಮಠಾಧೀಶರ ವರ್ಚಸ್ಸು ಕೇವಲ ಬಹು ಜನ ಸಮಾಜದಲ್ಲಷ್ಟೇ ಅಲ್ಲ, ಆ ಕಾಲಕ್ಕೆ ಇದ್ದ ಅರಸರು, ಸಂಸ್ಥಾನಿಕರು, ಮಾಂಡಲಿಕರು, ಇವರಲ್ಲಿಯೂ ಸಹ ವಿಶೇಷವಾಗಿದ್ದದ್ದು ತೋರಿಬರುತ್ತದೆ. ಅವರು ಈ ಅಧಿಪತಿಗಳಿಗೆ ಅವರ ರಾಜ್ಯಕಾರಭಾರದಲ್ಲಿ ಯೋಗ್ಯ ಸಲಹೆಗಳನ್ನು ಕೊಡುತ್ತಿದ್ದರಲ್ಲದೆ, ಅವರನ್ನು ಕಠಿಣ ಪ್ರಸಂಗಗಳಲ್ಲಿ ಉಳಿಸಿರುತ್ತಾರೆ. ಈ ಅಧಿಪತಿಗಳು ಸ್ವೈರ ವೃತ್ತಿಯುಳ್ಳವರಾಗಿ ಜನರ ಮೇಲೆ ಜುಲುಮೆಗಳನ್ನು ಮಾಡುತ್ತಿದ್ದರೆ ಅವುಗಳನ್ನು ಅವರು ನಿವಾರಣೆ ಮಾಡಲಿಕ್ಕೆ ಪ್ರಯತ್ನಿಸಿರುವರು. ಹೀಗೆ ಮಠಾಧೀಶರು ವರ್ತಿಸಿದ ಉದಾಹರಣೆಗಳು ಅಸಂಖ್ಯವಿವೆ. ಗಲಗಲಿ ಬಸವಲಿಂಗ ಸ್ವಾಮಿಗಳು ಪುಣೆಯ ದರ್ಬಾರಿನಲ್ಲಿ ಒಬ್ಬ ದೇಸಾಯಿಯು ನಿರ್ಬಂಧಿಸಲ್ಪಟ್ಟಾಗ ಅವನನ್ನು ಬಂಧ ವಿಮೋಚನೆ ಮಾಡಿದ ವೃತ್ತಾಂತವು ಶಿವಾನುಭವದ ಹಿಂದಿನ ಒಂದು ಸಂಚಿಕೆಯಲ್ಲಿ ಬಂದಿದ್ದು ವಾಚಕರ ನೆನಪಿನಲ್ಲಿ ಇರಬಹುದು. ಹೀಗೆಯೇ ಅನೇಕ ವೀರಶೈವ ಮಠಾದೀಶರು ತಮ್ಮ ಪವಿತ್ರ ಆಚರಣೆಯಿಂದ ಎಲ್ಲರಿಗೂ ಅತ್ಯಂತ ಪೂಜ್ಯರೆನಿಸಿಕೊಂಡಿರುವರು. ಈ ಪ್ರಕಾರ ವೀರಶೈವ ಮಠಗಳು ಕರ್ನಾಟಕಕ್ಕೆ ಒದಗಿದ

ಅತ್ಯಂತ ಭಯಂಕರ ಕಾಲಗಳಲ್ಲಿಯೂ ಸಹ ಜನರಲ್ಲಿ ನೈತಿಕ ಮತ್ತು ಧಾರ್ಮಿಕ ಭಾವನೆಯನ್ನು ಬಹುಮಟ್ಟಿಗೆ ಕಾಯಲಿಕ್ಕೆ ಕಾರಣವಾಗಿವೆ.

ಬೆಳಗಾವ ಜಿಲ್ಹೆಯಲ್ಲಿ ವೀರಶೈವರ ಇಂಥ ಅನೇಕ ಮಹತ್ವದ ಮಠಗಳು ಇರುತ್ತವೆ. ಇವುಗಳಲ್ಲಿ ಶ್ರೀದುರದುಂಡೀಶ್ವರ ಮಠವು ಒಂದಾಗಿದೆ. ಈ ಮಠದಲ್ಲಿ ಅನೇಕ ಮಹಾತ್ಮರು ಆಗಿ ಹೋಗಿದ್ದಾರೆ. ಅವರ ವೃತ್ತಾಂತವನ್ನು ನಾವು ಈ ಲೇಖದಲ್ಲಿ ಸಂಕ್ಷೇಪವಾಗಿ ವಿವರಿಸುತ್ತೇವೆ.

ಈ ಮಠವು, ಗೋಕಾಕಹುಕ್ಕೇರಿ ರೋಡಗಳ ನಡುವೆ, ಇವುಗಳ ಮೇಲಿಂದ ಹಾಯ್ದು ಹೋಗುವ ದೊಡ್ಡ ಲೈನದ ಮೇಲೆ, ಗೋಕಾಕದ ವಾಯುವ್ಯ ದಿಕ್ಕಿಗೆ ಸುಮಾರು ೫ ಮೈಲು ಅಂತರದ ಮೇಲೆ ಅದೆ. ಮಠದ ಸುತ್ತಲೂ, ಭದ್ರವಾದ ಸುತ್ತು ಗೋಡೆ ಇರುವದು. ಈ ಮಠದ ಸುತ್ತು ಗೋಡೆಗೆ ಪಶ್ಚಿಮಕ್ಕೊಂದು, ಪೂರ್ವಕ್ಕೆರಡು ಈ ಪ್ರಕಾರ ಬಾಗಿಲುಗಳಿವೆ. ಪೂರ್ವ ದಿಕ್ಕಿನ ಒಂದು ಬಾಗಿಲದಿಂದ ಕೊಟ್ಟೂರೇಶನ ಗುಡಿಗೂ, ಮತ್ತೊಂದರಿಂದ ಗದ್ದುಗೆ ಗುಡಿಗೂ ಹೋಗಲಿಕ್ಕೆ ಬರುವದು. ಕೊಟ್ಟೂರೇಶನ ಗುಡಿಯು ಸಾಧಾರಣ ದೊಡ್ಡದಿದ್ದು, ಹೊಡೆದ ಬಿಳೀ ಕಲ್ಲುಗಳಿಂದ ಕಟ್ಟಿದ್ದಾರೆ. ಗುಡಿಯ ಸುತ್ತಲೂ ಕಲ್ಲಿನ ಪೌಳಿಯಿರುವದು. ಗುಡಿಯ ಹೆಬ್ಬಾಗಿಲವು ಪೂರ್ವ ದಿಕ್ಕಿಗಿದ್ದು, ಉತ್ತರಕ್ಕೊಂದು ಪೌಳಿಯೊಳಗಿಂದ ಹಾಯ್ದು ಗದ್ದುಗೆ ಗುಡಿಗೆ ಹೋಗುವದಕ್ಕಾಗಿ ಬಾಗಿಲವನ್ನು ಮಾಡಿರುವರು. ಇದು ಬಸವಣ್ಣನ ಗುಡಿಯು. ಈ ಬಸವಣ್ಣನಿಗೆ ಕೊಟ್ಟೂರೇಶ ಅಥವಾ ಕೊಟ್ಟೂರ ಬಸವಣ್ಣನೆನ್ನುವರು. ಈ ಬಸವಣ್ಣನಿಗೆ ಕೊಟ್ಟೂರೇಶನೆಂಬ ಹೆಸರು ಹೇಗೆ ಬಂದಿತೆಂಬುದನ್ನು ವಿಚಾರಿಸಲು, ಕೆಳಗಿನ ಕಥೆಯು ಗೊತ್ತಾಯಿತು.

ಬೆಳಗಾವ ಜಿಲ್ಹೆಯ ಚಿಕ್ಕೋಡಿಯಲ್ಲಿ ಶಿವಾರಿ ಮಲಕಪ್ಪನೆಂಬ ಶರಣನಿದ್ದನು.. ಆತನು ಒಳ್ಳೇ ಭಕ್ತಿವಂತ ನಿದ್ದುದರಿಂದ, ಈ ಮಠದ ಮೂಲ ಪುರುಷರಾದ ಶಿವಲಿಂಗೇಶ್ವರ ಸ್ವಾಮಿಗಳವರ ಪರಮ ಭಕ್ತರಲ್ಲೊಬ್ಬನಾಗಿದ್ದನು. ಆತನು ವ್ಯಾಪಾರದಿಂದ ಉಪಜೀವನವನ್ನು ಸಾಗಿಸುತ್ತಿದ್ದನು. ಆತನಿಗೆ ಅದರಿಂದ ಲಾಭನಾಗದೆ ಇದ್ದುದರಿಂದ ಬಡತನದ ಕಷ್ಟವನ್ನು ಅನುಭವಿಸುತ್ತಿದ್ದನು. ಒಮ್ಮೆ ಸ್ವಾಮಿಗಳವರಿಗೆ ತನಗುಂಟಾದ ಕಷ್ಟವನ್ನುಅರಿಕೆಮಾಡಿಕೊಂಡು, ಕೃಪೆ ಮಾಡಬೇಕೆಂದು ಬೋಡಿಕೊಂಡನು. ಆಗ ಸ್ವಾಮಿಗಳು ದಯದಿಂದ "ತಂಬಾಕು ಹೇರಿಕೊಂಡು

ದಕ್ಷಿಣಕ್ಕೆ ಹೋಗಿ ವ್ಯಾಪಾರ ಮಾಡಿ, ಬರುವಾಗ ಅರಳಿಯನ್ನು ತೆಗೆದುಕೊಂಡು ಬಂದು ಇಲ್ಲಿ ಮಾರು” ಎಂದು ಹೇಳಲು, ಆತನು ಆದೇಪ್ರಕಾರ ಬಳ್ಳಾರಿ ಕಡೆಗೆ ಹೋಗಿ ತಂಬಾಕು ಮಾರಲು ಬಹಳ ಲಾಭವಾಯಿತಂತೆ, ಸ್ವಾಮಿಗಳ ವಚನದ ಮೇಲೆ ನಂಬುಗೆಯುಳ್ಳ ಆ ಭಕ್ತನು ಅರಳಿಯನ್ನು ಎತ್ತುಗಳಮೇಲೆ ಹೇರಿಕೊಂಡು ಬರುವಾಗ ಕೊಟ್ಟೂರ ಹತ್ತರ ಒಂದು ಎತ್ತಿನ ಮೇಲಿನ, ಒಂದು ಮಗ್ಗಲಿನ ಅಂಡಿಗೆಯು ಭಾರವಾಗಲು, ಸಮಮಾಡಬೇಕೆಂದು ಅಲ್ಲಿ ಬಿದ್ದ ಕಲ್ಲನ್ನು ಹಗುರಾದ ಅಂಡಿಗೆಯ ಮೇಲಿಟ್ಟುಕೊಂಡು ಬಂದು, ಈ ಮಠದ ಹತ್ತರ ಎತ್ತುಗಳ ಮೇಲಿನ ಒಜ್ಜೆಯನ್ನು ಇಳಿಸಿ, ಆ ಕಲ್ಲನ್ನು ತೆಗೆದೊಗೆದು, ಸ್ವಾಮಿಗಳ ದರ್ಶನ ತೆಗೆದುಕೊಂಡು, ನಂತರ ತನ್ನ ಎತ್ತುಗಳನ್ನು ಹೇರಿಕೊಂಡು ತನ್ನೂರಿಗೆ ಹೋಗಿ, ಅರಳಿಯ ವ್ಯಾಪಾರ ಮಾಡಲು ವಿಪುಲ ಲಾಭವಾಯಿತಂತೆ ಆತನು, ಎತ್ತಿಗೆ ಸಮಭಾರವಾಗಬೇಕೆಂದು ಅಂಡಿಗೆಯ ಮೇಲಿಟ್ಟುಕೊಂಡು ಬಂದ ಕಲ್ಲು, ಕೊಟ್ಟೂರ ಬಸವೇಶನೆಂದೂ, ಶ್ರೀಗಳವರ ದರ್ಶನದ ಸಲುವಾಗಿ ಬಂದಿರುವನೆಂದೂ, ಮುಂದೆ ಆತನಿಗೆ ಸ್ವಪ್ನದಲ್ಲಿಯೂ, ಸ್ವಾಮಿಗಳಿಂದಲೂ ಗೊತ್ತಾಗಲು, ಅದೇ ಕಲ್ಲನ್ನು ಇಲ್ಲಿ ಸ್ಥಾಪಿಸಿ, ಗುಡಿ ಮತ್ತು ಪೌಳಿಗಳನ್ನು ಕಟ್ಟಿಸಿದನಂತೆ ಇದರ ವಿಷಯಕ್ಕೆ ಶ್ರೀಗಳವರ ಬಿರುದಾವಳಿಯಲ್ಲಿ,

> “ ಕೊಟ್ಟೂರ ಶ್ರೀಬಸವರಾಜನಂ ಬರಮಾಡಿ, ನೆಟ್ಟನರ ಭಾವಿ ಬಲು ಬೆಟ್ಟಸೊಳ್ನಿಲಗೊಳಿಸಿ, ಕೊಟ್ಟು ಸಂಪದಮಂ ಮಲಕಾಖ್ಯ ಭಕ್ತನಿಗೆ......”ಎಂದಿರುವುದು.

ಕೊಟ್ಟೂರ ಬಸವೇಶ್ವರ ಗುಡಿಯು ಗದ್ದುಗೆಯ ಗುಡಿಗಿಂತ ಹಳೆಯದಾಗಿ ತೋರುವುದರಿಂದ, ಮೇಲಿನ ಕಥೆಯಲ್ಲಿ ಹೇಳಿದಂತೆ ಮೂಲ ಪುರುಷರಾದ ಶ್ರೀಶಿವಲಿಂಗ ಸ್ವಾಮಿಗಳ ಕಾಲದಲ್ಲಿ ಕಟ್ಟಲ್ಪಟ್ಟಿರಬಹುದೆಂಬ ಅಭಿಪ್ರಾಯವನ್ನು ದೃಢಪಡಿಸುವುದು.

**ಗದ್ದುಗೆ ಗುಡಿಃ**—ಇದು ಮೂಲ ಪುರುಷರಾದ ಶ್ರೀಶಿವಲಿಂಗ ಸ್ವಾಮಿಗಳವರ ಸಮಾಧಿಯು. ಇದು ಹೊಡೆದ ಬಿಳೀ ಕಲ್ಲುಗಳಿಂದ ಭವ್ಯವಾಗಿ ಮತ್ತು ಸುಂದರವಾಗಿ ಕಟ್ಟಲ್ಪಟ್ಟಿದೆ. ಇದರ ಮುಂಭಾಗದಲ್ಲಿ ಎರಡೂ ಮಗ್ಗಲಿಗೆ ಭವ್ಯವಾದ ದ್ವಾರಪಾಲಕರ ಮೂರ್ತಿಗಳಿರುವವು. ಇದರ ಪೂರ್ವ ಪಶ್ಚಿಮ ಸು. ೯೦ ಫೂಟ, ದಕ್ಷಿಣೋತ್ತರ ಸು. ೮೦

ಘಂಟೆ, ಎತ್ತರ ಸು. ೪೦ ಘೂಟ, ಈ ಪರಿಮಾಣವನ್ನು ನೋಡಲು, ಈ ಶಿಲಾಮಂದಿರವು ಎಂಥ ದೊಡ್ಡದೂ, ಭವ್ಯವಾದದ್ದೂ, ಇರಬಹುದೆಂಬದರ ಕಲ್ಪನೆಯನ್ನು ವಾಚಕರು ಮಾಡಬಹುದು. ಇದಕ್ಕೋಸುಗ ಉಪಯೋಗಿಸಿದ ಕಲ್ಲಿನ ತೊಲೆಗಳು ಒಂಭತ್ತು ಮೊಳ ಉದ್ದವಾಗಿರುವವು. ಇಂಥ ಉತ್ತಮ ಬಿಳೀ ಕಲ್ಲುಗಳ ಕಣಿಗಳು ಮಠಕ್ಕೆ ಹೊಂದಿ ಅರಭಾವಿ ಗುಡ್ಡದಲ್ಲಿ ಬಹಳವಾಗಿರುವವು. ಇದಕ್ಕೂ ಮತ್ತು ಕೊಟ್ಟೂರೇಶನ ಗುಡಿಗೂ ಬೇಕಾಗುವ ಕಲ್ಲುಗಳೆಲ್ಲ ಈ ಕಣಿಗಳೊಳಗಿಂದ ಬಂದಿರುವವು. ಈ ಗದ್ದುಗೆ ಗುಡಿಯಲ್ಲಿಯೇ ಹಿಂಭಾಗದಲ್ಲಿ ಪಶ್ಚಿಮದ ಕಡೆಗೆ ಸ್ವಾಮಿಗಳಿಗೆ ಕೂಡ್ರಲಿಕ್ಕೂ ಇರಲಿಕ್ಕೂ ಅನುಕೂಲವಾಗುವಂತೆ ಮಾಡಿದ್ದಾರೆ. ಇದು ಇನ್ನೂ ಅಪೂರ್ಣಾವಸ್ಥೆಯಲ್ಲಿದೆ. ಇದರ ನಾಲ್ಕೂ ಮಗ್ಗಲಿಗೆ ಕಲ್ಲಿನಿಂದಲೇ ಕಟೆದು ಮಾಡಿದ ಆರು ಕಳಿಗೆಗಳುಳ್ಳ ಕಲ್ಲಿನ ಸರಸಳಿಯು ಇದ್ದು ಇದನ್ನು ಕಟ್ಟಲು ಒಳ್ಳೇ ಕುಶಲತೆಯನ್ನು ತೋರಿಸಿರುವರು. ಇದರ ಕೆಳಗೆ ಭೂಮಿಯಲ್ಲಿ ಇಂಥದೇ ಒಂದು ಶಿಲಾಮಂಟಪವಿರುವದು. ಆ ಮಂಟಪದ ಗರ್ಭಗುಡಿಯೊಳಗೆ ಮೂಲ ಸ್ವಾಮಿಗಳಾದ ಶ್ರೀ ಶಿವಲಿಂಗೇಶ್ವರರು ಸಮಾಧಿಸ್ಥರಾಗಿರುವರು. ಇದನ್ನು ಕಟ್ಟುವ ಕೆಲಸವು ಎರಡನೇಯ ಸ್ವಾಮಿಗಳಾದ ಕೊಳದಪ್ಪನವರಿಂದಾರಂಭವಾಗಿ ಐದನೇಯವರಾದ ಶಿದ್ಧಲಿಂಗಸ್ವಾಮಿಗಳವರೆಗೆ ನಡೆದು ಅಲ್ಲಿಗೆ ನಿಂತಿರುವದು. ಇವುಗಳಲ್ಲದೆ ಕಲ್ಲಿನಿಂದ ಕಟ್ಟಿದ ಸಮಾಧಿಗಳೂ, ಶ್ರೀಗಳವರ ದರ್ಶನಕ್ಕಾಗಿ ಬರಹೋಗುವ ಭಕ್ತರ ಅನುಕೂಲತೆಗಾಗಿ ಕಟ್ಟಿಸಿದ ಇಮಾರತಿಗಳೂ ಇವೆ. ಮಠದಿಂದ ಅರ್ಧಮೈಲು ಅಂತರದ ಮೇಲೆ ಸರಕಾರದವರು ರೈತರಿಗೆ ನೂತನ ಪದ್ಧತಿಯ ಕೃಷಿಕರ್ಮಶಾಸ್ತ್ರವನ್ನು ತೋರಿಸಬೇಕೆಂಬುದ್ದೇಶದಿಂದ ಸಾಗು ಮಾಡಿದ ಹೊಲ (Govt Farm) ಉಂಟು.

ಈ ಮಠವು ಮುರಗೀ ಸಮುಯಕ್ಕೆ ಹೊಂದಿದುದು. ಇದರಲ್ಲಿ ಈಗ ಎಂಟು ಜನ ಸ್ವಾಮಿಗಳಾಗಿರುವರು. ಈಗಿರುವವರು ಒಂಭತ್ತನೇಯವರು. ಅವರುಗಳ ಹೆಸರುಗಳು-೧ ಶಿವಲಿಂಗೇಶ್ವರ ಮಹಾ ಸ್ವಾಮಿಗಳು ೨ ಕೊಳ್ಳದ ಮಹಾ ಸ್ವಾಮಿಗಳು (ಕೊಳದಪ್ಪನವರು) ೩ ಮೊದಲನೇಯ ಶಿದ್ಧರಾಮ ಮಹಾ ಸ್ವಾಮಿಗಳು ೪ ಘಟ್ಟಿವಾಳ ಮಹಾ ಸ್ವಾಮಿಗಳು ಅಥವಾ ಶರಣಪ್ಪನವರು ೫ ಮೊದಲನೇಯ ಶಿದ್ಧಲಿಂಗ ಮಹಾ ಸ್ವಾಮಿಗಳು ೬ ಎರಡನೇಯ ಶಿದ್ಧರಾಮ ಸ್ವಾಮಿಗಳು ಅಥವಾ ಹಗರಪ್ಪನವರು ೭ ಎರಡನೇಯ ಶಿವ

ಲಿಂಗ ಸ್ವಾಮಿಗಳು ೮ ಎರಡನೇಯ ಶಿದ್ಧಲಿಂಗ ಸ್ವಾಮಿಗಳು ೯ ಮಹಾಂತ ದೇವರು.

ಶಿವಲಿಂಗೇಶ್ವರ ಮಹಾ ಸ್ವಾಮಿಗಳೇ ಈ ಮಠದ ಮೂಲ ಪುರುಷರು. ಇವರ ಮೂಲಸ್ಥಾನವನ್ನಾಗಲೀ, ತಾಯಿ ತಂದೆಗಳನ್ನಾಗಲೀ ಕಂಡು ಹಿಡಿಯುವದು ಶಕ್ಯವಿಲ್ಲ. ಇವರು ಕುಂಬಳೇಶ್ವರ ಲಿಂಗದಿಂದುಪದೇಶವನ್ನು ಗ್ರಹಿಸಿರುವರೆಂದೂ, ಅಲ್ಲಿಂದ ಡಫಳಾಪುರಕ್ಕೂ, ನಂತರ ತೆರದಾಳಕ್ಕೂ ಬಂದು ಆ ಮೇಲೆ ಗೋಕಾಕ ತಡಸಲದ ಮೇಲಿರುವ ಮಹಾಲಿಂಗೇಶ್ವರ ಗುಡಿಯಲ್ಲಿ ವಾಸ ಮಾಡಿರುವರೆಂದೂ, ತಿಳಿಯುವದು. ಇವರು ಒಳ್ಳೇ ನಿಷ್ಠೆಯುಳ್ಳ ಸಿದ್ಧ ಪುರುಷರೂ, ಮಹಿಮಾನ್ವಿತರೂ, ಇದ್ದುದರಿಂದ ಸುತ್ತಲಿನ ಜನರು ಇವರಲ್ಲಿ ದೃಢಭಕ್ತಿಯನ್ನಿಟ್ಟು ಇವರ ಶಿಷ್ಯರಾದರು. ದುರದುಂಡಿಯ ಸಮೀಪದಲ್ಲಿ ಕುರುಹಟ್ಟಿಯೆಂಬುದೊಂದು ಗ್ರಾಮವಿತ್ತು. ಅದು ಈಗ ನಾಶವಾಗಿದೆ. ಅಲ್ಲಿ ಬಸವಪ್ಪನೆಂಬ ಶರಣನು ರುದ್ರವ್ವನೆಂಬ ಪತ್ನಿಯಿಂದೊಡಗೂಡಿ ಸುಖದಿಂದಿದ್ದನು. ಇವರಿಬ್ಬರು ಒಳ್ಳೇ ಜಂಗಮ ಭಕ್ತರಾದುದರಿಂದ ಜಂಗಮವಿಲ್ಲದೆ ಊಟ ಮಾಡುತ್ತಿದ್ದಿಲ್ಲ. ಅವರ ಭಕ್ತಿಯನ್ನು ನೋಡಿ, ಮಹಾಲಿಂಗೇಶ್ವರ ಗುಡಿಯನ್ನು ಬಿಟ್ಟು ಇಲ್ಲಿಗೆ ದುರದುಂಡಿ ಗ್ರಾಮಕ್ಕೆ ಸ್ವಾಮಿಗಳು ಬಂದರೆಂದು ಅವರ ಬಿರುದಾವಳಿಯಲ್ಲಿರುವ ಕೆಳಗಿನ ಸಾಲುಗಳಿಂದ ಗೊತ್ತಾಗುವದು.

> " ವರಟಿದಾರಣ್ಯದಲಿರ್ದ ಶಿವಲಿಂಗ ಜಂಗಮನು, ಕುರುಹಟ್ಟಿಯೊಳಗಿರ್ದ ಬಸವರುದ್ರಾಣಿಯರ ಭಕ್ತಿಗೊಲಿದು, ದುರದುಂಡಿ ಗ್ರಾಮದೊಳು ಮೆರೆದಿರ್ದನಾ ಮಹಿಮನು "

ಆ ನಂತರ ದುರದುಂಡಿ ಅರಭಾವಿಗಳ ಅಡಿವಿಯಲ್ಲಿ ದನಕಾಯುವ ಹುಡುಗರ ಸಂಗಡ ಆಟವಾಡುತ್ತ ಮಹಿಮೆಗಳನ್ನು ತೋರಿಸುತ್ತ ವಾಸಿಸುತ್ತಿದ್ದರೆಂದು ಗೊತ್ತಾಗುವದು.

> " ದುರದುಂಡಿ ಕಾಂತಾರದೊಳ್ ಬಿಡದೆ, ತರುಗಳಂ ಪರಿಪಾಲಿಸುತ್ತ ಕರಗಳಂ ನೆರೆಕರೆದು ವಟುಗಳೊ, ನೊರೆವಾಲಮುಂಕುಡಿಸಿ, ಮೆರೆದಿರ್ದನಾ ದುರದುಂಡಿ ಜಂಗಮನು "

ಇಲ್ಲಿಗೆ ಬಂದನಂತರ ಹಲವು ಮಹಿಮೆಗಳನ್ನು ತೋರಿಸಿದ್ದಾರೆಂದು, ಜನರು ಅವುಗಳ ಕುರುಹುಗಳನ್ನು ಈಗಲೂ ತೋರಿಸುವರು. ಇವರ ಮಹಿಮೆಯನ್ನು ಕಂಡು ಸುತ್ತು ಮುತ್ತಲಿನ ಸಂಸ್ಥಾನಿಕರು ಮತಭೇದವನ್ನೆಣಿ

ಸದೆ ಇವರ ಭಕ್ತರಾದರು. ಅವರಲ್ಲಿ ಕಿತ್ತೂರ ದೇಸಾಯರು, ಕುರುಬೆಟ್ಟದ ದೇಸಾಯರು, ಸುತ್ತು ಮುತ್ತಲಿನ ಊರುಗಳ ನಾಯಕರು, ದೇಶಪಾಂಡೆಯವರು, ಮೊದಲಾದವರು ಸ್ವಾಮಿಗಳು ಒಳ್ಳೇ ವಿರಕ್ತರಿದ್ದುದರಿಂದ, ಅವರ ಮೇಲೆಯೂ ಆಸೆ ಇದ್ದಿಲ್ಲ. ಇವರ ತಪಃಸಾಮರ್ಥ್ಯವನ್ನೂ, ನಿಸ್ಪೃಹತೆಯನ್ನು ತೋರಿಸುವ ಹಲವು ದಂತ ಕಥೆಗಳು ಇನ್ನೂ ಇಲ್ಲಿಯ ಜನರ ಬಾಯಲ್ಲಿರುವವು. ಅವುಗಳಲ್ಲಿ ಒಂದೆರಡರ ಸಾರಾಂಶವನ್ನು ಇಲ್ಲಿ ಕೊಡುವೆವು.

೧. ಕುರುಬೆಟ್ಟದ ದೇಸಾಯಿಯವರು ಸ್ವಾಮಿಗಳ ಪರಮ ಭಕ್ತರಾದುದರಿಂದ ಸ್ವಾಮಿಗಳನ್ನೆಲ್ಲಿಗೂ ಹೋಗಗೊಡಬಾರದೆಂಬುದ್ದೇಶದಿಂದ, ಮಠ ಕಟ್ಟಿಸಿಕೊಟ್ಟು ತಮ್ಮ ಹತ್ತರವಿಟ್ಟುಕೊಳ್ಳಬೇಕೆಂಬುದಾಗಿ, ವಿಪುಲ ಹಣವನ್ನೂ ಉತ್ತಮ ಭೂಮಿಗಳನ್ನೂ ಸ್ವಾಮಿಗಳ ಪಾದಕ್ಕೆ ಅರ್ಪಿಸಲು, ಅವರು ಅವನ್ನೆಲ್ಲ ತಿರಸ್ಕರಿಸಿ ಅನ್ಯ ಕಡೆಗೆ ಹೋಗಲು ಸಿದ್ಧರಾದರು. ದೇಸಾಯಿಯವರು ತಮ್ಮ ಸೀಮೆಯಲ್ಲಿದ್ದು ಸೇವೆಯನ್ನು ಕೈಕೊಳ್ಳಬೇಕೆಂದೂ, ತಾವು ಇನ್ನು ಮುಂದೆ ಸ್ವಾಮಿಗಳವರ ಇಚ್ಛೆಗೆ ವಿರೊಧವಾಗಿ ನಡೆಯುವದಿಲ್ಲವೆಂದೂ, ಅಂಗಲಾಚಿ ಬೇಡಿಕೊಳ್ಳಲು, ಅವರ ಸೀಮೆಯಲ್ಲಿರಲು ಒಡಂಬಟ್ಟರು. ಅವರ ತೃಪ್ತಿಗಾಗಿ ಏನೂ ಬೆಳೆಯುದಂಥ ಸ್ವಲ್ಪ ಗುಡ್ಡವನ್ನು ತೆಗೆದುಕೊಂಡು, ಅಲ್ಲಿಯೇ ವಾಸಿಸಹತ್ತಿದರು. ಅವರ ಮುಂದಿನವರು ಅದೇ ಸ್ಥಳದಲ್ಲಿ ಮಠವನ್ನು ಕಟ್ಟಿಸಿದರು.

೨. ಒಮ್ಮೆ ಓರ್ವ ಭಕ್ತನು, ಸ್ವಾಮಿಗಳಿಗೆ ಇರಲು ನೆರಳಿಲ್ಲವೆಂಬುದನ್ನು ಕಂಡು, ಒಂದು ಹಂಚಿನ ಚಪ್ಪರವನ್ನು ಹಾಕಿಸುವದಕ್ಕೋಸುಗ ಸ್ವಾಮಿಗಳ ಅಪ್ಪಣೆಯನ್ನು ಕೇಳಲು, ಅವರು "ನಿರಾಲಂಬರಾದ ತಮಗೆ ಆಲಂಬನದ ತೊಡಕನ್ನು ಹಚ್ಚಬೇಡೆಂದು" ಖಂಡಿತವಾಗಿ ಹೇಳಿದರೂ, ಆತನು ಕೇಳದೆ, ಒಂದು ಹಂಚಿನ ಮಳಿಗೆಯನ್ನು ಕಟ್ಟಿಸಲು, ಅದನ್ನು ಕಂಡು ಸ್ವಾಮಿಗಳು ಕಡು ಸಿಟ್ಟಾದರಂತೆ.

೩. ಒಮ್ಮೆ ಕೆಲವು ಜನ ಕಳ್ಳರು ಕೊಲ್ಹಾಪುರದ ಮಹಾರಾಜರ ಉತ್ತಮ ಕುದುರೆಯನ್ನು ಕದ್ದುಕೊಂಡು ಬಂದರಂತೆ ಕುದುರೆಗಾವಲ ಭಟರು ಬೆನ್ನಟ್ಟಿದುದನ್ನು ತಿಳಿದು, ಕುದುರೆಯನ್ನು ಸ್ವಾಮಿಗಳ ಹತ್ತರ ಕಟ್ಟಿ ಮರೆಯಾದರಂತೆ ಭಟರು ಕುದುರೆಯು ಸ್ವಾಮಿಗಳ ಹತ್ತರವಿದ್ದುದನ್ನು ಮಹಾರಾಜರಿಗೆ ತಿಳುಹಿಸಲು, ಅವರು ಇಲ್ಲಿಗೆ ಬಂದು ಸ್ವಾಮಿಗಳ

ಮಹಿಮೆಯನ್ನು ಕಂಡು, ಅರಭಾವಿ ದುರದುಂಡಿ ಮೊದಲಾದ ಸುತ್ತಲಿನ ಗ್ರಾಮಗಳನ್ನು ಪೂಜಾ ಸಾಹಿತ್ಯಕ್ಕಾಗಿ ಸ್ವೀಕರಿಸ ಬೇಕೆಂದು ಬೇಡಿಕೊಳ್ಳಲು ಸ್ವಾಮಿಗಳು ತಿರಸ್ಕರಿಸಿದರಂತೆ ಮಹಾರಾಜರು ತಮ್ಮ ಸೇವೆಯನ್ನು ಸ್ವೀಕರಿಸಲೇ ಬೇಕೆಂದು ಬಹಳ ಹೇಳಿಕೊಳ್ಳಲು, ಸ್ವಾಮಿಗಳು "ನೀನು ಇಷ್ಟು ಹಟ ಹಿಡಿದೆಯಂದ ಮೇಲೆ ನಿನ್ನ ಸೇವೆಯನ್ನು ಸ್ವೀಕರಿಸುವೆವು. ಶಿವಪುರದಲ್ಲಿ ಮುದುಕೆಯೋರ್ವಳು ನನ್ನ ಮೇಲಿನ ಭಕ್ತಿಯಿಂದ ನನಗೆ ಸಮರ್ಪಿಸ ಬೇಕೆಂದು, ಕೌದಿಯೊಂದನ್ನು ಹೊಲಿದಿಟ್ಟಿರುವಳು ಅದನ್ನು ನೀನು ತಂದು ಕೊಟ್ಟರೆ ನನ್ನ ಸೇವೆ ಮಾಡಿದಂತಾಗುವುದು." ಎಂದು ಹೇಳಿದರಂತೆ.

ಸ್ವಾಮಿಗಳ ಘನವಾದ ವೈರಾಗ್ಯವನ್ನೂ, ಬಲವಾದ ನಿಸ್ಪೃಹತೆಯನ್ನೂ, ಕಂಡು ಆರಿಗೂ ಆಚ್ಚರಿಯಾಗದೆ ಇರಲಾರದು? ಅವರು ಪಾದಚಾರಿಗಳಾಗಿಯೇ ಸುತ್ತಲೂ ಸಂಚರಿಸುತ್ತಿದ್ದರು. ಕೊಟ್ಟೂರ ಬಸವಣ್ಣನ ಗುಡಿಯು ಮಾತ್ರ ಇವರ ಕಾಲದಲ್ಲಿ ಕಟ್ಟಲ್ಪಟ್ಟಿತ್ತು. ಆದಾದರೂ ಭಕ್ತರು ಹಟದಿಂದ ಸ್ವಾಮಿಗಳಿಗೆ ಏನಾದರೂ ಸಮರ್ಪಿಸಿದರೆ, ಕೊಟ್ಟೂರೇಶನಿಗೆ ಮುಟ್ಟಿಸುತ್ತಿದ್ದರಂತೆ ಕೊಟ್ಟೂರೇಶನ ಹೆಸರಿನಿಂದ ಇನಾಮು ಭೂಮಿಗಳಿವೆ. ಇವರು ಲಿಂಗೈಕ್ಯರಾದ ನಂತರ ಭಕ್ತರು ಮಠದ ಸಾಂಪತ್ತಿಕ ಸ್ಥಿತಿಯನ್ನು ಬೆಳಿಸಿದಂತೆ ತೋರುತ್ತದೆ. ಇವರ ಕಾಲವನ್ನು ಗೊತ್ತು ಹಚ್ಚಲು ಕೆಲವು ಆಧಾರಗಳಿವೆ ಅವಾವು ವೆಂದರೆ--

೧. ಕುರುಬೆಟ್ಟದ ಆಗಿನ ಕಾಲದ ದೇಸಾಯರಾದ ಸಿದ್ಧರಾಮಪ್ಪನವರು ಇವರ ಶಿಷ್ಯರಾಗಿದ್ದರೆಂದೂ, ಸ್ವಾಮಿಗಳು ಅವರ ಭಕ್ತಿಗೊಲಿದು ಅವರ ಸೇವೆಯಲ್ಲಿಯೇ ಇರಹತ್ತಿದರೆಂದೂ ಗೊತ್ತಾಗುವುದು.

> "ಕುರುಶೈಲ ಮಧ್ಯದಿ ಪರಮಾನುರಾಗದಿಂ ಮೆರೆದಿದರ್ಜ ಮಹಾಲಿಂಗದಾಲಯದಲ್ಲಿ ಲೀಲೆಯಿಂದಿರುತಿರ್ದು, ಧೊರೆಸಿದ್ಧರಾಮನಿಗೆ ವೈದೋರಿ, ಕಾರುಣ್ಯಗರೆದನು ಹರಮೂರ್ತಿದುರದುಂಡಿ ಜಂಗಮನು"
>
> "ಛಲಗೆಟ್ಟ ಧೀವರರ್ಬಲಗೊಂಡು ನಮಿಸಲವರಿಗೆ, ಪೇರ್ಬಲಿಯ ಗಿಣ್ಣವಿರದಿತ್ತು ನಲವಿಂದನವರತ ಭೂಲಲನೇಶ ಕುರುಶೈಲ ಬಲವಂತ ಧೊರೆಗಾಗಿ ಬಲುಮಹಿಮೆಗಳದೋರಿ ಮೆರೆದಿರ್ದ ಮಲರಹಿತ ದುರದುಂಡಿ ಜಂಗಮನು"

೨. ಕಿತ್ತೂರ ದೇಸಾಯುರಾದ ಮಲ್ಲಸರ್ಜನನ್ನು ಟೀಪೂ ಸುಲ್ತಾನನು ಸೆರೆ ಹಿಡಿದುಕೊಂಡು ಹೋದಾಗ ಇವರು ಮಲ್ಲಸರ್ಜನ ಬಂಧವಿಮೋಚನಕ್ಕಾಗಿ ಯತ್ನಿಸಿದರೆಂದು–'' ಕಿತ್ತೂರ ಮಲ್ಲೇಂದ್ರನಂ ಬಹಾದ್ದುರಂ ಬಿತ್ತರದಿ ಬಲಸಹಿತ ಪಿಡಿದು, ಮತ್ತೆ ಅವನ ದುರ್ಗದಲ್ಲಿ ಸೆರೆಗೈದಿರಲಾಗ......
"ಎಂಬುವುದರಿಂದ ಗೊತ್ತಾಗುವುದು.

೩. " ನಿಪ್ಪಾಣಿ ಧೊರೆಯಿಂದ ಬಂದ ಅತುಲ ವಿಘ್ನಮಂ, ತಪ್ಪಿಸುತೆ ಭಾಗ್ಯಾಧಿಪತಿ ವೀರಸಂಗನಂ ಒಪ್ಪದಿಂ ಪಾಲಿಸಿದ ದುರದುಂಡಿ ಜಂಗಮ" ನೆಂದಿರುವುದರಿಂದ, ನಿಪ್ಪಾಣೀಕರನ ತೊಂದರೆಯಿಂದ ರಾಯಬಾಗದ ವೀರಸಂಗಪ್ಪನನ್ನು ರಕ್ಷಿಸಿರುವುದರಿಂದ ನಿಪ್ಪಾಣೀಕರನ ಕಾಲದಲ್ಲಿದ್ದರೆಂದು ಗೊತ್ತಾಗುವುದು.

೪. ಕೆಂಗೇರಿಯ ಚಿದಂಬರವಧೂತರು ಇವರ ದರ್ಶನಕ್ಕಾಗಿ ಬಂದಿದ್ದರೆಂಬುವುದರಿಂದ ಅವರ ಕಾಲದವರೆಂದು ತಿಳಿಯುವುದು- ಚಿದಂಬರರು ಶಾಲಿವಾಹನ ಶಕೆ ೧೬೮೦ ರಲ್ಲಿ ಜನಿಸಿ ಶಕೆ ೧೭೩೭ ರಲ್ಲಿ ಐಕ್ಯರಾದರು.

ಇವರ ತರುವಾಯ ಬಂದವರು ಕೊಳದಪ್ಪನವರೆಂದು ಕರೆಯಲ್ಪಡುವ ಕೊಳ್ಳದ ಸ್ವಾಮಿಗಳು. ಇವರು ಹಣಬರ ಹಟ್ಟಿಯ ರಾಮನ ಕೊಳ್ಳದಲ್ಲಿ ವಾಸಿಸುತ್ತಿದ್ದುದರಿಂದ ಇವರಿಗೆ ಕೊಳದಪ್ಪನವರೆಂದೇ ಜನರು ಕರೆಯ ಹತ್ತಿದರು. ಶ್ರೀ ಶಿವಲಿಂಗ ಸ್ವಾಮಿಗಳು ಇವರನ್ನು ಕರೆದುತಂದು ತಮಗೆ ತೋರಿಸಿದಂತೆಯೇ ಭಕ್ತಿ ವಿಶ್ವಾಸಗಳನ್ನು ತೋರಿಸಬೇಕೆಂದು ಭಕ್ತರಿಗೆ ಅಜ್ಞಾಪಿಸಿ ಐಕ್ಯರಾದರು. ಇವರ ಹೆಸರಾಗಲೀ ಅಥವಾ ಮೂಲಸ್ಥಾನವಾಗಲೀ ಗೊತ್ತಾಗುವುದಿಲ್ಲ. ಇವರು ಶ್ರೀ ಶಿವಲಿಂಗ ಸ್ವಾಮಿಗಳ ಸಮಾಧಿಯ ಮೇಲೆ ಶಿಲಾಮಂಟಪವನ್ನು ಕಟ್ಟಿಸಿದರು. ಇವರ ವಿಷಯಕ್ಕಾಗಲೀ ಅಥವಾ ಇವರ ಮುಂದಿನವರಾದ ಸಿದ್ಧರಾಮಪ್ಪನವರು ಮತ್ತು ಘಟ್ಟಿವಾಳಪ್ಪನವರುಗಳ ವಿಷಯಕ್ಕಾಗಲೀ ಹೆಚ್ಚಿಗೇನೂ ಗೊತ್ತಾಗುವುದಿಲ್ಲ, ಆದರೂ ಸಿದ್ಧರಾಮಪ್ಪನವರ ಕಾಲದಲ್ಲಿ ಮಠದಲ್ಲಿಯ ಭಾವಿಯು ಸಂಪೂರ್ಣವಾಯಿತು, ಮತ್ತು ಗದ್ದುಗೆ ಗುಡಿ ಕಟ್ಟುವ ಕೆಲಸವು ನಡೆದಂತೆ ತೋರುವುದು.

ಐದನೇಯ ಸ್ವಾಮಿಗಳಾದ ಮೊದಲನೇಯ ಸಿದ್ಧಲಿಂಗ ಸ್ವಾಮಿಗಳ ಕಾಲದಲ್ಲಿ ಮಠದೊಳಗಿನ ಎಲ್ಲ ಸಾಮಾನುಗಳು ಕಳವಾಗಿ ಹೋದವು. ಮಠದೊಳಗಿನ ಕಾಗಧ ಪತ್ರಗಳೂ, ವಸ್ತ್ರಗಳೂ ಸುಟ್ಟು ಹೋದವು. ಕಳವಾದುದರಿಂದ ಮಠಕಟ್ಟುವ ಕೆಲಸವು ಅಷ್ಟಕ್ಕೇ ನಿಂತಿತು. ಈ ಮಠಕ್ಕೆ

ಭಕ್ತಮಂಡಳಿಯು ಬಹಳವಾಗಿದ್ದುದರಿಂದ, ಮಠದ ಸ್ಥಿತಿಯು ತೀವ್ರವೇ ಸುಧಾರಿಸಿದಂತೆ ತಿಳಿಯುವದು. ಇವರ ನಂತರ ಬಂದ ಹಗರಪ್ಪನವರ ಕಾಲದಲ್ಲಿ ಮಠದೊಳಗೆ ಸುಮಾರು ನಾಲ್ಕಾರು ತಿಂಗಳು ಬಸವಪುರಾಣ ವನ್ನು ಹಚ್ಚಿಸಿ ಪ್ರತಿದಿವಸ ಸಾವಿರಾರು ಜನರಿಗೆ ಭೋಜನ ಮಾಡಿಸುತ್ತಿದ್ದ ರೆಂದೂ, ಪುರಾಣ ಮುಗಿದ ನಂತರ ನೂರಾರು ಜನರಿಗೆ ಲಗ್ನ ಮತ್ತು ದೀಕ್ಷಾ ವಿಧಿಗಳನ್ನು ಮಾಡಿಸಿದರೆಂದೂ, ನೋಡಿದ ವೃದ್ಧರು ಹೇಳುತ್ತಾರೆ. ಮಠದಲ್ಲಿ ಮೊದಲಿನಿಂದಲೂ ಪ್ರತಿದಿನ ದಾಸೋಹವು ಈಗ್ಗೆಯೂ ನಡೆದೇ ಅದೆ. ಸುಮಾರು ಇಪ್ಪತ್ತು ವರುಷಗಳ ಪೂರ್ವದಲ್ಲಿ ನೂರಾರು ಜನ ದಾರಿ ಕಾರರು ಇಲ್ಲಿ ಪುಕ್ಕಟೆಯಾಗಿ ಭೋಜನ ಮಾಡುತ್ತಿದ್ದರಂತೆ. ಮೊದಲು ಮಠದಲ್ಲಿ ಪಾಠಶಾಲೆಯಿತ್ತು. ವಿದ್ಯಾರ್ಥಿಗಳಿಗೆ ಧಾರ್ಮಿಕ ಶಿಕ್ಷಣವು ಉಚಿ ತವಾಗಿ ದೊರೆಯುತ್ತಿತ್ತು. ಮಠದ ಸ್ಥಾಯಿಕ ಉತ್ಪನ್ನವು ಸು. ೧೫೦೦ ರೂಪಾಯಿ ಅದೆ. ಸುಮಾರು ೨೦ ವರುಷಗಳ ಹಿಂದೆ ವರುಷಾ ೨೫ ಸಾವಿರ ರೂಪಾಯಿಗಳನ್ನು ಮೀರಿತ್ತೆಂದು ಕಂಡು ಬರುವುದು. ಏಕೆಂದರೆ ಆ ಕಾಲದಲ್ಲಿ ಗೋಕಾಕ, ಮುರಗೋಡ, ಬೈಲಹೊಂಗಲ, ಅಥಣಿ ಮೊದಲಾದ ಸುತ್ತ ಲಿನ ದೊಡ್ಡ ಊರುಗಳ ವ್ಯಾಪಾರಿಗಳು ಮತಭೇದವನ್ನೆಣಿಸದೆ ತಮ್ಮ ಊರಿನ ಧರ್ಮಾದಾಯದ ಎಲ್ಲ ಹಣವನ್ನು ಮಠಕ್ಕೆ ಒಪ್ಪಿಸುತ್ತಿದ್ದರು. ಏನೋ ಒಂದು ಕಾರಣದಿಂದ ಈಗ ಅದೆಲ್ಲವೂ ನಿಂತು ಹೋಗಿದೆ. ನಿಡ ಸೋಸಿ ಮಠವು ಇದರ ಶಾಖಾಮಠವು.



# ಕಂದನು ಕದಲಿದನು.

( ಕೈ. ವಾ. ಬಿ, ಎನ್ ಕುಲಕರ್ಣಿ ಬಿ, ಎ, ಮಾಮಲೇದಾರ ಹುನಗುಂದ ಇವರು ಅತ್ಯುತ್ತಮ ಕವಿಗಳಾಗಿದ್ದರು. ಅವರ ಮೋಹದ ಒಬ್ಬನೇ ಮಗನು ತೀರಿಕೊಂಡ ಬಳಿಕ ಒಂದು ತಿಂಗಳಲ್ಲಿಯೇ ತಾ॥ ೨೨-೪-೨೭ನೇ ದಿವಸ ಅವರೂ ಲಿಂಗೈಕ್ಯರಾದರು. ಅವರು ಅತ್ಯಾವಸ್ಥೆಯಲ್ಲಿ ಇದ್ದಾಗ ಅವರು ಕೆಳಗಿನ ಪದ್ಯಗಳನ್ನು ರಚಿಸಿ ಅವುಗಳನ್ನು 'ಶಿವಾನುಭವದಲ್ಲಿ' ಪ್ರಕಟಿಸ ಬೇಕೆಂದು ಹೇಳಿ ತೀರಿಕೊಂಡರು.)

ಚಂಪಕ ಮಾಲಾವೃತ್ತ.

ತನಯನೆ ಪೋದೆಯಾ ತೊಲಗಿ ಸದ್ಗುಣಮಂಡಿತ ರೂಪವಂತನೇ।
ಮನದೊಳಗಿರ್ದ ಸರ್ವ ಸುವಿಚಾರಗಳಲ್ಲಿಯೆ ನಿಂತು ಪೋದವೈ।
ಘನಮತಿವಂತನೆಂದು ಪೆಸರಂ ಪಡೆದಿರ್ದ ಮನೋಹರಾಂಗನೇ।
ಮನುಜನ ಬಾಳು ಮುಂದಿನ ವಿಚಾರಗಳಿಂದಲೆ ಸಾಗುತಿರ್ಪುದೈ ॥೧॥
ಬೆಳಗಿದೆ ಚಂದ್ರನಂತೆ ತುಸುವೇಳೆಯು ಮಟ್ಟಿಗೆ ತೋರಿ ನಿನ್ನೊಳ್-।
ಚ್ಚಳಿಯದ ಸದ್ಗುಣಂಗಳನು; ಕಾಣದೆ ಪೋದೆನು ಕುಂದನೊಂದನೂ।
ಗೆಳೆಯರ ಗುಂಪಿನಲ್ಲಿ ಮುಸುಕಿರ್ಪುದು ಶೋಕವು ನಿನ್ನ ಕಾಣದೇ।
ಬಳಗವನೆಲ್ಲ ನೂಕಿರುವೆ ಶೋಕ ಸಮುದ್ರದೊಳೀಗ ಬಾಲನೇ ॥೨॥
ವಿಜಯಪುರಕ್ಕೆ ಪೋದೆರಡು ವರ್ಷಗಳಲ್ಲಿಯೆ ಸರ್ವ ಶಾಲೆಯೊಳ್।
ನಿಜಗುಣಿಯೆಂದು ನೀ ಪೆಸರು ಪೊಂದಿದೆ ಕಂದನೆ ಸದ್ಗುಣಾಢ್ಯನೇ।
ನಿಜಗುರು ನಿನ್ನನೀಗ ಕರೆದೊಯ್ದನೆ ಸ್ವರ್ಗಕೆ ತನ್ನ ಸೇವೆಗಂ-।
ದಜ ರಚಿಸಿರ್ದ ರೂಪವನು ಹೂಳುತ ಮೂಲದೊಳಿರ್ದ ತತ್ವದೊಳ್ ॥೩॥
ಭವದೊಳು ಬಂಧನಂ ಬೆಳೆಯಬಾರದೆನ್ನುತ್ತಿಳಿಬಿಟ್ಟುಪೋದೆಯಾ?।
ಭವಿಗಳಸಂಗ ಸಾಕೆನುತ ದೇಹದ ತ್ಯಾಗವಮಾಡಿ ಬಿಟ್ಟೆಯಾ?।
ಭುವನದ ಮಾಯೆ ಜಾಲವನು ದಾಂಟುವೆನೆನ್ನುತಲೀಗ ಪೋದೆಯಾ?।
ಭವದೊಳು ವನ್ನ ಬಂಧನವ ಕುಗ್ಗಿಸಬೇಕೆನುತೆನ್ನ ಬಿಟ್ಟೆಯಾ? ॥೪॥
ಹರನಿಗೆ ನಿನ್ನ ಲೌಕಿಕದ ಸೌಖ್ಯವು ಬೇಡೆನಿಸಿರ್ದಿತೇ ಸುತಾ।
ವರಗುಣಯುಕ್ತ ಬಾಲಕನು ತನ್ನಡಿಯಲ್ಲಿರಲೆನ್ನುತೊಯ್ದನೇ।
ಗುರುಗಳ ದರ್ಶನಕ್ಕೆ ತ್ವರೆಮಾಡುತೆ ನೀ ಭರದಿಂದೆ ಪೋದೆಯಾ।
ಗುರುವರನಿನ್ನ ಭಕ್ತಿ ಬಹು ಪೆರ್ಚಿನದೆನ್ನುತ ಕಂಡು ಒಯ್ದನೇ ॥೫॥

# ಬಿಳಗಿಯ ಮಹಾ ಕವಿಗಳು.

(ಲೇಖಕ-ಬಿ. ಶಿವಮೂರ್ತಿಶಾಸ್ತ್ರಿ ಕೀರ್ತನಕಾರ ಹುಲ್ಕುಂಟೇಮಠ ತುಮಕೂರು)



ಕರ್ನಾಟಕ ಭಾಷೆಯಲ್ಲಿ ಚಂಪೂ ಪ್ರಬಂಧ ಪ್ರಣೇತೃಗಳಲ್ಲಿ ಮಹಾ ಕವಿ ಅಗ್ಗಳ ದೇವನು ಬಹು ಹೆಸರಾದವನು. ಇವನನ್ನು ಕರ್ನಾಟಕ ಕವಿ ಚಕ್ರವರ್ತಿಗಳಾದ ಆದಿ ಪಂಪ ರನ್ನ. ನೇಮಿಚಂದ್ರ ಹರಿಹರ ಷಡಕ್ಷರಿ ಲಕ್ಷ್ಮೀಶ ಇವರುಗಳ ಪಙ್ತಿಯಲ್ಲಿ ಗಣಿಸುವುದಕ್ಕೆ ಅರ್ಹನಾದವನೆಂದು ಏತದ್ಭಾಷಾಭಿಜ್ಞರು ಅಭಿಪ್ರಾಯ ಪಡುವರು. ಇವನು ಬರೆದಿರುವ "ಚಂದ್ರ ಪ್ರಭ ಪುರಾಣವು" ಸರ್ವೋತ್ತಮ ಗ್ರಂಥಗಳಲ್ಲೊಂದಾಗಿದೆ ಎಂಬುವದರಲ್ಲಿ ಅನುಮಾನವಿಲ್ಲ.

ಇವನಂತೆಯೇ ಹೆಸರಾದ ಮತ್ತೊಬ್ಬ ಕವಿಪುಂಗವನು ಕರ್ನಾಟಕ ಸಾಹಿತ್ಯದಲ್ಲಿ ನಮ್ಮ ಕಣ್ಣಿಗೆ ಬೀಳುವನು. ಈ ಪುಣ್ಯಾತ್ಮನು ನಮ್ಮ ಸಾಹಿತ್ಯಕ್ಕೆ ಮಾಡಿದ ಸಹಾಯವು ಅತ್ಯಂತ ಶ್ಲಾಘನೀಯವು. ಈತನು ಕನ್ನಡ ವ್ಯಾಕರಣವನ್ನು ಸಂಸ್ಕೃತ ಭಾಷೆಯಲ್ಲಿ "ಕರ್ನಾಟಕ ಶಬ್ದಾನು ಶಾಸನಂ" ಎಂಬ ಅಭಿಧಾನದಿಂದ ಬರೆದು ಲೋಕೋಪಕಾರ ಮಾಡಿರುವನು. ಇವನ ಈ ಸಾಹಸವು ಕನ್ನಡ ಭಾಷೆಯ ಗೌರವವನ್ನು ಹೆಚ್ಚಿಸಲಿಕ್ಕೆ ಬಹು ಸಹಕಾರಿಯಾಯಿತು. ಈತನೇ ಮಹಾನುಭಾವನೂ ಶಬ್ದಶಾಸ್ತ್ರ ವಿಶಾರದನೂ, ಮಹಾ ಕವಿಯೂ, ಉಭಯ ಭಾಷಾ ಕೋವಿದನೂ ಆದ ಭಟ್ಟಾಕಲಂಕ ದೇವನು.

ಅಗ್ಗಳ ಮತ್ತು ಭಟ್ಟಾಕಲಂಕ ಇವರಿಬ್ಬರ ಹೆಸರನ್ನು ಕೇಳದ ಪಂಡಿತರು ನಮ್ಮಲ್ಲಿ ವಿರಳ, ಅಥವಾ ಇಲ್ಲವೇ ಇಲ್ಲ. ಆದರೆ ಇಂತಹ ಮಹಾ ಕವಿಗಳು ಎಲ್ಲಿ ಹುಟ್ಟಿದರು, ಎಲ್ಲಿ ಬೆಳೆದರು ಯಾವ ರಾಜರ ಆಶ್ರಯದಲ್ಲಿದ್ದರು ಇತ್ಯಾದಿ ವಿಷಯಗಳು ನಮಗೆ ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಇವರುಗಳ ಸಂಪೂರ್ಣ ಪರಿಚಯವನ್ನು ಮಾಡಿಕೊಳ್ಳಲು, ಮಾಡಿಕೊಡಲು, ಮಾಡಿದ ಪ್ರಯತ್ನದ ಫಲವೇ ಈ ಬರಹವು.

**ಮಹಾ ಕವಿ ಅಗ್ಗಳದೇವಃ—** ಈತನ ವಿಷಯವನ್ನು ಹಿಂದೆಯೇ ಸ್ವಲ್ಪ ಮಟ್ಟಿಗೆ ಚರ್ಚಿಸಲಾಗಿದೆ. ಕ್ರಿ. ಶ. ೧೯೦೧ ನೇ ಇಸ್ವಿಯಲ್ಲಿ "ಕಾವ್ಯ

ಕಲಾನಿಧಿಯಲ್ಲಿ” ಅಚ್ಚಾಗಿ ಪ್ರಕಟವಾಗಿರುವ ಏತತ್ಕವಿಕೃತ “ಚಂದ್ರಪ್ರಭ ಪುರಾಣ”ದ ಪೀಠಿಕೆಯಲ್ಲಿ ಕಾವ್ಯ ಕಲಾನಿಧಿಯ ಸಂಪಾದಕರು ಇವನ ವಿಷಯವನ್ನು ಸ್ವಲ್ಪ ಮಟ್ಟಿಗೆ ಚರ್ಚಿಸಿ ಬರೆದಿದ್ದಾರೆ. ಇವನ ವಿಷಯುವನು ತಿಳಿಯಲಿಕ್ಕೆ ಈ ಗ್ರಂಥವೂ, ಚಂದ್ರಪ್ರಭ ಪುರಾಣವೂ ಮದ್ರಾಸಿನ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿಯಲ್ಲಿರುವ ಬಿಳಿಗಿಯ ಶಾಸನವೂ ಸಹಾಯಕವಾದಂತೆ ಆ ಪೀಠಿಕೆಯಿಂದ ತೋರುತ್ತದೆ. ಈಗ ನಮಗೆ ಸಿಕ್ಕಿರುವ ಬಿಳಗಿಯ ರತ್ನತ್ರಯ ಬಸದಿಯ ಎರಡು ಜಿನ ಶಾಸನಗಳೂ ಮೇಲ್ಕಂಡ ಮದ್ರಾಸಿನ ಪ್ರಾಚೀನ ಪುಸ್ತಕಾಲಯದಲ್ಲಿರುವ ಶಾಸನವೂ ಒಂದೇ ಆಗಿವೆ. ಕವಿಚರಿತ್ರೆಯ ಒಂದನೆಯ ಭಾಗದಲ್ಲಿ ಅಗ್ಗಳ ಕವಿಯ ವಿಷಯವು ಬಂದಿದೆ ಯಷ್ಟೆ. ಆದರಲ್ಲಿಯಾದರೂ ಮೇಲ್ಕಂಡ ಬಿಳಗಿ ಶಾಸನವನ್ನೇ ಉದಾಹರಿಸಿದ್ದಾರೆ. ಕಾವ್ಯಕಲಾನಿಧಿಯವರೂ ಕವಿಚರಿತ್ರಕಾರರೂ ಉದಾಹರಿಸಿರುವ ಶಾಸನಗಳೇ ನಮಗೆ ಸಿಕ್ಕಿರತಕ್ಕವುಗಳು.

ಅಗ್ಗಳ ಕವಿಯ ವಿಷಯದಲ್ಲಿ ಕವಿಚರಿತ್ರಕಾರರು ಹೀಗೆ ಬರೆದಿದ್ದಾರೆ. “ಅಗ್ಗಳ (೧೧೮೯) ಈತನು ಚಂದ್ರಪ್ರಭ ಪುರಾಣವನ್ನು ಬರೆದಿದ್ದಾನೆ. ಇವನು ಜೈನ ಕವಿ. ಮೂಲ ಸಂಘದೇಶೀಯಗಣ ಪುಸ್ತಕಗಚ್ಛ ಕೊಂಡಕುಂದವಂಶದಲ್ಲಿ ಹುಟ್ಟಿದವನು. ಇವನ ತಂದೆ ಶಾಂತೇಶ. ತಾಯಿ ಪೋಚಾಂಬಿಕೆ. ಗುರು ಶ್ರುತಕೀರ್ತಿ. ತ್ರೈವಿದ್ಯ “ಸುರರಾಜಾರ್ಚಿತನಿಂಗಳೇಶ್ವರಪುರ ಶ್ರೀ ತೀರ್ಥ ಚಂದ್ರಪ್ರಭಂ ಪರಮೇಶಂ” ಎಂಬುದರಿಂದ ಈತನು ಇಂಗಳೇಶ್ವರವೆಂಬ ಊರಿನವನೆಂದು ಊಹಿಸ ಬಹುದಾಗಿದೆ. ಈತನಿಗೆ ಜೈನಜನ ಮನೋಹರ ಚರಿತ ಕವಿಕುಳಕಳಭವ್ರಾತಯೂಥಾಧಿನಾಥ ಭಾರತೀ ಭಾಳನೇತ್ರ, ಸಾಹಿತ್ಯ ವಿದ್ಯಾವಿನೋದ, ಜಿನಸಮಯ ಸರಸ್ಸಾರ ಕೇಳೀಮರಾಳ, ಸುಲಲಿತ ಕವಿತಾನರ್ತಕೀನೃತ್ಯರಂಗ ಎಂಬ ಬಿರುದುಗಳಿದ್ದಂತೆ ಆಶ್ವಾಸಗಳ ಆದ್ಯಂತ ಪದ್ಯಗಳಿಂದಲೆ ತಿಳಿದು ಬರುತ್ತದೆ. “ಕಳೆಗಳೆ ನಿತನಿತರೊಳಮಗ್ಗಳಗಣಂ ತೋರ್ಪನಗ್ಗಳಂ ನೃಪ ಸಭೆಯೊಳ್ ಎಂಬುದರಿಂದ ಈತನು ರಾಜ ಸಭೆಯಲ್ಲಿ ಪ್ರಸಿದ್ಧ ಕವಿಯಾಗಿದ್ದಂತೆ ತೋರುತ್ತದೆ. ಈ ಗ್ರಂಥವನ್ನು ೧೧೧೧ ರಲ್ಲಿ ಎಂದರೆ ಕ್ರಿ. ಶ. ೧೧೮೯ ರಲ್ಲಿ ಬರೆದಂತೆ ಎಂಬ ಪದ್ಯದಿಂದ ತಿಳಿಯ ಬರುತ್ತದೆ.” ಇತ್ಯಾದಿ. ಚಂದ್ರಪ್ರಭ ಪುರಾಣದ ಪೀಠಿಕೆಯಲ್ಲಿಯೂ ಸ್ವಲ್ಪ ಹೆಚ್ಚುಕಡಿಮೆ ಹೀಗೆಯೇ ಬರೆದಿದೆ.

ಇವನು ಯಾವ ಕಾಲದಲ್ಲಿದ್ದನೆಂಬುದು ನಿರ್ವಿವಾದವು. ಏಕೆಂದರೆ ಈತನು ತನ್ನ ಕಾವ್ಯ ಸಮಾಪ್ತಿಯ ಕಾಲವನ್ನು ತಾನೇ ತಿಳಿಸಿರುವನು.

ಇನ್ನು ಇವನು ಯಾವ ನೃಪಸಭೆಯಲ್ಲಿದ್ದನೆಂಬುದು ವಿಚಾರಣೀಯ. ಬಿಳಗಿಯು ಮೊದಲು ಸ್ಥಾಪಿತವಾದುದು ಜೈನರಿಂದಲೇ. ಅಮ್ಮಣ್ಣೊಡೆಯನೆಂಬ ಜೈನರಾಜನು ತನ್ನ ರಾಜ್ಯದಲ್ಲಿ ಸೋಮನದೀ ತೀರದಲ್ಲಿ ಬಿಳಗಿ ಎಂಬ ಪಟ್ಟಣವಂ ಕಟ್ಟಿಸಿದನೆಂದು ಒಂದನೇ ಶಾಸನದಲ್ಲಿ ಉಕ್ತವಾಗಿದೆ. ಈ ಜೈನರಾಜರು ಬಿಳಗಿಗೆ ಹತ್ತು ಮೈಲು ದೂರದಲ್ಲಿರುವ ಐಸೂರಿನಲ್ಲಿ ರಾಜ್ಯ ಭಾರ ಮಾಡುತ್ತಿದ್ದರು. ಆ ಮೇಲೆ ಅಮ್ಮಣ್ಣೊಡೆಯನ ಕಾಲಕ್ಕೆ ಬಿಳಗಿಯನ್ನು ಕಟ್ಟಿಸಿ ಇಲ್ಲಿ ರಾಜ್ಯವಾಳಲು ಮೊದಲು ಮಾಡಿದಂತೆ ಕಾಣುತ್ತದೆ. ಈ ಜೈನ ರಾಜರು ಮಂಡಣ್ಣೊಡೆಯ, ಕಲ್ಲಪ್ಪೊಡೆಯ, ಮಂಡಣ್ಣ ಭೂಪಾಲ, ನರಸಿಂಗ ಭೂಪಾಲ, ಭೈರವೇಂದ್ರ, ಕಲ್ಲಭೂಪಾಲ, ಘಂಟಣ್ಣೊಡೆಯ ಇಲ್ಲಿನ ವರೆಗೆ ಐಸೂರಿನಲ್ಲಿ ರಾಜ್ಯವಾಳಿದರು. ಅಲ್ಲಿ ಇವರು ಕಟ್ಟಿಸಿದ್ದ ಬಸದಿಗಳೇ ಮೊದಲಾದವು ಈಗ ನೆಲಮಟ್ಟವಾಗಿ ಕಾಡಿನಲ್ಲಿ ಸೇರಿ ಹೋಗಿವೆ. ಕಡೆಯವನಾದ ಘಂಟಣ್ಣೊಡೆಯನೇ ಅಮ್ಮಣ್ಣೊಡೆಯನೆಂಬ ನಾಮಾಂತರದಿಂದ ಬಿಳಗಿಯನ್ನು ಕಟ್ಟಿಸಿ ಇಲ್ಲಿಯೇ ರಾಜ್ಯಭಾರ ಮಾಡಲು ಮೊದಲು ಮಾಡಿದನು. ಇಲ್ಲಿಂದ ಮುಂದಕ್ಕೆ ಅಭಿನವ ಭೈರವೇಂದ್ರ ತಿಮ್ಮರಸ ಒಡೆಯ ಲಕ್ಷ್ಮಣಭೂಪ, ನರಸಿಂಗಭೂಪಾಲ, ರಂಗರಾಜ, ಘಂಟೇಂದ್ರ ಮೊದಲಾದ ಜೈನ ರಾಜರು ಬಿಳಗಿಯಲ್ಲಿ ರಾಜ್ಯವಾಳಿದ್ದಾರೆ.

ಮಹಾ ಕವಿ ಅಗ್ಗಳನು ಮೇಲ್ಕಂಡ ಜೈನರಾಜರ ಗುರು ಪರಂಪರೆಗೆ ಸೇರಿದ ಶ್ರುತಕೀರ್ತಿ ದೇವನ ಶಿಷ್ಯನು. ಈ ಗುರುವಿನ ಪ್ರೇರಣೆಯಿಂದಲೇ ಇವನು ಚಂದ್ರಪ್ರಭ ಪುರಾಣವನ್ನು ಬರೆದನು. ಈ ಅರ್ಥವೇ ಶಾಸನದಲ್ಲಿ,

"ಶ್ರುತಕೀರ್ತಿ ದೇವನತ್ಯೂ।
ರ್ಜಿತ ಕೀರ್ತಿಕನಾತ್ಮ ಶಿಷ್ಯನಗ್ಗಳನಿಂ ॥
ದತಿಶಯಿತ ಕಾವ್ಯ ಮಾರ್ಗದೆ।
ನುತಚಂದ್ರಪ್ರಭ ಪುರಾಣಮಂ ಪೇಳಿಸಿದಂ ॥

ಎಂಬ ಕಂದ ಪದ್ಯದಲ್ಲಿ ವ್ಯಕ್ತವಾಗಿದೆ. ಈ ಪದ್ಯವನ್ನು ಚಂದ್ರಪ್ರಭ ಪುರಾಣದ ಪೀಠಿಕೆಯಲ್ಲಿಯೂ ಕವಿಚರಿತ್ರೆಯಲ್ಲಿಯೂ ಉದಾಹರಿಸಿದ್ದಾರೆ. ಮೇಲ್ಕಂಡ ಅಂಶದಿಂದ ಅಗ್ಗಳನು ಬಿಳಗಿಯಲ್ಲಿ ಆಳಿದ ಯಾವನೋ ಒಬ್ಬ ಜೈನ ರಾಜನ ಸಭೆಯಲ್ಲಿ ಆಸ್ಥಾನ ಕವಿಯಾಗಿದ್ದಂತೆ ಊಹಿಸ ಬಹುದು.

ಶಾಸನದಲ್ಲಿ ಯಾವ ರಾಜನ ಕಾಲದಲ್ಲಿದ್ದನೆಂದು ಊಹಿಸಲು ಆಧಾರ ವಿಲ್ಲ. ಆದರೂ ಅಗ್ಗಳನ ಗ್ರಂಥ ಸಮಾಪ್ತಿಯ ಪದ್ಯದಿಂದ ಕ್ರಿಸ್ತಶಕ ೧೨ನೇ ಶತಮಾನದ ಆದಿಯಲ್ಲಿ ಅಥವಾ ೧೧ನೇ ಶತಮಾನದ ಅಂತ್ಯದಲ್ಲಿ ಯಾವನು ಬಿಳಗಿಯಲ್ಲಿ ಆಳುತ್ತಿದ್ದನೋ ಆತನೇ ಈ ಕವಿಗೆ ಆಶ್ರಿತನಾಗಿರ ಬೇಕು. ಆ ಕಾಲದಲ್ಲಿ ಬಿಳಗಿಯಲ್ಲಿ ಆಳಿದ ರಾಜನಾರೆಂಬುದನ್ನು ಹುಡುಕು ವುದು ಇತಿಹಾಸ ಶೋಧಕರ ಕರ್ತವ್ಯವು.

ಏನಂಚ, ಅಗ್ಗಳನು ಶೃತಕೀರ್ತಿ ದೇವನಲ್ಲಿ ವಿದ್ಯಾಭ್ಯಾಸ ಮಾಡಿ ಅಲ್ಲಿಯೇ ಹುಟ್ಟಿ ಬೆಳೆದು ಬಿಳಗಿಯ ಜೈನರಾಜನ ಸಭೆಯಲ್ಲಿ ವೃದ್ಧಿ ಹೊಂದಿದನೆಂಬುದು ನಿರ್ವಿವಾದವು. ಕವಿ ಚರಿತ್ರೆಯಲ್ಲಿ ಇವನು "ಇಂಗ ಳೇಶ್ವರ"ದವನೆಂದು ಊಹಿಸಿದ್ದಾರೆ. ಈ ಊಹೆಗೆ ಚಂದ್ರಪ್ರಭ ಪುರಾಣದ ಪ್ರಥಮಾಶ್ವಾಸದ ೫೨ನೇ ಪದ್ಯವು ಸಹಾಯ ಮಾಡಿದಂತೆ ತೋರುತ್ತದೆ. ಅದಾವ ಪದ್ಯವೆಂದರೆ:—

ವೃ—ಸುರರಾಜಾರ್ಚಿತ ನಿಂಗಳೇಶ್ವರಪುರ ಶ್ರೀತೀರ್ಥ ಚಂದ್ರಪ್ರಭಂ ।
ಪರಮೇಶಂ ಶ್ರುತಕೀರ್ತಿ ದೇವ ಮುನಿಪಂ ತ್ರೈವಿದ್ಯ ಚಕ್ರಾಧಿಪಂ ॥
ಗುರುಭವ್ಯರ್ ಪ್ರಿಯಬಾಂಧವರ್ ತನಗೆನಿಪ್ಪನ್ಯೂನಮುಂಪುಣ್ಯದೇ ।
ಳ್ತರಮುಂತಾಳ್ದಿದನಗ್ಗಳಂ ಜಿನಮತ ಶ್ರೀಕೋಶ ಮೇಶ್ಮಾರ್ಗಳಂ ॥

ಈ ಪದ್ಯದ ಪ್ರಥಮ ಪಾದದಲ್ಲಿ ಬಂದಿರುವ "ಇಂಗಳೇಶ್ವರಪುರ" ಎಂಬ ಶಬ್ದದಿಂದ ಇವನು ಇಂಗಳೇಶ್ವರದವನೆಂದು ಕವಿ ಚರಿತ್ರೆಯವರು ಊಹಿಸುವರು. ಆದರೆ ಈ ಪದ್ಯವನ್ನು ಚೆನ್ನಾಗಿ ಓದಿ ಅನ್ವಯಾನುಕ್ರಮ ವಾಗಿ ಹೇಳಿದಾಗ ಅಗ್ಗಳನ ಪರಮೇಶ್ವರನಾದ ಚಂದ್ರಪ್ರಭನಿಗೆ ಇಂಗಳೇಶ್ವ ರವು ವಾಸವೋ ಅಥವಾ ಅಗ್ಗಳನಿಗೆ ವಾಸವೋ ? ಎಂಬ ವಿಷಯದಲ್ಲಿ ಸಂಶಯ ಬರುತ್ತದೆ. ಅಂತು ನಮಗೆ ಸಿಕ್ಕಿರುವ ಬಿಳಗಿಯ ಶಾಸನಗಳಲ್ಲಿ ಬಿಳಗಿಯ ಸುತ್ತ ಮುತ್ತಲಿನ ನೂರಾರು ಗ್ರಾಮಗಳ ಹೆಸರು ಬಂದಿದ್ದರೂ ಇಂಗಳೇಶ್ವರದ ಹೆಸರು ಬಂದಿಲ್ಲ.

ಆ ಕಾಲದಲ್ಲಿ ಐಸೂರು (ಈಗ ಇದನ್ನು ಕೆಳಗಿನ ಸಸಿ ಎಂದು ಕರೆ ಯುತ್ತಾರೆ.) ಚಂದ್ರಗುತ್ತಿ (ಸೊರಬಾ ತಾಲೂಕು. ಇದೊಂದು ಚಿಕ್ಕ ದುರ್ಗ ವಾಗಿದೆ.) ಗೇರುಸೊಪ್ಪೆ ಮೊದಲಾದೆಡೆಗಳಲ್ಲಿ ಜೈನರು ಪ್ರಬಲಿಸಿದ್ದರು. ಬಿಳಗಿ ಚಂದ್ರಗುತ್ತಿ ಗೇರುಸೊಪ್ಪೆ ಮೂಡಬಿದರೆ ಇವೆಲ್ಲಾ ಜೈನ ರಾಜ್ಯ ಗಳು. ಇಲ್ಲಿ ಅನೇಕ ಮಂದಿ ಜೈನ ಯತಿಗಳೂ ಕವಿಗಳೂ ಆಗಿ ಹೋಗಿರು

ವರು. ಶ್ರುತಕೀರ್ತಿ ದೇವನು ಭಟ್ಟಾಕಲಂಕದೇವನ ಗುರು ಪರಂಪರೆಗೆ ಸೇರಿದ ಪೂರ್ವ ಗುರುವಾಗಿಯೂ ಅಗ್ಗಳನು ಶ್ರುತಕೀರ್ತಿಯ ಶಿಷ್ಯನಾಗಿಯೂ ಇವನ ಪ್ರೇರಣೆ ಮೇರೆಗೆ ಕಾವ್ಯ ರಚನೆ ಮಾಡಿ ಬೆಳಗಿ ರಾಜಾಸ್ಥಾನದಲ್ಲಿ ಹೆಸರು ಪಡೆದವನಾಗಿಯೂ ಇರುವದರಿಂದ ಬೆಳಗಿಯವನೇ ಆಗಿರಬಹುದೆಂದು ಹೇಳಲು ಅವಕಾಶವಿದೆ.

**ಭಟ್ಟಾಕಲಂಕ ದೇವಃ**—ಕರ್ನಾಟಕ ಶಬ್ದಾನುಶಾಸನ ಪ್ರಣೇತೃವಾದ ಇವನ ವಿಷಯವು ಶಾಸನಗಳಲ್ಲಿ ಅಗ್ಗಳನಿಗಿಂತಲೂ ಹೆಚ್ಚಾಗಿ ಸೂಚಿತವಾಗಿದೆ. ಬೆಳಗಿ ರಾಜ್ಯವನ್ನು ಶಾಲೀವಾಹನ ಶಕ ೧೫೯೫ ರಲ್ಲಿ ಆಳುತ್ತಿದ್ದವನು "ಬೆಳಗಿಯ ವೀರಪ್ಪೊಡೆಯರ ಕುಮಾರರಾದ ರಂಗಪ್ಪ ರಾಜೊಡೆಯರ ಕುಮಾರರು ಘಂಟೊಡೆಯರು ತಮಗಭ್ಯುದಯ ನಿಶ್ರೇಯಸ ಸುಖ ಪ್ರಾಪ್ತಿ ನಿಮಿತ್ತವಾಗಿ" ಇತ್ಯಾದಿ ಶಾಸನ ವಾಕ್ಯಗಳಿಂದ ಘಂಟೇಂದ್ರನೆಂಬು ಸ್ಪಷ್ಟ ಪಡುತ್ತದೆ. ಭಟ್ಟಾಕಲಂಕದೇವನು ಗುರುವಾಗಿದ್ದುದು ಈತನಿಗೇ. ಈ ಭಟ್ಟಾಕಲಂಕನ ಪ್ರೇರಣೆಯ ಮೇರೆಗೆ ಬೆಳಗಿಯ ರತ್ನತ್ರಯ ಚೈತ್ಯಾಲಯದ ಮುಂದಿನ ರಂಗುಮಂಟಪ ಮುನಿವಾಸ ಚಂದ್ರ ಶಾಲೆಗಳು ಘಂಟೇಂದ್ರನಿಂದ ಕಟ್ಟಸಲ್ಪಟ್ಟವು. ಇದು ಶಾಸನದ ಈ ವಾಕ್ಯಗಳಿಂದ ವ್ಯಕ್ತವಾಗುತ್ತದೆ. "ರತ್ನತ್ರಯ ಚೈತ್ಯಾಲಯಕ್ಕೆ ನಾವು ನಮ್ಮ ವಂಶ ಪರಂಪರೆಯ ಪರಮಗುರುಗಳಾದ ಸ್ವಸ್ತಿ ಶ್ರೀ ಮದ್ರಾಜಗುರು ಗುರುಮಂಡಲಾಚಾರ್ಯ ಮಹಾವಾದಿ ವಾದೀಶ್ವರರಾಯವಾದಿ ಪಿತಾಮಹ ಸಕಲ ವಿದ್ವದ್ಜನ ಚಕ್ರವರ್ತಿಗಳುಂ ಬಲ್ಲಾಳರಾಯ ಜೀವರಕ್ಷಾ ಪಾಲಕರು. ದೇಶಿಕ ಗಣಾಗ್ರಗಣ್ಯರಪ್ಪ ಶ್ರೀಮತ್ ಭಟ್ಟಾಕಲಂಕ ದೇವರುಗಳ ಉಪದೇಶದಿಂದ ರಂಗಮಂಟಪ ಮುನಿವಾಸ ಚಂದ್ರಶಾಲೆ ಮೊದಲಾದ ಕೆಲಸಗಳನ್ನೂ ಶಿಲಾಮಯವಾಗಿ ಗೆಯಿಸಿ ಸಂಪೂರ್ಣಮಾಡಿ ......... ಇತ್ಯಾದಿ.

ಇದಲ್ಲದೆ ಈ ಎರಡು ಶಾಸನಗಳನ್ನೂ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಗದ್ಯ ಪದ್ಯಾತ್ಮಕವಾಗಿ ಬರೆಸಿದವನು ಭಟ್ಟಾಕಲಂಕನೇ ಎಂಬುದು ಶಾಸನದ ಮುಂದಿನ ವಾಕ್ಯಗಳಿಂದ ಗೊತ್ತಾಗುತ್ತದೆ.

"ಶ್ರೀಮಜ್ಜೈನಮತಾಬ್ಧಿ ಸೋಮನೆನಿಪೀ ಘಂಟೇಂದ್ರನುಂ ಸದ್ಗುಣ
ಪ್ರೇಮಂ ಶ್ರೀಯಕಲಂಕ ದೇವ ಮುನಿಯುಂ ತಚ್ಛಿಷ್ಯನುದ್ಯದ್ಬುಧ॥
ಸ್ತೋಮಾರಾಧಿಪ ಪಾದಪದ್ಮನೆನಿಪೀ ಭಟ್ಟಾಕಲಂಕಾರ್ಯನುಂ ॥
ಕ್ಷೇಮಂ ಬಾಳ್ಕೆ ಧರಿತ್ರಿಗಕ್ಕೆ ವಿಜಯಂ ಭದ್ರಂ ಶುಭಂ ಮಂಗಳಂ।

ವರ ಸಂಸ್ಕೃತ ಕರ್ನಾಟಕ ।
ವೆರಡರೊಳಂ ಗದ್ಯ ಪದ್ಯ ವಾಙ್ಮಯ ಮಾಲಾ ॥
ವಿರಚಿತೆಯಾದೀ ಶಾಸನ ।
ವೆರಡಂ ಭಟ್ಟಾಕಲಂಕಯತಿ ಬರೆಯಿಸಿದಂ ॥

ಮೇಲ್ಕಂಡ ಈ ಎರಡು ಪದ್ಯಗಳಲ್ಲಿಯೂ ಘಂಟೇಂದ್ರನ ಗುರುವೂ ಅಕಲಂಕನ ಶಿಷ್ಯನೂ ಆದ ಭಟ್ಟಾಕಲಂಕನು ಈ ಎರಡು ಶಾಸನಗಳನ್ನೂ ಬರೆಯಿಸಿದಂತೆ ಅರ್ಥವಾಗುವದಿಲ್ಲವೇ?

ಇದಲ್ಲದೆ ಶಾಸನಗಳಲ್ಲಿ ಭಟ್ಟಾಕಲಂಕನ ಗುರು ಪರಂಪರೆಯನ್ನೂ ಇವನ ವಿದ್ಯಾ ಸಾಮರ್ಥ್ಯವನ್ನೂ ಗುಣವರ್ಣನೆಯನ್ನೂ ಬಹುಮಟ್ಟಿಗೆ ಮಾಡಿದೆ. ಕವಿಚರಿತ್ರೆಯಲ್ಲಿ ಇವನ ವಿಷಯದಲ್ಲಿ ಪ್ರಸ್ತಾಪಿಸುವಾಗ ಬಿಳಗಿಯ ಶಾಸನದಲ್ಲಿನ ಸಂಗತಿಗಳನ್ನೇ ಹೇಳಿದ್ದಾರೆ. ಆದರೆ ಕವಿಚರಿತ್ರೆಯಲ್ಲಿ ಈತನ ಸಮಕಾಲೀಕರನ್ನು ಹೇಳುವಾಗ "ಘಂಪೇಂದ್ರ" ಎಂದು ಬರೆದಿದ್ದಾರೆ. ಇದು ತಪ್ಪು "ಘಂಟೇಂದ್ರ" ಎಂದಿರ ಬೇಕು. ಈತನ ಹೆಸರು ಶಾಸನಗಳಲ್ಲಿ ಹಲವು ಬಾರಿ ಬಂದಿದೆ ನಾವು ಹಿಂದೆ ಉಪಯೋಗಿಸಿರುವ ಶಾಸನದ ಪದ್ಯ ಗದ್ಯಗಳಲ್ಲಿಯೂ ಈ ಹೆಸರು ಬಂದಿರುವುದನ್ನು ವಾಚಕರು ನೋಡ ಬಹುದು.

ಇವನು ಕ್ರಿ. ಶ. ೧೬೦೪ ರಲ್ಲಿದ್ದಂತೆ ಕವಿಚರಿತೆಯಲ್ಲಿ ಊಹಿಸಿದ್ದಾರೆ. ಇದು ಸಯುಕ್ತಿಕವಾಗಿದೆ. ಹೇಗೆಂದರೆ ಶಬ್ದಾನುಶಾಸನವನ್ನು ಬರೆದು ಮುಗಿಸಿದ ಕಾಲವನ್ನು (ಶಾ. ಶ. ೧೫೨೬ನೇ ಶುಭಕೃತ್ಸಂವತ್ಸರವನ್ನು) ಕವಿಯೇ ತಿಳಿಸಿರುವನು. ಅಲ್ಲದೆ ಇದಕ್ಕಿಂತ ಮೊದಲು ಶಾ. ಶ. ೧೫೧೫ರಲ್ಲಿ ಅಂದರೆ ಇವನ ಗ್ರಂಥ ನಿರ್ಮಾಣಕ್ಕಿಂತ ೧೧ ವರ್ಷ ಪೂರ್ವದಲ್ಲಿಯೇ ಬಿಳಗಿಯ ಶಾಸನವನ್ನು ಬರೆಯಿಸಿರುವನು. ಈ ಕಾರಣಗಳಿಂದ ಇವನ ಜೀವಿತ ಕಾಲವು ನಿರ್ವಿವಾದವಾಗಿದೆ.

ಘಂಟೇಂದ್ರನು ತನ್ನ ಕುಲಗುರುವಾದ ಇವನಿಗೆ ಅನೇಕ ದಾನ ಧರ್ಮಗಳನ್ನು ಕೊಟ್ಟಂತೆ ಶಾಸನಗಳಲ್ಲಿ ಉಕ್ತವಾಗಿದೆ. ಲೇಖನ ವಿಸ್ತಾರದ ಭಯದಿಂದ ಇಲ್ಲಿ ಅದನ್ನೆಲ್ಲಾ ಸೂಚಿಸಿಲ್ಲ. ಭಟ್ಟಾಕಲಂಕನು ತನ್ನ ಸೂತ್ರಗಳಿಗೆ ಲಕ್ಷ್ಯಗಳನ್ನು ಕೊಡುವಾಗ ಅಗ್ಗಳ ದೇವನ ಪದ್ಯಗಳನ್ನೂ ಉದಾಹರಿಸಿರುವುದು ಯುಕ್ತವಾಗಿಯೇ ಇದೆ.

ಇದುವರೆಗೆ ನಾವು ಚರ್ಚಿಸಿದ ವಿಷಯಗಳಿಂದ ಭಟ್ಟಾಕಲಂಕನು ನಿಸ್ಸಂಶಯವಾಗಿಯೂ ಬಿಳಗಿಯವನೆಂದು ತಿಳಿದು ಬರುವದು. ಇದಲ್ಲದೆ ಇವನಪೂರ್ವಿಕನಾದ ಅಗ್ಗಳದೇವನು ಇಂಗಳೇಶ್ವರದವನೆಂದು ಹೇಳುವುದಕ್ಕಿಂತ ಬಿಳಗಿಯವನೆಂದು ಹೇಳಲು ಕಾರಣಗಳು ವಿಪುಲವಾಗಿ ಸಿಗುತ್ತವೆ.

ಈಗಿನ ವಾತಾವರಣದಲ್ಲಿ ಈ ತೆರದ ಚರ್ಚಾಸ್ಪದ ಲೇಖಗಳನ್ನು ಬರೆಯುವುದು ಸುಲಭಸಾಧ್ಯವಲ್ಲ. ಇಂತಹ ಲೇಖನಗಳಿಗೆ ಆಧಾರಗಳೂ ಅನುಕೂಲಗಳೂ ಬಹಳ ಬೇಕಾಗುತ್ತವೆ. ಇದಲ್ಲದೆ ಸಿಕ್ಕಿದ ಅಲ್ಪಸ್ವಲ್ಪ ಆಧಾರಗಳಿಂದ ವಿಷಯ ನಿರ್ಧರ ಮಾಡಹೋಗುವುದು ಸಾಹಸದ ಮಾತೇ. ಆದರೂ ಸಿಕ್ಕಿದಷ್ಟು ವಿಷಯಗಳನ್ನು ಮಾರೆಮಾಜದೆ ಪ್ರಕಟಿಸಿದರೆ ಇಂದಿಲ್ಲ ಮುಂದೆಯಾದರೂ ಯಾವನಾದರೂ ಮಹಾನುಭಾವನಿಂದಾದರೂ ಸರಿ ಪಟ್ಟೀತೆಂಬ ಹಂಬಲಿಕೆಯಿಂದ ಈ ಪುಟ್ಟ ಲೇಖನವನ್ನು ಬರೆಯಲಾಯಿತು.

**ಕಂದ**:— ಭಟ್ಟಾಕಲಂಕ ಕವಿಗಂ ।
ನೆಟ್ಟನೆ ಜಸವಾಂತಸುಕವಿಯಗ್ಗಳನಿಗುಂ ॥
ಕಟ್ಟಕ್ಕರೆಯಿಂ ನಮಿಪೆಂ ॥
ತೊಟ್ಟನೆ ಶಿರಬಾಗಿ ಲೇಖನಾಂತ್ಯದೊಳೀಗಳ್ ॥೧॥



# ಆಂಗ್ಲಕವಿ ವರ್ಡ್ಸ್‌ವರ್ಥನ ಮತ್ತು ಲಿಂಗವಂತ ಕವಿಗಳ ಭಾಷಾ ಪದ್ಧತಿಗಳು

[ ಲೇಖಕ:—ಆರ್, ಬಿ. ಆಲಬಾಳ ಬಿ, ಏ ಸಿದ್ಧೇಶ್ವರ ಹೈಸ್ಕೂಲ ವಿಜಾಪುರ ]



ಆಂಗ್ಲ ಕವಿ ಉಯಿಲಿಯಂ ವರ್ಡ್ಸ್‌ವರ್ಥನು ೧೭೭೦ನೇ ಇಸವಿಯಲ್ಲಿ ಕಂಬರಲಂಡವೆಂಬ ಪ್ರಾಂತದಲ್ಲಿ ಹುಟ್ಟಿ ೧೮೫೦ ನೇ ಇಸವಿಯವರೆಗೆ ಸುಮಾರು ೮೦ ವರ್ಷ ಬಾಳಿದನು. ಇವನ ತಾಯಿ ತಂದೆಗಳು ಬಹಳ ಧರ್ಮಿಷ್ಠರಿದ್ದರು. ಆದರೆ ಇವನು ಚಿಕ್ಕವನಿರುವಾಗ ತಾಯಿ ತಂದೆಗಳು ತೀರಿದ್ದರಿಂದ ವರ್ಡ್ಸ್‌ವರ್ಥನಿಗೆ ಹಾಕ್ಸ್‌ಹೆಡ್ ಎಂಬ ಊರಲ್ಲಿ ತನ್ನ ಅಜ್ಜನ ಮನೆಯಲ್ಲಿ ಇರುವಭಾಗ ಬಿತ್ತು.

ಈ ಪ್ರದೇಶವು "ಎಲ್ಲಿ ನೋಡಿದಡಲ್ಲಿ ಗಿರಿಗಹ್ವರಂಗಳುಂ, ಎಲ್ಲಿ ನೋಡಿದಡಲ್ಲಿ ಪರಿವಕುಲ್ಯಂಗಳುಂ, ಎಲ್ಲಿ ನೋಡಿದಡಲ್ಲಿ ಕಾಸಾರ ವಿಸರಮುಂ, ಎಲ್ಲಿ ನೋಡಿದಡಲ್ಲಿ ಪಕ್ತ್ರಿಪಿನ ಪ್ರೋಪಬನಂ" ಎಂಬಂತೆ ಸಣ್ಣ ಸಣ್ಣ ಗುಡ್ಡಗಳಿಂದಲೂ ವನೋಪವನಗಳಿಂದಲೂ ಹೊಳೆ ಹಳ್ಳಗಳಿಂದಲೂ ಕೆರೆ ಬಾವಿಗಳಿಂದಲೂ ಬಹು ರಮಣೀಯುವಾಗಿತ್ತು ಮತ್ತು ಈ ಹಳ್ಳಿವಾಡದ ಜನರು ನಡೆ ನುಡಿಗಳಿಂದ ಸೌಮ್ಯರಾಗಿದ್ದು, ಸ್ವತಂತ್ರ ಪ್ರವೃತ್ತಿಯುವರಿದ್ದರು. ಈ ಪ್ರಕಾರ ಸೃಷ್ಟಿ ಸೌಂದರ್ಯವನ್ನು ಸರ್ವ ರೀತಿಯಿಂದ ಬೀರುವ ಈ ಹಳ್ಳಿವಾಡದಲ್ಲಿ ವರ್ಡ್ಸ್‌ವರ್ಥನು ತನ್ನ ಶಾಲೆಯ ಗೆಳೆಯರೊಂದಿಗೆ ಆಟ ನೋಟಗಳಲ್ಲಿ ಕಾಲವನ್ನು ಕಳೆಯುತ್ತಿದ್ದನು. ಇಂಥ ಸ್ವತಂತ್ರ ವಾತಾವರಣದಲ್ಲಿದ್ದು ಸೌಮ್ಯ ಸ್ವಭಾವದ ಸಾಧಾರಣ ಜನರಲ್ಲಿ ಬೆಳೆದದ್ದರಿಂದುಂಟಾದ ಇವನ ಮನೋವೃತ್ತಿಯು, ಮುಂದೆ ಸ್ಥಿತ್ಯಂತರಗಳಲ್ಲಿ ಬದಲಾಗದೆ, ಇವನ ಕವಿತಾಶಕ್ತಿಗೆ ವಿಶೇಷ ಚಾಲನೆಯನ್ನು ಕೊಟ್ಟಿರುವದು. ವಾಡಿಕೆಯಾಗಿ ಹಳ್ಳಿವಾಡದ ಜನರು ತಮ್ಮ ಪೂರ್ವ ಪರಂಪರೆಗೆ ಅನುಸರಿಸಿ ನಡೆಯುವರು. ಅವರ ನೀತಿ ನಡಾವಳಿಗಳಲ್ಲಿ ಅದಲು ಬದಲುಗಳಾಗುವದು ಬಹಳ ಕಡಿಮೆ. ಇದ್ದದ್ದನ್ನು ಸದ್ದಿಲ್ಲದೆ ಸಾಗಿಸುವರು. ಸಾಮಾನ್ಯವಾಗಿ ಇಂಥ ಸಾತ್ವಿಕ ಸರಣಿಯಲ್ಲಿ ಅವರು ಸರಿದಾಡುತ್ತಾರೆ. ಇಲ್ಲಿ ಕಂಡುಕೊಂಡ ಸರಲ ವೃತ್ತಿಯೇ ಅವನ ಕವಿತಾಶಕ್ತಿಗೆ ಮುಖ್ಯ ಕಾರಣವಾಗಿರುವದು.

ಮುಂದೆ ದೇಶ ಸಂಚಾರ ಮಾಡಿದರೂ ಹೆಚ್ಚಿನ ಶಿಕ್ಷಣ ಹೊಂದಿದರೂ ಶಿಷ್ಟರ ಸಹವಾಸ ಮಾಡಿದರೂ ಅವನ ಈ ಸಾದಾವೃತ್ತಿಯಲ್ಲಿ ಎಷ್ಟೂ ಹೆಚ್ಚುಕಡಿಮೆಯಾಗಲಿಲ್ಲ. ಕೇಂಬ್ರಿಜ್ ಕಾಲೇಜ ಸೇರಿ ಹೆಚ್ಚಿನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದನು. ಆಗ್ಗೆ ಅಂದರೆ ಸುಮಾರು ೧೭೯೦ ರಲ್ಲಿ ಫ್ರಾನ್ಸ ದೇಶದಲ್ಲಿ ರಾಜ್ಯಕ್ರಾಂತಿಯಾಗಿ, ಗೊಂದಲವೆದ್ದು, ಜನರು ಸ್ವಾತಂತ್ರತೆಯ ಹೆಸರಿನಿಂದ ಬಡಿದಾಡಹತ್ತಿದರು. ಮತ್ತು ಪ್ರಜಾಸತ್ತಾತ್ಮಕ ರಾಜ್ಯಕ್ಕೆ ಪ್ರಾರಂಭವಾಯಿತು. ಈ ಕ್ರಾಂತಿಯು ಲೋಕ ಕಲ್ಯಾಣಕ್ಕೆ ಉದ್ಭವಿಸಿರುವದೆಂದು ಮೊದಲು ವರ್ಡ್ಸ್‌ವರ್ಥನ ನಂಬುಗೆಯಾಯಿತು. ಆದರೆ ಜನರು ತಮ್ಮ ಪೂರ್ವ ಪರಂಪರೆಯನ್ನು ಬಿಟ್ಟು ಪಾಶಹರಿದ ಪಶುಗಳಂತೆ ಕುಣಿದಾಡಿ, ಅನ್ಯಾಯ ಅನಾಚಾರಗಳನ್ನು ಮಾಡುವದನ್ನು ನೋಡಿ ಅವನ ಮನಸ್ಸು ತಿರುಗಿತು. ಸರ್ವತಂತ್ರ ಸ್ವತಂತ್ರತೆಯೆಂದರೆ ಒಟ್ಟು ಬಯಲೆಂದು ಅವನ ಮನವರಿಕೆಯಾಯಿತು.

ಮುಂದೆ ಗೃಹಸ್ಥಾಶ್ರಮ ಕೈಕೊಂಡು ಹಲಕೆಲವು ವ್ಯವಸಾಯಗಳಿಗೆ ಕೈನೀಡಿದರೂ ಅವನ ಪ್ರಪಂಚವು ಸರಿಯಾಗಿ ಸಾಗಲಿಲ್ಲ. ಆದರೆ ಒಬ್ಬ ಸರದಾರನಿಂದ ಧನ ಸಹಾಯವಾಗಿ ಒಂದು ವಿಶಿಷ್ಟ ನೌಕರಿಯು (Stamp-Collector) ಸಿಕ್ಕನಂತರ ಅವನ ಪ್ರಪಂಚವು ಅಬಾಧಿತವಾಗಿ ಸಾಗಿತು. ವರ್ಡ್ಸ್‌ವರ್ಥನು ಅನೇಕ ಕಾವ್ಯಗಳನ್ನು ಬರೆದಿದ್ದಾನೆ. ಒಟ್ಟಿಗೆ ಅವನ ಗ್ರಂಥ ಸಮುದಾಯವು ಮೂವತ್ತಕ್ಕೆ ಮೀರುವದು. ಅವುಗಳಲ್ಲಿ ೨-೩ ಮಹಾಕಾವ್ಯಗಳು; ಉಳಿದವುಗಳು ಖಂಡಕಾವ್ಯಗಳಿರುವವು. ಮಹಾ ಕಾವ್ಯಗಳಲ್ಲಿ ಇವನ ಗತಿಯು ಅಷ್ಟು ಇದ್ದಿದ್ದಿಲ್ಲ; ಆದರೆ ಖಂಡ ಕಾವ್ಯಗಳಲ್ಲಿ ಇವನ ಖ್ಯಾತಿಯು ಬಹಳವಿರುವದೆಂದು ಬಲ್ಲವರು ಅಭಿಪ್ರಾಯ ಪಡುತ್ತಾರೆ. ಇವನ ೮-೧೦ ಕೃತಿಗಳು ಇಂಗ್ಲೀಷ ಭಾಷೆಯಲ್ಲಿ ಸರ್ವೋತ್ಕೃಷ್ಟಗಳೆಂದು ಪಂಡಿತರು ಪ್ರತಿಪಾದಿಸುತ್ತಾರೆ.

ಇವನ ಕವಿತಾಮಿತ್ರನು ಕೋಲಿರಿಜ್ಜನೆಂಬ ಇನ್ನೊಬ್ಬ ಕವಿಯು. ಇವನಾದರೂ ಇಂಗ್ಲೀಷ ವಾಙ್ಮಯದಲ್ಲಿ ಹೆಸರಾದ ಕವಿಯು. ಇಬ್ಬರು ಕೂಡಿ (Lyrical Ballads) ಎಂಬ ಸರಸ ಕವನಗಳನ್ನು ಬರೆಯ ತೊಡಗಿದರು. ಕೆಲವು ಅಂಶದಿಂದ ಇಬ್ಬರಲ್ಲಿ ಮತಭೇದಗಳಾದರೂ ಇಬ್ಬರ ಸರಣಿ ಕೂಡಿ ಸಾಗಿತು. ಒಬ್ಬರಿಗೊಬ್ಬರು ಉತ್ತೇಜನ ಕೊಟ್ಟು ಒಬ್ಬರನ್ನೊಬ್ಬರು ಅನುಕರಣ ಮಾಡುವದರಿಂದ ಅವರವರ ವ್ಯಂಗಗಳು ತುಂಬಿಬಂದವು. ಡೊರಾಥಿ

ಎಂಬವಳು ವರ್ಡ್ಸ್‌ವರ್ಥನ ತಂಗಿಯು. ಅವಳು ಯಾವಾಗಲೂ ಅಣ್ಣ
ನನ್ನು ಹಿಂಬಾಲಿಸುತ್ತ ಅವನ ಕವಿತಾ ರಚನೆಗೆ ಸಹಕಾರಿಯಾಗುತ್ತಿದ್ದಳು.
ಅವಳು ಅಷ್ಟು ಕಲಿತವಳಲ್ಲ, ಕವಿತ್ರಿಯಲ್ಲ; ಆದರೆ ವಾಗ್ದೇವಿಯು ದೂತಿ
ಯಂತೆ ಮೌನದಿಂದ ಅವನ ಕವನಗಳಿಗೆ ಸ್ಫೂರ್ತಿಯನ್ನುಂಟು ಮಾಡುತ್ತಿ
ದ್ದಳು. ಪ್ರಪಂಚದಲ್ಲಿ ಇದ್ದೂ ಇಲ್ಲದಂತೆ, ಪ್ರಶಾಂತ ಸ್ಥಳದಲ್ಲಿ ಪರಮಾರ್ಥ
ವನ್ನು ಹಾಡಿ ಹರಿಸಿ, ಪರಮಾರ್ಥವನ್ನು ಬಯಸುವ ವರ್ಡ್ಸ್‌ವರ್ಥನ ಕೃತಿ
ಗಳು ಬಹು ಅಂಶದಿಂದ ವೀರಶೈವರ ಗ್ರಂಥಗಳ ನೆನಹನ್ನು ತಂದು ಕೊಡು
ತ್ತವೆ.

(Duty) ಕರ್ತವ್ಯವೆಂಬ ಕಾವ್ಯದಲ್ಲಿ, ಮನುಷ್ಯರು ಈ ಕರ್ಮ
ಭೂಮಿಯಲ್ಲಿ ತ್ರಿಕರಣ ಪೂರ್ವಕವಾಗಿ ನಿಷ್ಕಾಮ ಕರ್ಮವನ್ನು ಮಾಡ
ಬೇಕೆಂದು ಒಳ್ಳೇ ಭಕ್ತಿಭಾವದಿಂದ ಹೇಳಿದ್ದಾನೆ. ಲಂಡನ್ನ ಪಟ್ಟಣದ
ಮೇಲೆ ಒಂದು ಕವನ ಮಾಡಿರುವನು. ಯಾವತ್ತು ಕಲಾಕೌಶಲ್ಯಗಳಿಂದ
ಪಂಡಿತರಿಗೂ ಪಾಮರರಿಗೂ ತವರು ಮನೆಯಾಗಿ ಸರ್ವಾಡಂಬರದಿಂದ
ಮೆರೆಯುವ ಈ ಲಂಡನ್ನ ಪಟ್ಟಣದ ವೈಭವವು ವರ್ಡ್ಸ್‌ವರ್ಥನನ್ನು ವಿಸ್ಮಯ
ಗೊಳಿಸಲಿಲ್ಲ. ಒಂದು ಪ್ರಸಂಗದಲ್ಲಿ ಬೇರೆ ರೀತಿಯಿಂದ ಇದು ಆತನಿಗೆ
ಆನಂದವನ್ನು ಕೊಟ್ಟಿತು. ಇಂಗ್ಲಂಡ ಮುಂತಾದ ಶೀತಕಟಿಬಂಧ ದೇಶಗ
ಳಲ್ಲಿ ಬೆಳಗು ಮುಂಜಾನೆ ಅರುಣೋದಯವು ೩-೪ ತಾಸುಗಳ ಪರ್ಯಂತರ
ವರ್ಷದಲ್ಲಿ ಕೆಲಕಾಲ ಇರುವದು ಇಂಥ ನಸುಕಿನಲ್ಲಿ ವರ್ಡ್ಸ್‌ವರ್ಥನು
ಒಂದು ದಿವಸ ತಿರುಗಾಡಲಿಕ್ಕೆ ಹೋಗಿ ತಿರುಗಿಬರುವಾಗ್ಗೆ, ಯಾವಾಗಲೂ
ಗಲಭೆಯಿಂದ ತುಂಬಿತುಳುಕುವ ಲಂಡನ್ನ ಪಟ್ಟಣವು ಸ್ತಬ್ಧವಾಗಿ ಗಾಢನಿದ್ರೆ
ಯಲ್ಲಿದ್ದಂತೆ ತೋರಿತೆಂದು ವರ್ಣಿಸಿದ್ದಾನೆ. ತಾತ್ಕಾಲಿಕವಾಗಲಿ, ಅಂಥ
ಶಾಂತತೆಯಲ್ಲಿ ಆ ಪಟ್ಟಣವು ಅವನಿಗೆ ಕಂಗೊಳಿಸಿತು; ಆದರೆ ಅದರ ವೈಭ
ವವು ಅವನಿಗೆ ವಿಸ್ಮಯಗೊಳಿಸಲಿಲ್ಲ. ಬಾಲಕೇಳೀ ವರ್ಣಿಸುವ ಮತ್ತೊಂದು
ಕಾವ್ಯದಲ್ಲಿ, ಸಾತ್ವಿಕವೃತ್ತಿಯನ್ನು ಸುರಿಸುತ್ತಿರುವ ಬಾಲಕನು ಬುದ್ಧಿ
ವಂತನು, ಗುಣವಂತನು, ಎಂದು ವರ್ಣಿಸಿದ್ದಾನೆ. ಸ್ವರ್ಗದಿಂದ ಆದೇ
ಇಳಿದು ಬಂದದ್ದರಿಂದಲೂ ಪ್ರಪಂಚ ಪರಿಚಯವು ಇನ್ನೂ ಆಗದೆ ಇರುವ
ದರಿಂದಲೂ ಅವನೇ ಪುಣ್ಯವಂತನೆಂದು ಕವಿಯು ಭಾವಿಸಿದ್ದಾನೆ ಅರಿಯು
ನೆಂಬುವದು ಅರಸುತನವೆಂಬ ಬಾಲಭಾವವನ್ನು ಬಲಪಡಿಸಿದ್ದಾನೆ. (The
Happy warrior) ವರವೀರನೆಂಬದರಲ್ಲಿಯೂ ಕವಿಯು ಪರ್ಯಾಯ

ದಿಂದ ಅಷ್ಟಾವರಣಗಳ ತತ್ವಗಳ ವಿವೇಚನೆ ಮಾಡಿದಂತೆ ನಮಗೆ ಭಾಸವಾಗುತ್ತದೆ. ಸಂಸಾರವೆಂಬ ಸಂಗ್ರಾಮದಲ್ಲಿ ಶೀಲಗಳ ಕವಚ ತೊಟ್ಟು ವೀರವೃತ್ತಿಯಿಂದ ಕಾದಾಡ ಬೇಕಾಗುವದೆಂದು ವಿಶದವಾಗಿ ಇಲ್ಲಿ ವಿವರಿಸುತ್ತಾನೆ.

ಇನ್ನು ವಿಶೇಷ ಸಾಮ್ಯದ ಸಂಗತಿಯೆಂದರೆ, ಭಾಷಾ ರೀತಿಯು, ಅಥವಾ ಶೈಲಿಯು. (Lyrical Ballads) ಸರಸ ಕವನಗಳೆಂಬ ಗ್ರಂಥದ ಮುನ್ನುಡಿಯಲ್ಲಿ ಕಾವ್ಯ ಶೈಲಿ ಸಂಬಂಧವಾಗಿ ಉದ್ಗಾರ ತೆಗೆದಿರುವನು. "ಕಾವ್ಯಂ ರಸಾತ್ಮಕಂ ವಾಕ್ಯಂ" ಎಂಬಂತೆ ರಸವು ಕಾವ್ಯಕ್ಕೆ ಪ್ರಾಣವಾಗಿರುವದೆಂದು ಹೇಳಿದ್ದಾನೆ; ಆದರೆ ಅಲಂಕಾರಗಳ ಅವಶ್ಯಕತೆ ಅಷ್ಟೊಂದು ಇರುವದಿಲ್ಲ. ತನ್ನ ಸರಲ ವೃತ್ತಿಗನುಸರಿಸಿ, ಸರಲವಾದ, ಸಂಸವಾದ ಭಾಷೆಯು ಕಾವ್ಯದ ಅಂಗವೆಂದು ಪ್ರತಿಪಾದಿಸಿದ್ದಾನೆ. ಕ್ಲಿಷ್ಟ ಪದಗಳ ಯೋಜನೆ ಕೃತ್ರಿಮ ಕಾವ್ಯದ ಲಕ್ಷಣ ವೆನಿಸುವದು. ಆದ್ದರಿಂದ ಗದ್ಯದಂತೆ ಪದ್ಯದಲ್ಲಿ ಸುಲಭ ಶೈಲಿ ಇಟ್ಟು ಪ್ರಸಾದ ಗುಣವನ್ನು ಪ್ರಕಟ ಗೊಳಿಸುವದು ಕವಿಯ ಮುಖ್ಯ ಹೇತುವಾಗಿರಬೇಕು. ಆದ್ದರಿಂದ ಗದ್ಯ ಪದ್ಯಗಳಿಗೆ ಛಂದಸ್ಸಿನ ಹೊರತು ಯಾವತರದ ಅಭ್ಯಂತರ ವಿರಲಾರದೆಂದು ಸರಸವಾಗಿ ವಿವೇಚನೆ ಮಾಡಿದ್ದಾನೆ. ಪಂಡಿತರಿಗೂ ಪಾಮರರಿಗೂ ಕವಿತೆಗಳು ಸುಲಭಸಾಧ್ಯಗಳಾಗಬೇಕು. ಮೊಟ್ಟಮೊದಲು ಭಾಷಾಶೈಲಿಯಲ್ಲಿ ಸುಲಭತೆಯನ್ನುಂಟು ಮಾಡಿದವರು ೧೮ನೇ ಶತಮಾನದ ಗದ್ಯ ಗ್ರಂಥಕಾರರು. ಮುಂದೆ ಕಾಲ ಪರಿಸ್ಥಿತಿಗನುಸರಿಸಿ ಕಾವ್ಯದಲ್ಲಿ ಸಹ ಪ್ರಸಾದಗುಣದ ಪ್ರಾದುರ್ಭಾವವು ಆಗ ತೊಡಗಿತು. ಆದರೆ ಭಾಷಾ ಸುಲಭತೆಯ ಬಗ್ಗೆ ಅನೇಕ ವಿರೋಧಿಗಳ ಮುಂದೆ ವರ್ಡ್ಸ್‌ವರ್ಥನು ಬಹಳವಾಗಿ ಹೋರಾಡಿದನೆಂಬುವದು ಆತನ ಚರಿತ್ರೆಯಿಂದ ಗೊತ್ತಾಗುತ್ತದೆ.

ಇನ್ನು ವೀರಶೈವ ಕವಿಗಳ ವಿಷಯವಾಗಿ ವಿಚಾರ ಮಾಡಿದರೆ ಅವರಾದರು ಇವನಕಿಂತ ೬೦೦ ವರ್ಷಗಳ ಮೊದಲು (Plain Living & High Thinking) ಶುದ್ಧ ಆಚಾರ ಮತ್ತು ಉದಾತ್ತವಿಚಾರವೆಂಬ ಈತನ ತತ್ವಕ್ಕನುಸರಿಸಿ, ತಮ್ಮ ನಡೆನುಡಿಗಳಲ್ಲಿ ಸುಲಭ ಶೈಲಿಯನ್ನು ಹೊಂದಲಿಕ್ಕೆ ಬಹು ಪ್ರಯತ್ನ ಪಟ್ಟಿರುವರು. ಕರ್ನಾಟಕ ಭಾಷೆಯ ಪುರಸ್ಕರ್ತರು ಜೈನರು, ಲಿಂಗಾಯತರು ಮತ್ತು ಬ್ರಾಹ್ಮಣರು. ಉಳಿದ ಭಾಷೆಗಳಂತೆ ಕನ್ನಡದಲ್ಲಿ ಸಹ ಮಾರ್ಗ ದ್ವಯಗಳಾಗಿರುವವು.

"ಶಬ್ದಾರ್ಥೌ ಕಾವ್ಯಂ" ಎಂಬ ಕಾವ್ಯ ಲಕ್ಷಣಕ್ಕನುಸರಿಸಿ, ಕೆಲವು ಕವಿಗಳು ಶಬ್ದ ಸ್ವಾರಸ್ಯಕ್ಕೆ ಹೆಚ್ಚು ಮಹತ್ವ ಕೊಟ್ಟರೆ, ಕೆಲವರು ಅರ್ಥ ಗೌರವಕ್ಕೆ ಹೆಚ್ಚು ಮಹತ್ವ ಕೊಡುವರು. ಈ ಪ್ರಕಾರ ಸಂಸ್ಕೃತದಲ್ಲಿ ವೈದರ್ಭೀ, ಗೌಡೀ ಎಂಬ ಮುಖ್ಯ ಭಾಷಾರೀತಿಗಳಿರುವವು. ಅದರಂತೆ ಇಂಗ್ಲಿಷದಲ್ಲಿ Natural, Artificial, (ಸಹಜ, ಕೃತ್ರಿಮ) ಎಂಬ ಎರಡು ಭೇದಗಳು ಕಂಡುಬರುತ್ತವೆ. ಗೌಡೀ ಅಥವಾ Artificial ಅಂದರೆ ಶಬ್ದ ವಿಶಿಷ್ಟ ಕಾವ್ಯವು; ವೈದರ್ಭೀ ಅಥವಾ Natural ಅಂದರೆ ಅರ್ಥ ವಿಶಿಷ್ಟ ಕಾವ್ಯವು. ೧ ನೇದರಲ್ಲಿ ಕೃತ್ರಿಮ ಕವಿತ್ವ ಕಾಣುವದರಿಂದ ಕನಿಷ್ಠವೆನಿಸುತ್ತದೆ. ೨ ನೇದರಲ್ಲಿ ಸಹಜ ಕವಿತಾ ಶಕ್ತಿ ಒಡೆ ಮೂಡುವದರಿಂದ ಈ ರೀತಿಯಲ್ಲಿ ಬರೆದ ಕಾವ್ಯವು ಉತ್ತಮವೆನಿಸುತ್ತದೆ. ಒಂದು ನೈಮಿತ್ತಿಕವು, ಇನ್ನೊಂದು ನೈಸರ್ಗಿಕವು. ಆದರೆ ಉತ್ಕೃಷ್ಟಾರ್ಥಗಳಿಂದ ಕೂಡಿದ ಉತ್ಕೃಷ್ಟ ಪದಯೋಜನೆಯು ಉತ್ಕೃಷ್ಟ ಕಾವ್ಯವೆಂದು ಕೋಲಿರಿಜ್ಜನ ಮತವಿರುತ್ತದೆ. ಇದು ಹಾಲು ಮೇಲಿನ ಕೆನೆಯಂತೆ ಅಪರೂಪವಾಗಿ ಅಲ್ಲಲ್ಲಿಗೆ ಕಾವ್ಯಗಳಲ್ಲಿ ಕಂಡುಬರುವದು. ಅದರಂತೆ ಕನ್ನಡದಲ್ಲಿ ನೋಡಲಾಗಿ ದಕ್ಷಿಣೋತ್ತರ ಮಾರ್ಗಗಳೆಂದು ಜೈನ ವೀರಶೈವ ಶೈಲಿಗಳು ದೃಷ್ಟಿಗೋಚರವಾಗುತ್ತವೆ. ಪ್ರಚಾರದಲ್ಲಿ ಒಂದಕ್ಕೆ ಹಳೆಗನ್ನಡವೆಂತಲೂ ಇನ್ನೊಂದಕ್ಕೆ ಹೊಸಗನ್ನಡವೆಂತಲೂ ಅನ್ನುವರು. ಮೇಲಿನಂತೆ, ಈ ಭಾಷಾರೀತಿಗಳಲ್ಲಿ ಶ್ರೇಷ್ಠವಾವುದು, ಕನಿಷ್ಠವಾವುದೆಂದು ಹೇಳಲು ಕಷ್ಟ ಸಾಧ್ಯವಿರುವದು. ದಕ್ಷಿಣ ಮಾರ್ಗವೆಂದರೆ ಕೇವಲ ಕಾವ್ಯ ಮಾರ್ಗವೆಂದು, ಆರಂಭದಿಂದ ೧೨ ನೇ ಶತಮಾನವತನಕ ಸುಮಾರು ೧೦೦೦ ವರ್ಷ ಕನ್ನಡಿಗರು, ವಿಶೇಷವಾಗಿ ಜೈನರು ಈ ರೀತಿಯಲ್ಲಿ ಮಹಾ ಕಾವ್ಯಗಳನ್ನು ಬರೆದಿದ್ದಾರೆ. ಈ ಸರಣಿಯಲ್ಲಿ ಸಂಸ್ಕೃತ ಶಬ್ದಗಳು ಬಹಳ; ಉದ್ದುದ್ದ ಸಮಾಸಗಳು ತುಂಬಿವೆ; ಬಳಿಕೆಯಲ್ಲಿಲ್ಲದ ಹಳೇ ಶಬ್ದಗಳು ಹೇರಳವಾಗಿ ಕಾಣುವವು. ಶಬ್ದ ಸ್ವಾರಸ್ಯದಿಂದಲೂ ಅರ್ಥ ಗೌರವದಿಂದಲೂ, ಓಜಸ್ಸು ಮಾಧುರ್ಯಾದಿ ಗುಣಗಳಿಂದಲೂ ತುಂಬಿ ಹರಿಯುತ್ತಿದ್ದರೂ ಪ್ರಸಾದ ಗುಣವು ಸ್ಪಷ್ಟವಾಗಿ ಪ್ರಕಟವಾಗುವದಿಲ್ಲ. ಓದಿದ ಕೂಡಲೇ ಅರ್ಥವು ಮನಸ್ಸಿನಲ್ಲಿ ಮೂಡುವದಿಲ್ಲ.

೧೨ ನೇ ಶತಮಾನದಿಂದ ಜೈನರ ಪ್ರಾಬಲ್ಯವು ಕಡಿಮೆಯಾಗುತ್ತ ಹೋದದ್ದರಿಂದ ವೀರಶೈವರು ಮುಂದುವರಿಯಹತ್ತಿದರು. ಅಂಥ ಧರ್ಮ

ಯುಗದಲ್ಲಿ ಧರ್ಮದ ಅವನತಿಯೆಂದರೆ ಸರ್ವ ಪ್ರಕಾರದ ಹಾನಿಯೆನಿಸಿತು. ಧರ್ಮವು ಹಿಂದೂ ಜನರಿಗೆ ಮೂಲಾಧಾರವಾಗಿರುವದು. ಈ ಸಮಯಕ್ಕೆ ಬಸವನು ಅವತರಿಸಿ ವೀರಶೈವ ಮತವನ್ನು ವೃದ್ಧಿಗೊಳಿಸಹತ್ತಿದನು. ಧರ್ಮಧೀರನೂ ರಾಜ್ಯಪುರುಷನೂ ವ್ಯವಹಾರ ಚತುರನೂ ಆದ ಬಸವಣ್ಣನು ಧಾರ್ಮಿಕ ಔದ್ಯೋಗಿಕ ಸಾಮಾಜಿಕ ಸುಧಾರಣೆಗಳನ್ನು ಮಾಡತೊಡಗಿದನು. ಆದ್ದರಿಂದ ಇಡೀ ಹಿಂದುಸ್ತಾನದಲ್ಲಿರುವ ಏಕತ್ವವು, ವಿವಿಧತೆಯು, ವೈಚಿತ್ರ್ಯವು ಸಂಗ್ರಹವಾಗಿ ವೀರಶೈವರಲ್ಲಿ ಒಡೆದು ಕಾಣುವವು. "ಸಾಮಾನ್ಯಂ ಏಕಂ ಅನೇಕಗತಂ" ಎಂಬ ನಯಯ್ಯಾಯಿಕರ ನ್ಯಾಯದಂತೆ ಬಸವಣ್ಣನ ದೃಷ್ಟಿಯಿತ್ತು. ವೇದಾಂತವೆಂಬ ಮುಗಿಲು ಮುಟ್ಟುವ ಮಾವಿನ ಹಣ್ಣನ್ನು, ಪಂಗ್ತಿ ಪ್ರಪಂಚವಿಲ್ಲದೆ ವೈದಿಕರಿಗೆ, ವೇದ ಬಾಹಿರರಿಗೆ, ಹೊಲೆಮಾದಿಗರಿಗೆ ಸಮನಾಗಿ ಉಣ್ಣಿಸಿದನೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ದೇಶದ ಏಕೀಕರಣದ ಪ್ರಶ್ನದಲ್ಲಿ ಬುದ್ಧನು ೧ ನೇಯವನು, ಬಸವನು ೨ ನೇಯುವನು, ಎಂದು ನಾವು ನಿರ್ವಿವಾದವಾಗಿ ಹೇಳಬಹುದು. ಧರ್ಮದ ತತ್ವಗಳು ಸಾಮಾನ್ಯ ಜನರಿಗೆ ಸಹಜವಾಗಿ ತಿಳಿಯಬೇಕೆಂದು ಅಚ್ಚಗನ್ನಡ ಶಬ್ದಗಳು ಉಕ್ಕಿ ಬೀಳಹತ್ತಿದವು. ವಾಙ್ಮಯದಲ್ಲಿ ವ್ಯವಹಾರದ ಮಾತುಗಳು ಸೇರಹತ್ತಿದವು. ಗದ್ಯ ಪದ್ಯಗಳ ನಡುವಿನ ಅಂತರವು ಕಡಿಮೆಯಾಗಿ ಅವು ಸಮ ಸಮಾನ ಕಾಣಹತ್ತಿದವು. ವಚನಕಾರರು ಹುಟ್ಟಿದರು; ಅವರ ವಚನಗಳು ಹುಟ್ಟಿದವು. ಈ ಪ್ರಕಾರ ವರ್ಡ್ಸವರ್ಥನು ಹುಟ್ಟುವದಕ್ಕಿಂತ ಪೂರ್ವದಲ್ಲಿ ೬೦೦ ವರ್ಷಗಳಾಚೆಗೆ ಅವನ ತತ್ವಗಳು ನಮ್ಮಲ್ಲಿ ತಲೆದೋರಿದವು. ೧೮ ನೇ ಶತಮಾನದ ಇಂಗ್ಲಂಡದ ದೇಶದ ಗದ್ಯ ಗ್ರಂಥಕಾರರಂತೆ ನಮ್ಮ ವಚನಕಾರರು ಭಾಷಾ ಸುಲಭತೆಯ ಪ್ರಶ್ನವನ್ನು ಸಂಪೂರ್ಣ ಬಿಡಿಸಿ ಬಿಟ್ಟರು. ಮುಂದೆ ಕವಿಗಳು ಸಹ ಈ ಸುಲಭವಾದ ಶೈಲಿಯನ್ನು ಅನುಸರಿಸಹತ್ತಿದರು. "ಷಟ್ಪದಿಗಳೆಡೆಬಿಡದೆ ಝೇಂಕರಿಸದಿರ್ಪವೇ ವಿದ್ವತ್ಸಭಾನೀರೇರುಹಾಕರದೊಳು' ಎಂಬಂತೆ ಸುಲಭ ಶೈಲಿಗೆ ಅನುರೂಪವಾದ ಸುಲಭ ಛಂದಸ್ಸುಗಳು ಹೊರಬಿದ್ದವು; ಹಾಡುಗಳೂ ಕೀರ್ತನೆಗಳೂ ಕೇಳಿಸಹತ್ತಿದವು. ವಾಙ್ಮಯವೂ ವ್ಯವಹಾರವೂ ತಾಕಲಾಡಿ ಉತ್ತರ ಮಾರ್ಗದ ಉಗಮವಾಯಿತು. ಶಿಷ್ಟ ಸಮ್ಮತವಾದ ದಕ್ಷಿಣ ಮಾರ್ಗದಲ್ಲಿ ಕವಿಗಳು ಕವಿಗಳ

ಕಾಣಹತ್ತಿದರು. ಸರ್ವ ಸಮ್ಮತವಾದ ಉತ್ತರ ಮಾರ್ಗದಲ್ಲಿ ವಿಶೇಷ ವಾಗಿ ಮೆರೆಯಹತ್ತಿದರು. ನವರಸಗಳಿಂದಲೂ ದಶಗುಣಗಳಿಂದಲೂ ಅಷ್ಟಾದಶಪದಾರ್ಥಗಳಿಂದಲೂ ಅನೇಕ ಅಲಂಕಾರಗಳಿಂದಲೂ ಇದ ರಲ್ಲಿಯೂ ಕಾವ್ಯಗಳು ಕಂಗೊಳಿಸಹತ್ತಿದವು. ರಾಘವಾಂಕ, ಸೊಮಾ ರಾಧ್ಯ, ವಿರೂಪಾಕ್ಷ ಪಂಡಿತ ಮೊದಲಾದವರು ವೀರಶೈವರಲ್ಲಿ ಘನ ಪಂಡಿತರು. ಸಂಸ್ಕೃತದಲ್ಲಿ ಮತ್ತು ಕನ್ನಡದಲ್ಲಿ ಒಳ್ಳೇ ವಿಶಾರದರು. ದಿಗ್ವಿ ಜಯಾರ್ಥವಾಗಿ ಬಂದ ಅನೇಕ ಪಂಡಿತರನ್ನು ಗೆದ್ದು ಅದ್ವಿತೀಯರೆಂದು ಹೆಸರಾದವರು. ಇವರ ಕನ್ನಡ ಕೃತಿಗಳನ್ನು ನೋಡಿದರೆ ಸಂಸ್ಕೃತವನ್ನು ಮರೆತರೋ ಏನೋ ಎಂಬುವಂತೆ, ಅವುಗಳಲ್ಲಿ ಪ್ರಸಾದವು ಚನ್ನಾಗಿ ಕನ್ನಡಿಸಿರುವದು. ಜೈನ ಶೈಲಿ ಜೈನರ ಕೂಡ ಹೋಯಿತು. ವೀರಶೈವ ಶೈಲಿ ಬಳಿಕೆಯಲ್ಲಿ ಬಂತು. ಜೈನರು, ಲಿಂಗಾಯತರು, ಬ್ರಾಹ್ಮಣರು ಈ ಶೈಲಿಯನ್ನು ಈಗ ಅನುಸರಿಸುವರು. ಆದ್ದರಿಂದ ವ್ಯವಹಾರದಲ್ಲಿಯೂ ಅದರಂತೆ ವಾಙ್ಮಯದಲ್ಲಿಯೂ ಪ್ರಾಸಾದಿಕ ಭಾವದಿಂದ ಕರ್ನಾಟಕದ ಏಕೀಕರಣಕ್ಕೆ ಕೈ ಕೊಟ್ಟವರು ವೀರಶೈವರೇಯೆಂದು ನಾವು ವಿಶದವಾಗಿ ಹೇಳಬಹುದು.



# ಶ್ರೀ ಬಸವರಾಜನವರತ್ನಮಾಲಾ.

(ಶಕೆ ೧೮೪೯ ನೇ ಪ್ರಭವನಾಮ ಸಂ॥ ವೈಶಾಖ ಶುದ್ಧ ೩ ಬುಧವಾರದಿವಸ ವಿಜಾಪುರ ಶೇಪರ್ಡಹಾಲಿನಲ್ಲಿ ಬಸವಜಯಂತಿಯ ಉತ್ಸವದ ಬಗ್ಗೆ ರಾ॥ ಸಾ॥ ಫ. ಗು. ಹಳಕಟ್ಟಿ ಇವರ ಅಧ್ಯಕ್ಷತೆಯ ಕೆಳಗೆ ಕೂಡಿದ ಸಭೆಯಲ್ಲಿ ಪಂ॥ ಶ್ರೀ ಬಸವರಾಜ ಶಾಸ್ತ್ರಿಗಳು ಕೋಡಿಕೊಪ್ಪ ಇವರಿಂದ ನಿರ್ಮಿಸಲ್ಪಟ್ಟ ಈ ಶ್ಲೋಕಗಳು ದ್ವಿತೀಯ ಶಂಭು ಬಸವ ಸಚಿವಗೆ ಭಕ್ತಿಯಿಂದ ಅರ್ಪಿಸಲ್ಪಟ್ಟವು.)

ಕಲ್ಯಾಣಂ ಶಿವಭಕ್ತಿರತ್ನಸದನಂ ಮುಕ್ತ್ಯಂಗನಾದರ್ಪಣಂ ।
ಕಲ್ಯಾಪೂರಿತಚಾರುಚಂದ್ರವದನಂ ನಿತ್ಯಂ ಚರಾರಾಧನಂ ॥
ಕಲ್ಯಾಣೇ ಗುರುಲಿಂಗಜಂಗಮಕೃತೇ ದಾಸತ್ವಮಾಸಾದಿತಂ ।
ಕಲ್ಯಾಣಾಖ್ಯಪುರಾಧಿವಾಸ ಬಸವಂ ಭಕ್ತಾವತಂಸಂ ಭಜೇ ॥೧॥

ಗರ್ವಾರಣ್ಯಧನಂಜಯಂ ಸವಿನಯಂ ಧರ್ಮಾಬ್ಧಿ ಚಂದ್ರೋದಯಂ ।
ಸರ್ವಪ್ರಾಣಿಸುಖಾಲಯಂ ಶಿವಮಯಂ ದುರ್ಭಾಗ್ಯ ಭಾಗ್ಯೋದಯಂ ॥
ಶರ್ವಧ್ಯಾನ ಪರಾಯಣಂ ಶುಭನಯಂ ಭಾಗ್ಯಾಬ್ಜಭಾನೂದಯಂ ।
ಕಲ್ಯಾಣಾಖ್ಯಪುರಾಧಿವಾಸಬಸವಂ ಭಕ್ತಾವತಂಸಂ ಭಜೇ ॥ ೨॥

ಲಿಂಗಾಂಗೈಕ್ಯಸುಜಂಗಮಾವೃತಗೃಹಂ ಲಿಂಗಾಂಗಬೋಧಪ್ರದಂ ।
ರಂಗಾಜೀವವಿನಿರ್ಮಿತ ಪ್ರತಿಕೃತಿ ಪ್ರಾಣಪ್ರದಾನಪ್ರಭುಂ ॥
ಗಂಗಾಂಬಾಗಲಹಾರ ಮಂಗಲಮಣಿಂ ಸದ್ಭಕ್ತಚಿಂತಾಮಣಿಂ ।
ಕಲ್ಯಾಣಾಖ್ಯ ಪುರಾಧಿವಾಸಬಸವಂ ಭಕ್ತಾವತಂಸಂ ಭಜೇ ॥೩॥

ದಿಷ್ಟೇಲಾಗತಕೋಟಿಕುಪ್ಯನಿಚಯಂ ನಿರ್ದಿಷ್ಟಸನ್ಮಾರ್ಗಕಂ ।
ದಿಷ್ಟಾಂತರ್ಗತದುರ್ಲಿಪಿಪ್ರಶಮನ ಪ್ರಾವೀಣ್ಯಪ್ರಾಪ್ತೋನ್ನತಿಂ ॥
ದೃಷ್ಟ್ಯಾ ಪೂತ ಸಮಸ್ತವಸ್ತುಮಲಿನಂ ಮಾಹಾತ್ಮ್ಯಸಂಗೋಪನಂ ।
ಕಲ್ಯಾಣಾಖ್ಯ ಪುರಾಧಿವಾಸ ಬಸವಂ ಭಕ್ತಾವತಂಸಂ ಭಜೇ ॥೪॥

ಭೂಪಾಸ್ಥಾನವಿಭೂಷಭಾಷಣಚಣಂ ನಿರ್ಮಾನಿನಂ ಜ್ಞಾನಿನಂ ।
ಗೋಪೀಪೀನಪತತ್ಪಯೋಧರಧರಂ ಪಾಪಾಲಿರಕ್ಷಾಕರಂ ॥
ಪಾಪಾವೇಷ್ಟಿತ ಬಿಜ್ಜಲೇಂದ್ರನೃಪತಿಂ ಪಾಪೇನ ದೂರೀಕೃತಂ ।
ಕಲ್ಯಾಣಾಖ್ಯ ಪುರಾಧಿವಾಸ ಬಸವಂ ಭಕ್ತಾವತಂಸಂ ಭಜೇ ॥೫॥

ಪಂಚಸ್ಪರ್ಶ ವಿನಿರ್ಮಿತ ಪ್ರಪಂಚರಚನಂ ಪಂಚಾನನಾಂತಃಪುರಂ ।
ಪಂಚಾಸ್ತ್ರಾರಿ ಸಮಾನಭೂತಿರುಚಿರಂ ಪಂಚಾಸ್ತ್ರ ಹೃದ್ಭೀಕರಂ ॥
ಪಂಚಾಚಾರ್ಯಕೃತಂ ಸನಾತನಮತಂ ಸರ್ವಂ ಪ್ರಪಂಚೀಕೃತಂ ।
ಕಲ್ಯಾಣಾಖ್ಯ ಪುರಾಧಿವಾಸ ಬಸವಂ ಭಕ್ತಾವತಂಸಂ ಭಜೇ ॥೬॥

ಸಲ್ಲೀಲೋಲ್ಲಸಿತಾಲ್ಲಮಪ್ರಭುವರ ಪ್ರಾಪ್ತೋಪದೇಶಾದಿಕಂ ।
ಫುಲ್ಲಸ್ಫೂರ್ತಿರಸಾಮೃತಾದ್ರಿತತನುಂ ಲೀಲಾಬ್ಜಮಾಲಾಗಲಂ ॥
ಸಲ್ಲೀಲಾಸುಮವಲ್ಲರೀಂ ಮಲಹರೀಂ ನೀಲಾಂಬಿಕಾ ವಲ್ಲಭಂ ।
ಕಲ್ಯಾಣಾಖ್ಯ ಪುರಾಧಿವಾಸ ಬಸವಂ ಭಕ್ತಾವತಂಸಂ ಭಜೇ ॥೭॥

ಮಾಚೀದೇವ ಪ್ರಮುಖ ಶರಣಾನ್ವೇಷ್ಟಿತಂ ಶ್ರೀಪ್ರದೇವ
ರೇಚಯ್ಯಾದಿ ಪ್ರಮಥಗಣಸಂಘಾರ್ಚನಾಸಕ್ತಭಾವಂ ॥
ಭೂಚಕ್ರಾಚ್ಛಾಪ್ರಥಿತ ನವರತ್ನಾಭ ಮುಗ್ಧಾರ್ಯಜೀವಂ ।
ಕಲ್ಯಾಣಾಖ್ಯ ಪುರಾಧಿವಾಸ ಬಸವಂ ಭಕ್ತಾವತಂಸಂ ಭಜೇ ॥೮॥

ಸರ್ವೇಷ್ವಭ್ಯುದಯೈಷಿ ಮಂತ್ರಿ ಪದವೀ ಮಧ್ಯಾಸ್ಯ ಬಾಧೌಘಕಂ
ಗರ್ವಾಸಕ್ತ ಕುಯುಕ್ತಿಯುಕ್ತ ಪಿಶುನ ವ್ಯೂಹಾದ್ರಿ ಸಂದಾರಣಂ ।
ಸರ್ವಾಧಾರ ಧರಾಧರೇಂದ್ರ ಸಚಿವಂ ಶ್ರೀ ಸಂಗಮೇಶೈಕ್ಯಗಂ ।
ಕಲ್ಯಾಣಾಖ್ಯ ಪುರಾಧಿವಾಸ ಬಸವಂ ಭಕ್ತಾವತಂಸಂ ಭಜೇ ॥೯॥

ಅಭಿನವ ನವಭಕ್ತಿ ಸ್ಯೂತರತ್ನಸ್ರಜಾ ಯೋ ।
ಜಪತಿ ಯದಿ ಮನುಷ್ಯಃ ಪ್ರಾತರುತ್ಥಾಯ ನಿತ್ಯಂ ॥
ವ್ರಜತಿ ಶಿವ ಸಮೀಪಂ ಚೈಹಿಕಂ ಸರ್ವಸೌಖ್ಯಂ ।
ಶಿವಪುರ ಬಸವೇನ ಗ್ರಂಥಿತಾಪ್ರತ್ನರತ್ನೈಃ ॥೧೦॥



# ವೀರಶೈವ ಧರ್ಮ ಗ್ರಂಥ ಪ್ರಸಾರಕ ಸಂಘ ವಿಜಾಪುರ.

"ವೀರಶೈವ ಧರ್ಮ ಗ್ರಂಥ ಪ್ರಸಾರಕ ಸಂಘ ವಿಜಾಪುರ" ಎಂಬ ಹೆಸರಿನಿಂದ ಒಂದು ಸಂಸ್ಥೆಯು ವಿಜಾಪುರದಲ್ಲಿ ಸ್ಥಾಪಿಸಲ್ಪಟ ಸಂಗತಿಯ ಬಗ್ಗೆ ಶಿವಾನುಭವದ ಹಿಂದಿನ ಸಂಚಿಕೆಯಲ್ಲಿ ಮಾಡಿದ ಉಲ್ಲೇಖವು ವಾಚಕರ ನೆನಸಿನಲ್ಲಿ ಇರಬಹುದು. ಈ ಸಂಘವು ಈ ವರೆಗೆ ಮಾಡಿದ ಕಾರ್ಯಗಳನ್ನು ನಾವು ಇಲ್ಲಿ ವಿವರಿಸುತ್ತೇವೆ.

ಗ್ರಂಥ ಪ್ರಕಟನಾ ಕಾರ್ಯವನ್ನು ಕೈಕೊಳ್ಳುವ ಪೂರ್ವದಲ್ಲಿ ಗ್ರಂಥಗಳನ್ನು ಗೊತ್ತು ಹಚ್ಚುವದೂ, ಸಂಗ್ರಹಿಸುವದೂ, ಅತ್ಯಾವಶ್ಯಕವಾದವುಗಳು. ಈ ಕಾರ್ಯವನ್ನು ನಾವು ಈಗ ಕೈಕೊಂಡಿದ್ದು, ಇದರಲ್ಲಿ ಕೆಳಗೆ ಕಾಣಿಸಿದ ಸಭ್ಯ ಗೃಹಸ್ಥರು ನಮಗೆ ಮಹತ್ವದ ಸಹಾಯವನ್ನು ಮಾಡಿರುವರು.

(೧) ಶ್ರೀಮಜ್ಜಗದ್ಗುರು ಮರುಳ ಸಿದ್ಧ ದೇಶಿಕೇಂದ್ರ ಮಹಾ ಸ್ವಾಮಿಗಳು ಉಜ್ಜನಿ ಇವರು ಲಿಂಗಲೀಲಾವಿಲಾಸ ಎಂಬ ಗ್ರಂಥವನ್ನು ಕಳಿಸಿರುವರು.

(೨ ಮಿ॥ ಬಿ. ಬಸವಾರಾಧ್ಯ ಬಿ. ಎ. ಬಿ. ಎಲ್ ಬೆಂಗಳೂರ ಇವರು ಸ್ವಹಸ್ತಾಕ್ಷರದಿಂದ ಬರೆದ ಕೆಲವು ವಚನ ಗ್ರಂಥಗಳನ್ನು ಕಳಿಸಿದ್ದಾರೆ.

(೩) ರಾ। ರಾ। ಮಂಜಪ್ಪ ಹರ್ಡೇಕರ ಇವರು ತಮ್ಮ ಪ್ರವಾಸದಲ್ಲಿ ಹತ್ತರಕಿ ಮತ್ತು ನಿಡಗುಂದಿ ಈ ಗ್ರಾಮಗಳಲ್ಲಿ ತಮಗೆ ಸಿಕ್ಕ ಗ್ರಂಥಗಳನ್ನು ಕಳಿಸಿರುವರು.

(೪) ಮಿ. ಟಿ. ಎಚ್. ಎಮ್. ಸದಾಶಿವಯ್ಯ ಎಮ್. ಏ ಇವರು ಮದ್ರಾಸ ಓರಿಎಂಟಲ್ ಲಾಯಬ್ರರಿಯಲ್ಲಿ ಕೆಳಗೆ ಕಾಣಿಸಿದ ಆಗಮ ಗ್ರಂಥಗಳಿರುವವೆಂದು ನಮಗೆ ತಿಳಿಸಿರುವರು. ಅವು ಯಾವವೆಂದರೆ:-ಕಾಮಿಕ, ಮಕುಟ, ಯೋಗಜ, ಪಾರಮೇಶ್ವರ, ಸುಪ್ರಭೇದ, ವಾತುಲ, ವೀರ, ವೀರಾಗಮ ರಹಸ್ಯ, ಸಕಲಾಗಮ ಸಂಗ್ರಹ, ವೀರಶೈವಾಗಮ.

(೫) ಇವೇ ಮೇರೆಗೆ ಪೌಷ್ಕರಾಗಮವು ಶ್ರೀಮನ್ನಿರಂಜನ ಜಗದ್ಗುರು ಶ್ರೀಗುರುಸಿದ್ಧಸ್ವಾಮಿಗಳು ಹುಬ್ಬಳ್ಳಿ ಮಹಾ ಸ್ವಾಮಿಗಳವರ ಮಠದಲ್ಲಿ ಇದ್ದ ಹಾಗೆ ತಿಳಿಯುತ್ತದೆ.

(೬) ರಾ। ರಾ। ಮಡಿವಾಳಪ್ಪಾ ಅಂಗಡಿ ಸಾ॥ ಕೊಂಡಗುಳಿ ತಾ॥ ಸಿಂದಿಗಿ ಇವರು ಪ್ರಭುದೇವರ ಭೋಧಪರ ವಚನ ಎಂಬ ಗ್ರಂಥವನ್ನು ಕಳಿಸಿರುವರು.

(೭) ರಾ। ರಾ। ಬಸಲಿಂಗಪ್ಪ ಕಿಣಗಿ ಸಾ॥ ಬಾಗಲಕೋಟೆ ಇವರು ಶ್ರೀಸಿದ್ಧರಾಮೇಶ್ವರ ವಚನಗಳನ್ನು ಕಳಿಸಿರುವರು.

(೮) ಮಿ. ಅಂದಾನೆಪ್ಪ ಶೆಟ್ಟಿ ಬಿ. ಏ. ಅಥಣಿ ಇವರು ಅನೇಕ ಗ್ರಂಥಗಳುಳ್ಳ ಒಂದು ಕಟ್ಟನ್ನೇ ಕಳಿಸಿರುವರು.

(೯) ರಾ। ರಾ। ಮಡಿವಾಳಪ್ಪ ಸಾಸನೂರ ಮಾಸ್ತರ ಕಲಕೇರಿ ಇವರು ಕಡಕೋಳ ಮಡಿವಾಳಯ್ಯನವರ ವಚನಗಳನ್ನು ಕಳಿಸಿರುವರು.

(೧೦) ಇದೇ ಗ್ರಂಥವನ್ನು ರಾ॥ ರಾ॥ ಬಸಪ್ಪ ಕೆಂಭಾವಿ ಸಾ॥ ಕೋಡಗುಳಿ ಇವರು ಕಳಿಸಿದ್ದಲ್ಲದೆ ತಮಗೆ ಮೊಗಲಾಯಿಯಲ್ಲಿ ದೊರೆದ ನಾಲ್ಕಾರು ಗ್ರಂಥಗಳನ್ನು ತಂದು ಕೊಟ್ಟಿರುವರು.

(೧೧) ರಾ। ರಾ। ಈಶ್ವರಪ್ಪ ಸೌದಿ, ಸಾಕೀನ ಆದವಾನಿ ಈ ಮಹನೀಯರ ಹತ್ತರ ಅನೇಕ ಗ್ರಂಥಗಳಿದ್ದು ಅವರು ಅವುಗಳ ಪಟ್ಟಿಯೊಂದನ್ನು ನಮ್ಮ ಕಡೆಗೆ ಕಳಿಸಿದ್ದಾರೆ. ಅವುಗಳಲ್ಲಿ ನಮಗೆ ಅವಶ್ಯ ಇದ್ದ ಗ್ರಂಥಗಳನ್ನು ಕೇಳಿದಾಕ್ಷಣವೇ ಪೋಷ್ಟಿನಿಂದ ಕಳಿಸುತ್ತ ಬಂದಿದ್ದಾರೆ.

(೧೨) ಶ್ರೀಲಿಂಗಾನಂದ ಶರಣ ಸಾ॥ ಗುಂಡಗುರ್ಕಿ ಜಿ॥ ಕಲಬುರ್ಗಿ ಈ ಮಹಾನುಭಾವರು ನಮಗೋಸ್ಕರ ಕೆಲವು ವಚನ ಗ್ರಂಥಗಳನ್ನು ಬರೆದು ಕಳುಹಿಸಲು ಮುಂದಾಗಿದ್ದಾರೆ.

(೧೩) ಬಾಗಲಕೋಟೆಯಲ್ಲಿಯ ತೆಂಗಿನ ಮಠದಲ್ಲಿ ಅನೇಕ ಗ್ರಂಥಗಳು ಇದ್ದು ಅವುಗಳಲ್ಲಿ ನಮಗೆ ಅವಶ್ಯ ಬಿದ್ದ ಕೆಲವು ಗ್ರಂಥಗಳನ್ನು ಕಳುಹಿಸಿದ್ದಾರೆ.

(೧೪) ಶ್ರೀಶಿವಯೋಗ ಮಂದಿರದ ಗ್ರಂಥಾಲಯದಿಂದ ನಮಗೆ ಬಹಳ ಸಹಾಯವಾಗುತ್ತಲಿದೆ. ನಾವು ಈಗ ಬಸವೇಶ್ವರನ ವಚನಗಳನ್ನು ಅತೀ ಶುದ್ಧವಾಗಿ ಎರಡನೆಯ ಆವೃತ್ತಿ ಅಚ್ಚು ಹಾಕುವ ಬಗ್ಗೆ ವಿಶೇಷತರದ ಪ್ರಯತ್ನಗಳು ನಡೆಯಿಸಿದ್ದೇವೆ. ಆದ್ದರಿಂದ ಕೆಲವು ಬಸವೇಶ್ವರ ವಚನ ಗ್ರಂಥಗಳನ್ನು ಮಂದಿರದವರು ಕಳಿಸಿದ್ದಾರೆ.

(೧೫) ಮಿ॥ ಎಸ್. ನಂಜುಂಡಾರಾಧ್ಯ ಕ್ಲಾರ್ಕ ಭದ್ರಾವತಿ ಜಿ॥ ಶಿವಮೊಗ್ಗಾ ಇವರು ತಮ್ಮಲ್ಲಿಯ ಷಟ್ಸ್ಥಲ ಸಂಬಂಧದ ಮೂರು, ನಾಲ್ಕು

ಗ್ರಂಥಗಳನ್ನು ಕಳಿಸಿರುವರು.

(೧೬) ಶ್ರೀ. ಅನ್ನದಾನಿ ಸ್ವಾಮಿಗಳು ಮು|| ಅಂಬೂರ ಜಿಲ್ಹಾ ನಾರ್ಥಅರ್ಕಾಟ ಇವರು ತಮಲ್ಲಿ ಇದ್ದ ಪದ್ಯ ಸಂಗ್ರಹಗಳನ್ನು ಕಳಿಸಿರುವರು.

(೧೭) ಶ್ರೀ ಮೂ|| ಬುದ್ಧಯ್ಯ ಪುರಾಣಿಕ ಇವರು ಬೀಳಗಿ ಪೇಠಾದಲ್ಲಿ ತಮಗೆ ಸಿಕ್ಕ ಗ್ರಂಥಗಳನ್ನು ಮೇಲಿಂದ ಮೇಲೆ ಕಳಿಸುತ್ತಲಿದ್ದಾರೆ.

(೧೮) ಶ್ರೀ ಮೂ|| ಮುರಗಯ್ಯನವರು ಮಾಸ್ತರ ಮು|| ತೇರಗಾವ ಜಿ|| ಕಾರವಾರ ಇವರು ತಮ್ಮಲ್ಲಿದ್ದ ನಾಲ್ಕಾರು ಗ್ರಂಥಗಳನ್ನು ಕಳಿಸಿರುವರು.

(೧೯) ಮಿ. ಕೃಷ್ಣರಾವ್ ಕಪಟ್ರಾಳ್ ವಕೀಲ ಗುಲಬುರ್ಗಾ ಇವರು ತಮ್ಮಲ್ಲಿದ್ದ ವಚನ ಗ್ರಂಥವನ್ನು ಕಳಿಸಿದ್ದಾರೆ. ಅಲ್ಲದೆ ತಮ್ಮ ಭಾಗದ ಅನೇಕ ಐತಿಹಾಸಿಕ ಶೋಧಗಳನ್ನು ನಡೆಯಿಸಿದ್ದಾರೆ.

(೨೦) ಮಿ ಬೆನಗಲ್ ರಾಮರಾವ ಎಮ್. ಎ. ಕನ್ನಡ ಟ್ರಾನ್ಸಲೇಟರ ಮುದ್ರಾಸ ಇವರು ಮುದ್ರಾಸ ಓರಿ ಎಂಟಲ್ ಲಾಯಬ್ರರಿಯಲ್ಲಿಯ "ಬೀಳಗಿ ಅರಸರ ವಂಶಾವಳಿ" ಎಂಬ ಗ್ರಂಥವನ್ನು ನಕಲು ಮಾಡಿಸಿ ಅತಿ ಪರಿಶ್ರಮದಿಂದ ಶುದ್ಧಗೊಳಿಸಿ ಶಿವಾನುಭವದಲ್ಲಿ ಅಚ್ಚು ಹಾಕಿಸುತ್ತಲಿದ್ದಾರೆ. ಅದು ಈಗ ಶಿವಾನುಭವದಲ್ಲಿ ಅಚ್ಚಾಗುತ್ತಲಿದೆ.

(೨೧) ರಾ| ರಾ| ಆಲೂರ ವೆಂಕಟರಾಯರು ಹರಳಯ್ಯ ಮಧುವರಸರ ಒಂದು ಕಾವ್ಯವನ್ನು ಕಳಿಸಿದ್ದಾರೆ.

(೨೨) ವೇದಾಂತ ಸಾರ ವೀರಶೈವ ಚಿಂತಾಮಣಿ ಎಂಬ ಸಂಸ್ಕೃತ ಗ್ರಂಥವು ಗೋಕಾವಿಯಲ್ಲಿ ದೊರೆದದೆ. ಅದರ ಉತ್ತರಾರ್ಧ ಕೈ. ವಾ. ರಾ. ಬಾ. ವಾರದ ಇವರು ಅಚ್ಚುಹಾಕಿದ್ದು ಅದರ ಪೂರ್ವಾರ್ಧವನ್ನು ಅಚ್ಚು ಹಾಕುವದು ಅವಶ್ಯವಿದೆ.

ಈ ಮೇರೆಗೆ ಗ್ರಂಥ ಶೋಧನೆಯ ಕಾರ್ಯವು ಈ ಅವಧಿಯಲ್ಲಿ ಆಗಿರುತ್ತದೆ. ಇದೇ ಮೇರೆಗೆ ಇತಿಹಾಸ ಸಂಶೋಧನ ಕಾರ್ಯಕ್ಕೋಸ್ಕರವೂ ಕೆಳಗೆ ಕಾಣಿಸಿದಂತೆ ಪ್ರಯತ್ನಗಳಾಗಿವೆ.

(೧) ರಾ| ರಾ| ಗೊಲ್ಲಾಳ ಪೂಜಾರಿ ಸಾ|| ಕಲಕೇರಿ ಇವರು ಸುರಪೂರ ತಾಲೂಕಿನಲ್ಲಿ ಏಪೂರ, ಮತ್ತು ಮುದನೂರ ಗ್ರಾಮಗಳಲ್ಲಿಯು ಮತ್ತು ಕಲಕೇರಿಯಲ್ಲಿಯು ಶಿಲಾಶಾಸನಗಳನ್ನು ಓದಿ ಬರೆದು ನಮ್ಮ ಕಡೆಗೆ ಕಳಿಸಿದ್ದಾರೆ.

(೨) ಶ್ರೀ ಮೂ॥ ರಾಚಯ್ಯ ಹಿರೇಮಠ ಪಾರ್ಶ್ವವಾಡ ಇವರು ಕಿತ್ತೂರ ಸಂಸ್ಥಾನದ ಕಾಗದ ಪತ್ರಗಳು ಸಿಗಬಹುದಾದ ಸ್ಥಳಗಳನ್ನು ತಿಳಿಸಿದ್ದಾರೆ.

(೩) ರಾ। ರಾ। ಮಲ್ಲಪ್ಪ ಸಜ್ಜನ ಸಾಕೀನ ಹೂಲಿ. ತಾ॥ ಸವದತ್ತಿ ಇವರು ತಮ್ಮ ಭಾಗದಲ್ಲಿರುವ ಶಿಲಾಲೇಖ ಮೊದಲಾದವುಗಳನ್ನು ಸಂಗ್ರಹಿಸಿ ಕಳಿಸಿ ಕೊಡಲು ಒಪ್ಪಿಕೊಂಡಿದ್ದಾರೆ.

(೪) ರಾ। ರಾ। ಚನಮಲ್ಲಪ್ಪ ಗಲಗಲಿ ಮು॥ ಹಲಸಂಗಿ ಇವರು ಶಿಲಾಲೇಖಗಳನ್ನು ಓದುವ ಕಾರ್ಯದಲ್ಲಿ ಸಹಾಯವಾಗಲು ಅಭಿವಚನವನ್ನು ಕೊಟ್ಟಿರುವರು.

(೫) ಅದೇ ಮೇರೆಗೆ ವೇ ಚಂದ್ರಶೇಖರ ಶಾಸ್ತ್ರಿಗಳು ಮು॥ ಯಾದಗಿರಿ ಇವರು ತಮ್ಮ ಭಾಗದಲ್ಲಿಯ ಶಿಲಾಶಾಸನಗಳ ನಕಲುಗಳನ್ನು ಸಂಗ್ರಹಿಸಲು ಒಪ್ಪಿರುವರು.

ಶಿಲಾಶಾಸನಗಳ ನಕಲು ಮಾಡಲಿಕ್ಕೆ ಒಂದು ವಿಶೇಷ ತರದ ಬ್ರಶ್ ಮತ್ತು ಮಸೀ ಹಚ್ಚುವ ಗಾದಿ ಬೇಕಾಗಿದ್ದು ಅವುಗಳನ್ನು ಮದ್ರಾಸದಲ್ಲಿಯ ಒಂದು ಕಂಪನಿಯಿಂದ ತರಿಸಿದ್ದೇವೆ. ಅವು ಈಗ ಬಂದಿದ್ದು ಅವುಗಳು ಈ ಕಾರ್ಯ ಮಾಡುವಂಥವರ ಉಪಯೋಗಕ್ಕೆ ಕೊಡಲ್ಪಡುವವು.

ಮೇಲ್ಕಂಡ ವಿವರಣೆಯಿಂದ ಕರ್ನಾಟಕದ ಎಲ್ಲ ಕಡೆಯ ಭಾಗದ ಜನರು ದಕ್ಷಿಣಕ್ಕೆ ಮದ್ರಾಸ ಆಂಬೂರನಿಂದ ಉತ್ತರಕ್ಕೆ ಕಲಬುರ್ಗೆವರೆಗೆ ಮತ್ತು ಪೂರ್ವಕ್ಕೆ ಆದವಾನಿಯಿಂದ ಪಶ್ಚಿಮಕ್ಕೆ ಕಾರವಾರದವರೆಗೆ ಅನೇಕ ಮಹಾನುಭಾವರು ನಮ್ಮ ಈ ಕಾರ್ಯದಲ್ಲಿ ಸಹಾನುಭೂತಿಯನ್ನು ವಹಿಸಿ ನಮಗೆ ಅತ್ಯಂತವಾಗಿ ಸಹಾಯ ಮಾಡುತ್ತಲಿರುವದು ಕೂಡಲೇ ಗೊತ್ತಾಗುತ್ತದೆ. ಈ ಮಹನೀಯರ ಉಪಕಾರವನ್ನು ಎಷ್ಟು ಬಣ್ಣಿಸಿದರೂ ಅಲ್ಪವೇ ಸರಿ. ಇದೇಮೇರೆಗೆ ಅನೇಕ ಮಹನೀಯರು ತಮ್ಮ ಶೋಧಗಳನ್ನು ಶಿವಾನುಭವದಲ್ಲಿ ಪ್ರಕಟಿಸುತ್ತಲಿದ್ದಾರೆ. ಈ ಮೇರೆಗೆ ಧರ್ಮಗ್ರಂಥ ಸಂಗ್ರಹ ಮತ್ತು ಇತಿಹಾಸ ಸಂಶೋಧನ ಈ ಪ್ರಯತ್ನಗಳು ಈಗ ಮೆಲ್ಲಗೆ ಯಶಸ್ಸನ್ನು ಹೊಂದುತ್ತ ನಡೆದಿರುತ್ತವೆಂಬದು ವಾಚಕರ ನಿದರ್ಶನಕ್ಕೆ ಬರಬಹುದು. ಶಿವಾನುಭವವು ಯಾವ ಪಕ್ಷಕ್ಕೂ ಹೊಂದಿದ್ದು ಇರುವದಿಲ್ಲ. ಸ್ವತಂತ್ರ ವಿಚಾರ ಮತ್ತು ಶೋಧ ಇವುಗಳಿಂದ ಕೂಡಿಕೊಂಡು ಸಮಂಜಸವಾಗಿ ಬರೆದ ಯಾವ ಲೇಖಗಳಿಗಾದರೂ ಈ ಪತ್ರಿಕೆಯಲ್ಲಿ ಇಂಬುದೊ

ರೆದಿರುತ್ತದೆ. ಆದರೆ ಲೇಖಗಳಲ್ಲಿ ಕಾಣಿಸಿದ ವಿಚಾರಗಳಿಗೆ ಲೇಖಕರೇ ಜವಾಬುದಾರರು ಹೊರ್ತು ಅವುಗಳಿಗೆ ಸಂಪಾದಕರು ಜವಾಬುದಾರರಲ್ಲ ಎಂಬದನ್ನು ಇಲ್ಲಿ ಹೇಳುವದು ಅವಶ್ಯವಿದೆ.

ಆದರೆ ಸಂಘದ ಉದ್ದೇಶವು ಕೊನೆಗಾಣಬೇಕಾದರೆ ಫಂಡಿನ ಸಹಾಯವು ಅತ್ಯವಶ್ಯವು. ಇಲ್ಲದೆ ಹೋದರೆ ನಾವು ಮಾಡುತ್ತಲಿರುವ ಕಾರ್ಯಗಳೆಲ್ಲವೂ ಅಲ್ಲಿಯೇ ಕುಂಠಿತವಾಗಿ ಹೋಗುವ ಸಂಭವವವಿದೆ. ಅದರಂತೆಯೇ ಶಿವಾನುಭವ ಪತ್ರಿಕೆಯನ್ನು ಕಾಯುವದೂ ಅವಶ್ಯವು. ಇಲ್ಲದಿದ್ದರೆ, ಈ ಪ್ರಯತ್ನಗಳ ಜೀವವೇ ನಷ್ಟವಾಗುವದು. ಈ ಪತ್ರಿಕೆಯು ಈ ಎಲ್ಲ ಪ್ರಯತ್ನಗಳನ್ನು ಕೇಂದ್ರೀ ಕರಿಸುವ ಕಾರ್ಯವನ್ನು ಮಾಡುತ್ತಲಿದೆ.

ಆದ್ದರಿಂದ ವೀರಶೈವ ಸಮಾಜದ ಪುರೋವೃದ್ಧಿಯನ್ನು ಅಪೇಕ್ಷಿಸುವವರೆಲ್ಲರೂ ಸಂಘದ ಕಾರ್ಯಕ್ಕೆ ಲಕ್ಷ ಕೊಡಬೇಕೆಂದು ನಮ್ಮ ಸವಿನಯ ಸೂಚನೆ ಇದೆ. ಈ ವಿಷಯದಲ್ಲಿ ಕೆಲವು ಮಹನೀಯರು ನಮಗೆ ಬಹಳ ಸಹಾಯ ಮಾಡುತ್ತಲಿದ್ದಾರೆ. ಸಂಘವು ಸ್ಥಾಪಿತವಾದಬಳಿಕ ರಾ। ರಾ। ಗಂಗಾಧರಪ್ಪ ಸಾಬೋಜಿ ಸಾಕೀನ ಬೆಳಗಾವ ಇವರು ೫೦೦ ರೂಪಾಯಿಗಳ ವರೆಗೆ ಹಣವನ್ನು ಕೊಡಲು ಒಪ್ಪಿದ್ದಾರೆ. ಮತ್ತು ರಾ। ರಾ। ನ್ಹಿ. ಬಿ. ಹಾಲಭಾವಿ ಸಬಜಜ್ಜ ವಿಜಾಪುರ ಇವರು ೧೦೦ ರೂಪಾಯಿ ರೋಖ ನಮಗೆ ಕೊಟ್ಟಿರುತ್ತಾರೆ. ಶಿ॥ ಮೂ॥ ಬಿ. ಶಿವಮೂರ್ತಿ ಶಾಸ್ತ್ರಿಗಳು ಕೀರ್ತನಕಾರ ಸಾ॥ ತುಮಕೂರ ಇವರು ತಾವು ಹೋದಲ್ಲೆಲ್ಲ ಶಿವಾನುಭವಕ್ಕೆ ಅನೇಕ ವರ್ಗಣೀದಾರರನ್ನು ಕೂಡಿಸಿ ಕೊಟ್ಟಿರುತ್ತಾರೆ. ಇವರು ನಮಗೆ ಮಾಡುತ್ತಿರುವ ಸಹಾಯವು ಬಹಳವಾಗಿದೆ. ಈ ಯಾವತ್ತು ಸಭ್ಯ ಗೃಹಸ್ಥರಿಗೆ ನಾವು ಬಹಳ ಆಭಾರಿಯಾಗಿದ್ದೇವೆ. ಇವರಂತೆಯೇ ಎಲ್ಲರೂ ನಮಗೆ ನೆರವಾಗಬೇಕೆಂದು ನಾವು ಸವಿನಯ ಪೂರ್ವಕ ಪ್ರಾರ್ಥಿಸುತ್ತೇವೆ. ಸಂಘದ ನಿಯಮಗಳು ಯಾರಿಗೆ ಬೇಕೋ ಅವರು ನಮಗೆ ತಿಳಿಸಿದಲ್ಲಿ ಅವುಗಳನ್ನು ಕಳಿಸಿಕೊಡುತ್ತೇವೆ.

ತಾ|| ೧೦ ೬-೨೨

ಫ ಗು. ಹಳಕಟ್ಟಿ.
ಚೇರಮನ್

ಶಿವಾನುಭವ ಗ್ರಂಥಮಾಲಾ ನಂ॥ ೧೨



# ಸಂಗನ ಬಸವೇಶ್ವರ

## ವಚನಗಳು.



ಸಂಪಾದಕರು

ರಾ॥ ಸಾ॥ ಫ. ಗು. ಹಳಕಟ್ಟಿ

ಬಿ. ಎ. ಎಲ್ ಎಲ್, ಬಿ. ವಕೀಲ.



ವಿಜಾಪುರ.

೧೯೨೬

ಬೆಲೆ ೧೦ ಆಣೆ.

# ಪ್ರಸ್ತಾವನೆ.



ವೀರಶೈವರಲ್ಲಿ ಪ್ರಚಲಿತವಿರುವ ಆಚಾರಗಳಲ್ಲಿ ಗರ್ಭಿತಾರ್ಥವಿದ್ದು, ಅವು ಅತ್ಯಂತ ಭಾವನಾಮಯವಾಗಿರುತ್ತವೆ. ಇವುಗಳ ಮರ್ಮವನ್ನು ಅರಿಯಲು ಸಂಗನಬಸವೇಶ್ವರ ವಚನವು ಬಹಳ ಉಪಯುಕ್ತವಿದೆ. ಈಗಿನ ದಿವಸಗಳು ವಿಚಾರ ಪ್ರಾಧಾನ್ಯವಾದವುಗಳು. ಜನರು ವಿಚಾರಕ್ಕೆ ಯಾವದು ಸಮರ್ಪಕವೋ ಅದನ್ನೇ ಅನುಸರಿಸುವವರಾಗಿರುವರು. ಆದ್ದರಿಂದ ಈ ಪ್ರವೃತ್ತಿಗೆ ಅನುಗುಣವಾಗಿಯೇ ಧಾರ್ಮಿಕ ತತ್ವಗಳ ವಿವೇಚನೆಯು ಅವಶ್ಯವು ವೀರಶೈವ ಆಚರಣೆಗಳ ಬಗ್ಗೆ ಜನರಲ್ಲಿ ನಾನಾವಿಧ ಕುತ್ಸಿತ ವಿಚಾರಗಳು ಮಾಡಿಕೆಯಾಗಿರುತ್ತವೆ. ಈ ಸ್ಥಿತಿಯನ್ನು ದೂರ ಮಾಡಬೇಕಾದರೆ ಅವುಗಳ ನಿಜವಾದ ಮರ್ಮವನ್ನು ಕಂಡು ಹಿಡಿದು ಅವುಗಳನ್ನು ಪ್ರಸಾರ ಪಡಿಸುವದೇ ಯೋಗ್ಯ ಮಾರ್ಗವು. ವಚನಕಾರರು ತಮ್ಮ ಉಕ್ತಿಗಳಲ್ಲಿ ವೀರಶೈವಾಚಾರಗಳ ಮರ್ಮಗಳನ್ನು ತಿಳಿಸಲಿಕ್ಕೆ ಮೇಲಿಂದಮೇಲೆ ಪ್ರಯತ್ನಿಸಿದ್ದು ಕಂಡುಬರುತ್ತದೆ. ಆದರೆ ವಚನಗ್ರಂಥಗಳ ಅಭ್ಯಾಸವು ಇತ್ತಿತ್ತ ವೀರಶೈವ ಸಮಾಜದಲ್ಲಿ ನಿಂತು ಹೋಗಿರುವದರಿಂದ ಇವುಗಳು ಜನರಿಗೆ ತಿಳಿಯದೆ ಹೋಗಿವೆ. ವೀರಶೈವರಲ್ಲಿ ಅಷ್ಟಾವರಣಗಳು ಅತ್ಯಂತ ಮಹತ್ವವಾದ ಆಚಾರ ವಿಷಯಕ ವಿಷಯಗಳು. ಇವುಗಳ ಬಗ್ಗೆ ಇತ್ತೀಚಿಕೆ ಅನೇಕ ಪುಸ್ತಕಗಳು ಬರೆಯಲ್ಪಟ್ಟವೆ. ಆದರೆ ಈ ಆವರಣಗಳ ಸ್ಥೂಲ ಕ್ರಮಗಳು ಮಾತ್ರ ಅವುಗಳಲ್ಲಿ ಹೆಚ್ಚಾಗಿ ನಿರ್ದೇಶಿಸಲ್ಪಟ್ಟಿದ್ದು ಕಂಡು ಬರುತ್ತದೆ ಹೊರ್ತು ಅವುಗಳ ಮರ್ಮಗಳನ್ನು ತಿಳಿಸುವ ಬಗ್ಗೆ ಪ್ರಯತ್ನಗಳಾದದ್ದು ತೋರಿಬರುವದಿಲ್ಲ. ಅಷ್ಟಾವರಣಗಳ ಅಂತರ್ಯ ವಿಚಾರಗಳು ಈ ಅಚ್ಚು ಹಾಕಿದ ಸಂಗನಬಸವೇಶ್ವರ ವಚನಗಳಲ್ಲಿ ವಿಶೇಷವಾಗಿ ಬಂದಿವೆ. ಇವರಲ್ಲಿ ದೀಕ್ಷಾವಿಧಿಯ ತತ್ವಗಳು, ಎಂಟು ಆವರಣಗಳ ವಿಚಾರಗಳು, ಸಮಾಧಿಯ ವಿಧಗಳು, ನವಲಿಂಗಪೂಜೆಯ ಕ್ರಮವು, ಅಂತ್ಯವಿಧಿ ಮೊದಲಾದ

ಅನೇಕ ಮಹತ್ವದ ವಿಷಯಗಳ ಬಗ್ಗೆ ಮಾರ್ಮಿಕ ವಿಚಾರಗಳು ಬಂದಿವೆ. ಓದುವವರಿಗೆ ಈ ವಿಚಾರಗಳು ಕ್ಲಿಷ್ಟವಾಗಿ ಕಾಣಬಹುದು. ಇದಕ್ಕೆ ಕಾರಣವು ಷಟ್‌ಸ್ಥಲದ ವಿಚಾರಗಳ ಬಗ್ಗೆ ಅವರಲ್ಲಿರುವ ಅಜ್ಞಾನವೇ ಮುಖ್ಯವಿರುತ್ತದೆ. ಆದರೆ ಈ ವಿಚಾರಗಳ ತಿಳುವಳಿಕೆಯಾದೊಡನೆಯೇ ಈ ಗ್ರಂಥದಲ್ಲಿಯ ಅಷ್ಟಾವರಣ ವಿಚಾರಗಳೂ ಅವರಿಗೆ ಸುಲಭವಾಗಹತ್ತುತ್ತವೆ. ಆದ್ದರಿಂದ ವಾಚಕರು ಈ ಗ್ರಂಥವನ್ನು ನಿರಾಕರಿಸದೆ, ಓದಿ ಅಭ್ಯಾಸ ಮಾಡಿ ಅದರಲ್ಲಿಯ ವಚನಗಳ ಮರ್ಮವನ್ನು ತಿಳಿಯಲಿಕ್ಕೆ ಯತ್ನಿಸಬೇಕೆಂದು ನನ್ನ ಸೂಚನೆ ಇದೆ. ಈ ಗ್ರಂಥದ ಒಂದೇ ಪ್ರತಿಯು ನನಗೆ ದೊರೆತದ್ದರಿಂದ ಇದರ ಶುದ್ಧ ಪ್ರತಿಯನ್ನು ಮಾಡಿ ಅಚ್ಚು ಹಾಕುವದು ನನಗೆ ದುಸ್ತರವಾಯಿತು. ಸಂಸ್ಕೃತ ಶ್ಲೋಕಗಳು ಅಶುದ್ಧವಾಗಿರುತ್ತವೆ. ಈ ಎಲ್ಲ ಸಂಗತಿಗಳು ಅಪರಿಹಾರ್ಯವಾದವುಗಳಾಗಿವೆ. ಆದ್ದರಿಂದ ವಾಚಕರು ಈ ಬಗ್ಗೆ ಕ್ಷಮಿಸಬೇಕೆಂದು ನನ್ನ ವಿನಂತಿ ಇದೆ. ಈ ವಚನದ ಗ್ರಂಥಕಾರನು ಯಾರು ಮತ್ತು ಯಾವಾಗ್ಗೆ ಇದ್ದನು ಎಂಬದನ್ನು ನಿಶ್ಚಿತವಾಗಿ ತಿಳಿಯಲು ಸಾಧ್ಯವಿಲ್ಲ. ಆದರೂ ಈ ವಿಷಯಗಳನ್ನು ತಿಳಿಸತಕ್ಕ ಕೆಲವು ವಚನಗಳು ಈ ಗ್ರಂಥದಲ್ಲಿ ಬಂದಿವೆ.ಅವುಗಳನ್ನು ವಾಚಕರು ವಿಚಾರ ಮಾಡಿ ಈ ವಿಷಯಗಳ ನಿರ್ಧಾರ ಮಾಡುವ ಭಾರವನ್ನು ಅವರ ಕಡೆಗೆ ಬಿಡುತ್ತೇನೆ.

ವಿಜಾಪುರ
೧೪-೪-೨೭

**ಫ. ಗು. ಹಳಕಟ್ಟಿ**

ಜ್ಯೋತಿ ಚಿದ್ಘನ ಮಹಾಲಿಂಗವ ಪ್ರಮಾಣಿಸಿ ನೋಡಿಹೆನೆಂದವರಿಗೆ ಅತ್ಯ ತಿಷ್ಠದ್ದಶಾಂಗುಲವಾಗಿರ್ಪುದು ನೋಡಾ ಸಂಗನಬಸವೇಶ್ವರಾ.

## ಮಂತ್ರ ಮಹಾತ್ಮೆ.

೨. ಶ್ರೀಮಹಾಮಂತ್ರ ಜಪಿಸಿದಾತಂಗೆ ಮರ್ತ್ಯಲೋಕ ಮೊದಲಾಗಿ ಆವಲೋಕದಲ್ಲಿ ಹೋದರೂ ಸಮಸ್ತ ಲಿಂಗಭೋಗ ದೊರೆವುದಯ್ಯ. ಮಹಾಮಂತ್ರವ ಜಪಿಸಿದಾತಂಗೆ ಸಮಸ್ತ ಲೋಕದಲ್ಲಿ ಸತ್ಯ ಸಾತ್ವಿಕ ಪರೋಪಕಾರ ಸುಗುಣ ದೊರೆವುದಯ್ಯ. ಶ್ರೀಮಹಾಮಂತ್ರವ ಜಪಿಸಿದಾತಂಗೆ ಸಾರ ಸದ್ಭಕ್ತಿ ದೊರೆವುದಯ್ಯ. ಕ್ಷಮೆ ದಮೆ ಶಾಂತಿ ಸೈರಣೆ ಸತ್ಕ್ರಿಯಾಜ್ಞಾನ ಸದಾಚಾರ ದೊರೆವುದಯ್ಯ. ಶ್ರೀಮಹಾಮಂತ್ರವ ಜಪಿಸಿದಾತಂಗೆ ನಿಜ ಶಿವಯೋಗ ದೊರೆವುದಯ್ಯ. ಅದೆಂತೆಂದೊಡೆ "ಅಪವಿತ್ರ ಪವಿತ್ರೋವಾ ಸರ್ವವಸ್ತು ಗತೋಪಿವಾ। ಸ್ಮರೇನ್ನಮಃ ಶಿವಾಯೇತಿ ಪಾಪ ಪ್ರಲೀಯತೇ॥೧॥ ಸಪ್ತಕೋಟಿ ಮಹಾಮಂತ್ರ ಉಪಮಂತ್ರ ಸ್ತ್ವನೇಕತಃ। ಮುಖ್ಯಂ ನಮಃ ಶಿವಾಯೇತಿ ಮಂತ್ರ ಸ ರೋಚ್ಯತೇ॥ ಎಂದುದಾಗಿ ಮಹಾಮಂತ್ರವೆ ಸಕಲ ಕಾರಣಕ್ಕೆ ಮೂಲ ಚೈತನ್ಯ ನೋಡಾ ಸಂಗನಬಸವೇಶ್ವರಾ.

---

## ಅಧೋ ಕುಂಡಲಿ.

೧. ಅಯ್ಯಾ ಪ್ರವೃತ್ತಿ ಮಾರ್ಗದಲ್ಲಿ ಚರಿಸುವಲ್ಲಿ ಅಧೋ ಕುಂಡಲಿಯ ಭೇದವೆಂತೆಂದೊಡೆ ದ್ವಾದಶ ಕಮಲಂಗಳೇ ಅಂಗವಾಗಿರ್ಪವಯ್ಯ. ಷೋಡಶ ಮದಂಗಳೇ ಪ್ರಾಣವಾಗಿರ್ಪವಯ್ಯ. ಸಪ್ತ ವ್ಯಸನಂಗಳೇ ಸಂಗವಾಗಿರ್ಪವಯ್ಯ. ದುರ್ಗುಣಂಗಳೇ ವಸ್ತ್ರಾಭರಣವಾಗಿರ್ಪವಯ್ಯ. ಅನಾಚಾರಂಗಳೇ ನಡೆ ನುಡಿಯಾಗಿರ್ಪವಯ್ಯ. ಅಸತ್ಯವೇ ವಾಹನವಾಗಿರ್ಪವಯ್ಯ. ಕುಭಾವಂಗಳೇ ಪಿತ ಮಾತೆಯಾಗಿರ್ಪವಯ್ಯ. ಕುಚಿತ್ತಗಳೇ ಬಂಧು ಬಳಗವಾಗಿರ್ಪವಯ್ಯ. ಕುಬುದ್ಧಿಗಳೇ ಒಡಹುಟ್ಟಿದವರಾಗಿರ್ಪವಯ್ಯ. ದುರಹಂಕಾರಗಳೇ ನೆಂಟರಾಗಿರ್ಪವಯ್ಯ. ಕುಮನವೆ ಸ್ತ್ರೀಯುಳಾಗಿರ್ಪಳಯ್ಯ. ಅಜ್ಞಾನವೇ ಮಂದಿರವಾಗಿರ್ಪುದಯ್ಯ. ದುರ್ಭಾವವೇ

ಆಹಾರವಾಗಿರ್ಪುದಯ್ಯಾ. ಅರಿಷಡ್ವರ್ಗವೇ ದೈವವಾಗಿರ್ಪುದಯ್ಯಾ. ಷಡ್ಭಾವ ವಿಕಾರಗಳೇ ಅವಯವಗಳಾಗಿರ್ಪವಯ್ಯಾ. ಆಶೆಯೇ ಧನಧಾನ್ಯವಾಗಿರ್ಪು ದಯ್ಯಾ. ಇಂತು ಸಂಸಾರವೆಂಬ ಪಾಶದಲ್ಲಿ ಜನ್ಮ ಜರೆಮರಣಂಗಳಿಂದ ತಿರುಗುವ ಜೀವನೇ ಅಧೋ ಕುಂಡಲಿ ಸರ್ಪನೆನಿಸುವನಯ್ಯಾ. ಆ ಸರ್ಪನೆ ಮೂಲಾಹಂಕಾರವೆಂಬ ಪಟ್ಟಣವ ರಚಿಸಿ ಜಿಹ್ವಾಲಂಪಟ ಗುಹ್ಯಾಲಂಪ ಟದಲ್ಲಿ ಮುಳು ಮುಳುಗಿ ತೇಲುತಿರ್ಪುದು ನೋಡಾ ಸಂಗನಬಸವೇಶ್ವರಾ.

## ಊರ್ಧ್ವ ಕುಂಡಲಿ.

೧. ಅಯ್ಯಾ ನಿವೃತ್ತಿ ಮಾರ್ಗದಲ್ಲಿ ಚರಿಸುವ ಊರ್ಧ್ವಕುಂಡಲಿ ಭೇದವೆಂತೆಂದೊಡೆ ಕಿಂಕುರ್ವಾಣ ಭಕ್ತಿಯೆ ಅಂಗವಾಗಿರ್ಪುದಯ್ಯಾ. ಸಚ್ಚಿ ದಾನಂದವೇ ವಸ್ತ್ರಾಭರಣವಾಗಿರ್ಪುದಯ್ಯಾ. ಸನ್ಮಾರ್ಗಾಚಾರಂಗಳೆ ನಡೆ ನುಡಿಯಾಗಿರ್ಪವಯ್ಯಾ. ಸುಸತ್ಯವೆ ವಾಹನವಾಗಿರ್ಪುದಯ್ಯಾ. ದಯಾಂತಃ ಕರಣವೇ ಪಿತಮಾತೆಯಾಗಿರ್ಪುದಯ್ಯಾ. ಸುಚಿತ್ತವೇ ಬಂಧುಬಳಗವಾಗಿ ರ್ಪುದಯ್ಯಾ. ಸುಬುದ್ಧಿಗಳೇ ಒಡಹುಟ್ಟಿದರಾಗಿರ್ಪುವಯ್ಯಾ. ನಿರಹಂಕಾ ರವೇ ನೆಂಟರಾಗಿರ್ಪುವಯ್ಯಾ. ಸುಮನವೆ ಸ್ತ್ರೀಯಳಾಗಿಪ್ಪುದಯ್ಯಾ. ಸುಜ್ಞಾ ನವೇ ಮಂದಿರವಾಗಿರ್ಪುದಯ್ಯಾ. ಸದ್ಭಾವವೆ ಆಹಾರವಾಗಿರ್ಪುದಯ್ಯಾ. ನಿತ್ಯ ನಿಜವೆ ದೈವವಾಗಿರ್ಪುದಯ್ಯಾ. ನಿರಾಶೆಯೆ ಅವಯವಂಗಳಾಗಿರ್ಪು ದಯ್ಯಾ. ನಿಃಕಾಮ್ಯಗಳೇ ಧನಧಾನ್ಯಗಳಾಗಿರ್ಪುವಯ್ಯಾ. ಇಂತು ನಿಃಸಂಸಾ ರವೆಂಬ ಅವಿರಳಾನಂದದಿಂದ ಸದ್ಗುರೂಪಾವಸ್ಥೆಯ ಮಾಡುವ ಸಜ್ಜೀ ವನೇ ಊರ್ಧ್ವಕುಂಡಲಿ ಸರ್ಪನಯ್ಯಾ. ಆ ಸರ್ಪನೆ ಮಾಯಾ ಪ್ರಪಂಚವ ಹೇವರಿಸಿ, ಅನಂತ ಮುಖದಿಂದ ನಿರ್ವಾಯು ಸ್ವರೂಪವಾದ ಮಹಾ ಪ್ರಮಥ ಗಣಂಗಳತ್ತಭಿಮುಖವಾಗಿರ್ಪುದಯ್ಯಾ. ಈ ಸರ್ಪಂಗೆ ಬೇಕು ಬೇಡೆಂಬ ಜಿಹ್ವಾಲಂಪಟ ಗುಹ್ಯಾಲಂಪಟವಿಲ್ಲ ನೋಡಾ ಸಂಗನಬಸವೇ ಶ್ವರಾ.

## ಮಧ್ಯ ಕುಂಡಲಿ.

೧. ಅಯ್ಯಾ ಇನ್ನು ಪ್ರವೃತ್ತಿ ನಿವೃತ್ತಿ ಅಧೋಕುಂಡಲಿ ಊರ್ಧ್ವಕುಂ ಡಲಿಗಳೆಂಬ ಉಭಯ ಮಾರ್ಗವ ಶಿವಾಜ್ಞೆಯಿಂದ ತೀರ್ಚಿಸಿ ಶಿವಯೋಗ ಶಿವಾಚಾರ ಶಿವಭಕ್ತಿ ಶಿವಾನಂದ ಪರಿಣಾಮದಲ್ಲಿ ಚರಿಸುವ ಮಧ್ಯಕುಂಡಲಿ

ಸ್ವರೂಪವಾದ ಮಹಾ ಶೇಷನ ಭೇದವೆಂತೆಂದೊಡೆ ಷೋಡಶವರ್ಣವೇ ಅಂಗವಾಗಿರ್ಪುದಯ್ಯಾ. ಸರ್ವಾಚಾರ ಸಂಪತ್ತಿನಾಚರಣೆಯೆ ಪ್ರಾಣವಾಗಿರ್ಪುದಯ್ಯಾ. ಚತುರ್ದಶ ಪ್ರಣವಂಗಳೇ ತತ್ಸಂಗವಾಗಿರ್ಪುದಯ್ಯಾ. ಭಕ್ತಿ ಜ್ಞಾನ ವೈರಾಗ್ಯ ಷಟ್ಸ್ಥಲವೇ ವಸ್ತ್ರಾಭರಣವಾಗಿರ್ಪುದಯ್ಯಾ. ಹರಗುರು ವಾಕ್ಯವೇ ನಡೆನುಡಿಯಾಗಿರ್ಪುದಯ್ಯಾ. ಪಂಚಾಚಾರಂಗಳೇ ವಾಹನವಾಗಿರ್ಪುದಯ್ಯಾ. ಕರಣ ವಿನಯ ಸಮತೆ ಶುದ್ಧ ಸಿದ್ಧ ಪ್ರಸಿದ್ಧವೆ ಪಿತಮಾತೆಯಾಗಿರ್ಪುದಯ್ಯಾ. ಚತುರ್ವರ್ಣವೇ ಮೊದಲಾಗಿ ಐವತ್ತೆರಡು ವರ್ಣಂಗಳೆ ಬಂಧು ಬಳಗವಾಗಿರ್ಪುದಯ್ಯಾ. ಷಡಕ್ಷರ ಮಂತ್ರ ಮೊದಲಾಗಿ ನೂರೆಂಟು ಮಂತ್ರ ಮಾಲಿಕೆಯೆ ಒಡಹುಟ್ಟಿದವರಾಗಿರ್ಪುದಯ್ಯಾ. ಸಪ್ತಕೋಟಿ ಮಹಾಮಂತ್ರಂಗಳೆ ನೆಂಟರಾಗಿರ್ಪುದಯ್ಯಾ. ಷೋಡಶ ಭಕ್ತಿಗಳೆ ಅರ್ಧಾಂಗಿನಿಯಾಗಿರ್ಪುದಯ್ಯಾ. ನೂರೆಂಟು ಸಕೀಲು ಮೊದಲಾಗಿ ಸಮಸ್ತ ಸಕೀಲಂಗಳೆ ಮಂದಿರವಾಗಿರ್ಪುದಯ್ಯಾ. ಸ್ವಾನುಭವ ಸೂತ್ರವೆ ನಿಜನೈಷ್ಠೆ ನಿರ್ಲಜ್ಜೆ ನಿರಾಶವೆಂಬ ನಿಃಪ್ರಪಂಚವೆ ಧನಧಾನ್ಯವಾಗಿರ್ಪುದಯ್ಯಾ. ಇಂತು ನಿಃಕಳಂಕ ಪರಮಾನಂದವೆಂಬ ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ ಅವಿರಳ ಪರಂ ಜ್ಯೋತಿ ಸ್ವರೂಪದಿಂದ ಕನ್ನಡಿಯ ಪ್ರತಿಬಿಂಬದಂತೆ ಇಹಪರಂಗಳೆಂಬ ಅಧೋಕುಂಡಲಿ ಊರ್ಧ್ವಕುಂಡಲಿ ಎಂಬ ಉಭಯ ಮಧ್ಯದಲ್ಲಿ ನೆಲಿಸಿರ್ಪ ಪರತತ್ವವೆ ಶಿವಭಕ್ತನೆಂಬ ಮಧ್ಯ ನಾಮವುಳ್ಳ ಮಹಾ ಶೇಷ ನೋಡಾ ಸಂಗನಬಸವೇಶ್ವರಾ.

## ಶಿವಯೋಗ.

೧. ಅಯ್ಯಾ ಇನ್ನು ಹಠಯೋಗವ ಮರೆದು ಶಿವಯೋಗದಲ್ಲಿ ನಿಂದ ಭೇದವೆಂತೆಂದೊಡೆ, ಆ ನಿಲುಕಡೆಯ ಶ್ರೀಗುರು ಕಟಾಕ್ಷೆಯಿಂದ ನಿರೂಪಿಸುವೆವು ಕೇಳಯ್ಯಾ, ವರಕುಮಾರ ದೇಶಿಕೋತ್ತಮನೆ. ವಾಮ ಭಾಗದ ಚಂದ್ರನಾಳ ಚಂದ್ರನೇತ್ರ ವಾಮಕರಣ ದ್ವಾರಂಗಳು ಮೂರು ಈಡಾ ನಾಡಿ ಎನಿಸುವದಯ್ಯಾ. ದಕ್ಷಿಣ ಭಾಗದ ಸೂರ್ಯನಾಳ ಸೂರ್ಯನೇತ್ರ ದಕ್ಷಿಣಕರ್ಣ ದ್ವಾರಂಗಳು ಮೂರುಪಿಂಗಳನಾಡಿ ಎನಿಸುವದಯ್ಯಾ. ಅಧೋದ್ವಾರ ಗುಹ್ಯದ್ವಾರ ಜಿಹ್ವಾದ್ವಾರ ಇವು ಮೂರು ಸುಷುಮ್ನ ನಾಡಿ ಎನಿಸುವದಯ್ಯಾ. ಮಣಿಪೂರಕ ವಿಶುದ್ಧಿ ಬ್ರಹ್ಮ ಇವು ಮೂರು ಇಪ್ಪತ್ತೆರಡು ಸಾವಿರನಾಡಿಗಳಿಗೆ ಮೂಲ ಸೂತ್ರವಾದ ಮಧ್ಯ ನಾಡಿ ಎನಿಸುವದಯ್ಯಾ.

ಇಂತೀ ದಶ ದ್ವಾರಂಗಳಲ್ಲಿ ಚರಿಸುವ ಮನ್ಮಥ ವಿಕಾರವಂ ಗುರೂಪಾವ ಸ್ಥೆಯಂ ಹಿಂದು ಮಾಡಿ ತನ್ನ ಸತ್ಯವೆ ಮುಂದಾಗಿ ತನ್ನ ನಡೆನುಡಿಗಳ ತನ್ನ ತಾನೆ ವಿಚಾರಿಸಿ ಸದ್ಗುರು ಲಿಂಗ ಜಂಗಮದಿಂದ ಶಿವದೀಕ್ಷೆಯ ಪಡೆದು, ಲಿಂಗಾಂಗ ಸಂಬಂಧಿಯಾಗಿ ಆ ಲಿಂಗ ಚೈತನ್ಯ ಸ್ವರೂಪವಾದ ಪಾದೋದಕ ಪ್ರಸಾದ ಮಂತ್ರದಿಂದ ಆ ತ್ರಿವಿಧ ನಾಡಿಗಳು ಮೊದಲಾಗಿ ದ್ವಾದಶ ನಾಡಿಗಳೇ ಕಡೆಯಾದ ಸಮಸ್ತ ನಾಡಿಗಳು ಪವಿತ್ರ ಸ್ವರೂಪವಾಗಿ ಸರ್ವಾವಸ್ಥೆಯಲ್ಲಿ ಚಿದ್ಘನ ಮಹಾಲಿಂಗವ ಅಷ್ಟವಿಧಾರ್ಚನೆ ಷೋಡಶೋ ಪಚಾರವನೊಡಗೂಡಿ ಪರಿಪರಿಯಿಂದರ್ಚಿಸಿ ಆಚಾರಭ್ರಷ್ಟರ ತ್ರಿಕರಣಗ ಳಿಂದ ಸೋಂಕದೆ ಅಂಗಕರಣಂಗಳಾಗಿ ಸತ್ಕ್ರಿಯೆ ಜ್ಞಾನಾನಂದವೆ ಪ್ರಭಾ ವಿಸಿ ಶ್ರೀಗುರು ಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರ ಸದಾಚಾರ ಸದ್ಭಕ್ತಿ ಸತ್ಕ್ರಿಯ ಸಮ್ಯಜ್ಞಾನ ಸದ್ವರ್ತನೆ ಎಂಬ ಚಿದೈ ಶ್ವರ್ಯದಲ್ಲಿ ಸಂತೃಪ್ತರಾಗಿ ನಿಂದ ನಿಲುಕಡೆಯಲ್ಲಿ ಪೂರ್ಣ ಸ್ವರೂಪ ನಿಜ ಶಿವಯೋಗಿಗಳು ನಿಮ್ಮ ಶರಣರು ನೋಡಾ ಸಂಗನಬಸವೇಶ್ವರಾ.

೨. ಅಯ್ಯಾ ನಾದನಾಳಂಗಳಂ ಬಲಿದು ಪರಿಪೂರ್ಣ ಚಿಜ್ಜ್ಯೋತಿ ರ್ಲಿಂಗ ಧ್ಯಾನದಲ್ಲಿ ನಿಂದು ನಿಜಹೃದಯ ಚಿದ್ಭಾವ ದೃಕ್ಕಿನಿಂದ ನವಲಿಂಗಂ ಗಳ ನಿರೀಕ್ಷಿಸಿ ಸುಚಿತ್ತ ಸುಬುದ್ಧಿ ನಿರಹಂಕಾರ ಸುಮನ ಸುಜ್ಞಾನ ಸದ್ಭಾವ ನಿರುಪಾಧಿಕ ನಿಃಕಳಂಕ ನಿರಾಲಂಬ ಹಸ್ತದಿಂದರ್ಚಿಸಿ ಎರಡಳಿದು ನಿರ ವಯ ಸಮಾಧಿಯಲ್ಲಿ ಕೂಡುವ ನಿಜದಿರವ ನೋಡಾ ಸಂಗನಬಸವೇಶ್ವರಾ.

---

## ನವಲಿಂಗ ಪೂಜೆ.

೧. ಅಯ್ಯಾ ತಾರಕಾಕೃತಿ ಮೊದಲಾದ ನವಾಕೃತಿಗಳು ನಕಾರ ಪ್ರಣವ ಮೊದಲಾಗಿ ನವಪ್ರಣವಗಳು ಭ್ರಮರನಾದ ಮೊದಲಾಗಿ ನವನಾದಗಳು ಆಧಾರಚಕ್ರ ಮೊದಲಾಗಿ ನವಚಕ್ರಗಳು ಪೀತವರ್ಣ ಮೊದಲಾಗಿ ನವವ ರ್ಣಗಳು ಭಕ್ತಸ್ಥಲ ಮೊದಲಾಗಿ ನವಸ್ಥಲಗಳು ಸ್ಥೂಲತನು ಮೊದಲಾಗಿ ನವತನುಗಳು ಸುಚಿತ್ತಹಸ್ತ ಮೊದಲಾಗಿ ನವಹಸ್ತಗಳು ಆಚಾರಲಿಂಗವೇ ಮೊದಲಾಗಿ ನವಲಿಂಗಗಳು ಘ್ರಾಣಮುಖ ಮೊದಲಾಗಿ ನವಮುಖಗಳು ಶ್ರದ್ಧಾಭಕ್ತಿ ಮೊದಲಾಗಿ ನವಭಕ್ತಿಗಳು ಗಂಧಪದಾರ್ಥ ಮೊದಲಾಗಿ ನವ ಪದಾರ್ಥಗಳು ಸುಗಂಧ ಪ್ರಸಾದ ಮೊದಲಾಗಿ ನವಪ್ರಸಾದಗಳು ಬ್ರಹ್ಮ

ಪೂಜಾರಿ ವೊದಲಾಗಿ ನವಪೂಜಾರಿಗಳು ಬ್ರಹ್ಮನಧಿದೇವತೆ ವೊದಲಾಗಿ ನವ ಅಧಿದೇವತೆಗಳು ಕರ್ಮಸಾದಾಖ್ಯ ವೊದಲಾಗಿ ನವಸಾದಾಖ್ಯಗಳು ಸತ್ತುಲಕ್ಷಣ ವೊದಲಾಗಿ ನವಲಕ್ಷಣಗಳು ಪರವೆಂಬ ಸಂಜ್ಞೆ ವೊದಲಾಗಿ ನವಸಂಜ್ಞೆಗಳು ಪೂರ್ವದಿಕ್ಕು ವೊದಲಾಗಿ ನವದಿಕ್ಕುಗಳು ಋಗ್ವೇದ ವೊದಲಾಗಿ ನವವೇದಗಳು ಚಿತ್ಪೃಥ್ವಿ ವೊದಲಾಗಿ ನವ ಅಂಗಗಳು ಜೀವಾತ್ಮ ವೊದಲಾಗಿ ನವ ಆತ್ಮರು ಕ್ರಿಯಾಶಕ್ತಿ ವೊದಲಾಗಿ ನವಶಕ್ತಿಯರು ನಿವೃತ್ತಿಕಲೆ ವೊದಲಾಗಿ ನವಕಲೆಗಳು ಇಂತು ೨೪ ಸಕೀಲಂಗಳು ನವವಿಧ ತೆರದಿಂದ ೨೧೬ ಸಕೀಲ ವೊದಲಾಗಿ ಸಮಸ್ತ ಕ್ಷೇತ್ರಂಗಳನೊಳಕೊಂಡು ಎನ್ನ ಆಜ್ಞಾಚಕ್ರವೆಂಬ ಪರಮ ಕೈಲಾಸ ಚಿದಾಕಾಶ ಮಂಡಲದ ಚೌಕ ಮಂಟಪದ ನವರತ್ನಖಚಿತ ಶೂನ್ಯ ಸಿಂಹಾಸನದ ಪೀಠದಲ್ಲಿ, ಮೂರ್ತಿಗೊಂಡಿರ್ಪ ಪರಾತ್ಪರ ನಿಜಜಂಗಮಲಿಂಗ ಸ್ವರೂಪ ಸರ್ವ ಚೈತನ್ಯಸ್ವರೂಪವಾದ ಅಣು ಲಿಂಗಜಂಗಮವೆ ಪರತತ್ವ ನಿಃಕಲ ಪರಬ್ರಹ್ಮ ಮೂರ್ತಿ ಲಿಂಗಜಂಗಮ ಪ್ರಸಾದವೆಂದು ತನುತ್ರಯ ಮನತ್ರಯ ಭಾವತ್ರಯ ಆತ್ಮತ್ರಯ ಪ್ರಾಣತ್ರಯ ಗುಣತ್ರಯ ಅವಸ್ಥಾತ್ರಯ ತತ್ವತ್ರಯ ಹಂಸತ್ರಯಂಗಳ ಪೂರ್ಣ ಮಡಿಮಾಡಿ ನಿರ್ನಾಮವೆಂಬ ಜಲದಿಂದ ಮಜ್ಜನಕ್ಕೆರೆದು ನಿಃಕಾರಣವೆಂಬ ಗಂಧವ ಧರಿಸಿ ನಿಃಸಂಗವೆಂಬಕ್ಷತೆಯನಿಟ್ಟು ನಿಃಪರಿಪೂರ್ಣವೆಂಬ ಪುಷ್ಪದ ಮಾಲೆಯ ಧರಿಸಿ ನಿರುಪಾಧಿಕವೆಂಬ ಧೂಪವ ಬೀಸಿ ನಿಃಕಳೆಯೆಂಬ ಜ್ಯೋತಿಯ ಬೆಳಗಿ, ನಿರಾಳವೆಂಬ ವಸ್ತ್ರವ ಹೊದ್ದಿಸಿ ಪರಮ ನಿಜಾಭರಣವ ತೊಡಿಸಿ ಶೂನ್ಯವೆಂಬ ನೈವೇದ್ಯವ ನರ್ಪಿಸಿ ನಿರವಯ ತಾಂಬೂಲವನಿತ್ತು ಇಂತು ಅಣುಲಿಂಗಜಂಗಮ ಪ್ರಸಾದಕ್ಕೆ ಅಷ್ಟ ವಿಧಾರ್ಚನೆಯ ಮಾಡಿ ಅನಂತಕೋಟಿ ಸೂರ್ಯ ಚಂದ್ರಾಗ್ನಿ ಪ್ರಭೆಯಂತೆ ಬೆಳಗುವ ಅಣುಲಿಂಗಜಂಗಮ ಪ್ರಸಾದವನ್ನೆ ಅನುಮಿಷದೃಷ್ಟಿಯಿಂ ನಿರೀಕ್ಷಿಸಿ ಉನ್ಮನೆಯ ಗೃಹದಲ್ಲಿ ಸಂತೋಷಗೊಂಡು ಆ ಅಣುಲಿಂಗಜಂಗಮ ಪ್ರಸಾದ ಪೂಜೆಯ ಸಮಾಪ್ತವ ಮಾಡಿ ಅನಂತಕೋಟಿ ಮಹಾಮಂತ್ರಂಗಳಿಂದ ನಮಸ್ಕರಿಸಿ ಆ ಅಣುಲಿಂಗಜಂಗಮ ಪ್ರಸಾದವೇ ತಾನೆಂದರಿದು ಏಕತ್ವದಿಂ ನಿಶ್ಚಲಚಿತ್ತವೊಳ್ಕೂಡಿ ಉಭಯವಳಿದು ಇಹಪರಂಗಳಹೊದ್ದದೆ ಕನ್ನಡಿಯ ಪ್ರತಿಬಿಂಬದಂತೆ ಸರ್ವಸಂಗ ಪರಿತ್ಯಾಗನಾಗಿ ನಿಜಾಚರಣೆಯಲ್ಲಿ ಆಚರಿಸಬಲ್ಲಾತನೇ ದಶವಿಧ ಲಿಂಗಜಂಗಮಸಂಗಭಕ್ತಿಪ್ರಸಾದವುಳ್ಳ ಅನಾದಿ ಅಖಂಡ ಚಿಜ್ಜ್ಯೋತಿ ಸದ್ಭಕ್ತಿಜಂಗಮ ನೋಡಾ ಸಂಗನಬಸವೇಶ್ವರಾ.

೨. ಅಯ್ಯಾ ನಿರಂಜನಾಕೃತಿ ವ್ಯಂಜನ ಹಕಾರ ಪ್ರಣವ ಮಹಾನಾದ ಪಶ್ಚಿಮಚಕ್ರ ಅಖಂಡ ಮಹಾಜ್ಯೋತಿರ್ವರ್ಣ ನಿರಾತಂಕಸ್ಥಲ ನಿರ್ಮುಕ್ತಿ ತನು ನಿರ್ಮಾಯಹಸ್ತ ನಿರಂಜನಲಿಂಗ ಪಶ್ಚಿಮಮುಖ ಅಪ್ರಮಾಣಭಕ್ತಿ ಅವಿರಳ ಪದಾರ್ಥ ಅವಿರಳ ಪ್ರಸಾದ ಪರಮೇಶ್ವರ ಪೂಜಾರಿ ಪರಮೇಶ್ವರ ನಧಿದೇವತೆ ನಿಶ್ಚಲ ಸಾದಾಖ್ಯ ನಿರ್ವಂಚಕನೆಂಬ ಲಕ್ಷಣ ಅವಿರಳವೆಂಬ ಸಂಜ್ಞೆ ನಿರಾಳದಿಕ್ಕು ಅಗಮ್ಯವೇದ ಶಿವಯೋಗಿಯೆ ಅಂಗ ಚಿನುಮಯಾತ್ಮ ನಿರವಯಶಕ್ತಿ ಅನಂತಕಲೆ ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ಪಶ್ಚಿಮ ಚಕ್ರವಾದ ಮಹಾ ಮೇರು ಪರ್ವತವೆಂಬ ಕ್ಷೇತ್ರದಲ್ಲಿ ಮೂರ್ತಿ ಗೊಂಡಿರ್ದ ನಿಜಮೋಕ್ಷ ಕರ್ತೃಸ್ವರೂಪವಾದ ನಿರಂಜನಲಿಂಗವೆ ಶಾಂಭವ ಮೂರ್ತಿಲಿಂಗವೆಂದು ಹಂಸತ್ರಯುವ ಮಡಿಮಾಡಿ ನಿರ್ಭಾವ ಜಲದಿಂ ಮಜ್ಜನಕ್ಕೆರೆದು ನಿರ್ಜಾತವೆಂಬ ಗಂಧವ ಧರಿಸಿ ನಿರ್ಜಡವೆಂಬ ಅಕ್ಷತೆಯ ನಿಟ್ಟು ನಿರ್ದ್ವಂದ್ವವೆಂಬ ಪುಷ್ಪದ ಮಾಲೆಯ ಧರಿಸಿ ನಿರ್ಲಜ್ಜೆಯೆಂಬ ಧೂಪವ ಬೀಸಿ ನಿರಾಲಂಬವೆಂಬ ಜ್ಯೋತಿಯ ಬೆಳಗಿ ನಿರವಯವೆಂಬ ವಸ್ತ್ರವ ಹೊದ್ದಿಸಿ ನಿಸ್ಪೃಹವೆಂಬ ಆಭರಣವ ತೊಡಿಸಿ ನಿರಾಳವೆಂಬ ನೈವೇದ್ಯವ ನರ್ಪಿಸಿ ನಿರ್ವಾಣವೆಂಬ ತಾಂಬೂಲವನಿತ್ತು. ಇಂತಿ ನಿರಂಜನ ಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ಸಹಸ್ರಕೋಟಿ ಸೂರ್ಯರ ಪ್ರಭೆ ಯಂತೆ ಬೆಳಗುವ ನಿರಂಜನ ಲಿಂಗವನು ಕಂಗಳುತುಂಬಿ ನೋಡಿ ಮನ ದಲ್ಲಿ ಸಂತೋಷಗೊಂಡು ಆ ನಿರಂಜನ ಲಿಂಗದ ಪೂಜೆಯ ಸಮಾಪ್ತವ ಮಾಡಿ ಮಹಾಜ್ಞಾನ ಜಪವೆಂಬ ದ್ವಾದಶ ಪ್ರಣವ ಮಂತ್ರಗಳಿಂದ ನಮ ಸ್ಕರಿಸಿ ಆ ನಿರಂಜನ ಲಿಂಗವೆ ತಾನೆಂದರಿದು ಕೂಡಿ ಎರಡಳಿದು ನಿಜಾಂತ ರ್ಯಾಮಿಯಾಗಿ ಆಚರಿಸಬಲ್ಲಾತನೆ ಅಪ್ರಮಾಣ ಭಕ್ತಿಯನುಳ್ಳ ನಿಜ ಮೋಕ್ಷ ಸ್ವರೂಪ ನೋಡಾ ಸಂಗನಬಸವೇಶ್ವರಾ.

೩. ಅಯ್ಯಾ ನಿಶ್ಶೂನ್ಯಾಕೃತಿ ಕ್ಷಕಾರ ಪ್ರಣವ ದಿವ್ಯನಾದ ಶಿಖಾ ಚಕ್ರ ಮಹಾಜ್ಯೋತಿರ್ವರ್ಣ ನಿರಾಲಂಬಸ್ಥಲ ಚಿನ್ಮಯ ತನು ನಿರಾಳಹಸ್ತ ಶೂನ್ಯ ಲಿಂಗ ಉನ್ಮನಿ ಮುಖ ನಿರಹಂಕಾರ ಭಕ್ತಿ ಪರಿಪೂರ್ಣ ಪದಾರ್ಥ ಪರಿಪೂರ್ಣ ಪ್ರಸಾದ ಪರಶಿವ ಪೂಜಾರಿ ಪರಶಿವನಧಿ ದೇವತೆ ಅವಿರಳ ಸಾದಾಖ್ಯ ಅಗಮ್ಯವೆಂಬ ಲಕ್ಷಣ ನಿರ್ಮಾಯವೆಂಬ ಸಂಜ್ಞೆ ದಿವ್ಯನಾದ ಘೋಷ ದಿಕ್ಕು ಮನೋಲಯ ವೇದ ಚಿಚ್ಚಂದ್ರನೆಂಬ ಅಂಗ ದಿವ್ಯಾತ್ಮ

ನಿಭ್ರಾಂತಿ ಶಕ್ತಿ ಅನಂತಕಲೆ ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ಶಿಖಾಚಕ್ರವೆಂಬ ಹೇಮಾದ್ರಿ ಎಂಬ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಶಿವಮಂತ್ರ ಶಿಕ್ಷಾ ಕರ್ತು ಸ್ವರೂಪವಾದ ಶೂನ್ಯಲಿಂಗವೇ ಹಿರಣ್ಯೈಶ್ವರ್ಯ ಲಿಂಗವೆಂದು ಕರಣತ್ರಯುವ ಮಡಿಮಾಡಿ ಅನುಪಮ ಜಲದಿಂ ಮಜ್ಜನ ಕ್ಕೆರೆದು ಚಂದ್ರ ನಿವೃತ್ತಿಯಾದ ಗಂಧವ ಧರಿಸಿ ವಿರಳವಳಿದು ಅವಿರಳದಕ್ಷ ತೆಯನಿಟ್ಟು ಅಲ್ಲಿಯ ತ್ರಿದಳಂಗಳನೆ ಪುಷ್ಪದ ಮಾಲೆ ಎಂದು ಧರಿಸಿ ಅಲ್ಲಿಯ ಕಮಲ ಸದ್ವಾಸನೆಯ ಧೂಪವನರ್ಚಿಸಿ ಅಲ್ಲಿಯ ಮಹಾಜ್ಯೋತಿ ರ್ವರ್ಣವೆ ಕರ್ಪುರದ ಜ್ಯೋತಿ ಎಂದು ಬೆಳಗಿ ಅಲ್ಲಿಯ ನಿಃಸಂಸಾರಾವಸ್ಥೆಯೇ ನವೀನ ವಸ್ತ್ರವೆಂದು ಹೊದ್ದಿಸಿ ಸದಾನಂದವೆಂಬ ಆಭರಣವ ತೊಡಿಸಿ ಪರಿ ಪೂರ್ಣವೆಂಬ ನೈವೇದ್ಯವನರ್ಪಿಸಿ ನಿರಹಂಕಾರವೆಂಬ ತಾಂಬೂಲವ ನಿತ್ತು ಇಂತೀ ಶೂನ್ಯ ಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ಶತ ಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ಶೂನ್ಯ ಲಿಂಗವನು ಕಂಗಳು ತುಂಬಿ ನೋಡಿ ಮನದಲ್ಲಿ ಸಂತೋಷಗೊಂಡು, ಆ ಶೂನ್ಯ ಲಿಂಗದ ಪೂಜೆಯ ಸಮಾಪ್ತಿಯಂ ಮಾಡಿ ಜ್ಞಾನಜಪವೆಂಬ ದ್ವಾದಶಪ್ರಣವ ಮಂತ್ರಂಗಳಿಂ ನಮಸ್ಕರಿಸಿ ಆ ಶೂನ್ಯ ಲಿಂಗವೆ ತಾನೆಂದು ಕೂಡಿ ಎರಡಳಿದು ನಿಃಸಂಸಾ ರಿಯಾಗಿ ಆಚರಿಸ ಬಲ್ಲಾತನೆ ನಿರಹಂಕಾರ ಭಕ್ತಿಯನುಳ್ಳ ನಿರಾತಂಕ ನೋಡಾ ಸಂಗನಬಸವೇಶ್ವರಾ.

೨೪. ಅಯ್ಯಾ, ನಿಃಕಲಾಕೃತಿ ಓಂಕಾರ ಪ್ರಣವ ಭ್ರಮರನಾದ ಬ್ರಹ್ಮಚಕ್ರ ಜ್ಯೋತಿರ್ವರ್ಣ ನಿಃಕಳಂಕಸ್ಥಲ ಚಿದ್ರೂಪ ತನು ಸ್ವತಂತ್ರ ಹಸ್ತ ನಿಃಕಳಂ ಕಲಿಂಗ ಬ್ರಹ್ಮರಂಧ್ರ ಮುಖ ಸದ್ಭಾವಭಕ್ತಿ ಪರಮಾನಂದ ಪದಾರ್ಥ ಪರ ಮಾನಂದ ಪ್ರಸಾದ ಶ್ರೀಗುರು ಪೂಜಾರಿ ಶ್ರೀಗುರು ಅಧಿದೇವತೆ ಅಗಮ್ಯ ವೆಂಬ ಲಕ್ಷಣ ಅಪ್ರಮಾಣವೆಂಬ ಸಂಜ್ಞೆ ಹೃತ್ಕಮಲ ದಿಕ್ಕು ಧನುರ್ವೇದ ಚಿತ್ಸೂರ್ಯನೇ ಅಂಗ ಮಹಾ ಆತ್ಮ ಅನಾಮಯ ಶಕ್ತಿ ನಿರ್ವಂಚಕ ಕಲೆ ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ಬ್ರಹ್ಮರಂಧ್ರ ಚಕ್ರದ ರಜ ತಾದ್ರಿಯೆಂಬ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಶಿವದೀಕ್ಷಾ ಸ್ವರೂಪವಾದ ನಿಃಕಲಲಿಂಗವೇ ರಜತೇಶ್ವರ ಲಿಂಗವೆಂದು ಗುಣತ್ರಯುವ ಮಡಿ ಮಾಡಿ ಸ್ವತಂತ್ರವಾದ ಅಕ್ಷತೆಯನಿಟ್ಟು ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ ಅಲ್ಲಿಯ ಜ್ಯೋತಿರ್ವರ್ಣವೆ ಕರ್ಪುರ ಜ್ಯೋತಿಯ ಬೆಳಗಿ, ಅಲ್ಲಿಯ ನಿಃಕಳಂಕಾವಸ್ಥೆಯೆ, ನವೀನ ವಸ್ತ್ರವೆಂದು ಹೊದ್ದಿಸಿ ನಿರಾಕಾರವೆಂಬ

ಆಭರಣವ ತೊಡಿಸಿ ಪರಮಾನಂದವೆಂಬ ನೈವೇದ್ಯವನರ್ಪಿಸಿ ಸದ್ಭಾವವೆಂಬ ತಾಂಬೂಲವಿತ್ತು, ಇಂತೀ ನಿಃಕಳಂಕ ಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ದಶಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ನಿಃಕಳಂಕ ಲಿಂಗವನು ಕಂಗಳು ತುಂಬಿ ನೋಡಿ ಮನದಲ್ಲಿ ಸಂತೋಷಗೊಂಡು ಆ ನಿಃಕಳ ಲಿಂಗಪೂಜೆಯು ಸಮಾಪ್ತವ ಮಾಡಿ ಕ್ರಿಯಾ ಜಪವೆಂಬ ದ್ವಾದಶ ಪ್ರಣವ ಮಂತ್ರಂಗಳಿಂದೆ ನಮಸ್ಕರಿಸಿ ಆ ನಿಃಕಳ ಲಿಂಗಪೂಜೆಯು ಸಮಾಪ್ತವ ಮಾಡಿ ಕ್ರಿಯಾ ಜಪವೆಂಬ ದ್ವಾದಶಪ್ರಣವ ಮಂತ್ರಂಗಳಿಂದೆ ನಮಸ್ಕರಿಸಿ ಆ ನಿಃಕಳ ಲಿಂಗವೆ ತಾನೆಂದರಿದು ಕೂಡಿ ಎರಡಳಿದು ಸ್ವತಂತ್ರನಾಗಿ ಆಚರಿಸ ಬಲ್ಲಾತನೆ ಸದ್ಭಾವ ಭಕ್ತಿಯನುಳ್ಳ ನಿಃಕಳಂಕ ನೋಡಾ ಸಂಗನ ಬಸವೇಶ್ವರಾ.

೫. ಅಯ್ಯಾ ಜ್ಯೋತಿರಾಕೃತಿ ಓಂಕಾರ ಪ್ರಣವ ಸಿಂಹಾಸನದ ಆಜ್ಞಾಚಕ್ರ ಮಾಣಿಕ್ಯವರ್ಣ ಐಕ್ಯಸ್ಥಲ ಶುದ್ಧತನು ಸದ್ಭಾವಹಸ್ತ ಮಹಾಲಿಂಗ ಹೃದಯುವೆಂಬ ಮುಖ ಸಮರಸಭಕ್ತಿ ತೃಪ್ತಿ ಪದಾರ್ಥ ಸುತೃಪ್ತಿ ಪ್ರಸಾದ ಮಹಾದೇವ ಪೂಜಾರಿ ಮಹಾದೇವನಧಿದೇವತೆ ಮಹಾಸಾದಾಖ್ಯ ಅಖಂಡನೆಂಬ ಲಕ್ಷಣ ಮಹವೆಂಬ ಸಂಜ್ಞೆ ಪಾತಾಳದಿಕ್ಕು ಗಾಯತ್ರೀ ವೇದ ಆತ್ಮನೇಲಿಂಗ ಜ್ಞಾನಾತ್ಮ ಚಿಚ್ಛಕ್ತಿ ಶಾಂತಾತೀತೋತ್ತರ ಕಲೆ ಇಂತು ೩೬ ಸಕೀಲಂಗಳನೊಳಕೊಂಡು ಎನ್ನಾಜ್ಞಾಚಕ್ರವೆಂಬ ತ್ರಿಕೂಟ ಸಂಗಮ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಬೋಧಾ ಸ್ವರೂಪವಾದ ಮಹಾಲಿಂಗವೇ ಸಂಗಮೇಶ್ವರ ಲಿಂಗವೆಂದು ಅವಸ್ಥಾತ್ರಯುವ ಮಡಿ ಮಾಡಿ ಸಂತೋಷವೆಂಬ ಜಲದಿಂ ಮಜ್ಜನಕ್ಕೆರೆದು ಆತ್ಮನಿವೃತ್ತಿಯಾದ ಗಂಧವ ಧರಿಸಿ ಭಾವ ಸದ್ಭಾವವಾದಕ್ಷತೆಯನಿಟ್ಟು ಅಲ್ಲಿಯ ದ್ವಿದಳಂಗಳನೆ ಪುಷ್ಪದ ಮಾಲೆ ಎಂದು ಧರಿಸಿ ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ ಅಲ್ಲಿಯ ಮಾಣಿಕ್ಯ ವರ್ಣವೇ ಕರ್ಪೂರ ಜ್ಯೋತಿ ಎಂದು ಬೆಳಗಿ ಅಲ್ಲಿಯ ನಿರಾವಸ್ಥೆಯೆ ನವೀನ ವಸ್ತ್ರವೆಂದು ಹೊದ್ದಿಸಿ ನಿರ್ಮಲವೆಂಬ ಆಭರಣವ ತೊಡಿಸಿ ಸುತೃಪ್ತಿ ಎಂಬ ನೈವೇದ್ಯವನರ್ಪಿಸಿ ಸಮರಸವೆಂಬ ತಾಂಬೂಲವನಿತ್ತು ಇಂತೀ ಮಹಾಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ಮಹಾಲಿಂಗವ ಕಂಗಳು ತುಂಬಿ ನೋಡಿ ಮನದಲ್ಲಿ ಸಂತೋಷಗೊಂಡು ಆ ಮಹಾಲಿಂಗ ಪೂಜೆಯು ಸಮಾಪ್ತವ ಮಾಡಿ ಓಂ ಓಂ ಓಂ ಓಂ ಓಂ ಎಂಬ ಓಂಕಾರ ಷಡ್ವಿಧ ಮಂತ್ರಂಗಳಿಂದ ನಮ

ಸ್ಮರಿಸಿ ಆ ಮಹಾಲಿಂಗವೇ ತಾನೆಂದರಿದು ಕೂಡಿ ಎರಡಳಿದು ನಿತ್ಯ ತೃಪ್ತನಾಗಿ ಆಚರಿಸ ಬಲ್ಲಾತನೆ ಸಮರಸ ಭಕ್ತಿಯನುಳ್ಳ ಲಿಂಗೈಕ್ಯ ನೋಡಾ ಸಂಗನಬಸವೇಶ್ವರಾ.

೬. ಅಯ್ಯಾ ದರ್ಪಣಾಕೃತಿ ಯಕಾರ ಪ್ರಣವ ನಾದ ವಿಶುದ್ಧಿ ಚಕ್ರ ಕಪೋತ ವರ್ಣ ಶರಣಸ್ಥಲ ಆನಂದ ತನುವು ಸುಜ್ಞಾನ ಹಸ್ತ ಪ್ರಸಾದಲಿಂಗ ಶ್ರೋತ್ರ ಮುಖ ಆನಂದ ಭಕ್ತಿ ಶಬ್ದಪದಾರ್ಥ ಸುಶಬ್ದ ಪ್ರಸಾದ ಸದಾಶಿವ ಪೂಜಾರಿ ಸದಾಶಿವನಧಿದೇವತೆ ಶಿವಸಾದಾಖ್ಯ ಪರಿಪೂರ್ಣವೆಂಬ ಲಕ್ಷಣ ಅನಾದಿವತ್ತುವೆಂಬ ಸಂಜ್ಞೆ ಊರ್ಧ್ವದಿಕ್ಕು ಅಜಪ ವೇದ ಆಕಾಶವೆಂಬ ಅಂಗ ಶುದ್ಧಾತ್ಮ ಪರಾಶಕ್ತಿ ಶಾಂತಾತೀತ ಕಲೆ ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ವಿಶುದ್ಧಿ ಚಕ್ರವೆಂಬ ಅವಿಮುಕ್ತ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಈಶನ ಸ್ವರೂಪನಾದ ಪ್ರಸಾದಲಿಂಗವೆ ವಿಶ್ವನಾಥ ಲಿಂಗವೆಂದು ಭಾವತ್ರಯವ ಮಡಿಮಾಡಿ ಕ್ಷಮೆಯೆಂಬ ಜಲದಿಂ ಮಜ್ಜನಕ್ಕೆರೆದು ಗಗನ ನಿವೃತ್ತಿಯಾದ ಗಂಧವ ಧರಿಸಿ ಜ್ಞಾನ ಸುಜ್ಞಾನ ವಾಪಕ್ಷತೆಯನಿಟ್ಟು, ಅಲ್ಲಿಯ ಷೋಡಶವಳಂಗಳನೆ ಪುಷ್ಪದ ಮಾಲೆ ಎಂದು ಧರಿಸಿ ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ ಅಲ್ಲಿಯ ಕಪೋತ ವರ್ಣವೆ ಕರ್ಪುರ ಜ್ಯೋತಿಯೆಂದು ಬೆಳಗಿ, ಅಲ್ಲಿಯ ತೂರ್ಯಾತೀತಾವಸ್ಥೆಯ ನವೀನ ವಸ್ತ್ರವೆಂದು ಹೊದ್ದಿಸಿ ನಿರ್ಮದವೆಂಬಾಭರಣವ ತೊಡಿಸಿ ಸುಶಬ್ದವೆಂಬ ನೈವೇದ್ಯವನರ್ಪಿಸಿ ಆನಂದವೆಂಬ ತಾಂಬೂಲವನಿತ್ತು ಇಂತೀ ಪ್ರಸಾದಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡಿ ಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ಪ್ರಸಾದ ಲಿಂಗವನ್ನು ಕಂಗಳು ತುಂಬಿ ನೋಡಿ ಮನದಲ್ಲಿ ಸಂತೋಷಗೊಂಡು ಆ ಪ್ರಸಾದಲಿಂಗದ ಪೂಜೆಯ ಸಮಾಪ್ತವ ಮಾಡಿ ಓಂ ಯಾಂ ಯಾಂ ಯಾಂ ಯಾಂ ಯಾಂ ಯಾಂ ಎಂಬ ಯಕಾರ ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ ಆ ಪ್ರಸಾದಲಿಂಗವೆ ತಾನೆಂದರಿದು ಕೂಡಿ ಎರಡಳಿದು ನಿರ್ಮೋಹಿಯಾಗಿ ಆಚರಿಸ ಬಲ್ಲಾತನೆ ಆನಂದ ಭಕ್ತಿಯನುಳ್ಳ ಶಿವ ಶರಣ ನೋಡಾ ಸಂಗನಬಸವೇಶ್ವರಾ.

೭. ಅಯ್ಯಾ ಅರ್ಧ ಚಂದ್ರಾಕೃತಿ ವಕಾರಪ್ರಣವ ಮೇಘನಾದ ಅನಾಹತಚಕ್ರ ಮಾಂಜಿಷ್ಟವರ್ಣ ಪ್ರಾಣಲಿಂಗಿಸ್ಥಲ ನಿರ್ಮಲತನು ಸುಮನ ಹಸ್ತ ಜಂಗಮಲಿಂಗ ತ್ವಕ್ಕೆಂಬ ಮುಖ ಅನುಭಾವಭಕ್ತಿ ಸ್ಪರ್ಶನಪದಾರ್ಥ

ಸುಸ್ಪರ್ಶನ ಪ್ರಸಾದ ಈಶ್ವರಪೂಜಾರಿ ಈಶ್ವರನಧಿದೇವತೆ ಅಮೂರ್ತಿ ಸಾದಾಖ್ಯ ನಿತ್ಯವೆಂಬ ಲಕ್ಷಣ ಲಿಂಗಕ್ಷೇತ್ರವೆಂಬ ಸಂಜ್ಞೆ ದಕ್ಷಿಣದಿಕ್ಕು ಅಥರ್ವಣ ವೇದ ವಾಯುವೆ ಅಂಗ ನಿರ್ಮಲಾತ್ಮ ಆದಿಶಕ್ತಿ ಶಾಂತಿಕಲೆ ಇಂತು ೨೪ ಸಕೀಲಂಗಳನೊಳಗೊಂಡು ಎನ್ನ ಅನಾಹತ ಚಕ್ರವೆಂಬ ಹಿಮವತ್ಕೇದಾರ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಯಜನ ಸ್ವರೂಪವಾದ ಜಂಗಮ ಲಿಂಗವೆ ಹಿಮಗಿರೀಶ್ವರನೆಂದು ಪ್ರಾಣತ್ರಯವ ಮಡಿಮಾಡಿ, ಶಾಂತಿಯೆಂಬ ಮಜ್ಜನಕ್ಕೆರೆದು ವಾಯು ನಿವೃತ್ತಿಯಾದ ಗಂಧವ ಧರಿಸಿ ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ, ಅಲ್ಲಿಯ ಮಾಂಜಿಷ್ಟ ವರ್ಣವೆ ಕರ್ಪುರ ಜ್ಯೋತಿಯೆಂದು ಬೆಳಗಿ, ಅಲ್ಲಿಯ ತೂರ್ಯಾವಸ್ಥೆಯೆಂಬ ವಸ್ತ್ರವ ಹೊದ್ದಿಸಿ ನಿರ್ಮೋಹವೆಂಬ ಆಭರಣವ ತೊಡಿಸಿ ಸುಸ್ಪರ್ಶನವೆಂಬ ನೈವೇದ್ಯವನರ್ಪಿಸಿ ಅನುಭಾವವೆಂಬ ತಾಂಬೂಲವನಿತ್ತು ಇಂತೀ ಜಂಗಮಲಿಂಗಕ್ಕೆ ಅಷ್ಟವಿಧಾರ್ಚನೆಯಂ ಕೋಟಿ ಸೂರ್ಯರಂತೆ ಬೆಳಗುವ ಜಂಗಮ ಲಿಂಗವನ್ನು ಕಂಗಳು ತುಂಬಿ ನೋಡಿ ಮನದಲ್ಲಿ ಸಂತೋಷಗೊಂಡು ಆ ಜಂಗಮ ಲಿಂಗದ ಪೂಜೆಯ ಸಮಾಪ್ತವ ಮಾಡಿ ಓಂ ವಾಂ ವಾಂ ವಾಂ ವಾಂ ವಾಂ ವಾಂ ಎಂಬ ವಕಾರ ಷಡ್ವಿಧ ಮಂತ್ರಂಗಳಿಂದ ನಮಸ್ಕರಿಸಿ ಆ ಜಂಗಮ ಲಿಂಗವೆ ತಾನೆಂದರಿದು ಕೂಡಿ ಎರಡಳಿದು ನಿಃಪ್ರಪಂಚವಾಗಿ ಆಚರಿಸ ಬಲ್ಲಾತನೆ ಅನುಭಾವ ಭಕ್ತಿಯನುಳ್ಳ ಲಿಂಗ ಪ್ರಾಣಿ ನೋಡಾ ಸಂಗನಬಸವೇಶ್ವರಾ.

೮. ಅಯ್ಯಾ ಕುಂಡಲಾಕೃತಿ ಶಿಕಾರಪ್ರಣವ ಭೇರಿನಾದ ಮಣಿಪೂರಕ ಚಕ್ರ ಹರಿತವರ್ಣ ಪ್ರಸಾದಿಸ್ಥಲ ಕಾರಣ ತನು ನಿರಹಂಕಾರ ಹಸ್ತ ಶಿವಲಿಂಗ ನೇತ್ರವೆಂಬ ಮುಖ ಸಾವಧಾನಭಕ್ತಿ ರೂಪುಸದಾರ್ಥ ಸುರೂಪು ಪ್ರಸಾದ ರುದ್ರಪೂಜಾರಿ ರುದ್ರನಧಿದೇವತೆ ಮೂರ್ತಿಸಾದಾಖ್ಯ ಅನಂತವೆಂಬ ಲಕ್ಷಣ ಶರೀರಸ್ಥವೆಂಬ ಸಂಜ್ಞೆ ಉತ್ತರದಿಕ್ಕು ಸಾಮವೇದ ಅಗ್ನಿಯೆ ಅಂಗ ಪರಮಾತ್ಮ ಇಚ್ಛಾಶಕ್ತಿ ವಿಧ್ಯಾಕಲೆ ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ಮಣಿಪೂರಕ ಚಕ್ರವೆಂಬ ಪಂಪಾ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ನಿರೀಕ್ಷಣ ಸ್ವರೂಪವಾದ ಶಿವಲಿಂಗವೆ ಶ್ರೀವಿರೂಪಾಕ್ಷಲಿಂಗವೆಂದು ಆತ್ಮತ್ರಯ ಮಡಿಮಾಡಿ ಪರಮಾನಂದವೆಂಬ ಜಲದಿಂ ಮಜ್ಜನಕ್ಕೆರೆದು ಅಗ್ನಿ ನಿವೃತ್ತಿಯಾದ ಗಂಧವ ಧರಿಸಿ ಅಹಂಕಾರ ನಿರಹಂಕಾರ ಅಕ್ಷತೆಯನಿಟ್ಟು, ಅಲ್ಲಿಯ ದಶದಳಂಗಳನೆ ಪುಷ್ಪದ ಮಾಲೆಯೆಂದ್ಯ

ಧರಿಸಿ ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ ಅಲ್ಲಿಯ ಹರಿತ ವರ್ಣವೆ ಕರ್ಪೂರ ಜ್ಯೋತಿಯೆಂದು ಬೆಳಗಿ, ಅಲ್ಲಿಯ ಸುಷುಪ್ತಾವಸ್ಥೆ ಯೆಂಬ ವಸ್ತ್ರವ ಹೊದ್ದಿಸಿ ನಿರ್ಲೋಭವೆಂಬ ಆಭರಣವ ತೊಡಿಸಿ ಸುರೂಪು ವೆಂಬ ನೈವೇದ್ಯವನರ್ಪಿಸಿ ಸಾವಧಾನವೆಂಬ ತಾಂಬೂಲವನಿತ್ತು, ಇಂತೀ ಪರಶಿವಲಿಂಗಕ್ಕೆ ಅಷ್ಟವಿಧಾರ್ಚನೆಯುಂ ಮಾಡಿ ಕೋಟಿ ಸೂರ್ಯರ ಪ್ರಭೆಯಂತೆ ಬೆಳಗುವ ಪರಶಿವಲಿಂಗವನ್ನು ಕಂಗಳು ತುಂಬಿ ನೋಡಿ ಪುನಃ ಸಂತೋಷಗೊಂಡು, ಆ ಪರಶಿವಲಿಂಗ ಪೂಜೆಯ ಸಮಾಪ್ತವ ಮಾಡಿ ಓಂ ಶೀಂ ಶೀಂ ಶೀಂ ಶೀಂ ಶೀಂ ಶೀಂ ಎಂಬ ಶಿಕಾರ ಷಡ್ವಿಧ ಮಂತ್ರಂ ಗಳಿಂದ ನಮಸ್ಕರಿಸಿ ಆ ಪರಶಿವ ಲಿಂಗವೇ ತಾನೆಂದರಿದು ಕೂಡಿ ಎರಡ ಳಿದು ನಿಃಕಳಂಕನಾಗಿ ಆಚರಿಸ ಬಲ್ಲಾತನೆ ಸಾವಧಾನ ಭಕ್ತಿಯನುಳ್ಳ ಪ್ರಸಾದಿ ನೋಡಾ ಸಂಗನಬಸವೇಶ್ವರಾ.

೯. ಅಯ್ಯಾ ದಂಡಕಾಕೃತಿ ಮಕಾರಪ್ರಣವ ಘಂಟಾನಾದ ಸ್ವಾಧಿ ಷ್ಠಾನಚಕ್ರ ಶ್ವೇತವರ್ಣ ಮಹೇಶ್ವರಸ್ಥಲ ಸೂಕ್ಷ್ಮತನು ಸುಬುದ್ಧಿಹಸ್ತ ಗುರು ಲಿಂಗ ಜಿಹ್ವೆಮುಖ ನೈಷ್ಠಿಕಾಭಕ್ತಿ ರಸಪದಾರ್ಥ ಸುರಸಪ್ರಸಾದ ವಿಷ್ಣುಪೂ ಜಾರಿ ವಿಷ್ಣುವಧಿದೇವತೆ ಕರ್ತುಸಾದಾಖ್ಯ ಚಿತ್ತುವೆಂಬ ಲಕ್ಷಣ ಗೂಢ ವೆಂಬ ಸಂಜ್ಞೆ ಪಶ್ಚಿಮದಿಕ್ಕು ಯಜುರ್ವೇದ ಅಪ್ಪುವೆಂಬ ಅಂಗ ಅಂತ ರಾತ್ಮ ಜ್ಞಾನಶಕ್ತಿ ಪ್ರತಿಷ್ಠಾಕಲೆ ಇಂತು ೨೪ ಸಕೀಲಂಗಳನೊಳಕೊಂಡು ಎನ್ನ ಸ್ವಾಧಿಷ್ಠಾನ ಚಕ್ರವೆಂಬ ಸೇತುಬಂಧ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ಪ ಮಂತ್ರಮೂರ್ತಿಸ್ವರೂಪವಾದ ಗುರುಲಿಂಗವೇ ರಾಮೇಶ್ವರಲಿಂಗವೆಂದು ಮಾನತ್ರಯವ ಮಡಿಮಾಡಿ ಪರಿಣಾಮವೆಂಬ ಜಲದಿಂ ಮಜ್ಜನಕ್ಕೆರೆದು ಅಪ್ಪು ನಿವೃತ್ತಿಯಾದ ಗಂಧವಧರಿಸಿ ಬುದ್ಧಿ ಸುಬುದ್ಧಿಯಾದ ಅಕ್ಷತೆಯನಿಟ್ಟು, ಅಲ್ಲಿಯ ಷಟ್ಸ್ಥಲಂಗಳನೇ ಪುಷ್ಪದ ಮಾಲೆಯೆಂದು ಧರಿಸಿ ಅಲ್ಲಿಯ ಕಮಲ ಸದ್ವಾಸನೆಯ ಧೂಪವ ಬೀಸಿ ಅಲ್ಲಿಯ ಶ್ವೇತವರ್ಣವೆ ಕರ್ಪೂರದ ಜ್ಯೋತಿಯೆಂದು ಬೆಳಗಿ ಅಲ್ಲಿಯ ಸ್ವಪ್ನಾವಸ್ಥೆಯೆಂಬ ವಸ್ತ್ರವ ಹೊದ್ದಿಸಿ ನಿಃಕ್ರೋಧವೆಂಬ ಆಭರಣವ ತೊಡಿಸಿ ಸುರುಚಿಯೆಂಬ ನೈವೇದ್ಯವ ಸಮ ರ್ಪಿಸಿ ನೈಷ್ಠೆಯೆಂಬ ತಾಂಬೂಲವನಿತ್ತು, ಕೋಟಿಸೂರ್ಯರ ಪ್ರಭೆಯಂತೆ ಬೆಳಗುವ ಗುರುಲಿಂಗ ಮೂರ್ತಿಯನು ಕಂಗಳುತುಂಬಿ ನೋಡಿ ಮನದಲ್ಲಿ ಸಂತೋಷಗೊಂಡು, ಆ ಗುರುಲಿಂಗ ಪೂಜೆಯ ಸಮಾಪ್ತಿಯ ಮಾಡಿ ಓಂ ಮಾಂ ಮಾಂ ಮಾಂ ಮಾಂ ಮಾಂ ಮಕಾರ ಷಡ್ವಿಧ ಮಂತ್ರಂಗ

ಶಿವಿ ನಮಸ್ಕರಿಸಿ ಆ ಲಿಂಗವೆ ತಾನೆಂದರಿದು ಕೂಡಿ ಎರಡಳಿದು ನಿಶ್ಚಿಂತ ದಿಂದ ಬೆರಸಬಲ್ಲಾತನೆ ನೈಷ್ಠಿಕಾಭಕ್ತಿಯುಳ್ಳ ವೀರಮಾಹೇಶ್ವರ ನೋಡಾ ಸಂಗನಬಸವೇಶ್ವರಾ.

೧೦. ಅಯ್ಯಾ ತಾರಕಾಕೃತಿ ನಕಾರಪ್ರಣವ ವೇಣುನಾದ ಆಧಾರಚಕ್ರ ಪೀತವರ್ಣ ಭಕ್ತಸ್ಥಲ ಸ್ಥೂಲತನು ಸುಚಿತ್ತಹಸ್ತ ಆಚಾರಲಿಂಗ ಘ್ರಾಣ ಮುಖ ಶ್ರದ್ಧಾಭಕ್ತಿ ಗಂಧಪದಾರ್ಥ ಸುಗಂಧಪ್ರಸಾದ ಬ್ರಹ್ಮಪೂಜಾರಿ ಬ್ರಹ್ಮನಧಿದೇವತೆ ಕರ್ಮಸಾದಾಖ್ಯ ಸತ್ತುವೆಂಬ ಲಕ್ಷಣ ಪರನೆಂಬ ಸಂಜ್ಞೆ ಪೂರ್ವದಿಕ್ಕು ಋಗ್ವೇದ ಪೃಥ್ವಿಯೇ ಅಂಗ ಜೀವಾತ್ಮ ಕ್ರಿಯಾಶಕ್ತಿ ನಿವೃತ್ತಿ ಕಲೆ ಇಂತು ೨೪ ಸಕೀಲಂಗಳನೊಳಕೊಂಡು ಎನ್ನಾಧಾರಚಕ್ರವೆಂಬ ಶ್ರೀಶೈಲ ಕ್ಷೇತ್ರದಲ್ಲಿ ಮೂರ್ತಿಗೊಂಡಿರ್ದ ಪಂಚಾಚಾರಸ್ವರೂಪವಾದ ಆಚಾರಲಿಂಗವೆ ಮಲ್ಲಿಕಾರ್ಜುನ ಲಿಂಗನೆಂದು ತನುತ್ರಯುವ ಮಡಿಮಾಡಿ ಶಿವಾನಂದಜಲದಿಂ ಮಜ್ಜನಕ್ಕೆರೆದು ಪೃಥ್ವಿ ನಿವೃತ್ತಿಯಾದ ಗಂಧವಧರಿಸಿ ಚಿತ್ತ ಸುಚಿತ್ತವಾದ ಅಕ್ಷತೆಯುನಿಟ್ಟು ಅಲ್ಲಿ ಚತುರ್ದಳಗಳನೆ ಪುಷ್ಪದ ಮಾಲೆಯೆಂದುಧರಿಸಿ ಅಲ್ಲಿಯ ಕಮಲ ಸದ್ವಾಸನೆಯು ಧೂಪ ಬೀಸಿ ಅಲ್ಲಿಯ ಪೀತವರ್ಣವ ಕರ್ಪುರದ ಜ್ಯೋತಿಯೆಂದು ಬೆಳಗಿ ಅಲ್ಲಿಯ ಜಾಗ್ರಾವಸ್ಥೆ ಯೆಂಬ ನವೀನ ವಸ್ತ್ರವ ಹೊದ್ದಿಸಿ ನಿಃಕಾಮುವೆಂಬ ಆಭರಣವ ತೊಡಿಸಿ ಸುಗಂಧವೆಂಬ ನೈವೇದ್ಯವನರ್ಪಿಸಿ ಶ್ರದ್ಧೆಯೆಂಬ ತಾಂಬೂಲವನಿತ್ತು ಇಂತು ಪಂಚಾಚಾರಮೂರ್ತಿ ಆಚಾರಲಿಂಗಕ್ಕಷ್ಟವಿಧಾರ್ಚನೆಯು ಮಾಡಿ ಕೋಟಿಸೂರ್ಯರ ಪ್ರಭೆಯಂತೆ ಬೆಳಗುವ ಆಚಾರಲಿಂಗವನ್ನು ಕಂಗಳ ತುಂಬಿ ನೋಡಿ ಮನದಲ್ಲಿ ಸಂತೋಷಗೊಂಡು ಆಚಾರಲಿಂಗದ ಪೂಜೆಯು ಸಮಾಪ್ತವ ಮಾಡಿ ನಾಂ ನಾಂ ನಾಂ ನಾಂ ನಾಂ ಎಂಬ ನಕಾರ ಷಡ್ವಿಧ ಮಂತ್ರಗಳಿಂದ ನಮಸ್ಕರಿಸಿ ಆ ಲಿಂಗವೆ ತಾನೆಂದರಿದು ಕೂಡಿ ಎರಡಳಿದು ನಿಬ್ಬೆರಗಿನಿಂದಾಚರಿಸ ಬಲ್ಲಾತನೆ ಶ್ರದ್ಧಾಭಕ್ತಿಯನುಳ್ಳ ಸದ್ಭಕ್ತ ನೋಡಾ ಸಂಗನಬಸವೇಶ್ವರಾ.

---

## ಸರ್ವಾಚಾರ ಸಂಪತ್ತಿನಾಚರಣೆ.

೧. ಇಂತೀ ಅಷ್ಟಾವರಣವ ಸದ್ಗುರು ಮುಖದಿಂದ ಚಿದಂಗ ಚಿದ್ಘನ ಲಿಂಗದ ಮಧ್ಯದಲ್ಲಿ ಸಂಬಂಧವಿಟ್ಟು ಏಕಲಿಂಗ ನಿಷ್ಠಾಪರತ್ವದಿಂದ ಸ್ಥೂಲ

ಕಂಥೆಯು ಧರಿಸಿ. ಸತ್ಕಾಯಕ ಸತ್ಕ್ರಿಯೆ ಸಮ್ಯಜ್ಞಾನ ಸದ್ಭಕ್ತಿ ಸದಾಚಾರ
ಸನ್ನಿಹಿತರೇ ನೂತನಗಣಂಗಳೆನಿಸುವರು ನೋಡಾ. ಅದರಿಂದ ಮೇಲೆ
ಚಿದಂಗ, ಚಿತ್ಪ್ರಾಣಾಂಗ, ಚಿದ್ಘನಲಿಂಗ, ಚಿತ್ಪ್ರಾಣಲಿಂಗವ ಸದ್ಗುರು
ಮುಖದಿಂ ಸಂಬಂಧವಿಟ್ಟು ಆ ಲಿಂಗದ ಮಧ್ಯದಲ್ಲಿ ಸಾಕಾರ ನಿರಾಕಾರ
ವಾದ ಷೋಡಶ ವರ್ಣವಮಾಡಿಕೊಂಡು ಸೂಕ್ಷ್ಮತನುವೆಂಬ ಕಂಥೆಯು
ಧರಿಸಿ ಕಂಗಳಾಲಯದ ಜ್ಯೋತಿರ್ಲಿಂಗದ ಮಧ್ಯದಲ್ಲಿ ಮನ ಮುಳುಗಿಸು
ವರೆ ಆದಿ ಗಣಂಗಳೆನಿಸುವರು ನೋಡಾ. ಅದರಿಂ ಮೇಲೆ ಚಿದ್ಘನ ತ್ರಿವಿ
ಧಾಂಗ, ಚಿದ್ಘನ ತ್ರಿವಿಧಲಿಂಗವ ಸದ್ಗುರು ಮುಖದಿಂ ಸಂಬಂಧಿಸಿಕೊಂಡು
ಆ ಲಿಂಗಾಂಗ ಮಧ್ಯದಲ್ಲಿ ಬೆಳಗುವ ಪರಂಜ್ಯೋತಿರ್ಲಿಂಗ ಮಧ್ಯದಲ್ಲಿ
ಭಾವ ಮುಳುಗಿ ಬಚ್ಚಬರಿಯಾನಂದದಲ್ಲಿ ಪರಿಪೂರ್ಣಾನಂದದಿಂದಾಚರಿಸು
ವರೆ ಅನಾದಿ ಗಣಂಗಳೆನಿಸುವರು ನೋಡಾ. ಅದರಿಂ ಮೇಲೆ ಚಿದ್ಘನ
ಅಷ್ಟಾಂಗ ಮಧ್ಯದಲ್ಲಿ ಚಿದ್ಘನ ಅಷ್ಟಲಿಂಗಗಳ ಸದ್ಗುರು ಮುಖದಿಂ ಧರಿಸಿ
ಆ ಲಿಂಗಾಂಗ ಮಧ್ಯದಲ್ಲಿ ಅರವತ್ತುನಾಲ್ಕು ತೆರದ ವರ್ಣವ ಸಂಬಂಧವ
ಮಾಡಿಕೊಂಡು ತಮ್ಮ ಸರ್ವಾಂಗದಲ್ಲಿ ಅಷ್ಟಕಮಲಗಳ ಕಂಡು, ಆ ಕಮ
ಲಮಧ್ಯದಲ್ಲಿ ನೆಲಿಸಿರ್ಪ ಚತುರ್ವಿಧ ಬಿಂದುಲಿಂಗ, ಷಡ್ವಿಧ ಧಾತುಲಿಂಗ
ದಶವಿಧಕ್ಷೇತ್ರಲಿಂಗ ದ್ವಾದಶ ವಿಕೃತಿಲಿಂಗ, ಷೋಡಶ ಕಳಾಲಿಂಗ ದ್ವಿವಿಧ
ವಿದ್ಯಾಲಿಂಗ ಸಹಸ್ರ ಶಿವಕಳಾಲಿಂಗ ತ್ರಿವಿಧ ವಿವೇಕಲಿಂಗ ಇಂತು ಅಷ್ಟವಿಧ
ಕಮಲದ ಮಧ್ಯದಲ್ಲಿ, ನೆಲಿಸಿರ್ಪ ಅಷ್ಟವಿಧ ಲಿಂಗಗಳ ಅಷ್ಟವಿಧ ಹಸ್ತಂಗ
ಳಿಂದ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿ, ಎರಡಳಿದು
ಏಕರೂಪವಾಗಿ ನಿರವಯ ಕಂಥೆಯು ಧರಿಸಿ, ಪರತತ್ವ ಜ್ಯೋತಿರ್ಮಯ
ಲಿಂಗದೊಳಗೆ ಉರಿಯುಂಡ ಕರ್ಪುರದಂತೆ ಸಮರಸವಾದರು ನೋಡಾ.
ಅವರಾರೆಂದೊಡೆ, ರುದ್ರಗಣಂಗಳು, ಶಿವಗಣಂಗಳು, ದೇವಗಣಂಗಳು
ನಾಗಗಣಂಗಳು, ಶಾಂಭವಗಣಂಗಳು ಮುಂತಾದವರು ಬಯಲೊಳಗೆ
ಮಹಾಬಯಲು ಬೆರೆದಂತಾದರು ನೋಡಾ. ಸರ್ವಾಚಾರ ಸಂಪತ್ತಿನಾಚ
ರಣೆಯನಾಚರಿಸುವರೆ ನಿರವಯ ಗಣಂಗಳೆನಿಸುವರು ನೋಡಾ ಸಂಗನ
ಬಸವೇಶ್ವರಾ.

೨. ಅಯ್ಯಾ ನಿಃಕಲ ಪರಶಿವತತ್ವ ಮಹಾಘನ ಚಿದಾವರಣ ಸ್ವರೂಪ
ಮಹಾಘನ ಪರಶಿವಲಿಂಗವ ಸದ್ಗುರು ಮುಖದಿಂ ತಮ್ಮ ಭಾವ ಮನಹೃ
ದಯ ಶ್ರೋತೃತ್ವಕ್ಕು ನೇತ್ರ ಜಿಹ್ವೆಘ್ರಾಣ ಕರಕಂಜ ಮಧ್ಯದಲ್ಲಿರಿಸಿ ಪರಿ

ಪರಿಯಿಂದರ್ಚಿಸಿ, ನಿರ್ವಂಚಕತ್ವದಿಂದ ಅರ್ಥ ಪ್ರಾಣಾಭಿಮಾನಂಗಳ ಸಮರ್ಪಿಸಿ, ಸರ್ವಾಚಾರ ಸಂಪತ್ತಿನಾಚರಣೆಯಲ್ಲಿ ಚಿತ್ತದಿಂದ ನಿಂದ ಮಹಂತ ಸದ್ಭಕ್ತ ಶಿವಶರಣನಿರ್ದ ಲೋಕವೆ ರುದ್ರಲೋಕ, ಶಿವಲೋಕ, ನಾಗಲೋಕ, ದೇವಲೋಕ, ಶಾಂಭವಲೋಕವಯ್ಯ. ಆತನ ಭಕ್ತಿಪ್ರಿಯರೆ ರುದ್ರಗಣಂಗಳು, ಶಿವಗಣಂಗಳು, ದೇವಗಣಂಗಳು, ನಾಗಗಣಂಗಳು, ಶಾಂಭವ ಮಹಾಪ್ರಭುಗಣಂಗಳು ನೋಡಾ. ಆತನಿರ್ದ ಊರೇ ಶಾಂಭವ ಪುರ, ಉಳುವೆ, ಮಹಾಕಲ್ಯಾಣವಯ್ಯ. ಆತನ ಗೃಹವೇ ಶಿವಮಂದಿರ ವಯ್ಯ, ಶಿವಕ್ಷೇತ್ರವಯ್ಯ. ಆತನ ನಡೆನುಡಿ ಕ್ರಿಯಾಚಾರದಲ್ಲೊಡೆವೆರದ ಸತ್ಕ್ರಿಯಾ ಶಕ್ತಿಯೆ ನಾಗಕನ್ನೆ, ದೇವಕನ್ನೆ, ರುದ್ರಕನ್ನೆಯಯ್ಯಾ. ಆತನ ಅರ್ಚನಾರ್ಪಣ ಸ್ಥಲವೆ ಮಹಾಘನ ಶೂನ್ಯ ಸಿಂಹಾಸನ ನೋಡಾ. ಆತನ ಚರಣದಿಂದಡಿ ಇಟ್ಟ ಜಲವೇ ದೇವಗಂಗೆ, ಶಿವಗಂಗೆ, ಪರಮಗಂಗೆ, ನಿಜಪಾವನಗಂಗೆ, ಪರಿಪೂರ್ಣಗಂಗಾಸ್ವರೂಪವಾದ ಮಹಾಗಂಗೆ ತೀರ್ಥ ನೋಡಾ. ಆತನು ದಯವಿಟ್ಟು ಪರುಷದೃಷ್ಟಿಯಿಂ ನೋಡಿದ್ದು, ತಟ್ಟು ಮುಟ್ಟು ಸೋಂಕುಗಳೆಲ್ಲ ನಿಜಮೋಕ್ಷಸ್ವರೂಪನೋಡಾ. ಸದ್ಭಕ್ತ ಶಿವ ಶರಣ ಸಂಗವು ಎನಗೂ ನಿನಗೂ ನಿಜಮೋಕ್ಷಮಂದಿರನೋಡಾ ಸಂಗನಬ ಸವೇಶ್ವರಾ.

---

## ಸಮಾಧಿಯ ವಿಧಗಳು.

೧. ಅಯ್ಯಾ ಪರಮಾರಾಧ್ಯ ಸಚ್ಚಿದಾನಂದ ಮೂರ್ತಿ ಶ್ರೀಗುರುದೇವನೇ ಸಕಲ ಪ್ರಮಥಾರಾಧ್ಯ ಗಣಸಮೂಹವೆಲ್ಲ ಸರ್ವಾಚಾರ ಸಂಪತ್ತಿನ ಆಚರಣೆಯನಾಚರಿಸಿ ಮುಗಿದ ಮೇಲೆ ಸಮಾಧಿಸ್ಥರಾದ ನಿಲುಕಡೆಯ ಕರುಣಿಸಬೇಕಯ್ಯ ಸ್ವಾಮಿಕೇಳಯ್ಯ, ಅನಾದಿ ಶರಣನೇ ಎಂದು ಕಲ್ಯಾಣ ಪಟ್ಟಣದನುಭಾವ ಮಂಟಪದಲ್ಲಿ ಬಸವ ಮೊದಲಾದ ಸಕಲ ಪ್ರಮಥಗಣಂಗಳು ಪರಶಿವಮೂರ್ತಿ ಪ್ರಭುಸ್ವಾಮಿಗಳು ಬೆಸಗೊಳ್ಳಲು, ಅಗ ಮಹಾ ಪ್ರಭುಸ್ವಾಮಿಗಳು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮನ ಮುಖವಚನದಲ್ಲಿ, ಸಕಲ ಪ್ರಮಥರ್ಗೆ ನಿರೂಪಮಂ ಕೊಡುತಿರ್ದರು ನೋಡಾ. ಆ ನಿಲುಕಡೆಯ ವಿಚಾರವೆಂತೆಂದೊಡೆ, ಪ್ರಥಮದಲ್ಲಿ ಘಟ್ಟಿವಾಳ ನೂರೊಂದು ವಿರಕ್ತ ಅಜಗಣ್ಣತಂದೆಗಳು ಅಕ್ಕನಾಗಲಿ ಮಹಾದೇವಿ ನೀಲಲೋಚನೆ

ಮುಕ್ತಾಂಗನೆ ಮೊದಲಾದ ಶರಣರ್ಗೆ ನಿರವಯ ಸ್ಥಲಕ್ಕೆ ಕಾರಣವಾದ ಶೂನ್ಯಲಿಂಗಾನುಭಾವವ ಬೋಧಿಸಿ ೨೧೬ ಸಕೀಲು ಮೊದಲಾದ ಸಕೀಲವ ನರುಪಿ ಆ ಆಪಸ್ಮರ ಕುಂಡಲಿ ಶೂನ್ಯಲಿಂಗೋದ್ಧರಣೆ ಚಿದಂಬರ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ನಿರ್ವಾಣ ಸಮಾಧಿಯ ಪಥವ ತೋರಿದರು ನೋಡಾ. ದ್ವಿತೀಯದಲ್ಲಿ ಬಸವ ಚನ್ನಬಸವ ಸಿದ್ಧರಾಮ ಮೊದಲಾದ ಶರಣರ್ಗೆ ನಿರಾಲಂಬಸ್ಥಲಕ್ಕೆ ಕಾರಣವಾದ ನಿಃಕಳಂಕ ಲಿಂಗಾನುಭಾವವ ಬೋಧಿಸಿ ೨೧೬ ಸಕೀಲು ಮೊದಲಾದ ಸಮಸ್ತ ಸಕೀಲವ ನರುಪಿ ಅಷ್ಟಾವರಣ ಜ್ಞಾನಚಕ್ರ ನೂರೆಂಟು ಪ್ರಣವ ಅನಾದಿಜಂಗಮ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ಸಚ್ಚಿದಾನಂದ ಸಮಾಧಿಯ ಪಥವ ತೋರಿದರು ನೋಡಾ. ತೃತೀಯದಲ್ಲಿ ಮರುಳಶಂಕರ ನಿಜಗುಣ ಚನ್ನಮಲ್ಲದೇವರು ಮೊದಲಾದ ಶರಣರ್ಗೆ ನಿಜೈಕ್ಯಸ್ಥಲಕ್ಕೆ ಕಾರಣವಾದ ಮಹಾಲಿಂಗಾನುಭಾವವ ಬೋಧಿಸಿ ಸಮಸ್ತ ಮಿಶ್ರ ಸಕೀಲವನರುಪಿ ಅನಾದಿಭಕ್ತ ಗೋಮುಖ ಶಾಂಭವೀ ಮಹಾಲಿಂಗೋದ್ಧರಣೆ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ನಿರವಯ ಸಮಾಧಿಯ ಪಥವ ತೋರಿದರು ನೋಡಾ. ಚತುರ್ಥದಲ್ಲಿ ಸಮಸ್ತ ಜಂಗಮಾಕೃತಿಯ ಧರಿಸಿದ ಶರಣರ್ಗೆ ನಿಜ ಶರಣಸ್ಥಲಕ್ಕೆ ಕಾರಣವಾದ ಪ್ರಸಾದಲಿಂಗಾನುಭಾವವ ಬೋಧಿಸಿ, ಸಗುಣ ನಿರ್ಗುಣ ಮೊದಲಾದ ಸಮಸ್ತ ಸಕೀಲವನರುಪಿ ಷಡ್ಬ್ರಹ್ಮ ವೃಷಭ ಮುಗುಟ ಮೂರ್ತಿ ಉದ್ಧರಣೆ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ, ನಿಜಶಿವ ಸಮಾಧಿಯ ಪಥವತೋರಿದರು ನೋಡಾ. ಪಂಚಮದಲ್ಲಿ ರೇವಣಸಿದ್ಧ ಮರುಳಸಿದ್ಧ ಏಕೋರಾಮ ಪಂಡಿತಾರಾಧ್ಯರು ಮೊದಲಾದ ಶರಣರ್ಗೆ ನಿಜಪ್ರಾಣಲಿಂಗಿಸ್ಥಲಕ್ಕೆ ಕಾರಣವಾದ ಜಂಗಮಲಿಂಗಾನುಭಾವವ ಬೋಧಿಸಿ, ನೂರೆಂಟು ಸಕೀಲ ಮೊದಲಾದ ಸಮಸ್ತ ಸಕೀಲವನರುಪಿ ತತ್ವ ಪಂಚೀಕರಣ ಲಿಂಗಪಂಚೀಕರಣ ಮಂತ್ರ ಪಂಚೀಕರಣ ಬಸವೋದ್ಧರಣೆ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ಬಯಲ ಸಮಾಧಿಯ ಪಥವ ತೋರಿದರು ನೋಡಾ. ಷಷ್ಠಮದಲ್ಲಿ ನಮಃಶಿವಾಯದೇವರು ಷಡಕ್ಷರಾಂಕ ಗಣದಾಸಿವೀರಣ್ಣಗಳು ಹಳ್ಳಯ್ಯ ಮೊದಲಾದ ಶರಣರ್ಗೆ ನಿಜಪ್ರಸಾದಿಸ್ಥಲಕ್ಕೆ ಕಾರಣವಾದ ಶಿವಲಿಂಗಾನುಭಾವವ ಬೋಧಿಸಿ ೯೬ ಸಕೀಲು ಮೊದಲಾದ ಸಮಸ್ತ ಸಕೀಲವನರುಪಿ ನವಚಕ್ರ ಅಂಗ ಷಡಕ್ಷರಲಿಂಗ ಷಡಕ್ಷರ ಪಂಚಮೂರ್ತಿಮೊದ

ಲಾದ ಚತುರ್ವಿಧ ಉದ್ಧರಣೆಯು ಕರುಣಿಸಿ ಗೋಳಕ ಸಮಾಧಿಯು ಪಥವ ತೋರಿದರು ನೋಡಾ. ಸಪ್ತಮದಲ್ಲಿ ಪಂಚಾಕ್ಷರ ಕಲಿಗಣನಾಥೊಡೆಯರು, ಚಿಲುಮೆ ಅಗ್ಗಣಿಯ ಭಕ್ತರು ಮೇಲುಪಾವಡದ ಭಕ್ತರು ಸಮೇತವಾದ ಅಚ್ಚಪ್ರಸಾದಿ ನಿಚ್ಚಪ್ರಸಾದಿ ಸಮಯಪ್ರಸಾದಿ ಮೊದಲಾದ ಶರಣರ್ಗೆ ಸಿದ್ಧವೀರ ಮಾಹೇಶ್ವರಸ್ಥಲಕ್ಕೆ ಕಾರಣವಾದ ಗುರುಲಿಂಗಾನುಭಾವವ ಬೋಧಿಸಿ ೬೬ ಸಕೀಲು ಮೊದಲಾದ ೧೦೮ ಸಕೀಲು ಕಡೆಯಾಗಿ ಸಮಸ್ತ ಸಕೀಲವನರುಪಿ ಮೂಲ ಷಡಕ್ಷರ ಕಾಯಾರ್ಪಣ ೧೬ ತೆರದರ್ಪಣ ಮೊದಲಾದ ಚತುರ್ವಿಧ ಉದ್ಧರಣೆಯು ಕರುಣಿಸಿ ಗೋಮುಖ ಸಮಾಧಿಯು ಪಥವ ತೋರಿದರು ನೋಡಾ. ಅಷ್ಟಮದಲ್ಲಿ ವರ್ತಿಸುವ ಮಸಣಯ್ಯ ಚಿಕ್ಕಮಾದಯ್ಯಗಳು ಕದಿರಿ ರೇಮಯ್ಯನು ರಾಘವಾಂಕ ಮೊದಲಾದ ಶರಣರ್ಗೆ ಸದ್ಭಕ್ತಿಸ್ಥಲಕ್ಕೆ ಕಾರಣವಾದ ಆಚಾರಲಿಂಗಾನುಭಾವವ ಬೋಧಿಸಿ ಷಡ್ವಿಧ ಸಕೀಲು ಮೊದಲಾದ ಸಮಸ್ತ ಸಕೀಲವನರುಪಿ ೪೮ ತೆರದರ್ಪಣ ೬೬ ತೆರದರ್ಪಣ ೧೦೮ ತೆರದರ್ಪಣ ೨೧೬ ತೆರದರ್ಪಣ ಮೊದಲಾಗಿ ಚತುರ್ವಿಧ ಉದ್ಧರಣೆಯು ಕರುಣಿಸಿ ಸಹಜ ಕ್ರಿಯಾ ಸಮಾಧಿಯು ಪಥವ ತೋರಿದರು ನೋಡಾ. ಇಂತೀ ಅಷ್ಟವಿಧಸ್ಥಲ ಸಂಬಂಧದಿಂದ ಆಯಾಯಲಿಂಗಾನುಭಾವವ ಬೋಧಿಸಿ ಅಷ್ಟವಿಧ ಸಮಾಧಿಯು ಬೋಧಿಸಿದರು ನೋಡಾ. ಅದರ ವಿಚಾರವೆಂತೆಂದೊಡೆ, ೩೬ ಪಾದ ವೃತ್ತಿಕೆಯು ತೆಗೆವಂಥಾದ್ದೇ ಸಹಜ ಕ್ರಿಯಾಸಮಾಧಿ ಎನಿಸುವದು. ೨೧೬ ಪಾದ ವೃತ್ತಿಕೆಯು ತೆಗೆದಂಥಾದ್ದೇ ಗೋಮುಖ ಸಮಾಧಿ ಎನಿಸುವದು. ೨೫೦ ಪಾದ ವೃತ್ತಿಕೆಯು ತೆಗೆದಂಥಾದ್ದೇ ಗೋಳಕ ಸಮಾಧಿ ಎನಿಸುವದು. ಹರಗುರು ವಚನೋಕ್ತಿ ಪ್ರಮಾಣದಿಂದ ತಮ್ಮ ತಾವೆ ಅವಸಾನದ ವೇಳೆಯುನರಿದು ನಿರಾಶಕತ್ವದಿಂದ ಸರ್ವಾಂಗ ಪರಿತ್ಯಾಗರಾಗಿ ದಿಗಂಬರ ಲೀಲೆಯು ಧರಿಸಿ ಪರಿಣಾಮತರವಾದ ಏಕಾಂತವಾಸಕ್ಕೆ ಹೋಗಿ, ತಗ್ಗು ತೆವರು ಇಲ್ಲದಂಥ ಭೂಮಿಯಾದರೂ ಸರಿಯೇ ಸಮತಳವಾದ ಬಂಡಿಯಾದರೂ ಸರಿಯೇ ಕಲ್ಲಹಿಟ್ಟಿನಿಂದಾದರೂ ಮಳಲಾದರೂ ಬಳಹದಿಂದಾದರೂ ಸರಿಯೆ. ಗೋಳಕ ಸಮಾಧಿಯ ಆಕಾರವ ರಚಿಸಿ ಆಯಾಯ ಸ್ಥಾನದಲ್ಲಿ ಪ್ರಣವವ ಸ್ಥಾಪಿಸಿ ಅನಾದಿ ಪರಶಿವಲಿಂಗವ ಉಭಯ ಕರ ಮಧ್ಯದಲ್ಲಿ ಬಾಸಣಿಸಿ ಅನಾದಿ ಮೂಲ ಪ್ರಣವ ಧ್ಯಾನದಿಂದ ಪ್ರಥಮ ಸೋಪಾನವಿಡಿದು ಹೋಗಿ ತ್ರಿಕೋಣೆಯ ಮಧ್ಯದಲ್ಲಿ ಪದ್ಮಾಸನವ ಬಲಿದು ಮೂರ್ತವಮಾಡಿ ಅಂತರಂಗದಲ್ಲಿ

ಬೆಳಗುವ ಜ್ಯೋತಿರ್ಲಿಂಗವ ಅಸುವಿುಪಸ್ಥಾನಕ್ಕೆ ತಂದು ಮೂರ್ತವ ಮಾಡಿಸಿ, ಕ್ಷೀರ ಕ್ಷೀರವ ಬೆರೆದಂತೆ ಚಿದ್ಘನಸ್ವರೂಪವಾದ ಇಷ್ಟಲಿಂಗವು ನಿರಂಜನ ಜಂಗಮಸ್ವರೂಪವಾದ ಪ್ರಾಣಲಿಂಗದಲ್ಲಿ ಶಿಖಿಕರ್ಪೂರದ ಹಾಗೆ ಬಯಲಪ್ಪುದು ಬಯಲ ಸಮಾಧಿ ಎನಿಸುವದು. ಇವು ನಾಲ್ಕು ಕ್ರಿಯಾಸ್ವರೂಪವಾದ ಸಮಾಧಿಗಳೆನಿಸುವವು ನೋಡಾ. ಅಷ್ಟತನುವಿನಲ್ಲಿ ೬೪ ತರದ ವರ್ಣವನರಿದು ಅಂಗವ ಮಾಡಿಕೊಂಡು ದ್ವಾದಶೇಂದ್ರಿಯಂಗಳಲ್ಲಿ ೧೪೪ ತರದ ಸರ್ವಾಚಾರ ಸಂಪತ್ತಿನ ಆಚಾರಂಗಳನರಿದು ಪ್ರಾಣವಮಾಡಿಕೊಂಡು, ೧೮ ಕರಣ ಚಕ್ರಂಗಳಲ್ಲಿ ೧೨೪ ಚಕ್ರಂಗಳ ಸ್ವಸ್ವರೂಪ ನಿಲುಕಡೆಯ ತಿಳಿದು ಸ್ವಾನುಭಾವದ ಸೂತ್ರದ ವಿಚಾರವರಿದು ಮೇಲಾದ ಜ್ಯೋತಿರ್ಮಂಡಲವ ಕಂಡು ಆ ಮಂಡಲದಲ್ಲಿ ಮೂರ್ತಗೊಂಡಿರುವ ನಿರಂಜನ ಜಂಗಮ ವಿರಾಟಮೂರ್ತಿಯ ಇರವ ತಿಳಿದು, ಆ ಮೂರ್ತಿಯೊಳಗೆ ಉರಿ ಉಂಡ ಕರ್ಪೂರದಂತೆ ಅಂಗ ಪ್ರಾಣಭಾವ ಆತ್ಮಂಗಳೇನೂ ತೋರದೆ ಗುರುಲಿಂಗಜಂಗಮ ಭಕ್ತನೆಂಬ ನವಪ್ರಣವಂಗಳೇ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರಶರಣನೆಂಬ ೧೮ ಪ್ರಣವಂಗಳೊಳಗೆ ಕೂಡಿ, ವಾಚಾತೀತ ಮನೋತೀತ ಭಾವಾತೀತ ವರ್ಣಾತೀತವಾದಂಥಾದ್ದೇ ನಿರ್ವಾಣ ಮೊದಲಾದ ನಿರವಯವಂತ್ಯವಾದ ಚತುರ್ವಿಧ ಸಮಾಧಿ ಎನಿಸುವದು ನೋಡಾ ಗುಹೇಶ್ವರಲಿಂಗಕ್ಕೆ ಕಾಣಿರಣ್ಣಾ ಶಾಂತ ಗಣಂಗಳೇ ಎಂದು ಪ್ರಭುಸ್ವಾಮಿಗಳು ಕಲ್ಯಾಣ ಪಟ್ಟಣದಅನುಭಾವ ಮಂಟಪದೊಳಗೆ ನಿರ್ಲಜ್ಜ ಶಾಂತಲಿಂಗೇಶ್ವರನ ಮುಖವಚನದಲ್ಲಿ ಸಕಲ ಪ್ರಮಥರ್ಗೆ ಬೋಧಿಸುತಿರ್ದರು ನೋಡಾ. ಆದೇಪ್ರಸಾದವ ಬಳಿವಿಡಿದು ಗುಮ್ಮಳಾಪುರದಲ್ಲಿ ಪರಮಾರಾಧ್ಯರು ಆಚರಿಸಿ ಶೂನ್ಯವಾದರು ನೋಡಾ ಸಂಗನಬಸವೇಶ್ವರಾ.

೨. ಹರಹರಾ ಶಿವಶಿವಾ ಜಯಜಯಾ ಕರುಣಾಕರ ಮತ್ಪ್ರಾಣನಾಥ ಮಹಾಪ್ರಭು ಚಿದ್ಘನ ಶ್ರೀಗುರು ಲಿಂಗ ಜಂಗಮ ನಿಮ್ಮ ಶರಣ ಗಣಂಗಳೆಲ್ಲ ನಿರವಯ ಸಮಾಧಿಯಲ್ಲಿ ಹೋದ ಮಾರ್ಗವ ನಿಮ್ಮ ಕರುಣಾಕಟಾಕ್ಷೆಯಿಂದ ದಯವಿಟ್ಟು ರಕ್ಷಿಸಯ್ಯಾ ತಂದೆ ಕೇಳಯ್ಯ. ವರಕುಮಾರ ದೇಶಿಕೇಂದ್ರನೇ ಶಿವಗಣಂಗಳೆಲ್ಲ ಪರಶಿವ ಲಿಂಗಕ್ಕೂ ತಮಗೂ ಭಿನ್ನವಿಲ್ಲದೆ ಅಭಿನ್ನ ಸ್ವರೂಪದಿಂದೆ ಎರಡಳಿದು ಏಕರಸವಾಗಿ ಪುಷ್ಪ ಪರಿಮಳದಂತೆ ೫೨ ಕೋಶ ಬಂಗಾರ ತೆರದೀ ಪಂಚಾಗ್ನಿಗಳ ಮೂಲ ಚಿತ್ ಸ್ವರೂಪವಾದ

ಚಿದಗ್ನಿಯಲ್ಲಿ ಸಮರಸವ ಮಾಡಿ ಸರ್ವಾಚಾರ ಸತ್ಕಾಯಕ ಸತ್ಕ್ರಿಯೆ ಸಮ್ಯಜ್ಞಾನ ಸದ್ಭಕ್ತಿಯೇ ದ್ವಿತೀಯ ಕೈಲಾಸವೆಂದು ಸತ್ಯ ನಡೆನುಡಿಯೆ ನಿಜ ಶಿವಮಂದಿರವೆಂದು ತನ್ನ ದೀಕ್ಷಾ ಕರ್ತೃವಾದ ಗುರು ಮೊದಲಾಗಿ ಸಮಸ್ತವೆಲ್ಲ ಶಿವಪದಕ್ಕೆ ಯೋಗ್ಯವಾಗಿ ಬಂದವರ ಒಡಗೂಡಿ ಯೋಗ್ಯ ವಾಗದವರ ತ್ಯಜಿಸಿ ಪರಿಪೂರ್ಣ ಪರಂಜ್ಯೋತಿ ಸ್ತಂಭಾಕಾರವೆಂಬ ನಿಷ್ಕಲ ಪರಶಿವ ಬಿಂದು ಸ್ವರೂಪವಾದ ಷೋಡಶ ವರ್ಣದ ಚಿಪ್ಪೆಳಗಿನೊಳಗೆ ಉರಿ ಕುರ್ಪರವಂತೆ ಶಿವಸಮಾಧಿಯಲ್ಲಿ ಬೆರೆದು ಹೋದರು ನೋಡಾ. ಆಚಾ ರವೇ ಪ್ರಾಣವಾಗಿ ಸಕಲ ಪ್ರಮಥ ಗಣವೆಲ್ಲಾ ಚಿನ್ಮನ ಮಹಾಲಿಂಗದಲ್ಲಿ ಕೂಟಸ್ಥರಾದರು ನೋಡಾ ಸಂಗನಬಸವೇಶ್ವರಾ.

---

## ಅಂತ್ಯವಿಧಿ

೧. ಅಯ್ಯಾ ಇನ್ನು ವಿಭೂತಿ ಪೀಳೆಯದ ಸಮಾಧಿ ವಿಸ್ತಾರದ ನಿರ್ಣಯವ ಪೇಳುತಿರ್ದಪೆವು ನೋಡಾ. ಆ ವಿಚಾರವೆಂತೆಂದೊಡೆ, ಹಿಂದೆ ಹೇಳಿದ ವಸ್ತು ನಿರವಯ ನಿಲುಕಡೆಯ ತನ್ನ ಸ್ವಾನುಭಾವದಿಂದರಿದ ಶರ ಣನು ತನ್ನವಸಾನಕಾಲದ ಎಚ್ಚರಿಕೆಯನರಿದು ತನ್ನಾಚಾರ ನಡೆನುಡಿಗೆ ಸನ್ಮತ ಹರ ಗುರು ವಚನಕ್ಕೆ ಒಪ್ಪಿಗೆಯಾಗಿ ಆ ಪ್ರಮಥಗಣಾರಾಧ್ಯ ಭಕ್ತ ಮಾಹೇಶ್ವರರೊಡಗೂಡಿ ಅಭಿವಂದಿಸಿ ಶರಣು ಹೊಕ್ಕು ಕರುಣ ಕೃಪೆಯ ಬೆಸಗೊಂಡು ಆ ಗಣಸಮೂಹ ಮೂರ್ತಿಗಳು ದಯಾಂತಃಕ ರುಣ ಹುಟ್ಟಿ, ಗೋವು ಮಲಗುವಷ್ಟು ಧರಣಿಯ ನವಪಾವ ಉದ್ದ ಪಂಚ ಪಾದ ಅಗಲ ಗೋಮಯ ಗೋಮೂತ್ರ ಗೋಕ್ಷೀರ ಗೋದಧಿ ಗೋಘೃತ ಗೋರೋಜನವೆಂಬ ಷಡ್ದ್ರವ್ಯವ ಸದ್ಗುರು ಲಿಂಗ ಜಂಗಮದ ವೃತ್ತಸ್ಥಾನ ತಾರಕಾಕೃತಿಯಿಂದ ಮಾಡಿದ ಧೂಳ ಪಾದೋದಕದೊಳಗೆ ಸಮ್ಮಿಶ್ರವ ಮಾಡಿ ಸಮ್ಮಾರ್ಜನೆ ಗೈದು ಧವಳವರ್ಣ ಮೊದಲಾದ ಪಂಚವರ್ಣದ ಪಾಷಾಣದೊಳಗೆ ರಜತ ಹೇಮ ಮೌಕ್ತಿಕ ಹವಳ ಪಂಚಲೋಹಂಗಳ ಕೂಡಿಸಿ ಹಿಟ್ಟು ಮಾಡಿ ನೂರೆಂಟು ಮನೆಯುಕ್ತವಾದ ರಂಗವಲ್ಲಿಯ ರಚಿಸಿ, ಅದರೊಳಗೆ ನೂರೆಂಟು ದಳಾಕ್ಷರಂಗಳನೆ ತುಂಬಿ, ಗುರು ಪಾದೋದಕ ಮಿಶ್ರವಾದ ಭಸ್ಮಮಂ ತಳೆದು ಪುಷ್ಪ ಪತ್ರಿಗಳನ್ನು ರಚಿಸಿ ರೋಮಶಾ

ಯಾಗಲಿ, ನಾರಮಡಿಯಾಗಲಿ, ಪಟ್ಟೆ ಪಟ್ಟಾವಳಿಯಾಗಲಿ ಆಸನವ ರಚಿಸಿ ಆ ಲಿಂಗೈಕ್ಯಂಗೆ ಘನಮಾರ್ಗದ ಎಚ್ಚರವು ಹುಟ್ಟಿಸುವದೇ ಆಪ್ತ ಲಕ್ಷಣ ನೋಡಾ. ಆ ಶರಣನು ಗಣವಾಕ್ಯವ ಲಾಲಿಸಿ ಎಚ್ಚರದಳಿದು ಪಾದೋದಕ ಪ್ರಸಾದವ ಮುಗಿದು ನಿಜನೈಷ್ಠೆಯಿಂದ ಮಂತ್ರ ಮೂರ್ತಿ ಶಿವ ಗಣಂಗಳಿಗೆ ಸಾಷ್ಟಾಂಗ ಪ್ರಣಿತನಾಗಿ ಆ ಸಿಂಹಾಸನದ ಮೇಲೆ ಭಾವ ಲಿಂಗ ಲೀಲೆಯಂತಾಳಿ ಸುಯಿಧಾನದಿಂದೆ ತ್ರ್ಯಕ್ಷರ, ಪಂಚಾಕ್ಷರ, ಷಡಕ್ಷರ ಇಂತು ಪ್ರಣಮಸ್ಮರಣೆಯಿಂದ ತನ್ನ ಕರಸ್ಥಲವಲ್ಲಿ ಚಿಪ್ಘನ ಇಷ್ಟ ಮಹಾ ಲಿಂಗವ ಮೂರ್ತವ ಮಾಡಿಸಿಕೊಂಡು, ಇರುವಂತಿಗೆ, ಸೇವಂತಿಗೆ, ಮಲ್ಲಿಗೆ, ಜಾಜಿ, ಕರವೀರ, ಸುರಹೊನ್ನೆ, ಸಂಪಿಗೆ, ಪುಷ್ಪ, ಮರುಗ ಪಚ್ಚೆದವನ ಬಿಲ್ವ ಪತ್ರ ಮೊದಲಾದ ಸಮಸ್ತ ಪತ್ರಿ ಪುಷ್ಪಂಗಳಂಧರಿಸುತ್ತ ಅಷ್ಟ ವಿಧಾರ್ಚನೆ ಷೋಡಶೋಪಚಾರದಿಂದ ಸಾಕಾರ ನಿರಾಕಾರದರ್ಚನೆಗಳ ಮಾಡುತ್ತ ಆ ಚಿಪ್ಘನ ಇಷ್ಟ ಮಹಾ ಲಿಂಗವನ್ನು ಮನ ಒಲಿದು ಕಂಗಳ ತುಂಬಿ ನೋಡುತ್ತೆ, ಭಕ್ತ, ಮಾಹೇಶ್ವರ, ಶರಣ ಗಣಾರಾಧ್ಯರು ಬಂದರೆ ಶರಣಾರ್ಥಿ ಸ್ವಾಮಿ ಎಂದು ಮಜ್ಜನವ ಮಾಡಿ ಸ್ನಾನ, ಧೂಳನ, ಧಾರ ಣಂಗಳಿಂದ ಅಷ್ಟ ವಿಧಾರ್ಚನೆ ಷೋಡಶೋಪಚಾರವ ಕೈಕೊಳ್ಳಿ ಎಂದು, ಅಭಿವಂದಿಸಿದಲ್ಲಿ ಆಗಣಾರಾಧ್ಯರು ಅರ್ಪಿತಾವಧಾನಂಗಳ ಮಾಡುತ್ತ ಸದ್ಗಂ ಧಗಳಂ ಧರಿಸಿ ಪುಷ್ಪದ ಹಾರ ಹೀರಾವಳಿಗಳಂ ಧರಿಸುತ್ತ, ಪಟ್ಟೆ ಪಟ್ಟಾ ವಳಿಗಳಂ ಧರಿಸುತ್ತ ಮಹಾ ಚಿದ್ಘನ ಶಿವಶರಣ ಗಣಾರಾಧ್ಯ ಭಕ್ತ ಮಾಹೇ ಶ್ವರರು ಗುರುವಾಕ್ಯ ಪ್ರಮಾಣವಾಗಿ ನಡೆದು ನುಡಿದು, ಆಚರಿಸಿ ಬಯ ಲಾದ ಮಹಿಮರ ಕಥಾ ಪ್ರಸಂಗಮಂ ಓದಿ ಅನುಭಾವವ ಮಾಡುತ್ತ ಶೋಧನಂಗಳ ಮಾಡದೆ, ಮಂಗಳ ಮಹೋತ್ಸವ ತೋರಣ ಪಾದಪೂಜೆ ಗಳಿಂದ ಶೋಭಿಸುತ್ತಿರಲು, ಆ ಮೇಲೆ ಆಪ್ತರಾದ ಭಕ್ತ ಗಣಂಗಳು ಕೂಡಿ ಒಂದೇ ಒಡಲಾಗಿ ಭಕ್ತನಾದೊಡೆ ಜಂಗಮ ಪಾದ ದಳತೆಯಿಂದ ಸಮಾ ಧಿಯ ಮಾಡುವದು. ಸ್ವಯ, ಚರ, ಪರ ಜಂಗಮ ಮೂರ್ತಿಗಳಾದರೆ ಆಸಮಯವರಿತು ಸಾಕಾರ ಲೀಲೆಯುಳ್ಳಲ್ಲಿ ಆ ನಿಜೈಕ್ಯರ ಪಾದದಳತೆ ಯಿಂದಲೇ ಸಮಾಧಿಯ ಮಾಡುವದು. ಆ ಸಮಾಧಿಯ ಮಾಡುವ ವಿಚಾ ರವೆಂತೆಂದೊಡೆ, ಊರ ಮಧ್ಯದಲ್ಲಿ ಲಿಂಗ ಮುದ್ರಾಂಕಿತವಾದ ಮಠ ಮನೆ ಗಳಾದರೂ ಸರಿಯೆ, ಭಕ್ತಿ ಮುಖದಿಂದ ಬಂದರೂ ಸರಿಯೇ, ಆ ಸ್ಥಲಕ್ಕೆ ಲಿಂಗ ಮುದ್ರಾಂಕಿತವ ಮಾಡಿ, ಸಮಾಧಿಯ ರಚಿಸುವದೆ, ಆಚರಣೆ

ನೋಡಾ! ಶಿವಾಧೀನವಾದ ಅರಣ್ಯ ಸ್ವರೂಪ ನಿರುಪಾಧಿಕ ಸ್ಥಲವಾದೊಡೆ ಭಕ್ತ ಮಾಹೇಶ್ವರರು ಕೂಡಿ ಒಂದಾಗಿ ಆ ಸ್ಥಲವ ವಿಚಾರಿಸಿ ಶರಣು ಹೊಕ್ಕು ಸಮಾಧಿ ಗೃಹವ ರಚಿಸುವದಕ್ಕೆ ನಿರೂಪವ ಬೆಸಗೊಂಡು, ಗುಪ್ತ ಲಿಯ ಹಾಕುವದು. ಆ ಮೇಲೆ ಸಮಾಧಿಯ ರಚಿಸಿ ಸಾರಣೆಯ ಮಾಡಿ, ಧೂಳಪಾದೋದಕ ಮೊದಲಾದ ಮಾರ್ಗಕ್ರಿಯಾ ಸಮ್ಮಾರ್ಜನಗಳ ಮಾಡಿ, ಪಂಚವರ್ಣದ ಹಿಟ್ಟಿನಿಂದ ರಂಗವಲ್ಲಿಯಂ ಸಿಂಗರಿಸಿ ಆಯಾಯ ಸ್ಥಾನದಲ್ಲಿ ಲಿಂಗ ಮುದ್ರಾಂಕಿತವ ಮಾಡುವದೆ ಸಂಬಂಧ ನೋಡಾ. ಇಂತೀ ಸಮಾಧಿಯ ಮಾಡುವಷ್ಟರೊಳಗೆ ಆ ಭಕ್ತ ಮಾಹೇಶ್ವರರೊಪ್ಪಿಗೆಯಿಂದ ವಿಭೂತಿ ವಿಳೆಯವಾದ ಶಿವಶರಣನು ನವವಿಧ ಲಿಂಗಗಳ ತನ್ನೊಳಗೆ ಮಾಡಿಕೊಂಡು, ನಿರಂಜನ ಜಂಗಮವ ಬೆರಿಸುವ ವಿಚಾರವೆಂತೆಂದೊಡೆ, ಪ್ರಥಮದಲ್ಲಿ ವರಚೌಕ ಮಧ್ಯದ ಮಹಾನಾದ ವಿಭ್ರಮಣೆಯಾದುದೇ ನಿರಂಜನ ಲಿಂಗ ಬಯಲು ನೋಡಾ. ದ್ವಿತೀಯದಲ್ಲಿ ಮಂತ್ರಧ್ಯಾನದ ಉಲುಹಡಗುವದೇ ಶೂನ್ಯ ಲಿಂಗ ಬಯಲು ನೋಡಾ. ತೃತೀಯದಲ್ಲಿ ಬ್ರಹ್ಮರಂಧ್ರದಲ್ಲಿ ಬಾರಿಸುವ ತಾಳು ನಿಲ್ಲುವದ ನಿಷ್ಕಳಂಕ ಲಿಂಗ ಬಯಲು ನೋಡಾ! ಚತುರ್ಥದಲ್ಲಿ ನೇತ್ರದ ಪ್ರತಿಬಿಂಬ ವಡಗುವದೆ, ಮಹಾಲಿಂಗದ ಬಯಲು ನೋಡಾ. ಪಂಚಮದಲಿ ಪಾದೋದಕ ಪ್ರಸಾದದಲ್ಲಿ ಸಂತೃಪ್ತಿಯಾದುದೇ ಪ್ರಸಾದಲಿಂಗ ಬಯಲು ನೋಡಾ. ಷಷ್ಠಮದಲ್ಲಿ ಹೃದಯ ಕಮಲದಲ್ಲಿ ಚರಿಸುವ ಮೂಲ ಮಾರುತನ ಉಲುಹು ಅಡಗುವದೆ, ಜಂಗಮ ಲಿಂಗದ ಬಯಲು ನೋಡಾ. ಸಪ್ತಮದಲ್ಲಿ ಪಂಚಾಗ್ನಿಗಳ ಉಲುಹಡಗಿ ತಣ್ಣಗಾಗುವದೇ, ಶಿವಲಿಂಗದ ಬಯಲು- ಅಷ್ಟಮದಲ್ಲಿ ದಶನಾಡಿಗಳು ಒಬ್ಬುಳಿಯಾಗಿ, ಸುಷುಮ್ನನಾಗುವದೇ ಗುರುಲಿಂಗದ ಬಯಲು ನೋಡಾ. ಇಂತು ಶರಣನು ಸಾಕಾರವಾದ ಅಷ್ಟ ವಿಧಲಿಂಗಗಳನು ತನ್ನೊಳಗು ಮಾಡಿಕೊಂಡು ತಾನು ಇಷ್ಟ ಮಹಾಂಲಿಗದ ಹೃತ್ಕಮಲದಲ್ಲಿ ಗೋಪ್ಯದಿಂದ ಮೂರ್ತಗೊಂಡಿರಲು, ಆ ಸಮಯದಲ್ಲಿ ಸಾಕಾರವಾದ ಭಕ್ತ ಮಹೇಶ್ವರ ಶರಣಗಣಂಗಳೆಲ್ಲ ಈ ಶರಣನು ಲಿಂಗದಪ್ಪಿ ಬಯಲಾದನು ಎಂದು, ಆ ಲಿಂಗ ಶರಣನ ಬಳಸಿನಸ್ಲ ಆಚ್ಛಾಧಿಸಿಕೊಂಡಿರುವ ಶುದ್ಧ, ಸಿದ್ಧ, ಪ್ರಸಿದ್ಧ, ಕಂಥೆಯನು ಗುರುಲಿಂಗ ಜಂಗಮ ಪಾದೋದಕ ಮೊದಲಾಗಿ ಪಂಚಾಭಿಷೇಕಂಗಳಿಂದ ಸ್ನಾನವ ಮಾಡಿಸಿ ಕ್ರಿಯಾಭಸಿತವ ಸ್ನಾನ, ಧೂಳನ, ಧಾರಣವ

ಮಾಡಿಸಿ, ಮಂಟಪವ ರಚಿಸಿ, ಒಂದಾಸನದಲ್ಲಿ ಆಶ್ರಯದಿಂದ ಮೂರ್ತ ಮಾಡಿಸಿ ಶಿವಲಾಂಛನ ಧವಳ ಪಟ್ಟೆ ಪಟ್ಟಾವಳಿ ರುದ್ರಾಕ್ಷಿ ಮೌಕ್ತಿಕ ಪುಷ್ಪದ ಹಾರ ಹೀರಾವಳಿ ಪರಿಮಳಂಗಳಿಂದ ಅಲಂಕರಿಸಿ ತಳಿರು ತೋರಣಗಳ ರಚಿಸಿ, ಧೂಪದೀಪಾರತಿ ನಾದ ಪೂಜಾ ಸ್ತೋತ್ರಂಗಳಿಂದ ಜಂಗಮ ಮೂರ್ತಿಗೆ ಮುಂದುಗೊಂಡು ಪುಷ್ಪಾಂಜಲಿಗಳಂ ಮಾಡಿ ಶರಣಗಣ ಭಕ್ತ ಮಾಹೇಶ್ವರ ವೈಭವದಿಂದ ಆ ಸಮಾಧಿಯ ಸಮೀಪಕ್ಕೆ ತಂದು ಲಿಂಗೈಕ್ಯವಾದ ಶರಣನ ನಡೆನುಡಿಯಾಚರಣೆಯ ವೃತ್ತಾಂತಮಂ ಉಘ್ಘಡಿಸಿ, ಪದವ ಮುಂದುಗೊಂಡು ಪುಷ್ಪಾಂಜಲಿಯಂ ಮಾಡಿ, ಅತಿ ಸಂತೋಷದಿಂದ ಸಮಾಧಿಗೆ ಪಾದೋದಕವ ಹಾಕಿ ಭಸ್ಮವ ತಳಿದು, ಪುಷ್ಪ ಪತ್ರೆಗಳ ರಚಿಸಿ ಲಿಂಗೈಕ್ಯವಾದ ಶರಣನ ಸಮಾಧಿಯ ಮಧ್ಯಮಂಟಪದಲ್ಲಿ ಮೂರ್ತವ ಮಾಡಿಸಿ, ಚೀಲವ ತೊಡಿಸಿ ಸರ್ವಾಂಗಕ್ಕೆ ಪ್ರಣವ ಸಂಬಂಧವಾದ ತಗಡ ಸಂಬಂಧಿಸಿ, ಪೂರ್ವದಂತೆ ಪುಷ್ಪಾಂಜಲಿಯಂ ಮಾಡಿ, ಸುಯಿಧಾನದಿಂದ ಗರ್ಭ ಗೃಹ ತ್ರಿಕೋಣೆಯಲ್ಲಿ ಪದ್ಮಾಸನದಿಂದ ಮೂರ್ತವ ಮಾಡಿಸಿ, ಕರಸ್ಥಾನ ಪರಿಯಂತರ ವಿಭೂತಿ ಪತ್ರೆ ಪುಷ್ಪಂಗಳ ಪವಿತ್ರತೆಯಿಂ ತುಂಬಿ, ಮುಖಕಮಲವ ತೆರೆದು, ಜಂಗಮ ಮೂರ್ತಿಗಳ ಪಾದವಿಡಿದು, ಅಷ್ಟವಿಧಾರ್ಚನೆ ಷೋಡಶೋಪಚಾರದಿಂದರ್ಚಿಸಿ ಮಹಾಹರುಷದಿಂದ ನಿರವಯ ಶಾಂಭವಪುರಕ್ಕೆ ದಯಮಾಡಯ್ಯಾ ಎಂದು ಪುಷ್ಪಾಂಜಲಿಯಂ ಮಾಡಿ, ಮುಖಕಮಲವ ಬಾಸಣಿಸಿ, ಕವಾಟ ಬಂಧನವ ಮಾಡಿ, ಮುಂದಣ ಸಮಾಧಿಗೆ ವೃತ್ತಿಕೆಯ ಶೋಧಿಸಿ ತುಂಬುವದು. ಆ ಮೇಲೆ ಜಂಗಮದ ಪಾದವಿಡಿದು ಪೂಜಿಸಿ, ಉಘೇ ಉಘೇ ಎಂದು ಉಘ್ಘಡಿಸಿ ಸಮಾಪ್ತಿಯ ಮಾಡಿ, ಹಸ್ತ ಪಾವುಡಗಳ ಗಣಸಮೂಹಕ್ಕೆ ಸಮರ್ಪಿಸಿ, ಆ ಸ್ಥಲವ ಸಾಕಾರಕ್ಕೆ ತಂದು ಗದ್ದುಗೆಯ ಮಾಡಿ, ಭಸ್ಮಘುಟಿಕೆ ಹಾವುಗೆ ದಂಡಾಗ್ರವನಿಟ್ಟು ಪೂಜಿಸಲಾಗದು, ಅಥವಾ ಗುರುವಾಕ್ಯ ಮೀರಿ ಪೂಜಿಸಿದವರಲ್ಲಿ ಗುರುತ್ವವಿಲ್ಲ, ಅವರ ಜಂಗಮವೆಂದು ತೀರ್ಥ ಪ್ರಸಾದವಕೊಳಲಾಗದು ಕಾಣಾ. ಗುಹೇಶ್ವರ ಲಿಂಗಕ್ಕೆ ಸಲ್ಲದ ಗೊತ್ತು ನೋಡಾ! ಶಾಂತಲಿಂಗ ಗಣಂಗಳೇ ಎಂದು ಪ್ರಭುಸ್ವಾಮಿಗಳು ನಿರ್ಲಜ್ಜ ಶಾಂತಲಿಂಗ ದೇಶಿಕೋತ್ತಮನ ಮುಖ ವಚನದಿಂದ ಸಕಲ ಪ್ರಮಥರ್ಗೆ ನಿರೂಪಮಂ ಕೊಡುತಿರ್ದರು ನೋಡಾ ಸಂಗನಬಸವೇಶ್ವರಾ.

---

# ಘನಲಿಂಗನ ವಚನಗಳು.



೧ ಎನ್ನಾತ್ಮಸದೊಂದು ಅರಸುತನದ ಅನ್ಯಾಯವ ಕೇಳಯ್ಯ ಗುರುವೇ. ಪಂಚಭಕ್ಷ್ಯ ಪರಮಾಮೃತವ ಸದಾ ದಣಿಯಲುಂಡು, ಒಂದು ದಿನ ಸವಿಯೂಟ ತಪ್ಪಿದರೆ, ಹಲವ ಹಂಬಲಿಸಿ ಹಲ್ಲುಗಿರಿದು ಎನ್ನ ಕೊಂದು ಕೂಗುತ್ತಿದೆ ನೋಡಾ. ಶ್ವಪಚನುತ್ತಮನ ಕೂಡೆ ಸಂಕೊಲೆಯ ನಿಕ್ಕುವರೆ ಅಯ್ಯಾ? ಕಲಿಸಿ ಕಲಿಸಿ ಕೈಬೆರಳು ಮೊಂಡಾದವು. ಅಗಿದಗಿದು ಹಲ್ಲು ಚಪ್ಪಟಾದವು. ಉಂಡುಂಡು ಬಾಯಿ ಬೀಡಾಯಿತ್ತು. ತನುಹಳದಾಗಿ ಅಲ್ಲಿಗಲ್ಲಿಗೆ ಕಣ್ಣು ಪುಟ್ಟಿತ್ತು. ಮನ ಹೊಸತಾಗಿ ಹನ್ನೆರಡು ವರುಷದ ರಾಜಕುಮಾರನಾದೆನು. ಇನ್ನೇವೆ ನಿನ್ನೇವೆನಯ್ಯಾ? ಎನ್ನ ಕೇಡಿಂಗೆ ಕಡೆ ಇಲ್ಲ. ಕಾಯವಿಕಾರವೆಂಬ ಕತ್ತಲೆಗವಿಯಿತ್ತು. ಮನೋವಿಕಾರವೆಂಬ ಮಾಯೆ ಸೆರೆವಿಡಿದಳು. ಇಂದ್ರಿಯ ವಿಕಾರವೆಂಬ ಹುಚ್ಚು ನಾಯಿಗಳು ಕಚ್ಚಿ ಕಚ್ಚಿ ಒದರುತ್ತಿವೆ. ಸಾವನ್ನಬರ ಸರಸ ಉಂಟೇ ಲಿಂಗವೆ? ಅನ್ಯಸಮಯದ ಗುಮ್ಮಟನ ಕೈವಿಡಿದೆತ್ತಿಕೊಂಡು, ನಿನ್ನ ಸಮಯದ ಶಿಶುವು ಬಾವಿಯಲ್ಲಿ ಬೀಳ್ಪರೆ, ನೋಡುತಿರ್ಪರೆ ಕರುಣಿ? ಮುಕ್ತಿಗಿದು ಪಯಣವಲ್ಲ ತಂದೆ. ನೀನಿಕ್ಕಿದ ಮಾಯಾ ಸೂತ್ರಮಂ ಹರಿದು, ದಶೇಂದ್ರಿಯಂಗಳ ಗುಣವ ನಿವೃತ್ತಿಯಂ ಮಾಡಿ, ಅಂಗ ಭೋಗ ಆತ್ಮ ಭೋಗಂಗಳ ನಡಗಿಸಿ, ಲಿಂಗದೊಳು ಮನವ ನೆಲೆಗೊಳಿಸಿ ಎನ್ನ ಪಟದೊಳಗಣ ಚಿತ್ರದಂತೆ ಮಾಡಯ್ಯ, ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

**ಕಿರಿ = ಹೊರತೆಗೆ; ಶ್ವಪಚ = ಹೊಲೆಯ; ಅಗಿ = ತಿನ್ನು; ಬೀಡು = ಮನೆ ಇನ್ನೇವೆ = ಇನ್ನೇನು ಮಾಡಲಿ? ಸಾವನ್ನಬರ = ಸಾಯುವವರೆಗೆ ಸಮಯ = ಸಮಾಜ, ಜಾತಿ; ಗುಮ್ಮಟ = ಕಲ್ಲು ಮೂರ್ತಿ, ಜಿನಪ್ರತುಮೆ; ಪಟ = ಅರಿವೆ.**

೨. ಕಪಿ ಕಳ್ಳ ಕುಡಿದು ಕಡಲದಾಂಟುವೆನೆಂದು ಲಂಘಿಸಿ ನಡುನೀರಲ್ಲಿ ಬಿದ್ದು ಮೀನ ಮೊಸಳೆಗಾಹಾರವಾದಂತಾಯಿತ್ತಯ್ಯಾ ಎನ್ನ

ಬಾಳುವೆ. ಆದಿಯಲ್ಲಿ ನಿನ್ನ ಗರ್ಭಾಬ್ಧಿಯಲ್ಲಿ ಜನಿಸಿ, ನಿನ್ನ ನೆನಹಿಲ್ಲದೆ ಇಷ್ಟಲಿಂಗವನರಿಯದ ಕಷ್ಟ ಜೀವಿಗಳ, ಪ್ರಾಣಲಿಂಗವನರಿಯದ ಪರಮ ಪಾತಕರ, ಭಾವಲಿಂಗವನರಿಯದ ಭವಕರ್ಮಿಗಳಾದ ಹುಳುಮಾನವರ, ತಂದೆ ತಾಯಿ ಬಂಧು ಬಳಗವೆಂದು ಭಾವಿಸಿದ ಬಲುಪಾತಕವೆನ್ನನಂಡಲೆದು, ಅಮರ್ದಪ್ಪಿ ಅಗಲದ ಕಾರಣ, ನಿಂದ ತಾವಿಂಗೆ ನೀರ್ಗಳಿವರಯ್ಯಾ. ಕುಳಿತ ತಾವಿಂಗೆ ಹೋಮವನಿಕ್ಕಿಸುವರಯ್ಯಾ. ನಾನು ಬಂದ ಬಟ್ಟೆಯೊಳಗೆ ಓರ್ವರು ಬಾರರಯ್ಯಾ. ಕಾಲ ನಾಳಿಂಗೆ ಕಾಲ್ದುಳಿಯಾದೆನಯ್ಯಾ. ಶುನಕ ಸೂಕರಾದಿಗಳ ಬಸಿರಲ್ಲಿ ಬರುವಂತೆ ಮಾಡಿತ್ತಯ್ಯ ಎನ್ನ ಮಾಯೆ. ಓರ್ವರಿಗೆ ಹುಟ್ಟಿ ಮತ್ತೋರ್ವರ ಅಪ್ಪ ಎಂಬ ನಾಣ್ನುಡಿಯು ಗೃಷ್ಟ ಎನಗಾಯಿತ್ತಯ್ಯ ಗುರುವೆ. ಈ ದೋಷವಂ ಕರುಣದಿಂದ ಕಳೆದು, ಶುದ್ಧನಮಾಡಿ, ನಿನ್ನನೆ ಜನನಿ ಜನಕನೆಂದು, ನಿನ್ನ ಭಕ್ತರನೆ ಬಂಧು ಬಳಗವೆಂಬ ಸುಜ್ಞಾನಮಂ ಕೊಟ್ಟು, ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ನಿನ್ನತ್ತಲೆ ಸಮ್ಮುಖಮಾಡಿ ಅಕ್ಕರಿಂದೆ ರಕ್ಷಿಸುದಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಕಳ್ಪ = ಸಿಂದಿ; ಲಂಘಿಸು = ಜಿಗಿಯು; ಹುಳುಮಾನವ = ಕ್ಷುಲ್ಲಕ ಮನುಷ್ಯ; ಅಂಡಲೆ = ಒತ್ತು, ತೊಂದರೆ ಕೊಡು; ಅಮರ್ = ಹತ್ತಿಯಾಗಿರು, ಗಟ್ಟಿಯಾಗಿ ಹತ್ತು; ಅಮರ್ದಪ್ಪು = ಗಟ್ಟಿಯಾಗಿ ಅಪ್ಪು; ಶುನಕ = ನಾಯಿ; ಅಕ್ಕರು = ಪ್ರೀತಿ.

೩. ಕುನ್ನಿಗೆ ರನ್ನದ ಹಲ್ಲಣವ ಹಾಕಿದಂತೆ, ಹಂದಿಯು ತಂದು ಅಂದಣವನೇರಿಸಿದಂತೆ ಎನಗೊಲಿದು ಶಿವ ಲಾಂಛನವ ಕೊಟ್ಟ ಕಾರಣವೇನಯ್ಯ, ಗುರುವೆ? ನಾನು ಗುರು ಕೊಟ್ಟ ಇಷ್ಟಲಿಂಗವ ಮರೆದು ಅನ್ಯದೈವಕ್ಕೆರಗಿ ಲಿಂಗದ್ರೋಹಿಯಾದೆನಯ್ಯ. ಜಂಗಮವ ಕೆಡೆನುಡಿದೆ. ಕೈವಿಡಿದ ಸ್ತ್ರೀಯಳ ಕಡಿಖಂಡವ ಮಾಡಿದೆ. ಒಡನಾಡಿದ ಕಡುಗೂಪನನಿರಿದು ಕೊಂದೆ. ನಂಬಿದ ಹಳೆಯರ ಪ್ರಾಣಕ್ಕೆ ಮುನಿದೆ. ಪಶುವಿನ ಶಿಶುವ ತಲೆಯೊಡೆಯನಿಕ್ಕಿದೆ. ಪರಧನವ ಕದ್ದೆ. ಪರಸ್ತ್ರೀಯರಗಳುಪಿದೆ. ಭವಿ ಹೆಣ್ಣುಗಳ ಕೂಡುಂಡ ಬಾಯ ಹುಳುಕನಯ್ಯ ನಾನು. ಇಂತಪ್ಪ ಮಹಾ ಪಾತಕಂಗಳ ಮಾಡಿದ ಹೊಲೆಯ ನಿವನೆಂದು ನೀನರಿದ ಬಳಿಕ ಎನಗೆ ವಿರಕ್ತಿ ಎಂಬ ಲಾಂಛನವ ಕೊಟ್ಟುದು ಕೋಪದ ಕರುಣವಲ್ಲದೆ, ಕೃಪೆಯಲ್ಲವಯ್ಯಾ. ಅದೇನು ಕಾರಣ ವೆಂದೊಡೆ, ಬಟ್ಟೆಯ

ಒಡಿವ ಕಳ್ಳ ಬಂಟನ ಭೂಪಾಲ ಬೇಹನರಿಕ್ಕಿ, ಹಿಡಿತರಿಸಿನಾಳೆ ಶೂಲಕ್ಕೆ ತೆಗಿಸುವರೆ, ಇಂದು ಆ ಕಳ್ಳ ಒಂಟೆಂಗೆ, ಪುನುಗು ಜವ್ವದಿಯ ಲೇಪಿಸಿ, ಪುಷ್ಪಿನ ದಂಡೆ, ಕೊರಳು ಮಂಡೆ ಉರಮೊಳಗೆ ಅಡ್ಡಹಾಕಿ, ಹಾಲು ತುಪ್ಪ ಹಣ್ಣುಗಳ ಉಣಕೊಟ್ಟು, ಅಡಿಗಡಿಗೆ ಅಡಿಕೆಲೆಯ ಮೆಲಕೊಟ್ಟು, ವೀರವಂದದ ಹರೆ ಕಹಳೆಯುಂ ಅವನ ಮುಂದೆ ಸಂಭ್ರಮಿಸುವ ಬರಿಯ ಉಪಚಾರದಂತೆ, ನಾನು ಮಾಡಿದ ಸರ್ವದ್ರೋಹಕ್ಕೆ ನಿನ್ನ ಮನ ನೊಂದು ಎನ್ನ ನೆಕ್ಕಲಿ ನರಕಕ್ಕೆ ನೂಂಕುವದಕ್ಕೆ ಕೊಟ್ಟ ಪಟ್ಟ ಉಪಚಾರದ ಲಾಂಛನವಲ್ಲದೆ ದಿಟಮೊಲವಲ್ಲವಯ್ಯಾ ದೇವನೇ. ನಾನು ಮುಂದನರಿಯದ ಅಂಧಕನಯ್ಯಾ. ನಿನ್ನ ಬಾಗಿಲ ಕಾಯ್ವ ಗೊಲ್ಲನಯ್ಯಾ. ನಿನ್ನ ಕುದುರೆಯ ಕಾವ ಗೋಪನಯ್ಯಾ. ನಿನ್ನ ಚಮ್ಮಾವುಗೆಯ ಹೊತ್ತು ಬರುಕುವ ಬೋವರ ಲೆಂಕನಯ್ಯಾ. ನಿನ್ನ ಪಡಿಗವ ಹಿಡಿವ ದಿಂಡೆಯಯ್ಯಾ. ನೀನುಗುಳ್ದ ತಾಂಬೂಲವನುಂಬ ನಿಸ್ನಾದಿಯ ಹಳೆಯನಯ್ಯಾ. ನಿನ್ನಂಗಣದಲ್ಲಿ ಬೊಗಳುವ ಶ್ವಾನನಯ್ಯಾ. ನಿನ್ನ ಮನೆಯ ನಡೆಸೊಡರಯ್ಯಾ. ಎನ್ನ ತಪ್ಪ ಕಾಯಯ್ಯಾ. ಕಾಯಯ್ಯಾ. ಶಿವಧೋ ಶಿವಧೋ ಘನಲಿಂಗಿಯ ಮೋಹದ ಚನ್ನ ಮಲ್ಲಿಕಾರ್ಜುನಾ.

ಹಲ್ಲಣ = ಥಡಿ; ಅಂದಣ = ಪಲ್ಲಕ್ಕಿ; ಲಾಂಛನ = ಗುರುತು; ಕೆಡೆ = ದುಷ್ಟ; ಕೂಪ = ಸ್ನೇಹಿತ; ಹಳೆಯ = ಹಳಬ, ಪರಿಚಾರಕ, ಪಶು = ಅಕಳು; ಅಳುಪು = ತೊಂದರೆ ಕೊಡು; ಬೇಹು = ಸುದ್ಧಿ, ಗುಪ್ತಸುದ್ದಿ; ಪುನುಗು = ಕಸ್ತುರಿ; ವೀರವಂದ = ಶೌರ್ಯವನ್ನು ಉಗ್ಗಡಿಸುವ; ಹರೆ = ನಗಾರಿ; ಎಕ್ಕಲ = ದೊಡ್ಡ, ಘೋರ ಗೋಪ = ದನಕಾಯುವವ; ಚಮ್ಮಾವುಗೆ = ತೊಗಲಿನ ಮುಚ್ಚೆ, ಬೋವ = ಭೋಯಿ ಲೆಂಕ = ಸೇವಕ; ಪಡಿಗ = ಪೀಕದಾನಿ; ಸೊಡರು = ದೀಪ; ದಿಂಡೆ = ದಾಸಿ, ಒರಟು ಹೆಂಗಸು.

೪. ಕೇಳು ಕೇಳಯ್ಯಾ ಆತ್ಮನೇ ಎರಡು ಪ್ರಕಾರದ ಆದಿ ಮಧ್ಯಾವಸಾನವ. ತಿಳಿದು ತಿಳಿದು ನೋಡು. ಕೆಡಬೇಡ, ಕೆಡಬೇಡ. ತಂದೆಯ ದೆಸೆಯಿಂದ ತಾಯಿಯ ಯೋನಿ ಚಕ್ರದಲ್ಲಿ ಬಂದುದೇ ಆದಿ. ಹೊನ್ನು, ಹೆಣ್ಣು, ಮಣ್ಣು ನನ್ನದೆಂದು ಹಿಡಿದು ಷಟ್ಕರ್ಮವನಾಚರಿಸಿ ಸುಖದುಃಖಗಳಲ್ಲಿ ಮುಳುಗಿಪ್ಪುದೇ ಮಧ್ಯ. ಅಂತಕನ ಕೈಯಿಂದ ಅರಿದು ಸಣ್ಣಿಸಿಕೊಂಡು ಭವಕ್ಕೆ ನೂಂಕಿಸಿ ಕೊಂಬುದೇ ಅವಸಾನ. ಇದನರಿದು ಇವಕ್ಕೆ ಹೇಯ ಮಂಮಾಡು. ಮತ್ತೆ ಆದಿ ಮಧ್ಯಾವಸಾನಮಂ ತಿಳುಹುವೆನು. ನಾಸು.

ಮಹಾಲಿಂಗದ ಗರ್ಭಾಬ್ಧಿಯಲ್ಲಿ ಬಂದೆನೆಂಬುದೇ ಆದಿ. ಲೋಕದ ವ್ಯವಹಾರವ ಸಾಕು ಮಾಡಿ ಇಷ್ಟಲಿಂಗದಲ್ಲಿ ನೈಷ್ಠೆಯಾಗಿ, ಪ್ರಾಣಲಿಂಗದಲ್ಲಿ ಪರಿಣಾಮಿಯಾಗಿ, ಕ್ಷುತ್ತಿಂಗೆ ಭಿಕ್ಷೆ ಶೀತಕ್ಕೆ ರಗಟೆಯಾಗಿ, ಮೋಕ್ಷಕಾಮಿಯಾಗಿಪ್ಪುದೇ ಮಧ್ಯ. ತನುವ ಬಿಡುವಲ್ಲಿ ಮನವ ಪರಬ್ರಹ್ಮಕ್ಕೆ ಸಮರ್ಪಣೆಯ ಮಾಡಿ ಜನನ ಮರಣವ ಗೆಲುವುದೇ ಅವಸಾನ. ಇದನರಿದು ಇವಕ್ಕೆ ಮೆಚ್ಚಿ ಲಿಂಗವನೆ ಸಾಧಿಸು, ವೇಧಿಸು. ಇಂತಲ್ಲದೆ ಕಪಿಯ ಕೈಯ್ಯ ಕನ್ನಡಿಯಂತೆ ಕುಣಿದರೆ ಕುಣಿದು, ಏಡಿಸಿದರೆ ಏಡಿಸಿ, ಹಲುಗಿರಿದರೆ ಹಲುಗಿರಿದು, ಮನವಾಡಿದಂತೆ ನೀನಾಡಬೇಡ. ಮನವಾಡಿದಂತೆ ಆಡಿದವಂಗೆ ಭಕ್ತಿ ಎಲ್ಲಿಯದು, ಜ್ಞಾನವೆಲ್ಲಿಯದು, ವೈರಾಗ್ಯವೆಲ್ಲಿಯದು, ವಿರಕ್ತಿ ಎಲ್ಲಿಯದು, ಮುಕ್ತಿ ಎಲ್ಲಿಯದಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ,

ಅವಸಾನ= ಅಂತ್ಯ; ಸಜ್ಜಿಸು= ಅರಿಯು; ಹ್ಯೇಯ= ತಿರಸ್ಕಾರ; ಪರಿಣಾಮಿ= ಆನಂದ ಪಡುವವ; ವೇಧಿಸು= ಹೊಡೆ, ಕೂಡು; ಏಡಿಸು= ಸಿಂದಿಸು

೫. ಎಲೆ ಕರುಣಿ ಜನನಿಯ ಜಠರಕ್ಕೆ ಎನ್ನ ತರಬೇಡವಯ್ಯಾ. ತಂದರೆ ಮುಂದೆ ತಾಪತ್ರಯಕ್ಕೊಳಗಾದ ತರಳೆಯ ದುಃಖದ ಬಿನ್ನಪವ ಕೇಳಯ್ಯಾ. ಆಚಾರ ಲಿಂಗಸ್ವರೂಪವಾದ ಘ್ರಾಣ, ಗುರುಲಿಂಗಸ್ವರೂಪವಾದ ಜಿಹ್ವೆ, ಶಿವಲಿಂಗಸ್ವರೂಪವಾದ ನೇತ್ರ, ಜಂಗಮಲಿಂಗಸ್ವರೂಪವಾದ ಶ್ರೋತ್ರ, ಮಹಾಲಿಂಗಸ್ವರೂಪವಾದ ಪ್ರಾಣ, ಪಂಚಬ್ರಹ್ಮಸ್ವರೂಪವಾದ ತನು, ಇಂತಿವೆಲ್ಲವು ಕೂಡಿ ಪರಬ್ರಹ್ಮಸ್ವರೂಪ ತಾನೆಯಾಗಿ, ಆನೆಯರೂಪ ತಾಳಿ ಹಾಳುಗೇರಿಯ ಹೊಗುವ ಹಂದಿಯಂತೆ ಭವದಲ್ಲಿ ಎಂತು ನುಸುಳುವೆನಯ್ಯಾ? ಹೇಸಿ ಹೇಡಿಗೊಂಡೆನಯ್ಯಾ, ನೊಂದೆನಯ್ಯಾ, ಬೆಂದೆನಯ್ಯಾ, ಬೀಗಿವರಿದು ನಿಂದುರಿದೆನಯ್ಯಾ. ಎನ್ನ ಮೊರೆಯ ಕೇಳಯ್ಯಾ ಮಹಾಲಿಂಗವೇ. ಎನ್ನ ಭವಕ್ಕೆ ನೂಂಕಬೇಡವಯ್ಯಾ. ನಾನು ಅನಾದಿಯಲ್ಲಿ ಭೋಗಕ್ಕಾಸೆ ಮಾಡಿದ ಫಲದಿಂದೆ, ಅಂದಿಂದ ಇಂದುಪರಿಯಂತರ, ನಾನಾಯೋನಿಯಲ್ಲಿ ಬಂದು ನಾಯಿ ಉಣ್ಣದ ಓಡಿನಲ್ಲಿ ಉಂಡು ನರಕೋಟಲೆಗೊಂಡೆನಯ್ಯಾ. ಎನಗೆ ಹೊನ್ನು ಬೇಡ, ಹೆಣ್ಣು ಬೇಡ, ಮಣ್ಣುಬೇಡ, ಭೋಗವು ಬೇಡ, ಭಕ್ತಿಯು ಬೇಡ, ಫಲವು ಬೇಡ, ನಿಮ್ಮ ಶ್ರೀಪಾದವ ನೊಡಗೂಡಲು ಬೇಡ, ಎನಗೆ ಪುರುಷಾಕಾರವು ಬೇಡವಯ್ಯಾ. ಎನ್ನ ಮನ ಒಪ್ಪಿ ಪಂಚೈವರು ಸಾಕ್ಷಿಯಾಗಿ ನುಡಿವುತಿಪ್ಪೆನಯ್ಯಾ.

ಸಿವಸ್ವಾಸೆ, ಎನಗೊಂದು ಕರುಣಿಸಯ್ಯ. ತಂದೆ ಡೋಹರ ಕಕ್ಕಯ್ಯ ಮಾದರ ಚನ್ನಯ್ಯ ಅಂಬಿಗರ ಚೌಡಯ್ಯ ಇಂತಪ್ಪ ಶಿವಶರಣರ ಮನೆಯ ಬಾಗಿಲ ಕಾವ ಶುನಕನ ಮಾಡಿ ಎನ್ನನಿರಿಸಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಬಿನ್ನಪ = ಪ್ರಾರ್ಥನೆ; ಕುಳಿ = ತಗ್ಗು; ಬತ್ತು = ಸಾಮರ್ಥ್ಯ; ಹೇಸಿಗೊಳ್ಳು = ಅಂಜು; ಅಸಹ್ಯಪಡು; ಮೊರೆ = ದುಃಖ; ಓಡು = ಮಣ್ಣಿನ ಪಾತ್ರೆ, ಪೋಣಿ; ಕೋಟಲೆ = ತೊಂದರೆ,

೬. ಆದಿ ಅನಾದಿಯಿಂದತ್ತಣ ದೂರಕ್ಕೆ ದೂರ ಭಾವನಿರ್ಭಾವಕ್ಕೆ ಬಾರದಿರ್ದ ನಿಃಕಲ ಪರಬ್ರಹ್ಮವೇ, ಮುನ್ನ ನೀನು ಶಾಪ ದೋರುವಲ್ಲಿ ನಿನ್ನೊಳಂಕುರಿಸಿ ನಾನು ತಾಮಸ ಮುಸುಂಕಿ ಜನನ ಮರಣಕ್ಕೊಳಗಾಗಿ ಎಂಬತ್ತು ನಾಲ್ಕು ಲಕ್ಷ ಪ್ರಾಣಿಗಳ ಗರ್ಭದಿಂಬಂದು ಒಸ್ಮೆ ಮಾಸ ವನಸ್ಪಂದಿಂಗೆ ನಾನುಂಡ ಮೊಲೆಹಾಲು ಸಪ್ತ ಸಮುದ್ರಕ್ಕೆ ಸರಿ ಇಲ್ಲವಯ್ಯಾ. ಇಂತಪ್ಪ ಮಾನವ ಜನ್ಮದಲ್ಲಿ ಬಂದು ಬಂದುದು ಗಣಿತಕ್ಕೆ ಬಾರವಯ್ಯಾ. ಈ ಜನ್ಮದಲ್ಲಿ ನಾನು ಪಿಂಡೋತ್ಪತ್ಯದಲ್ಲಿಯೇ ಶರಣಸತಿ ಲಿಂಗಪತಿ ಎಂಬ ಜ್ಞಾನ ತಲೆದೋರಿ ಶರಣು ವೆಣ್ಣಾಗಿ ಹುಟ್ಟಿದೆನಯ್ಯಾ. ಎನಗೆ ನಿನ್ನ ಬಯಕೆ ಎಂಬ ಸಿಂಗರದ ಸಿರಿಯು ಮುಡಿಯಾಯಿತ್ತು. ಎನಗೆ ನಿನ್ನ ನೋಡುವೆ ನೆಂಬ ಮುಗುಳ್ನೊಲಿ ಮೂಡಿದವು. ಎನಗೆ ನಿನ್ನೊಳು ನುಡಿಯಬೇಕೆಂಬ ಉರುವಣಿಯ ಸಂಪದದ ಜವ್ವನ ಕುಡಿವರಿಯಿತ್ತು. ಎನಗೆ ನಿನ್ನ ನೊಲಿಸ ಬೇಕೆಂಬ ಸಂಭ್ರಮದ ಕಾಂಚೀ ಧಾಮ, ಕಟಿ ಸೂತ್ರ, ನೇವುರ ನಿಡಿಗೊಂಡಿ ಹವೆಂಬ ಆಭರಣ ಅನುಲೇಪನ ವಸ್ತ್ರಂಗಳೆನಗೆ ಅಲಂಕಾರನಾಯಿತ್ತು. ಭಕ್ತಿ ಎಂಬ ವಿರಹಾಗ್ನಿ ಎನ್ನ ಹೃದಯ ಕಮಲದಲ್ಲಿ ಬೆಳೆದು ಬೀಗಿ ಬೇರುವರಿದು ನಿಂದಲ್ಲಿ ನಿಲ್ಲಲೀಸದಯ್ಯಾ, ಕುಳಿತಲ್ಲಿ ಕುಳ್ಳಿರಲೀಸದಯ್ಯಾ, ಮನದಲ್ಲಿ ಮನೋಹರ ವಪ್ಪುದಯ್ಯಾ. ಅಂಗ, ಮನ, ಪ್ರಾಣ, ನೇತ್ರ, ಚಿತ್ತಂಗಳೊಳು ಪಂಚ ಮುಖವೆಂಬ ಪಂಚ ಬಾಣಂಗಳು ನೆಲೆಗೆಟ್ಟವಯ್ಯಾ. ನಾನು ಧರೆಯೊಳುಳಿವುದರಿದು. ಪ್ರೇಮದಿಂ ಬಂದು ಕಣ್ತುಂಬಿ ನೋಡಿ ಮನ ವೊಲಿದು ಮಾತಾಡಿ ಕರುಣದಿಂ ಕೈವಿಡಿದು ಅಕ್ಕರಿಂದಾಲಿಂಗಿಸಿ ದಿಟ್ಟಿಸಿ ಲಲ್ಲೆವಾತಿನಿಂ ಗಲ್ಲವ ಪಿಡಿದು ಪುಷ್ಪ ಪರಿಮಳದಂತೆ ನಾನೀನೆಂಬ ಉಭಯವಿಲ್ಲದಂತೆ ಕೂಡೆನ್ನ ಪ್ರಾಣೇಶನೇ. ಕೂಡದಿರ್ದಡೆ ಗಲ್ಲವ ಪಿಡಿ, ಗಲ್ಲವ ಪಿಡಿಯದಿರ್ದಡೆ ಕೈವಿಡಿ, ಕೈವಿಡಿಯದಿರ್ದಡೆ ಮಾತಾಡು, ಮಾತಾಡದಿ

ರ್ದಡೆ ನೋಡು, ನೋಡದಿರ್ದಡೆ ಬಾ, ಬಾರದಿರ್ದಡೆ ಪ್ರಮಥ ಗಣಂಗಳೊಡನೆ, ನಿನ್ನವಳೆಂದು ನುಡಿ, ನುಡಿಯದಿರ್ದಡೆ ನಿನ್ನ ಮನದಲ್ಲಿ ನಿನ್ನವಳೆಂದು ಭಾವಿಸು, ಭಾವಿಸದಿರ್ದಡೆ ಪುಣ್ಯ ಕಣ್ಗೆಟ್ಟರೆಯುದು, ಕರ್ಮದ ಕಾಂತಿಯುಪ್ಪದು, ಕಾಮು ಕೈದುಗೊಂಬ, ಕಾಲ ಕಲಿಯುಪ್ಪ, ಭವಕ್ಕೆ ಬಲ್ಮೆ ದೋರುವುದು, ಇಂತಿವರು ಎನಗೆ ಅವಾಂತರದೊಳಗಾದ ಹಗೆಗಳಯ್ಯ. ಇವರೆನ್ನ ತಿಂದು ತೇಗಿ ಹಿಂಡಿ ಹಿಪ್ಪೆಯಂ ಮಾಡಿ, ನುಂಗಿ ಉಗುಳ್ದು ಓಂದಣ ಬಟ್ಟೆಗೆ ನೂಂಕುವರಯ್ಯಾ. ಹೋಗಲಂಜುವೆನಯ್ಯಾ. ಹೋದರೆ ಚಂದ್ರ ಸೂರ್ಯಾದಿಗಳುಳ್ಳನ್ನಕ್ಕರ ನಿನ್ನ ನೆನೆವ ಮನಕ್ಕೆ ನಿನ್ನ ಕೊಂಡಾಡುವ ಬಾಯಿಗೆ ನಿನ್ನ ನೋಡುವ ಕಂಗಳಿಗೆ ಸೆರೆ ಸಂಕೊಲೆಯುಪ್ಪದಯ್ಯಾ. ಇಂತಿವಂ ತಿಳಿದು ನಿನ್ನ ಮನದೊಳು ನನ್ನವಳೆಂದರೆ ದಿವಾ ರಾತ್ರಿಯುಳ್ಳನ್ನಕ್ಕರ ಎನ್ನ ಮನ ಜಿಹ್ವೆನೇತ್ರಂಗಳಿಗೆ ಬಂಧನಂಗಳೆಂಬುವು ಮುಂದುಗೆಡುವವಯ್ಯಾ. ನಿನ್ನ ನೆನೆನೆನೆದು ಎನ್ನ ಮನ ಬೀಗಿ ಬೆಳೆದು ತಳಿರಾಗಿ ಹೂಮಿಡಿ ಗೊಂಬುದಯ್ಯಾ. ನಿನ್ನ ಹಾಡಿ ಹಾಡಿ ಜಿಹ್ವೆ ಅಮೃತಸಾಗರದೊಳೋಲಾಡುತಿಪ್ಪದಯ್ಯಾ. ನಿನ್ನ ನೋಡಿ ನೋಡಿ ಕಂಗಳು ನಿಜಮೋಕ್ಷ ವಡೆವುದಯ್ಯಾ. ನಾನು ಈರೇಳು ಭುವನಕ್ಕೆ ಬರುವಹಾದಿ ಹಾಳಪ್ಪದಯ್ಯಾ. ಶತ್ರುಗಳೆನಗೆ ಮಿತ್ರರಪ್ಪರಯ್ಯಾ. ಭವದ ಬಳ್ಳಿ ಅಳಿವುದು, ಕಾಲನ ಕಲಿಕೆಡುವುದು. ಕಾಮುಕೈದು ಖಂಡಿಸುವುದು. ಕರ್ಮದ ಕಾಂತಿ ಕರಗುವದು. ಪುಣ್ಯದ ಕಣ್ಣು ಬಣ್ಣಗೆಡುವುದಯ್ಯಾ. ನಿನಗೊಲಿದವರ ನಿನ್ನಂತೆ ಮಾಡು. ಕೃಪಾಕರನೆ ನಿನಗೆ ಮೆಚ್ಚಿದೆನಯ್ಯಾ. ನಿನ್ನ ಮೆಚ್ಚಿಸಿಕೊಳಲರಿಯದ ಮುಗ್ಧವೆಣ್ಣಿನ ಪತಿ ಭಕ್ತಿಯಂ ಸಾಧಿಸುವ ಎನ್ನವಸ್ಥೆಯಂ ಲಾಲಿಸು. ನಿನ್ನ ಶ್ರೀಪಾದ ಪದ್ಮದೊಳಗೆನ್ನ ಒಡಗೂಡಿಸು. ಎನ್ನ ಬಿನ್ನಪಮಂ ಪಾಲಿಸು, ಘನಲಿಂಗಿಯ ಮೋಹದ ಚನ್ನ ಮಲ್ಲಿಕಾರ್ಜುನಾ.

ಜವ್ವನ= ಯೌವ್ವನ, ಪ್ರಾಯ; ಕುಡಿವರಿ = ಹಬ್ಬು; ಕಾಂಚೀಧಾಮ =ನಡಪಟ್ಟ, ನೈವುರ= ಕಾಲಂದುಗೆ; ಬೀಗು = ಹೆಚ್ಚಾಗು; ಲಲ್ಲೆವಾತು = ಪ್ರೀತಿಯ ಮಾತು; ಕೈದು = ಶಸ್ತ್ರ; ಬಲ್ಮೆ= ಬಲುವು, ಜೋರು; ಅವಾಂತರ = ಮಧ್ಯದಲ್ಲಿ; ತಳಿರು = ಚಿಗರು; ಓಲಾಡು = ಹರಿದಾಡು; ಈರೇಳು =ಹದಿನಾಲ್ಕು;

೭. ಎಲೆ, ಮನ ಬುದ್ಧಿ ಚಿತ್ತಹಂಕಾರವೆಂಬ ಚತುರ್ವಿಧ ಎನ್ನ ಮಂತ್ರಿ ಪ್ರಧಾನರು ಕೇಳಿರಯ್ಯಾ. ನಾನು ಕೆಟ್ಟು ಭ್ರಷ್ಟನಾಗಿ ಹೋದ ಕರ್ಮ ದಂಡಲೆಯ ಬಗೆಯ. ನಾನು ಸ್ವರ್ಗ ಮರ್ತ್ಯ ಪಾತಾಳದೊಳಗುಳ್ಳ

ಭೋಗರಾಜ್ಯಕ್ಕೆ ಅರಸಾಗಿ ಅನಂತಕಾಲ ಪಟ್ಟವನಾಳಿ ಎನ್ನ ಚತುರಂಗ ಬಲಕ್ಕೆ ಬೇಡಿದ್ದ ತಪ್ಪದೀವ ಕಂದಾಯವುಂ ಕೊಟ್ಟು ಕೊಟ್ಟು, ನಷ್ಟವಾಗಿ ಎನಗೆ ಎರಡು ನಾಲ್ವತ್ತೆರಡು ಲಕ್ಷದ ಭವರಾಟಣದ ಋಣಬಿದ್ದಿತ್ತು. ಆ ಋಣಕ್ಕಂಜಿ ಭೋಗರಾಜ್ಯವುಂಬಿಟ್ಟು ದರಿದ್ರನಾದೆನು. ಎನಗೆ ನೀವು ಮಾಡುವ ರಾಜ್ಯಕಾರ್ಯದ ಮಣಿಹವ ನಿಮಗೆ ತೆಗೆಯಿತ್ತು. ಎನ್ನ ನಂಬಿ ಕೆಡಬೇಡ, ಕೆಡಬೇಡ. ನಿಮ್ಮ ಪೂರ್ವಾಶ್ರಯಕ್ಕೆ ನೀವು ಹೋಗಿ. ಎಲೆ ಅಜ್ಞಾನ ತಮಕ್ಕೆ ಜ್ಯೋತಿ ಪ್ರಕಾಶವನುಳ್ಳ ಸದ್ಯಜ್ಞಾನವೇ, ನೀನು ಕೇಳಯ್ಯಾ. ಆತ್ಮನು ಜ್ಞಾನಸ್ವರೂಪನೆಂದು ವೇದಾಗಮಂಗಳು ಶ್ರುತಿ ಸಾರುತ್ತಿವೆ. ನಾನು ಜೀವಾತ್ಮನುಂ ಅಳಿದು, ಶರಣತ್ವವುಂ ಕೈವಿಡಿದೆ. ಎನ್ನೊಳಗೆ ನೀನು ನನೆಯೊಳಗಣ ಪರಿಮಳದಂತೆ ಹುದುಗಿಪ್ಪೆಯಾಗಿ, ನೀನು ನಾನು ಗೋಳಕಾಕಾರ ಸ್ವರೂಪವಾದ ನಿಃಕಲ ಬ್ರಹ್ಮದಲ್ಲಿ ಉದಯವಾದ ಸಹೋದರರು. ಎನ್ನ ಎಂಟು ವೀದಿಯ ಪಟ್ಟಣದ ಚೌದಾರಿಯ ಏಕಾಂತವೀದಿಯ ಸುವರ್ಣವರ್ಣದ ಸಿಂಹಾಸನದ ಮೇಲಿಪ್ಪ ಮನೋನಾಥನಂ ಕಾಣಿಸಿ ನಿನ್ನ ಶ್ರೀಚರಣವುಂ ಎಂದೆಂದು ಪೂಜೆಯ ಮಾಡುವ ಭೃತ್ಯನೆಂದು ಭಯಭಕ್ತಿಯಿಂದ ಬಣ್ಣಿಸಿ ಎನ್ನ ಮಾಯಾಪಾಶವುಂ ಸುಡುವಂತೆ ಒಲವನುಂಟುಮಾಡು. ಚಿದಾಕಾಶದಲ್ಲಿ ಆರು ಮೂರಾಗಿ, ಮೂರು ಒಂದಾಗಿ, ಎರಡು ವೀದಿಯ ಮಾಣಿಕ್ಯಪುರದ ಸಂಗಮ ಸ್ಥಲವೆಂಬ ಅರಮನೆಯಲ್ಲಿ ನೆಲಸಿಪ್ಪ ಮಹಾರಾಯನ ಮುಂದೆ ಎನ್ನನಿಕ್ಕಿ ನಿನ್ನ ಆದಿ ಅನಾದಿಯ ಹಳೆಯನೆಂದು ಬಿನ್ನಪಂಗೈದು ಕರುಣರಸವುಂ ತುಂಬಿರಿಸಿ ಎನಗೆ ಮುಕ್ತಿ ರಾಜ್ಯವುಂ ಕೊಡುವಂತೆ ಸಂಧಾನವುಂ ಮಾಡಿ ಆ ಮುಕ್ತಿ ರಾಜ್ಯಕ್ಕೆ ಪಟ್ಟವುಂ ಕಟ್ಟಿಸಿ ಅಭಯಹಸ್ತವುಂ ಕೊಡಿಸಿ, ಎನ್ನ ಎಂಭತ್ತನಾಲ್ಕು ಲಕ್ಷ ಭವರಾಟಣದ ಋಣವ ತಿದ್ದುವಂತೆ ಮಾಡಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ರಾಟಣ = ರಾಟಾಳ, ಚಕ್ರ; ಮಣಿಹ = ಮಹತ್ವದ ಕಾರ್ಯ; ನನೆ = ಮೊಗ್ಗು ಸಂಧಾನ = ವ್ಯವಸ್ಥೆ; ಅಂಡಲೆ = ತೊಂದರೆ, ತ್ರಾಸ; ವೀದಿ = ಬೀದಿ, ದಾರಿ

೮. ಏನೆಂಬೆನೇನೆಂಬೆನಯ್ಯಾ? ಮತಿಗೆಟ್ಟು, ಮಾನವ ಲೋಕಕ್ಕೆ ಬಂದೆ. ಬಂದ ಬರವಿನಲ್ಲಿಯೇ ಭವವೆಂಬ ಭೂಪತಿ ಎನ್ನ ಸೆರೆವಿಡಿದು ಕಾಲ ಕಾಮನ ವಶಕ್ಕೆ ಕೊಟ್ಟನಯ್ಯಾ. ಕಾಲಂಗೆ ಕಾಯುವ ದಂಡವ

ತೆತ್ತುದು ಲೆಕ್ಕವಿಲ್ಲ. ಮನಸಿಜಂಗೆ ಮನನ ದಂಡವ ತೆತ್ತುದು ಲೆಕ್ಕವಿಲ್ಲ. ಹೋದಿಹೆನೆಂದರೆ ಒಳಕಾವಲರು ಹೊರಕಾವಲರು ಹೋಗಲೀಸರು. ನನ್ನ ಸೆರೆಯ ನಾನು ಬಿಡಿಸಿಕೊಂಡು ಹೋದಿಹೆನೆಂದರೆ, ನಾನು ದರಿದ್ರನಯ್ಯಾ. ಎನ್ನ ಸೆರೆಯ ಬಿಡಿಸಿಕೊಳ್ಳಿರಯ್ಯಾ ಬಸವಾದಿ ಪ್ರಮಥರಿರಾ. ನಿಮ್ಮ ಸೆರೆಗೊಡ್ಡಿ ಬೇಡಿಕೊಂಬೆನಯ್ಯಾ. ಭಕ್ತಿಗೆ ಭಂಡಾರವಾಗಿಪ್ಪ ಸಂಗನಬಸವಣ್ಣ, ಎನಗೆ ಹಾಗ ತೂಕ ಭಕ್ತಿಯ ಕೊಡಯ್ಯಾ. ಪ್ರಸಾದವೇ ಚಿತ್ಪಿಂಡ ಸ್ವರೂಪವಾಗಿಪ್ಪ ಚನ್ನಬಸವಣ್ಣ, ಎನಗೆ ಹಾಗ ತೂಕ ಜ್ಞಾನವ ಕೊಡಯ್ಯಾ. ಮಾಯಾ ಕೋಳಾಹಳನಪ್ಪ ಅಲ್ಲಮ ಪ್ರಭುವೇ, ಎನಗೆ ಹಾಗ ತೂಕ ವೈರಾಗ್ಯವ ಕೊಡಯ್ಯಾ. ಬೆಟ್ಟದ ಗುಂಡ ತಂದು ಇಷ್ಟ ಲಿಂಗದಲ್ಲಿ ಐಕ್ಯವ ಮಾಡಿದ ಗಟ್ಟಿನಾಳ ಲಿಂಗವೇ. ಎನಗೆ ಹಾಗ ತೂಕ ಲಿಂಗವ ಕೊಡಯ್ಯಾ. ಇವು ನಾಲ್ಕು ಹಾಗ ಕೂಡಿದಲ್ಲಿಯೇ ಮನ ಲಿಂಗದಲ್ಲಿ ಅಂದಣವಪ್ಪುದು. ಮನ ಲಿಂಗದಲ್ಲಿ ಅಂದಣನಾದಲ್ಲಿಯೇ ಎನಗೆ ಚಂದ್ರಾಯುಧ ದೊರೆಕೊಂಬುದು. ಆ ಚಂದ್ರಾಯುಧವಂ ಪಿಡಿದು ಒಳಕಾವಲ ನಾಲ್ವರ ಕೊರಳ ಕೊಯ್ದು, ಹೊರಕಾವಲೈವರ ಹುರಿ ಹಂಚುಮಾಡಿ ಕೂಟದ ಕಾವಲರ ಪಾಟಮಾಡದೆ. ಭವದ ಬಳ್ಳಿಯ ಕೊಯ್ದು ಕಾಲಕಾಮರ ಕಣ್ಣಕಳೆದು ಎಡಬಲದ ಹಾದಿಯ ಹೊದ್ದದೆ ನಡುವಣ ಸಣ್ಣ ಬಟ್ಟೆಗೊಂಡು ಬಂದು ರತ್ನಾಚಲವನೇರಿ ಅಲ್ಲಿಪ್ಪ ಲಿಂಗಮಂ ಬಲಗೊಂಡು, ನೀವಿರ್ಪ ಉನ್ಮನಿಯಪುರಕೆ ಬಂದು ನಿಮ್ಮ ಪಡಿಗ ಪಾದರಕ್ಷೆಯ ಪಿಡಿದು ನಿಮ್ಮ ಬಾಗಿಲ ಕಾಯ್ದಿಪ್ಪದೆ ಎನಗೆ ಭಾಷೆ. ಎನ್ನ ಬಿನ್ನಪಮಂ ನೀವು ಮನವೊಲಿದು ಕರುಣಿಪುದಯ್ಯಾ. ಇದಕ್ಕೆ ನೀವೇ ಸಾಕ್ಷಿಯಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ತೆತ್ತು = ಕೊಡು; ಪಾಟ = ನೆಲಕ್ಕೆ ದಬ್ಬೋಣ, ನಾಶ; ಅಚಲ = ಪರ್ವತ; ಬಲಗೊಳ್ಳು = ನಮುಸ್ಕರಿಸು;

೯. ನಿತ್ಯವಾಗಿಪ್ಪ ಪರಮಾತ್ಮನು ಅನಿತ್ಯವಾಗಿಪ್ಪ ದೇಹದೊಡನಾಡಿ ಜೀವನಾಗಿ ಹೋಗುತ್ತಿದೆ ನೋಡಾ. ನಿತ್ಯ ಅನಿತ್ಯದ ಸಂದನಿಕ್ಕಿದ ಸಮರ್ಥರಾರಯ್ಯ? ಇದಕ್ಕೆ ಅನುಕೂಲವಾಗಿ ಮಾಡಿದವರು ಮತ್ತೊಬ್ಬರುಂಟೆಂದು ನಿನ್ನ ಮನದಲ್ಲಿ ತಿಳಿಯಬೇಡಾ. ಅದು ತನಗೆ ತಾನೆ ಮಾಡಿ

ಕೊಂಡಿತ್ತು. ಅದು ಹೇಗೆಂದೊಡೆ, ಆತ್ಮನು ಭೋಗವೆಂಬ ಸೂಜಿಯು ಪಿಡಿದು ಆ ಸೂಜೆಗೆ ಮೂರೊಂದು ಕರಣ ಎರಡು ಮೂರು ಇಂದ್ರಿಯಂಗಳೆಂಬ ನವಸೂತ್ರವನೇರಿಸಿ ತನು ಮನವ ಸಂಚ ಸೇರುವೆಯನು ಮಾಡಿ ಕಟಿದಾರವಂ ಕಟ್ಟಿ ಸಂದರಿಯು ಬಾರದಂತೆ ಅದು ತನಗೆ ತಾನೆ ಹೊಲುಕೊಂಡಿತ್ತು. ಇದ ಬಿಚ್ಚಿ ಬೇರೆ ಮಾಡುವ ಪರಿಯಾವುದಯ್ಯಾ? ಭೋಗವೆಂಬ ಸೂಜಿಯು ಮುರಿದು, ನಾಲ್ಕು ಕರಣ ಐದಿಂದ್ರಿಯುವೆಂಬ ಒಂಬತ್ತು ದಾರವಂ ತುಂಡು ತುಂಡಿಗೆ ಹರಿಯಲೊಡನೆ, ತನು ಪ್ರಕೃತಿಯು ಕೂಡಿತ್ತು. ಪ್ರಾಣ ಪರಬ್ರಹ್ಮವ ಕೂಡಿತ್ತು ಕಾಣಾ ಘನಲಿಂಗಿಯು ಮೋಹದ ಚನ್ನ ಮಲ್ಲಿಕಾರ್ಜುನಾ.

ಸಂದು = ಪದರು. ಸೂತ್ರ = ದಾರ. ಸಂಚ = ಕೂಟ. ಪ್ರಕೃತಿ = ವಸ್ತುವಿನ ಮೂಲ ಸ್ವರೂಪು.

೧೦. ಮೂರ್ತೈದು ತನುವಿಡಿದ ನರಗುರಿಗಳೆಲ್ಲ ಭಕ್ತರಪ್ಪರೆ? ಅಲ್ಲಲ್ಲ. ನಮ್ಮ ಶಿವ ಭಕ್ತರ್ಗೆ ಸದ್ಗೋಷ್ಠಿ ಸದಾಚಾರಂಗಳೇ ಪಾದಂಗಳು. ಗುರುವೇ ಸ್ಥೂಲತನು, ಲಿಂಗವೇ ಸೂಕ್ಷ್ಮ ತನು, ಜಂಗಮವೇ ಕಾರಣ ತನು, ಸಮ್ಯಜ್ಞಾನವೇ ಶೀರ್ಷ ಪ್ರಸಾದ ನೇತ್ರಂಗಳು, ಇಂತಪ್ಪ ತನುವಿಡಿದು ತಾವು ಊರಿಗೆ ಹೋಗುವಂತೆ ಮುಕ್ತಿಪುರಕ್ಕೆ ಹೋಗಿ, ನೊಸಲ ಕಣ್ಣ ಪಂಚಮುಖ ದಶಭುಜ ಉಮಾ ವಲ್ಲಭನಾದ ಪರಶಿವನ ಓಲಗದ ಗಣಂಗಳ ಮಧ್ಯದಲ್ಲಿ ಓಲಾಡುತಿಪ್ಪರಯ್ಯ ನಮ್ಮವರು. ಇಂತಪ್ಪ ತನುವಿಡಿಯುದ ಅಜ್ಞಾನಿಗಳು ಕಿರುಬಟ್ಟೆಯಲ್ಲಿ ಹರಿದು, ಕಂಗೆಟ್ಟು ಕಾಡಹೊಕ್ಕು ಕಣ್ಣು ಕಾಣದೆ ಕಮರಿ ಬಿದ್ದು, ಬಳಲುತಿಪ್ಪರಿದೇನಯ್ಯ ಘನಲಿಂಗಿಯು ಮೋಹದ ಚನ್ನ ಮಲ್ಲಿಕಾರ್ಜುನಾ.

ಗೋಷ್ಠಿ = ನುಡಿ; ನೊಸಲು = ಹಣೆ; ಓಲಗ = ದರಬಾರ, ಕಿರು = ಸಣ್ಣ ಕಮರಿ = ನೆಲದಲ್ಲಿಯ ಬಿರುಕು, ತಗ್ಗು

೧೧. ಆರು ಬಣ್ಣದ ಹದಿನೈದು ದೇಹದ ಕೋಡಗ ಒಂದು ರತ್ನವ ಮೆಟ್ಟಿಕೊಂಡು, ಒಂದು ರತ್ನವ ಹಿಡಿದುಕೊಂಡು, ಮತ್ತೊಂದು ರತ್ನವ ಮುರಿ ಮಾಡಿಕೊಂಡು, ಮೇಲು ಪರ್ವತದ ಶಿಖರವನೇರಿತ್ತು ನೋಡಾ. ಆದಕ್ಕೆ ತಾನಿರ್ದ ಪಂಚವರ್ಣದ ಪಟ್ಟಣವ ಹಾಳುಮಾಡಿ, ಆ ಪಟ್ಟಣದ ಪ್ರಜೆ ಪರಿವಾರಂಗಳ ಕೈಕಾಲ ಕೊಯ್ದು, ಮಂತ್ರಿ ನಾಲ್ವರ ಕಡಿ ಖಂಡವ ಮಾಡಿ, ಪ್ರಾಣ ಸ್ನೇಹಿತರಪ್ಪ ಸಂಗಾತಿಗಳೈವರ ಕಣ್ಣ ಕಳೆದು, ಒಡಹು

ಟ್ಟಿದರಿಬ್ಬರ ತಲೆಯೊಡೆಯ ನಿಕ್ಕಿ, ತನ್ನಿಂದ ತಾನೇ ಸತ್ತಿತ್ತು. ಭಕ್ತಿ ಎಂಬ ಬಿಲ್ಲ ಹಿಡಿದು ನಿರಹಂಕಾರವೆಂಬ ತಿರುಹನೇರಿಸಿ, ಉರಿಯ ಬಾಣದಲೆಚ್ಚು ಮರ್ಕಟನ ಕೊಂದು ಆ ರತ್ನಂಗಳ ತಕ್ಕೊಂಡು ಸೂರೆಯ ಬಟ್ಟಾತನೀಗ ಲಿಂಗಕ್ಕೆ ಸಲೆ ಸಂದ ಶರಣನಯ್ಯಾ ಘನಲಿಂಗಿಯ ಮೋಹದ ಚನ್ನ ಮಲ್ಲಿಕಾರ್ಜುನಾ.

ಕಡಿಖಂಡ = ತುಂಡಾದ ಮಾಂಸ, ಸಂಗಾತಿ = ಜೋಡಿಗ, ತಿರುಹ = ಬಾಣದ ಹೆದೆ, ಸಂದ = ಸೇರಿದ,

೧೨. ಎಲೆ ತಂಗಿ, ಶರಣಸತಿ ಲಿಂಗಪತಿಯಾದ ಪತಿವ್ರತಾ ಭಾವದ ಚಿನ್ಹ ನಿನ್ನ ನಡೆನುಡಿಯಲ್ಲಿ ಹೊಗರುದೋರುತ್ತಿದೆ. ನಿನ್ನ ಪೂರ್ವಾಪರವಾವುದವ್ವ? ಸುತ್ತೂರು ಸಿಂಹಾಸನದ ಪರ್ವತ ದೇವರ ಶಿಷ್ಯರು ಭಂಡಾರಿ ಬಸವಪ್ಪೊಡೆಯ ದೇವರು, ಆ ಭಂಡಾರಿ ಬಸವಪ್ಪೊಡೆಯ ದೇವರ ಶಿಷ್ಯರು ಕೂಗುಲೂರ ನಂಜಯ್ಯ ದೇವರು, ಆ ನಂಜಯ್ಯ ದೇವರ ಕರಕಮಲದಲ್ಲಿ ಉದಯವಾದ ಶರಣು ವೆಣ್ಣಯ್ಯ ನಾನು. ಎನ್ನ ಗುರುವಿನ ಗುರು ಪರಮಗುರು ಪರಮಾರಾಧ್ಯ ತೋಂಟದಾರ್ಯನಿಗೆ ಗುರುಭಕ್ತಿಯಿಂದ ಎನ್ನ ಶರಣು ಮಾಡಿದರು. ಆ ತೋಂಟದಾರ್ಯನು, ತನ್ನ ಕೃಪೆ ಎಂಬ ತೊಟ್ಟಿಲೊಳಗೆನ್ನ ಮಲಗಿಸಿ, ಪ್ರಮಥ ಗಣಂಗಳ ವಚನ ಸ್ವರೂಪಾರ್ಥವೆಂಬ ಹಾಲು ತುಪ್ಪಮಂ ಸದಾ ದಣಿಯಲೆರೆದು, ಅಕ್ಕರಿಂದ ರಕ್ಷಣ್ಯಮಂ ಮಾಡಿ ಘನಲಿಂಗಿಯೆಂಬ ನಾಮಕರಣಮಂ ಕೊಟ್ಟು ಪ್ರಾಯ ಸಮರ್ಥೆಯಂಮಾಡಿ ಸತ್ಯ ಸದಾಚಾರ ಜ್ಞಾನ ಕ್ರಿಯೆಗಳೆಂಬ ದಿವ್ಯಾಭರಣಂಗಳಂ ತೊಡಿಸಿ ಅರುಹೆಂಬ ಬಣ್ಣವ ನಿರಿವಿಡಿದುಡಿಸಿ, ಅರ್ಥಿಯ ಮಾಡುತಿಪ್ಪ ಸಮಯದಲ್ಲಿ ಘನಲಿಂಗಿಯ ಮೋಹದ ಚನ್ನ ಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು ಬೇಡ ಕಳುಹಲು ಎಮ್ಮವರು ಅವರಿಂಗೆ ಮಾತನಿಕ್ಕಿದರವ್ವಾ.

ಹೊಗರು = ಪ್ರಕಾಶ. ನಿರಿವಿಡಿದು = ವ್ಯವಸ್ಥೆಯಿಂದ. ಅರ್ಥಿ = ಬೇಡಿಕೆ ಇಚ್ಛೆ, ಪ್ರೀತಿ.

೧೩. ಇನ್ನೇವೆ ನಿನ್ನೇವೆ ನೆಲೆ ತಂದೆ? ಹೆಣ್ಣು ಬಾಲೆಯ ಮೊರೆಯ ಕೇಳಯ್ಯಾ. ಮುನ್ನ ಹುಟ್ಟಿದ ಒಂಬತ್ತು ಮಕ್ಕಳ ನಗೆ ನುಡಿಯ ಕೇಳಲಾರೆ. ಮನೆಯ ಗಂಡನ ಬೆಡಗು ಬಿನ್ನಾಣವ ನೋಡಲಾರೆ. ಎನ್ನ ಸಿರಿಯಲ್ಲಿ ನಾನು ಓಲಾಡಲಾರೆ. ಎನಗೊಂದು ಮಗುವ ಕೊಡಯ್ಯ ಗುರುವೇ. ಆ

ಮಗುವಿನ ಕೈಯ್ಯಿಂದ ಎನ್ನ ಗಂಡನ ತಲೆಯೊಡೆಯನಿಕ್ಕಿಸು. ಮಕ್ಕಳ ಕೊರಳನರಿಸು. ಎನ್ನ ದಂಡವ ಕೊಳ್ಳಿಸು. ಪಟ್ಟಣಕ್ಕೆ ಹೋಹ ಹಾದಿ ಮೂರು ಬಟ್ಟೆ ಕೂಡಿದ ಮಧ್ಯದಲ್ಲಿ ಮಣಿಹವ ಮಾಡುತಿರ್ಪ್ಪ ಕೈಕಾಲಿಲ್ಲದ ಮೋಟಂಗೆ ಮೆಚ್ಚಿ ಮರುಳಾದ ಪತಿವ್ರತೆಯಯ್ಯಾ ನಾನು. ಎನ್ನ ಕೊಂಡು ಹೋಗಿ ಅವನಿಗೆ ಮದುವೆಯ ಮಾಡಯ್ಯಾ ಘನಲಿಂಗಿಯ ಮೋಹದ ಚನ್ನ ಮಲ್ಲಿಕಾರ್ಜುನಾ.

ಬೆಡಗು = ಸೌಂದರ್ಯ. ಬಿನ್ನಾಣ = ವಿಜ್ಞಾನ, ಜ್ಞಾನ, ಜಾಣತನ.

೧೪. ಎಮ್ಮ ತಂದೆಯ ಬಸಿರಲ್ಲಿ ಬಂದಳೆಮ್ಮಪ್ಪೆ. ಎನ್ನ ತಂಗಿಯರಿಬ್ಬರು ಹೆಂಡರಾದರೆನಗೆ. ಎನ್ನ ಸತಿಯರು ಎನ್ನ ಮದವಳಗಿತ್ತಿಯಮಾಡಿ ಎಮ್ಮಪ್ಪಗೆ ಮದುವೆಯ ಮಾಡಿದರು. ಎನ್ನ ಗಂಡನ ಮನೆಯ ಒಡವೆಯ ಉಗುರು ಕಣ್ಣಿನಲೆತ್ತಿ ಒಗತನವ ಮಾಡುವೆನು. ಎಮ್ಮಕ್ಕನ ಕೈಯಿಂದ ಎನ್ನ ಗಂಡನ ಹೆಂಡತಿ ಎನಿಸಿಕೊಂಬೆನು. ಎನ್ನ ಗಂಡ ಅಳಲಿ ಅಳದೆ ಹೋಗಲಿ. ಪತಿಭಕ್ತಿಯ ಬಿಡೆ ಕಾಣಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಒಗತನ = ನಡವಳಿಗೆ; ಅಳಲು = ದುಃಖಪಡು

೧೫. ದೇವಾ ಕಂಬಳಕ್ಕೆ ಹೋಗಿ ಕನಕದ ಕೊಡನ ಕಂಡಂತೆ, ಮರ್ತ್ಯಲೋಕಕ್ಕೆ ಬಂದು ಮಾನವ ಜನ್ಮವ ಕಂಡೆ. ಆ ಮಾನವ ಜನ್ಮಕ್ಕೆ ಗುಣಾಕ್ಷರಜ್ಞೆಯಾದಂತೆ ಲಿಂಗ ಬಂದುದ ಕಂಡೆ. ಎನಗಿದು ಚೋದ್ಯವಯ್ಯಾ. ಎನಗಿದು ವಿಪರೀತವಯ್ಯಾ. ಇದಕ್ಕೆ ನುಡಿದಂತೆ ನಡಿಸು, ನಡೆದಂತೆ ನುಡಿಸು. ನುಡಿನಡೆಗೆ ಭಿನ್ನವಾದರೆ ನಿಮ್ಮ ಶರಣರೊಪ್ಪರು. ನಿಮ್ಮ ಶರಣರೊಪ್ಪದಲ್ಲಿಯೇ, ನೀನೊಪ್ಪೆ. ನೀನೊಪ್ಪದಲ್ಲಿಯೇ ಎನಗೆ ಬಂದಿತ್ತು ಹಿಂದಣ ಭವದ ಹೆಮ್ಮಾರಿ. ಅದಕ್ಕೆ ನಾನಂಜುವೆನಯ್ಯಾ, ನಾನಳಕುವೆನಯ್ಯಾ. ನುಡಿನಡೆ ಎರಡಾಗದಂತೆ ನಡಿಸಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಕಂಬಳ = ಕೂಲಿ, ಗುಣಾಕ್ಷರಜ್ಞೆ = ಉತ್ತಮವಾದುದನ್ನು ತಿಳಿಯುವದು, ಚೋದ್ಯ = ಆಶ್ಚರ್ಯ

೧೬. ಅರ್ಥದ ಮೇಲೆ ಆಶೆಯುಳ್ಳನ್ನಕ್ಕರ ಮರ್ತ್ಯ ಲೋಕದ ಮಹಾ ಜಂಜರಿ ಬಿಡದಯ್ಯ. ನಾನು ಮರ್ತ್ಯಲೋಕದ ಹಂಬಲ ಹರಿದು, ನಿನ್ನ

ನಂಬಿ ನೆಚ್ಚಿದನೆಂಬುದಕ್ಕೆ ಪ್ರತ್ಯಕ್ಷಮಂ ತೋರುತಿರ್ಪೆ ನೋಡಯ್ಯ ಲಿಂಗವೇ. ಅನರ್ಘ್ಯವಾದ ಮುತ್ತು ರತ್ನಂಗಳ ಹೊಂಗೊಡದಲ್ಲಿ ತುಂಬಿ ನಾನಿರ್ದು ಏಕಾಂತ ವಾಸಕ್ಕೆ ಉರುಳಿ ಬರಲು ಹಾವ ಕಂಡ ಮರ್ಕಟನಂತೆ ನಾನು ಅಡ್ಡ ಮುಖವ ನಿಕ್ಕಿದೆನು. ನಿನಗೊಲಿವ ಶರಣನೆಂದೆ ಭಾವಿಸಿ ಎನ್ನ ಮರ್ತ್ಯಲೋಕದ ಸಂಕೊಲೆಯ ತರಿದು ನಿನ್ನ ಗಣಂಗಳ ಒಳಗು ಮಾಡು. ಅದಲ್ಲದೆ ಅದರ ಮೇಲೆ ನಾನು ಕಿಂಚಿತ್ತು ಆಸೆ ಮಾಡಲೊಡನೆ, ಚಂದ್ರ ಸೂರ್ಯಾದಿಗಳುಳ್ಳನ್ನಕ್ಕ ಎನ್ನ ಹಂದಿ ನಾಯಿ ಬಸುರಲ್ಲಿ ಹಾಕದಿದ್ದೆಯಾದರೆ ನಿನಗಲ್ಲನು ಪ್ರಭುವಿನಾಣೆ. ಆಳಿನಪಮಾನ ಆಳ್ದಂಗೆ ತಪ್ಪದಯ್ಯ ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನಾ.

ಜಂಜರಿ = ತೊಂದರೆ; ಸಂಕೊಲೆ = ಬೇಡಿ; ಆಳ್ದ = ಅರಸು, ಒಡೆಯ.

೧೭. ಎನ್ನಂತರಂಗದಲ್ಲಿ ಕುಮಂತ್ರ ಕುಡಿಮರಿದಭೇದವ ನಿನ್ನೊಡನೆ ಮರೆಯಿಲ್ಲದೆ ಆಡುತಿಪ್ಪೆನಯ್ಯಾ. ಒಡೆಯನೇ ಜಾಗ್ರಾವಸ್ಥೆಯಲ್ಲಿ ಲೋಕೋಪಚಾರ ಬಿಡದು. ಜಿಹ್ವಾಲಂಪಟತನ ಉಡುಗದು. ಸುಖ ದುಃಖಕ್ಕೆ ಎನ್ನ ಮನ ಅಳುತ್ತ ನಗುತ್ತ ಇದ್ದ ಬಳಿಕ ಎನಗೆ ಇಷ್ಟಲಿಂಗದ ಪೂಜೆ ಎಲ್ಲಿಯದೋ? ಸ್ವಪ್ನಾವಸ್ಥೆಯಲ್ಲಿ ಬ್ರಹ್ಮಾಂಡದೊಳಗುಳ್ಳ ಕಡೆ ಮೊದಲಿಲ್ಲದ ದುರ್ವಿಕಾರ ಸ್ವಪ್ನದಲ್ಲಿ ಹೊರದಾಡುವ ಜೀವಂಗೆ ಪ್ರಾಣಲಿಂಗದ ಪೂಜೆ ಎಲ್ಲಿಯದೋ? ಸುಷುಪ್ತಾವಸ್ಥೆಯಲ್ಲಿ ಲಿಂಗವ ಕೂಡಿ ಮೈಮರೆದಿರದೆ ಕನಸಿನ ಸ್ತ್ರೀಯ ಕೂಡಿ ಆನಂದಿಸುವ ಕಾಮವಿಕಾರಿಗೆ ಭಾವಲಿಂಗ ಪೂಜೆ ಎಲ್ಲಿಯದೋ? ಈ ಪ್ರಕಾರದ ದುರ್ಗುಣಂಗಳ ನಾನು ಮರೆಮಾಡಿಕೊಂಡು ಶರಣನೆಂದು ವಚನಂಗಳ ಹಾಡಿದ ಗೀತ ತಿಂಗಳ ಬೆಳಗಿನ ಸಿರಿಯ ಕಂಡು ನಾಯಿ ಹರುಷಂಗೊಂಡು ಗೋಳಿಟ್ಟು ಬೊಗಳಿದಂತಾಯಿತ್ತು. ಅದೇನು ಕಾರಣವೆಂದೊಡೆ ನೀನೆನ್ನಂಗದ ಮೇಲಕ್ಕೆ ಬಂದೆಯೆಂಬ ಸಂತೋಷಕ್ಕೆ ಉಬ್ಬಿ ಕೊಬ್ಬಿ ಅಹಂಕರಿಸಿ ಹಾಡಿದೆನಲ್ಲದೆ ನುಡಿದಂತೆ ನಡೆ ಇಲ್ಲ. ಇದು ಕಾರಣ ಎನ್ನ ಮನದ ಕಾಳಿಕೆಯಂ ಕರುಣದಿಂದೆ ಕಳೆದು, ಅವಸ್ಥಾತ್ರಯಂಗಳಲ್ಲಿ ನಿನ್ನ ಅಪ್ಪಿ ಅಗಲದಿಪ್ಪಂತೆ ಎನ್ನ ಪರಮಕಾಷ್ಠೆಯ ಮಾಡಯ್ಯ ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನಾ.

ಕುಮಂತ್ರ = ದುಷ್ಟವಿಚಾರ; ಕುಡಿಮರಿ = ಹಬ್ಬು; ಉಡುಗು = ಕಡಿಮೆಯಾಗು; ತಿಂಗಳ = ಚಂದ್ರ; ಕಾಳಿಕೆ = ಮಾಲಿನ್ಯ; ಕಾಷ್ಠೆ = ಸ್ಥಳ, ಸ್ಥಿತಿ; ಪರಮ = ಶ್ರೇಷ್ಠ

೧೮. ಭಕ್ತಿ. ಜ್ಞಾನ, ವೈರಾಗ್ಯ ತಪ್ಪದೆ ಷಟ್‌ಸ್ಥಲ ಮಾರ್ಗದಿರವು ತಪ್ಪದೆ, ಜ್ಞಾನಕ್ರಿಯೆಗಳಲ್ಲಿ ಪ್ರೇಮ ತಪ್ಪದೆ, ಶರಣಸತಿ ಲಿಂಗಪತಿಯಾದ ಭಾವ ತಪ್ಪದೆ, ಇಷ್ಟ ಪ್ರಾಣ ಭಾವಲಿಂಗದ ಪೂಜೆ ತಪ್ಪದೆ, ತ್ರಿವಿಧ ಲಿಂಗಂಗಳಲ್ಲಿ ಅರ್ಪಿತಾವಧಾನ ತಪ್ಪದೆ, ತೀರ್ಥ ಪ್ರಸಾದದಲ್ಲಿ ಒಯ್ಯಾರ ತಪ್ಪದೆ, ಮಂತ್ರಂಗಳ ಒಡವೆರೆದು ಲಿಂಗ ಸಂಧಾನ ತಪ್ಪದೆ, ಹಿಡಿದ ವ್ರತನೇಮಂಗಳಲ್ಲಿ ನಿಷ್ಠೆ ತಪ್ಪದೆ, ನಡೆದಂತೆ ನುಡಿದು ನುಡಿದಂತೆ ನಡೆವ ಭಾಷೆ ತಪ್ಪದೆ, ದ್ವೈತಾ ದ್ವೈತವ ನೂಂಕಿ, ಬರಿಯ ವೈರಾಗ್ಯವನೊಪ್ಪಗೊಪ್ಪದೆ, ನಿಜವಿರಕ್ತಿಯ ಹೊಲಬು ತಪ್ಪದೆ, ಪಂಚೈವರೊಂದಾಗಿ ಸದ್ಯೋನ್ಮುಕ್ತಿಗೆ ಮನವಿಟ್ಟು ಅರ್ಥಿಯಿಂದ ಆಚರಿಸುವರಯ್ಯ ನಿಮ್ಮ ಶರಣರು, ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಇರವು = ಸ್ಥಿತಿ, ಒಯ್ಯಾರ = ಸೌಂದರ್ಯ,

೧೯. ಅಂಗದ ಮೇಲಕ್ಕೆ ಬಂದಾಚಾರ ಲಿಂಗದ ಹೊಲಬನರಿಯವೆ. ಕೈಲಾಸದ ಮೇಲಿಪ್ಪ ಬಾಲಕೋಟಿಸೂರ್ಯಪ್ರಕಾಶವನುಳ್ಳ ಶಿವನನೊಲಿಸಬೇಕೆಂದು ಒಂದು ವಸ್ತುವ ಎರಡಿಟ್ಟು ನುಡಿವ ಮಂದಮತಿಗಳು ನೀವು ಕೇಳಿರೊ. ಮಹಾಮೇರು ಪರ್ವತವೇ ಶರಣ. ಆ ಶರಣನ ಸ್ಥೂಲತನುವೇ ರಜತಾದ್ರಿ. ಸೂಕ್ಷ್ಮತನುವೇ ಹೇಮಾದ್ರಿ. ಕಾರಣ ತನುವೇ ಮಂದರಾದ್ರಿ. ಈ ಮೂರು ಪರ್ವತಂಗಳುಳ್ಳ ಅರಮನೆಯಲ್ಲಿ ನೆಲಸಿಪ್ಪ ಶಿವನಾರೆಂದೊಡೆ ನಿರಾಕಾರ ಶೂನ್ಯ ಬ್ರಹ್ಮವೇ ಶರಣನ ಕುರಿತು, ಪಂಚಸಾದಾಖ್ಯಂಗಳನೊಳಕೊಂಡು, ಸಾಕಾರವಾಗಿ ಬಂದ, ಇಷ್ಟಲಿಂಗವೇ ಶಿವನು. ಸಾಕ್ಷಿ॥ ಜ್ವಲತ್ಕಾಲಾನಲಾಭಾಸ ತಟಿತ್ಕೋಟಿ ಸಮಪ್ರಭಾ। ತಸ್ಯೋರ್ಧ್ವೇಚ ಶಿಖಾಸೂಕ್ಷ್ಮ ಚಿದ್ರೂಪ ಪರಮಾಕಲಾ ॥೧॥ ಏವಂಭೇದ ಕಳಾದೇವಿ ಸದ್ಗುರು ಶಿಷ್ಯ ಮಸ್ತಕೇ। ಹಸ್ತಾಬ್ಜ ಮಥನಂಗ್ರಾಹ್ಯಂ। ತಸ್ಯ ಭಾವಕರೋದಿತಂ॥೨॥ ಇಂತೆಂದುದಾಗಿ ಆ ಶಿವನೇ ಶಿವನು. ಆ ಶಿವನ ಧರಿಸಿಪ್ಪ ಶರಣನ ಕಾಯವೇ ಕೈಲಾಸ. ಇದಲ್ಲದೆ ಮತ್ತೊಂದು ಕೈಲಾಸ, ಬೇರೊಬ್ಬ ಶಿವನುಂಟೆಂದು, ಭ್ರಮೆಗೊಂಡು ಮನವನೆರಡು ಮಾಡಿಕೊಂಬುದು ಅಜ್ಞಾನ ನೋಡಾ. ಉರದ ಮಧ್ಯದಲ್ಲಿಪ್ಪ ಗಂಡನ ಬಿಟ್ಟು, ಇನ್ನು ನೆರೆಮನೆಯ ಗಂಡರಿಗೆ ಮನವನಿಕ್ಕುವ ಹಾದರಗಿತ್ತಿಗೆ ಪತಿ ಭಕ್ತಿ ಎಲ್ಲಿಯದೋ? ಶ್ರೀಗುರುನಾಥ ಕರುಣಿಸಿ ಕೊಟ್ಟ ಕ್ರಿಯಾ ಲಿಂಗವನು ಅರ್ಚನೆ ಪೂಜನೆಯಿಂದ ಅರ್ಪಿತಾವಧಾನದಿಂದ ಧ್ಯಾನ ಧಾರಣದಿಂದ ಸಮತೆ ಸಮಾ

ಧ್ಯಾನದಿಂದ, ಧ್ಯಾನ ಮೌನ ಉಪಾವಸ್ಥೆಯಿಂದ ಮುನಿಸು ಮೂದಲೆ ಯಿಂದ ಕಾಮಿಸಿ ಕಂಬನಿ ದುಂಬಿ ಕರಸ್ಥಲದಲ್ಲಿಪ್ಪ ಪ್ರಾಣೇಶ್ವರನ ಶ್ರೀಚರ ಣಕ್ಕೆ ಲಲಾಟ ಪೂಜೆಯಂ ಮಾಡಿ, ಒಲಿಸಿ ಒಡಗೂಡಿ ನಿಜಮುಕ್ತಿ ಪಡೆಯದೆ ಆಕಾರವ ಮರೆದು, ನಿರಾಕಾರವ ಕೂಡಿಹೆನೆಂಬ ಲೋಕದ ಕಾಕು ಮಾನವರೆಲ್ಲ ಕಾಲಕಾಮರಿಗೆ ತುತ್ತಾಗಿ, ಕಾಲಾಗ್ನಿ ರುದ್ರನ ಹೊಡೆಗಿರ್ಚಿನೊಳಗಾದರಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾ ರ್ಜುನಾ.

ಅವಧಾನ = ಏಕಾಗ್ರತೆ, ಉಪಾವಸ್ಥೆ = ಅಭಿಲಾಷೆ, ಚಿಂತೆ, ಮುನಿಸು = ಸಿಟ್ಟು, ಮೂದಲೆ = ಉಪಹಾಸ, ಕಾಕು ಮಾನವ = ವಿಚಾರವಿಲ್ಲದ ಮನುಷ್ಯ, ಹೊಡೆಗಿರ್ಚು = ದೊಡ್ಡ ಕಿಚ್ಚು.

೨೦. ನಿಜಗುಣ ಚಂದಿಮರಸರು ಕರಸ್ಥಲದ ನಾಗಿದೇವರೊಳ ಗಾದ ಎಲ್ಲ ವಿರಕ್ತರು ಆವ ಕ್ರಿಯೆಯಲ್ಲಿ ಆಚರಿಸಿ ಲಿಂಗೈಕ್ಯರಾದರೆಂದು ಕೆಟ್ಟು ನುಡಿವ ಭವಹೇತುಗಳು ನೀವು ಕೇಳಿರೊ. ಅವರು ತುಂಬಿದ ತೊರೆಯ ಸಂಭ್ರಮದಿಂದ ಹಾಯಿದರು. ಶಕ್ತಿಯ ಮುಂದೆ ಹಾಲು, ಬೋನ, ಹಣ್ಣು, ಕಜ್ಜಾಯವಿಕ್ಕಿರಲು ಆ ಶಕ್ತಿಯ ಮಾತನಾಡಿಸಿ ಉಂಡರು. ವಿಷವ ಪದಾರ್ಥವೆಂದು ಕೊಡಲು ಉಂಡು ದಕ್ಕಿಸಿಕೊಂಡರು. ಪಚ್ಚೆಯುದ ಕಡಗಮಂ ತಿರುಗುಣಿಯ ಮಡುವಿಗಿಟ್ಟು, ತಿರುಗಿ ಕರೆದು ಕೊಂಡರು. ಕೆಂದೆಂಗಿನ ಎಳ ನೀರ ಭಾವಾರ್ಪಣವ ಮಾಡಿದರು. ದೇವೇಂದ್ರನ ಭೋಗಮಂ ಬಿಟ್ಟರು. ತನುವ ನಿಲಿಸಿ, ಪ್ರಾಣವ ಕೊಂಡೊ ಯ್ದರು. ಉಂಗುಷ್ಠದಲ್ಲಿ ಧರಿಸಿದ ಲಿಂಗಮಂ ತೆಗೆಯಲು, ಆ ಲಿಂಗದ ಕೂಡೆ ಪ್ರಾಣವ ಕಳುಹಿದರು. ಮಿಡಿವಿಲ್ಲಿನೊಳಗೆ ಲಿಂಗವ ನೆಚ್ಚು, ಆ ಲಿಂಗದೊಡನೆ ನಿರ್ವಯಲಾದರು. ಉಪಾಧಿಕೆಯ ಒಡಲಾಸೆಯಂ ಸುಟ್ಟರು. ಚಳಿ, ಮಳೆ ಎನ್ನದೆ ಅರಣ್ಯದಲ್ಲಿದ್ದರು. ಹಸಿದರೆ ಕೆಸರ ಮೆದ್ದರು. ಅವರು ಲಿಂಗಾಂಗ ರೂಢರಾಗಿ, ಲಿಂಗದಲ್ಲಿ ಐಕ್ಯವಾದರು. ನೀವು ಅವ ರಂತೆ ಲಿಂಗಾಂಗವ ತೋರಬೇಕು. ಅದಲ್ಲದಿರ್ದೊಡೆ, ಜ್ಞಾನ, ಕ್ರಿಯೆ ಗಳಿಂದಿರಬೇಕು. ಅಲ್ಲದಿರ್ದೊಡೆ ಸುಮ್ಮನಿರ್ದು ಶಿವಶರಣರ ಮನಸಿಂಗೆ ಬರಬೇಕು. ಹೀಗಲ್ಲದೆ ಹೊಟ್ಟೆಯ ಕಿಚ್ಚಿನ ಬಾಯಬಡುಕತನವೇತಕಯ್ಯಾ ನಿಮಗೆ? ಆನೆ ಮದವೆದ್ದು ಸೋಮ ಬೀದಿಯ ಸೂರೆಮಾಡಿತ್ತೆಂದು, ಆಡು ಮದವೆದ್ದು ಬೇಡಗೇರಿಗೆ ಹೋಗಿ ಕೊರಳ ಮುರಿಸಿಕೊಂಬಂತೆ,

ಅಂದಿನ ಕಾಲದ ಹನುಮ ಲಂಕೆಯ ದಾಂಟಿದನೆಂದು ಇಂದಿನ ಕಾಲದ ಕಪಿ ಹಳ್ಳವ ದಾಂಟಿದಂತೆ, ಅರ್ಥಿಯಿಂದ ಅರಸು ಮೆಣ್ಣ ಉಪ್ಪರಿಗೆಯ ನೇರಿದಳೆಂದು, ತೊತ್ತು ತಿಪ್ಪೆಯನೇರಿದಂತೆ, ಕುಮಾರ ಕುದುರೆಯನೇರಿ ದನೆಂದು ಗುಲಾಮ ಕುನ್ನಿಯನೇರಿದಂತೆ, ಬಲಮುರಿ ಶಂಖ ಧಿಗಿಲು ಭುಗಿಲೆಂದು ಝೇಂಕರಿಸಿತೆಂದು ಕೆರೆಯೊಳಗಣ ಗುಳ್ಳೆ, ಕಿಚು ಕಿಚು ಎಂಬಂತೆ, ತಮ್ಮಿರವ ತಾವರಿಯದೆ ಬಾಳುವ ಕಾಲದಲ್ಲಿ ಮರಣವ ಮದ್ದ ಕೊಂಬ ಈ ಖೂಳ ಮಾನವರ ಎನಗೊಮ್ಮೆ ತೋರದಿರಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಭವಿಹೇತು = ಪ್ರಪಂಚವೇ ಮುಖ್ಯ ಉದ್ದೇಶವಾಗಿದ್ದವ; ತೊರೆ = ನದಿ; ಖಂಡೆಯ = ಕತ್ತಿ; ಬಟ್ಟ = ದುಂಡನ್ನ; ಮಿಡಿ = ಒಗೆಯು; ನಿರ್ಣಯುಲು = ಶೂನ್ಯತೆ; ಉಪಾಧಿಕೆ = ತೋರಿಕೆ, ನಿಜವಲ್ಲದ ಸ್ಥಿತಿ, ಗುಳ್ಳೆ = ಶಂಖದ ಹುಳು, ಒಂದು ತರದ ಮೀನು; ಮದ್ದು = ಔಷಧ.

೨೧. ಸಾಧು ಗುಣಕ್ಕೆ ಸಲೆ ಸಂದ ವಾರಣ ಬಂದು, ಹುಟ್ಟುಗುರು ಡರ ಸಭಾ ಮಧ್ಯದಲ್ಲಿ ನಿಲ್ಲಲು, ಕೆಲದೊಳೊಬ್ಬ ಕಣ್ಣುಳ್ಳಾತ ಆನೆ ಬಂದಿ ತ್ತೆಂದು ನುಡಿಯಲೊಡನೆ ಅತಿ ಪ್ರೇಮದಿಂದ ಕಂಗಳರು ಆ ಆನೆಯ ಮುಟ್ಟಿ ನೋಡಿ, ಆನೆ ಕೊಳಗದಾಕಾರವೆಂದು ಕಾಲ ಮುಟ್ಟಿದಾತ, ಆನೆ ಒನಕೆ ಯಾಕಾರವೆಂದು ಸೊಂಡಿಲು ಮುಟ್ಟಿದಾತ, ಆನೆ ಹರಿವೆಯಾಕಾ ರವೆಂದು ಕುಂಭಸ್ಥಳವ ಮುಟ್ಟಿದಾತ, ಆನೆ ಮೊರದಾಕಾರವೆಂದು ಕಿವಿಯ ಮುಟ್ಟಿದಾತ, ಆನೆ ಕೋಲಾಕಾರವೆಂದು ಬಾಲವ ಹಿಡಿದಾತ, ಇಂತಿವರೆಲ್ಲರು ಆನೆಯ ನೆಲೆಯನರಿಯದೆ, ತಮ್ಮೊಳಗೆ ತಾವು ಕೊಂಡಾ ಡುತಿರ್ದರು. ಆನೆಯ ನೆಲೆಯ ಆನೆಯನೇರುವ ಪಟ್ಟದರಸು ಬಲ್ಲನ ಲ್ಲದೆ ಹುಟ್ಟುಗುರುಡರೇನು ಬಲ್ಲರಯ್ಯಾ? ಈ ಪ್ರಕಾರದಲ್ಲಿಪ್ಪ ಪಶು ಪ್ರಾಣಿ ಗಳು ನಿಜೈಕ್ಯದ ಆಚರಣೆಯನರಿಯದೆ ಮೂಗಿನಾಭರಣವ ಕಿವಿಗಿಕ್ಕಿ, ಕಿವಿಯಾಭರಣವ ಮೂಗಿಗಿಕ್ಕುವಂತೆ, ನುಡಿದು ನಡೆವುತಿಪ್ಪರು. ಅದು ಶಿವ ಜ್ಞಾನಿಗಳ ಮತವಲ್ಲ. ಅದು ಹೇಗೆಂದೊಡೆ, ಪ್ರತ್ಯಕ್ಷ ಜ್ಞಾನವ ಪ್ರಮಾ ಣಿಸಿ, ಅಪರೋಕ್ಷ ಜ್ಞಾನವ ಆಲೋಚಿಸಿ, ಸಹಜ ಜ್ಞಾನವ ಸಂಪಾದಿಸಿ, ಈ ಜ್ಞಾನತ್ರಯಂಗಳನೊಂದುಮಾಡಿ ಬಿಡುವ ಹಿಡಿವ ಆಚರಣೆಯ ನೆಲೆ ಗೊಳಿಸಿಕೊಂಡು, ಹಿಡಿದಾಚರಣೆಯಲ್ಲಿ ಪರಾಕ್ರಮಿಯಾಗಿ ಆದಿ ಅನಾದಿ ಮೇಲಣ ಜ್ಯೋತಿರ್ಮಯವಪ್ಪ ಸೂಕ್ಷ್ಮ ಲಿಂಗಮಂ ಬೆರಸಿ, ಭಿನ್ನವಿಲ್ಲ

ದಿರ್ಪ ಆಚರಣೆಯು ವಿವರವುಂ ಮಹೇಶ್ವರ ಬಲ್ಲನಲ್ಲದೆ, ಅಜ್ಞಾನಿ ಬಾಯಿ ಬಡುಕರವರೆತ್ತಬಲ್ಲರಯ್ಯ ಘನಲಿಂಗಿಯು ಮೋಹದ ಚನ್ನಮಲ್ಲಿ ಕಾರ್ಜುನಾ.

ವಾರಣ = ಆನೆ; ಕಂಗಳ = ಕುರುಡ; ಕೊಳಗ = ಅಳೆಯುವ ಸೇರು; ಅಪರೋಕ್ಷ = ಕಣ್ಣಿಗೆ ಅಗೋಚರ, ಪ್ರತ್ಯಕ್ಷವಲ್ಲದ;

೨೨. ಬೆಳಗು ಕತ್ತಲೆ ಎಂಬ, ಕತ್ತಲೆ ಬೆಳಗೆಂಬ ಪಶುಮತದಪಾಖಂಡಿಗಳು ನೀವು ಕೇಳಿರೋ. ಮಲ ಮಾಯಾ ಕರ್ಮಂಗಳು ಆತ್ಮಂಗೆ ಕೇಡಿಲ್ಲದೆ ಅನಾದಿಯಲ್ಲಿ ಉಂಟೆಂದು ನುಡಿವುತಿಪ್ಪಿರಿ. ಕಾಮಧೇನುವಿನ ಗರ್ಭದಲ್ಲಿ ಕತ್ತೆಯು ಮರಿ ಹುಟ್ಟುವವೆ? ಕಲ್ಪವೃಕ್ಷದ ಶಾಗೆಯು ಮರಿಯು ಹಣ್ಣು ಬೆಳೆವುದೇ? ಪರುಷದಗಿರಿಯಲ್ಲಿ ಕಬ್ಬಿಣ ಮೊಳೆದೋರುವುದೇ? ಅನಂತಕೋಟಿ ಮಿಂಚುಗಳ ಪ್ರಭೆಯನೊಳಕೊಂಡ ಪರಶಿವತತ್ವದಲ್ಲಿ ಉದಯವಾದ ಚಿದಂಶಿಕನಪ್ಪ ಪರಮಾತ್ಮಂಗೆ ಅನಾದಿ ಮಲವನುಂಟು ಮಾಡುವ ಸಿದ್ಧಾಂತಿಯು ಅಡ್ಡವಸ್ತ್ರದಲ್ಲಿಕ್ಕುವುದು ಲಿಂಗದ ಗಲ ಮೂರು ಕಲ್ಲಲ್ಲದೆ ಲಿಂಗವಿಲ್ಲ. ಅದೇನು ಕಾರಣವೆಂದೊಡೆ, ಇಕ್ಕುವಾಕೆ ಮೂಗು ಮುಚ್ಚಿಕೊಂಡು ಇಕ್ಕಿದಬಳಿಕ ಉಂಬಾತ ಹೇಗುಂಬನಯ್ಯಾ. ಆತ್ಮನು ಅನಾದಿ ಮಲಾವರಣನೆಂದು, ನೀನೆ ಉಸುರುತ್ತಿದ್ದ ಬಳಿಕ ನಿನ್ನಂಗದ ಮೇಲೆ ಬರುವ ಲಿಂಗಕ್ಕೆ ಮೂಗಿಲ್ಲವಯ್ಯಾ. ಪುಣ್ಯ ಕ್ಷೇತ್ರದಲ್ಲಿ ಲಿಂಗ ವಿಪ್ಪುದಲ್ಲದೆ ಹಾಳು ಕೇರಿಯಲ್ಲಿ ಲಿಂಗ ಉಂಟೆ? ಇಲ್ಲವೆಂಬುದು ನಿನ್ನ ನೀನೇ ತಿಳಿದು ನೋಡಾ. ಇದು ಕಾರಣ ದ್ವೈತ ಮಾರ್ಗಕ್ಕೆ ಮುಕ್ತಿಯೆಂಬುದು ಎಂದೆಂದಿಗೂ ಸಟೆ ಹೋಗಿರಿ, ಎಂದೆನಯ್ಯ .ಘನಲಿಂಗಿಯು ಮೋಹದ ಚನ್ನಮಲ್ಲಿಕಾರ್ಜುನಾ.

೨೩. ತಾಪತ್ರಯಂಗಳಿಗೆನ್ನನೊಳಗು ಮಾಡುವ ಕರ್ಮತ್ರಯಂಗಳು ಕೆಟ್ಟ ಕೇಡ ನೋಡಾ ಎಲೆ ತಂಗಿ. ಕಾಯದ ಕಳವಳಕಂಜಿ, ಸಂಚವ ಮಡಗುವ ಹೊನ್ನ ಬಿಟ್ಟಲ್ಲಿಯೇ ಸಂಚಿತ ಕರ್ಮನಾಸ್ತಿಯಾಯಿತ್ತು. ಸಂಚಿತ ಬಂದುದ ಮೊದಲಾಗಿ ಆಗಾಗಲೆ ಅನುಭವಿಸಿ, ಲಭ್ಯವ ನುಳಿಯಲೀಯ್ಯದೆ ಭೋಗವನುಂಬ ಹೆಣ್ಣು ಬಿಟ್ಟಲ್ಲಿಯೇ ಪ್ರಾರಬ್ಧ ಕರ್ಮನಾಸ್ತಿಯಾಯಿತ್ತು. ಇಂದು ಬಿತ್ತಿ ಮುಂದಕ್ಕೆ ಅನುಮಾಡುವ, ಮಣ್ಣು ಬಿಟ್ಟಲ್ಲಿಯೇ ಆಗಾಮಿ ಕರ್ಮ ನಾಸ್ತಿಯಾಯಿತ್ತು. ಸಂಚಿತ ಕರ್ಮ ನಾಸ್ತಿ

# ಬೀಳಗಿಯ ಅರಸುಗಳ ವಂಶಾವಳಿ.

**ವಾರ್ಧಿಕ॥**

ಐಸೂರ ಪಟ್ಟಣವ ನಾಳ್ವ ಭೂಪಾಲಕಂ।
ಸ್ವೈಸಿರಿಯೊಳಾ ಮದನ ಭೋಗ [ದಲ್ಲಿ] ದೇವೇಂದ್ರ।
ಸ್ವೈಸಿರಿಯೊಳಂ ಕುಬೇರನ ಗೆಲ್ದು ಸತ್ಯಭಾಷಾಹರಿಶ್ಚಂದ್ರನೆನಿಸಿ॥
ಆ ಸಂಪದಂಗಳಂ ಜಯಿಸಿ ರಣವಿಜಿತ [ರಿಂ]।
ಭಾಸುರ ಗುಣಾಭರಣ ಭೂಷಿತಾಂಡಣ್ಣನೃಪ।
ಲೇಸಾಗಿ ಧರೆಯ ಪಾಲಿಸುತಿರಲು ತತ್ಪುತ್ರಪಾರಿಷ್ಟಭೂಪನಾದಂ॥೧॥
ಈ ನೃಪಾಲನ ಪುತ್ರ ಮುಂಡಣ್ಣ ಒಡೆಯರೆಂ।
ಬೀನಾಮ ವೆಸೆದಿರು [ವ] ಕಲ್ಲಪ್ಪ ಭೂಮಿಪಂ।
ಮಾನನಿಧಿಬೋಳ ಭೂಪಾಲ ನಮ್ಮಣ್ಣನೃಪನೆನುತ ಪೆಸರ್ವಡೆದನೊರ್ವಂ॥
ಸೂನುಗಳ್ಮೂವರಾಗಿರಲು ಕಲ್ಲಪ ನೃಪ [ಂ]।
ಗಾನಿಜತನೂಜ ಮುಂಡಣ್ಣ ನರಸಪ್ಪರೆಂ।
ಬೀನವೀನದ ಪುತ್ರರುದಿಸಿ ಸುಖಮಿರುತಿರಲು ಮುಂಡಣ್ಣ ಭೂಪಾಲಗೆ।೨॥
ಭೈರವ ನೃಪಾಲನುಂ ಕಲ್ಲಪ್ಪ ಒಡೆಯರುಂ।
ವೀರನಿಧಿ ನರಸಿಂಹ ಭೂಪನತಿ ವಿಕ್ರಮನು।
ದಾರ ಗುಣ ಮಣಿಗಣಾಭರಣ ಭೂಷಿತನು ರಣವಿಜಯ ಕಲಿಕಂಠೀರವ॥
ಧೀರನೆನೆ ಪೆಸರ್ವೆತ್ತು ಜನಿಸಿ ಮೆರೆಯುತ್ತಿರಲು।
ವೈರಿವರ್ಗವನೊತ್ತಿ ಧರೆಯ ಪಾಲಿಸುತಿರ್ದ।
ಭೂರಿ ವೈಭವದಿ ಧನದನನು ಜರೆವುತ್ತಲತಿ ಕಾರುಣ್ಯಕಲಿತಹೃದಯ॥೩॥
ಎಂಟು ದಂಡಿಗೆಯ ಮಲೆತರಿ ಮನ್ನೆಯರ ಗಂಡ।
ತುಂಟರನು ಮರ್ದಿಸಿದ ಕದನಕಲಿಭೇರುಂಡ।
ಲುಂಟಾಕಲೋಕ ಶಿಕ್ಷಿತ ಭಳಿರೆ ಜಗಕೆ ಕಲಿಭೀಮ ಕದನಪ್ರಚಂಡ॥
ಉಂ[ಟೆ] ನಿನಗೆಣೆ ರಣದೊಳಗೆ ವಿಜಯ ದೋರ್ದಂಡ।
ಒಂಟರಾವುತ ಠಾಣ್ಯಗಳ ಕಟ್ಟಿದರ ಗಂಡ।
ಕಂಟ [ಕ] ಗಳಿಲ್ಲದಂತೀ ಧರೆಯ ಬಿಡದೆ ಪಾಲಿಸಿದ ಕಡು ಸುಪ್ರಚಂಡ॥೪॥

**ಕಂದ||**

ನರಸಿಂಹ ಭೂಮಿಪಾಲಂ ।
ನೆರೆಗೆಲ್ದಂ ಶಸ್ತ್ರವಿಜಯನಂ ಧರೆಪೊಗೞಲ್ ॥
ಪಿರಿದೆನಿಸಿದಶ್ವಪತಿಯಂ ।
ಭರದಿಂದಂ ಗೆಲ್ದ ವಿಕ್ರಮೈಕ ಸಹಾಯಂ ॥೫॥

ಗಡಿಯೊಳ್ಜಯಸಂಸ್ತಂಭವ ।
ನೆಡಿಸಿ[ದ] ರಣ ರಂಗ ಧೀರ ನೈತರಲಾಗಳ್ ॥
ಕಡು ಮೆಚ್ಚಿ ಕೃಷ್ಣರಾಯಂ ।
ಬಿತವತಿ ಸಂಪ್ರೀತಿಯಿಂದ ಮನ್ನಿಸಿ ಬಳಿಕಂ ॥೬॥

ತನುಭವೆ ಹರಿಯಮ್ಮನುವಂ ।
ಪಿನುಗುಂಡಿಯ ಮೂರು ಲಕ್ಷ ರಾಜ್ಯವ ಸಹಿತಂ ॥
ಧನಧಾರಾಪೂರ್ವಕದಿಂ ।
ಜನಪತಿ ನರಸಿಂಹ ಭೂಮಿ[ಪತಿ] ಗಂದಿತ್ತಂ ॥೭॥

ಮುನ್ನಿನ ತನ್ನಯ ಧರೆಯಂ ।
ಸನ್ನುತ ಪಿನುಗುಂಡಿ ಮೂರು ಲಕ್ಷೋರ್ವರೆಯಂ ॥
ಮನ್ನಿಸಿ ಪರಿಪಾಲಿಸಿದಂ ।
ಉನ್ನತ ಕಾರ್ಯಾರ್ಣವಲಂಬ ನರಸಿಂಹೇಂದ್ರಂ ॥೮॥

ನರಸಿಂಹ ಭೂಮಿಪಾಲನ ।
ವರಪುತ್ರರ್ ಘಂಟಿ ನೃಪತಿ ಮುಂಡಣ ಭೂಪರ್ ॥
ಸ್ಥಿರವಾಗಿ ಶ್ವೇತ ಪುರದೊಳ್ ।
ವಿರಚಿಸಿದರ್ ಕೋಂಟೆ ಕೊತ್ತಳಂಗಳ ಮುದದಿಂ ॥೯॥

ಬೇಡಕಣಿ ಕುಱುಜೆ ಕೊಂಡಲಿ ।
ಗಾಡಿಯ ಮೂಗುಂದುರಲ್ಲಿ ಕೋಂಟೆಗಳಂ ಕೊಂ ॥
ಡಾಡಲಳವಲ್ಲದಂತಿರೆ ।
ಬೇಡರ ನೆರೆಗೆಲ್ದು ಕಟ್ಟಿಸಿದರಾಕ್ಷಣದೊಳ್ ॥೧೦॥

ಈ ವೀರಘಂಟಿ ಭೂಪನ ।
ಪಾವನ ಸತ್ಪುತ್ರ ತಿಮ್ಮಣಾಖ್ಯ ನೃಪಾಲಂ ॥
ಭೂಮಿನುತ ನರಸ ಭೂಪಂ ।
ಗಾ ವೀರಪ್ಪೊಡೆಯರೆಂಬ ಪುತ್ರನುಮಾದಂ ॥೧೧॥

ವೀರಪ್ಪಾಖ್ಯ ನೃಪಾಲನ ।
ನಾರೀಮಣಿ ವೀರಮಾಂಬೆಯೆಂಬಳ್ಪೆಸರಿಂ ॥
ಸಾರತರ ಹೃದಯರಿರ್ವರ್ ।
ಚಾರು ಸುಖಾಂಬುಧಿ ನಿಮಗ್ನರಿಂತೆಸೆದಿರ್ದರ್ ॥೧೨॥
ಅಕ್ಷಯ ಲಕ್ಷಣದ ವಿರೂ ।
ಪಾಕ್ಷನ ದೇವಾಲ್ಯಮಂ ಕರಂ ವಿರಚಿಸಿದಂ ॥
ಸುಕ್ಷೇಮಮೀವುದದು ಬಿತ ।
ದೀಕ್ಷಿಸೆ ಸರ್ವರಿಗೆ ಬಿಳಿಗೆಯೊಳ್ಸಂತಸದಿಂ ॥೧೩॥
ವೀರಪ್ಪೊಡೆಯನ ವನಿತೆಯ ।
ವೀರಮ್ಮಾಂಬಿಕೆಯ ಪುಣ್ಯ ಗರ್ಭದೊಳೊರ್ವಂ ॥
ಮಾರಸಮರೂಪ ನೊಗೆದಂ ।
ಭೂರ [ಮ] ಣಂ ರಂಗರಾಜನೆಂಬ ಕುಮಾರಂ ॥೧೪॥
ರಂಗರಾಜೇಂದ್ರನೃಪನ ।
ಧಾರ್ಂಗಿಯು ಚೆಲುವಮ್ಮ ದೇವಿಯೆಂಬಳ್ಪೆಸರಿಂ ॥
ಮಂಗಳ ಮೂರ್ತಿಗಳಿರ್ವರ್ ।
ಸಂಗಸುಖಂ ಬಡೆದು ಧರೆಯ ಪಾಲಿಸುತಿರ್ದರ್ ॥೧೫॥
ತುರುಸೆರೆಯಂ ಪಿಡಿಯುತ್ತಂ ।
ತುರುಷ್ಕ ಜನವೈದೆ ಬಂದು ಮುತ್ತಿದರಾಗಳ್ ॥
ಧುರಧೀರ ರಂಗರಾಜಂ ।
ಭರದಿಂ ತರಿದೊಟ್ಟಿ ಬಲವ ಜೈಸಿದನಾಗಳ್ ॥೧೬॥
ಸುತ್ತಣ ಧೊರೆಗಳ ರಾಜ್ಯವ ।
ನೊತ್ತುತ್ತಂ ಪಿರಿದು ಮಾಡಿ ಸಕಲೋರ್ವರೆಯಂ ।
ವಿತ್ತಮುಮಂ ಸಂಪಾದಿಸು ।
ತಿತ್ತಲ್ಲಿಯೆ ರಂಗರಾಜ ನಾಳುತ್ತಿರ್ದಂ ॥೧೭॥

ಮತ್ತೇಭ॥

ದಿವಿಜೇಂದ್ರಂಗೆ ಜಯಂತನೆಂತು ವಸುದೇವಂಗೆಂತು ಲಕ್ಷ್ಮೀಧವಂ ।
ಪವನಂಗಂ ಕಲಿಭೀಮನೆಂತು ಶಮನಂಗಂ ಧರ್ಮಜಂ ಮತ್ತಮಾ ।
ರವಿಗಂ ಕರ್ಣನುಪೇಂದ್ರಗಂ ಮದನನಂತೀಪುತ್ರನುಂ ಪುಟ್ಟಿದಂ ।
ಭುವನಸ್ತುತ್ಯ [ನೆ] ನಿಪ್ಪ ರಂಗನೃಪಗಂ ಘಂಟೇಂದ್ರ ಭೂಪಾಲಕಂ ॥೧೮॥

ಕಂದ||

ಜಾತೋತ್ಸವದೊಳ್ ಸಕಲರ ।
ನಾತತ ಸತ್ಕೀರ್ತಿಸಾಂದ್ರ ರಂಗ ನರೇಂದ್ರಂ||
ಪ್ರೀತಿಕೈಮಿಕ್ಕು ಮನ್ನಿಸಿ ।
ದಾತಂ ನೆರೆ ನಾಮಕರ್ಮಮಂ ವಿರಚಿಸಿದಂ ||೧೯||

ಬೆಳೆದಪುದೆನೆ ಮಂದಾರಂ ।

× × × × ×

ಬೆಳೆದಪುದೆನೆ ಮೌಕ್ತಿಕಮಣಿ ।
ಬೆಳೆದಂತಾ ಘಂಟಿಭೂಪ ಬೆಳೆವುತ್ತಿರ್ದ್ದಂ ||೨೦||

ಪ್ರದ್ಯುಮ್ನನಂತಿರಿರ್ದಂ ।
ವಿದ್ಯಂಗಳ ಪೇಳೆ ಕಲಿತ ನಾಕ್ಷಣದಿಂದಂ ||
ಸದ್ಯಃಫಲವಾಯ್ತಿವನೊಳ ।
ಸಾಧ್ಯಂ ತಾನುಂಟೆ ಕಲೆಗಳನಿತರೊಳಿವಗಂ ||೨೧||

ಘಟ ಪರಿಪೂರಿತ ಸುಧೆಯಂ ।
ಘಟಕ್ಕೆ ಪೊಯ್ದಂತಿರಾಯ್ತು ಶಾಸ್ತ್ರಗಳೆಲ್ಲಂ ||
ನಟಸಿ ವಾಗ್ದೇವಿ ಇವನೊಳ್ ।
ಪಟುತರಧಿಷಣಂಗಸಾಧ್ಯ ಮಾವುದು ಜಗದೊಳ್ ||೨೨||

ಶರನಿಧಿ ತರಂಗ ವೇಲ ।
ಕ್ಕಿರದುವ್ವಳಿಪಂತೆ ತುರಗಲಂಘಿಸುತಿರೆ ತಾಂ ||
ಭರದಿಂದೇರಿದ ನಧಟಂ ।
ತುರಗಾರೋಹಣದೊಳೀತನೆರೆ [ಸಿರಿ] ವಂತಂ ||೨೩||

ಹಸ್ತಿಪಕರ್ಗಳವಲ್ಲದ ।
ಹಸ್ತಿಯನಂಕುಶವ ಪಿಡಿಯದಂಗುಟದಿಂದಂ ||
ವಿಸ್ತರಣದೊಳಣವುತೊತ್ತಿ ಸು ।
ರಸ್ತೋಮಂ ಪೊಗಳೆ ಮೆರೆದ ಘಂಟಿ ನೃಪಾಲಂ ||೨೪||

ಮತ್ತೇಭ||

ಮರಿಸಿಂಹಂ ನೆರೆಸಿಂಹ ಮಾದ ತೆರದಿಂ ಖಂಡೇಂದು ಪೂರ್ಣತ್ವಮಂ ।
ಶರಭಂ ಪಕ್ಕಗಳೇಳ್ಗೆಯಂ ಕಲಭಮುಂ ದಂತಾದಿಸತ್ವಂಗಳಂ ।

ತರುಣಾಃ ಕಂ ನಿಜಮಧ್ಯಕಾಲದೊಡವಂ ಕೈಕೊಂಡಪೋಲ್ ನಿಶ್ಚಯಂ ।
ಸಿರಿದುಂ ಯಃವ್ವನದಿಂದ ಮೊಪ್ಪಿದನುವಿೂ ಘಂಟೇಂದ್ರ ಭೂಪಾಲಕಂ ॥೨೫॥
ಸ್ರಗ್ಧರಾ॥

ಕ್ರೋಧಾಕ್ರಾ ಪನ್ನಗೇಂದ್ರಂ ಸಡೆದುಕುಸುರಿದಂ ಕುರ್ಗ್ಗೆ ದಿಗ್ದಂತಿಜಾಲಂ।
ಬಾಘೋದ್ಭಿನ್ನಂ ಸುಸ್ಪಷ್ಟಂ ಕಠಿನ ಕಮಠಮಿಂತಾಯ್ತು ವಿನ್ನೇವೆನೆಂದಿಂ।
ತಾಧಾತ್ರಂ ಸೃಷ್ಟಿಗೈದಂ ಸಕಲ ಧರೆಯ ನೀಂ ತಾಳ್ದು ಸಂರಕ್ಷಿಸೆಂದಿಂ ।
ಶೀಧಾತ್ರೀನಾಥರೆಲ್ಲರ್ ಪೊಗಳೆ ವಹಿಸಿದಂ ಘಂಟಿರಾಜೇಂದ್ರಚಂದ್ರಂ॥೨೬॥
ಮತ್ತೇಭ॥

ಅವನೀಪಾಲಕ ಮಂತ್ರಿವರ್ಗ ನಿಜದಂಡಾಧ್ಯಕ್ಷ ಸಾಮಂತರುಂ ।
ಜವ [ದಿಂ] ಗೆಲ್ಲಪೆವೆಂಬ ವೀರಭಟ ಸನ್ನದ್ಧಾದಿ ಸಂದೋಹಕಂ।
ಪವಣಿಲ್ಲೆಂದೆನೆ ಬರ್ಪ ಘೋಟಕಕುಲಂ ವೇತಂಡ ತಂಡಂಗಳಿಂ ।
ಭುವನೇಶಂ ಪೊರಮಟ್ಟು ಬೇಂಟೆಗೆಸುತಂ ಘಂಟೇಂದ್ರ ಭೂಪಾಲಕಂ॥೨೭॥

ಬರೆ ದುಃಪೂತಿಕ ಗಂಧವಾಹಕಿರದಾ ಗೋಣಂ ನಿಮಿರ್ದೆತ್ತುತಾ ।
ರ್ವರೆಯಂ ಪಾದಚತುಷ್ಕದಿಂ ದೊರೆಸುತಂ ವಾಲಾಗ್ರಮಂ ನೀಡಿ ಬಾ ।
ಯ್ಬರೆಯಲ್ ಮಾಕ್ಷಿಕಮುತ್ತೆ ಮುಕ್ಕೊರಸುತಂ ವಾಲಾಗ್ರಮಂ ಬೆನ್ನೊಳಿ।
ಟ್ಟಿರವೈತಂದುದು ಕೋಟಿ ಕುರ್ಕುರಗಣಂ ಕೈಕೊಂಡು ವಾಯ್ವೇಗಮಂ
॥೨೮॥

ತೊಡದರ್ಮಂ ವ್ರಂಖಿಲನಾಳ ಪಟ್ಟಿಕಲಸದ್ಗ್ರೀವಂ ದುರಾಮೋದಿ ಬಾ ।
ಯ್ಬಿಡೆಬಂದಾ ಮಶಕಾಳಿ ಮುತ್ತಿ ಮುಸುಕಲ್ ದಂತಾಗ್ರದಿಂದೌಂಕಿ ಕಾ ।
ಯ್ಪಡರುತ್ತಂ ಮಿಡಿವಾಲಮಂ ತಲೆಯೊಳಿಟ್ಟಾಪಾದ ಹಸ್ತಂಗಳಿಂ ।
ಗುಡುಗುಟ್ಟುತ್ತಿಳೆಯಂ ಕೆರಂಕಿಮಿಡುಕಿಂ ಶಾರ್ದೂಲಮೇಂ ಬಂದುದೋ
॥೨೯॥

ಕಂದ॥

ಈಟಿಯ ಸುರಗಿಯ ಕುಂತದ ।
ಕಟ್ಟಿದ ಕೈವಲಗೆ ವಂಕಿದಸಿದಡಿ ಸಬಳಂ ॥
ತೊಟ್ಟಾ ಸಜ್ಜಾಂಗದಿಂದಂ ।
ಕಟ್ಟಾಳುಗಳೈದೆವಂದರತಿ ಭರದಿಂದಂ ॥೩೦॥
ಭಲ್ಲೆಯ ಕತ್ತಿ ಕಠಾರಿಯ ।
ಉಲ್ಲಸದಿಂ ಪಿಡಿದು ಸಾಣಮಂ ಜಡಿವುತ್ತಂ ॥

ಮಲ್ಲಿರ್ನಲಿನಲಿ ದೈತರೆ ।
ಬಿಲ್ಲಿನ ಬಿಲ್ಲಾಳ್ಗಳೊಗ್ಗಿನಿಂ ನಡೆತಂದರ್ ॥೩೧॥

ಸಣ್ಣಬಲೆ ಸರದ ಬಲೆಯುಂ ।
ಕಣ್ಣಿಯ ಬಲೆ ಕಾಲಬಲೆಯು ಕಡಿಮಿಡಿ ಬಲೆಯುಂ ॥
ಬಣ್ಣವಿಟ್ಟಳೆಯ ಬಲೆಯುಂ ।
ತಿಣ್ಣಮೆನಲ್ ಜಾಲಗಾರ [ಭಟ] ರೈತಂದರ್ ॥೩೨॥

ಮುತ್ತಿ ಮುಸುಕಿಟ್ಟು ಬಲೆಯುಂ ।
ಕತ್ತಲಿ ನೆಲೆಗೊಂಡರಣ್ಯಮಂ ಸೋವುತ್ತಂ ॥
ಸುತ್ತಿ ಸುಳಿವುತ್ತ ಮೃಗಚಯ ।
ಮತ್ತಿತ್ತಲ್ ಪೋಗಲಣೆದು ಕೆಡಪಿದರಾಗಳ್ ॥೩೩॥

ಪೊಕ್ಕೆಚ್ಚು ಕೂರ್ಗಣೆಗಳಿಂ ।
ಮೊಕ್ಕಳ ಮೆನಲೆಸೆಯಲಿಕ್ಕಲಂ ಕೊಡಹಲೊಡಂ ।
ದಿಕ್ಕುದಿಕ್ಕಿಂಗೆ ಶರಗಳ್ ।
ಚೆಕ್ಕನೆ ಪಿಡಿಸಿಡಿದು ಮೃಗಕೆ ನಾಂಟಿದುವಾಗಳ್ ॥೩೪॥

ಚಂಪಕ॥

ಕೆಡೆಕೆಡೆ ಯೆಚ್ಚು ಯೆಚ್ಚು ತಿಮಿಬಂದುದು ಪೆರ್ಬುಲಿ ಕಾಡ ಪಂದಿಯುಂ।
ತಡೆತಡೆದೇಣನಂ ಬಡಿದು ಮಾರ್ಮಲೆತೊತ್ತಿದ ಕಾಡ ಕೋಣನಂ ।
ಹೆಡೆಪೆಡೆ ಕೋಡೊಳಿಟ್ಟೊರಸಿ ಮುಕ್ಕುವ ಮೂಳನ ತೋಳ ಸೀಳನಂ ।
ಕಡಿಕಡಿ ಪೊದುದಾ ಕಡವೆ ಕಾಣದೆ ನೀಂ ಬಿಡು ಜಾಯಿಲಂಗಳಂ ॥೩೫॥

ಸ್ರಗ್ಧರಾ॥

ವಾಲಾಗ್ರ ಪೃಷ್ಠಮಂ ಸಂದಿಸೆ ಕಿವಿರದನೋತ್ಕೃಷ್ಟವಕ್ಷಃ ಪ್ರದೇಶಂ ।
ಸ್ಥೂಲಂ ವ್ಯಾಘ್ರಾಜಿನ ಪ್ರಾವೃತ ನಿಜತನುಕಂ ಮತ್ತ ಮಾಯುಸ್ಸಪಟ್ಟಂ ।
ನೀಲಂ ವ್ಯಾಲೋಲ ನಾಸಾಪುಟ ಮಲರೆ ಕರಂ ಕ್ರೂರದಂತಾಗ್ರಜಾಲಂ ।
ಲೀಲಾಮಾತ್ರಕ್ಕದೇಂ ಬಂದುದೊ ಪವನಜವಂ ಶ್ವಾನ ನೇಣಾವಸಾನಂ ।
॥೩೬॥

ಕಂದ॥

ಪಕ್ಕಗಳ ನಿಮಿರ್ದು ಸಾಳ್ವಂ ।
ಪೊಕ್ಕೆಳಸಿ ನಖಾಗ್ರದಿಂದೆ ಪೊಯ್ದೊಡೆ ನೆಲದೊಳ್ ॥

ಪೊಕ್ಕಱಸಿನೆ ಕೆಡೆದುವು ಬೇೞ ।
ವಕ್ಕಿಗಳೊಡ್ಡಿಂಗೆ ಕಾನೆ ಜವ ಸಾಯ್ತದಱಿಂ ॥೩೭॥
ಗರುಡಂ ಪೇೞ್ಗೆ ದೊಡನಕಿ ।
ಭರದಿಂ ಸುೞಸುೞದು ಪಕ್ಕಮಂ ಸಿಮಿರುತ್ತಂ ॥
ನೆರೆನೋಡಿ ಮುಟ್ಟೆ ಮೆಟ್ಟ ।
ತ್ತರಿಸಿಮಿಷಕೆ ಸಕಲ ಪಕ್ಷಿ ಜಾಲಮನೆಲ್ಲಂ ॥೩೮॥
ಅತ್ತಲ್ ಭೈರಾದೇವಿಯ ।
ಮೊತ್ತದ ಚತುರಂಗ ಸೇನೆ ಬರಲತಿಭರದಿಂ ॥
ಕತ್ತರಿದು ಕುತ್ತಿ ಕೆಡುಪಲ್ ।
ರಕ್ತದ ಕಡಲುರ್ಬಿ ಪರಿದುವೆತ್ತಲ್ ನೋಡಲ್ ॥೩೯॥

ಸ್ರಗ್ಧರಾ॥

ಕೈಸಿಕ್ಕಿಂ ಕೆಟ್ಟೆನೋವೋ ಕುಬುಬಿ ಕುಬುಬಿ ಯೆಂದಾರ್ದು ವೈಸಾ
ದರ್ಮಾತ್ತಂ ।
ಸಾಯ್ವಾಯೆಷ್ಟೊತ್ತೊತ್ತು ಸುತ್ತಂ ಸುಗಿದು ಭರದಿ ನೀಂ ಮೇನೆಯಂ ಖಡ್ಗ
ದಿಂದಂ ॥
ಪೊಯ್ವೂಳ್ ಸೀಳ್ ನೆತ್ತಿ ನಿಟ್ಟಿ ಕ್ರಕಚ [ನಿಶಿತ] ದಂಷ್ಟ್ರಾಗ್ರದಿಂ ಬಾಹು
ಗಳ್ಗೆ ।
ನೈಸಿಲ್ಕಿನ್ನೇನು ಮುಂಡಂ ಗೆಡಪು ಗೆಡಪೆನುತ್ತಬ್ಬರಂ ಪರ್ಬಿತೆತ್ತಂ ॥೪೦॥

ಕಂದ॥

ಕಲಿ ಭೀಮಂ ಕಲಿ ರಾಮಂ ।
ಕೊಲಲೆಳಸಿದ ಘಂಟೆ ನೃಪತಿಯೆಂದೆನುತೆಲ್ಲರ್ ॥
ಪಲಗರ್ಬಿ ಪೊಕ್ಕು ವನದೊಳ್ ।
ನೆಲಸಿದರಂತಾಯ್ತು ನಾಡೆ ಲುಬ್ಧಕ ನಿವಹಂ ॥೪೧॥
ಅಂತು ಬಿಡದವರ ಧಾತ್ರಿಯು ।
ನಂತರಿಪೊಡೆ ವಸ್ತು ವಾಹನಂಗಳ್ಸಹಿತಂ ॥
ತಾಂ ತಡೆಯದೆ ಸಂಪಾದಿಸಿ ।
ಸಾಂತದೊಳತಿ ಹರುಷವೆತ್ತ ಘಂಟೆನೃಪಾಲಂ ॥೪೨॥

ಮತ್ತೇಭ॥

ಜನನಾಥರ್ಪಲರ್ಕೈದೆ ಬಂದು ಮುದದಿಂ ರತ್ನಾದಿ ಸದ್ವಸ್ತುವಾ ।
ಹನಮಂ ಕಣ್ಗೆ ಬೆಡಂಗುವೆತ್ತ ನವ ಚಂಚದ್ರಶ್ಮಿ ವಸ್ತ್ರಂಗಳಂ ।

ವಿನಯಂ ಕೈಮುಗಲೀಯೆ ಕೈಕೊಳುತೆ ಭೇರೀ ಭೂರಿ ನಿಸ್ಸಾನವಂ ।
ಘನವಾಗಾರ್ಗಂಬರವ್ಯೈದೆ ಬಂದನೊಲವಿಂ ಘಂಟೇಂದ್ರ ಭೂಪಾಲಕಂ॥೪೩॥

**ಚಂಪಕ॥**

ಸಕಲಧರಾಧಿನಾಥರೊಡಗೂಡಿ ಸುಖಾಸ್ಪದ ಭೋಗಲೀಲೆಯಂ ।
ಪ್ರಕಟಿಸಿ ರಾಜ್ಯಮಂ ಬಿಡದೆ ಪಾಲಿಸುತಂತಿರೆ ರಾಯರಟ್ಟಿವರ್ ।
ಮಕರ ಪತಾಕರೂಪ ನತಿವೇಗದೊಳೆಮ್ಮಡಿಗೈದೆ ಬರ್ಪುದಿ ।
ವಿಕಸಿತ ಪದ್ಮನೆನೆ ಪೋದಪ ನಿಮ್ಮಡಿಘಂಟಿಭೂವರಂ ॥೪೪॥

**ಸ್ರಗ್ಧರಾ॥**

ಭೇರೀ ಗಂಭೀರನಾದಂ ಪರಿದು ಧರೆಯ ಪೊತ್ತಿರ್ದ ದಿಗ್ದಂತಿಗೆಲ್ಲಂ ।
ಕ್ರೂರತ್ವಂ ಕರ್ಣಕಿತ್ತಾ ಬಧಿರತೆಯೊದವಂ ಶತ್ರುಭೂಪಾಲಕರ್ಗ್ಗಂ ।
ವೀರತ್ವಂಗುಂದಲಿತ್ತುಂ ಗತಭಯದಿರವಂ ವ್ಯೋಮದೊಳ್ ವಜ್ರಭೂಷಾ।
ಕಾರಂ ಕೂರಂದಲೆಂಬಂತೆಸೆಯೆ ತೆರಳ್ದಪಂ ವೀರಘಂಟೇಂದ್ರ ಭೂಪಂ ॥೪೫॥

**ವಚನ॥** ಪೋಪ ಸಮಯದೊಳ್

**ವಾರ್ಧಿಕ॥** ಮಂತ್ರೀಶ ಪುಟ್ಟಯ್ಯ ಪಡೆವಳ್ಳ ಚೆನ್ನಯ್ಯ ।
ತಾಂತ್ರಿಕದ ಸಿರಿವಳಿಗೆ ದೊಡ್ಡ ಭದ್ರಯ್ಯನುಂ ।
ಮಂತಣದ ಪುಟ್ಟಯ್ಯ ಪಡೆವಳ್ಳ ಚೆನ್ನಯ್ಯ ಪಿರಿಯಗಿರಿಯಪ್ಪಯ್ಯ ಸೋಮಯ್ಯ ರುದ್ರಯ್ಯನು ॥
ಚಿಂತಿಸದೆ ಬರ್ಪ ಕೊಂಡಲಿ ಮೇಲುಗಿರಿಯಪ್ಪ ।
ಪಿಂತುಳಿಯದಿರ್ದ ತಿಮ್ಮಯ್ಯ ವೆಂಕಪ್ಪಯ್ಯ ।
ನಂತರಿಸದೊಡವರ್ಪ ನು [ಮ?] ಲ್ಲಪ್ಪ ನಾಗಪ್ಪ ಯಿಡುವಣಿಯ ಪುಟ್ಟಯ್ಯನು ॥೪೬॥

ಮರಿಶಿವಯ್ಯನು ಗುತ್ತಿ ಪುಟ್ಟಯ್ಯ ಶೇಷಪ್ಪ ।
ನೆರೆ ನಿಪುಣ ಮುಟ್ಟವಳ್ಳಿಯ ವೀರಭದ್ರಯ್ಯ ।
ದೊರೆಯ ಚಿತ್ತಕೆ ಬರ್ಪ ಪುಣಿಚೆ ಶಾಂತಯ್ಯನುಂ ಬರಮಯ್ಯ ತಿಪ್ಪಣ್ಣನು॥
ಸಿರಿವಂತ ದೊಡ್ಡ ತಿಮ್ಮಯ್ಯ ಮುಂತಾದವರು ।
ಉರಿವ ಕಿಚ್ಚಿನೊಳಿರ್ದ ವೃದ್ಧೆಯ ಶಿವಯ್ಯನುಂ ।
ಸುರಪಸಮ ಭೋಗಾಢ್ಯ ಘಂಟೇಂದ್ರ ಭೂಪಾಲನೊಡನೆ ಬೆಂಬಿಡದೆ ಬರಲು ॥೪೭॥

ವೀರಭದ್ರನ ಹರಿಗೆ ಹನುಮರೂಪಿನ ಹರಿಗೆ ।
ಚಾರುಚಂದ್ರನ ಹರಿಗೆ ಸೂರ್ಯನಿರವಿನ ಹರಿಗೆ ।

ಭೀರುಂಡ ಶರಭ ಶಾರ್ದೂಲ ವೃಷ ಸಿಂಹ ಮೊದಲಾದ ವೆಗ್ಗೂರು ಹರಿಗೆ॥
ಕ್ರೂರ ಪಂಚಕ ಫಣಾ ಪನ್ನಗೇಂದ್ರನ ಹರಿಗೆ ।
ಕೋರೆದಾಡೆಯ ದಾನವರ ಹರಿಗೆ ಸಾಳುವನ ।
ಗೋತ್ರಪತಗನ (?) ಹರಿಗೆ ಏ [ರ] ಭೈರವ ಹರಿಗೆಕಾರಪ್ಪಿತಂದ
ರೊದಗಿ ॥೪೮॥

ಕಂದ॥

ಕರಿಘಟೆಯುಂ ತುರಗ ಚಯಂ ।
ವರೂಥ ಸಂಕುಳವು ವೀರಭಟ ಸಂತತಿಯುಂ ॥
ಧರೆ ತೆರಪಿಲ್ಲದೆ ಬರೆ ಸಂ ।
ಗರಧೀರಂ ಘಂಟೆ ನೃಪತಿಯೈದಿದರಾಗಳ್ ॥೪೯॥
ತೊಳಗುವ ಬಿರುದಿನ ಬಾಸಿಗ ।
ಫಳಲನೆ ವರ ವೀರಕಂಕಣಂ ಪೆಂಡೆಯುಮಂ ॥
ಚಳಕದಿ ಕರಯುಗದೊಳಗವ ।
ನಳವಡಿಸುತ ಜವದಿ ಬಂದರತಿ ಭಟರಾಗಳ್ ॥೫೦॥
ಐಗಾರ ಮೂರುತಯ್ಯನ ।
ವೈಗೋರದ ಪುತ್ರ ಹುಚ್ಚವೆಂಕಟನೆಂಬಂ ॥
ಕೈಗಳ ವಡಿಸದ ಗಿರಿಯಂ ।
ವೈಯಗ್ಗಾಂತೆಸೆದಿರ್ದ ಯಲ್ಲಪಾಖ್ಯಂ ಬಂದಂ ॥೫೧॥
ಅತಿ ಬಿರದಿ ನೊಂಟೆಗಾಳಗ ।
ದತಿಶಯದಿಂ ಮೆರೆವ ವೀರಭಟ ಸಂಕುಲಮಂ ||
ಮತಿವೆತ್ತ ನಾಯಕರ ಸಂ ।
ತತಿಯಿಂ ಮುಂಜೂಣಿವರಿದು ನಡೆದತ್ತಾಗಳ್ ॥೫೨॥
ನಚ್ಚಣಿಯರುಟ್ಟು ಹಳದಿಯ ।
ಮುಚ್ಚಿರಗಿನ ಸೀರೆ ದರ್ಪಣಂ ಜಂಬೀರಂ ॥
ನಿಚ್ಚಲ್ಮಾವಿನ ತೋರಣ ।
ದೆಚ್ಚರ ಮಿದರಿರವ ಕುಂಭದೊಳ್ನಡೆಯಿಸಿದರ್ ॥೫೩॥

ಚಂಪಕ॥

ಕರಿತುರಗಾದಿ ವೀರಭಟ ಕೋಟಿ ವರೂಥಗಳೆತ್ತ ನೋಡಲುಂ ।
ನೆರೆದು ನಿರಾಕುಲಂ ನಡೆಯೆ ಪಾದಸಮುದ್ಭವಧೂಳಿಯಂಬರಂ ।

ಬರೆಗವುದ್ಯೆವೆ ಪುಷ್ಕರ ತರಂಗಿಣಿಗಾದುದು ಪಂಕದೇಳ್ಗೆಯುಂ ।
ಕರಣಿಯು ಮುಕ್ತಿಯಿತ್ತುದರಿ ನೇತ್ರ ಸರೋಜಕೆ ಕುಟ್ಮಲತ್ವಮುಂ ॥೫೪॥

ವ॥ ಇಂತು ಸಮಸ್ತಚತುರಂಗಸೇನಾಸಮನ್ವಿತಂ ರಣರಂಗ ಧೀರ ನೆನಿಸಿದ ಘಂಟೇಂದ್ರ ಭೂಭುಜಂ ಪೋಗಿ ಶ್ರೀಮದ್ವೆಂಕಟರಾಯರ ಸನ್ನಿಧಿಯೊಳ್ ಕುಳಿತಿರ್ಪಿನಂ, ತತ್ಸಮಯದೊಳಾರ್ಗೆಯುಮಸಾಧ್ಯವಾದ ಮಂಗಳಬೋಲ್ಲನೆಂಬ ತುರುಗರತ್ನಮಂ ನೀವು ವಶಗೈವುದೆಂದು ತರಿಸಿ ಕೊಡಲು, ಪೋಗಿ ನೋಳ್ಪವಸರದೊಳಂ ತುರಂಗಮಂ ದಕ್ಷಿಣಾಂಗವ ನೀಕ್ಷಿಸಿ ದಕ್ಷಿಣಖುರದಿಂ ಧಾತ್ರಿಯಂ ಕೆರೆವು ಭೋರೆಂದುಲಿಯೆ ಸಂತುಷ್ಟರಾಗಿ ಸುವರ್ಣ ಪುಷ್ಪಾಂಜಲಿಯಂ ಮಾಡಿ ಪ್ರದಕ್ಷಿಣಂ ಗೈದು ಕೆಡರು ಕಾಡಣೆಯಂ ತೆಗೆಸಿ ಇಮ್ಮಡಿ ಘಂಟೇಂದ್ರ ನರೇಂದ್ರಂ ಹನುಮಗತಿಯಿಂದೇರಿದನದೆಂತೆನೆ ॥೫೫॥

ಕಂದ॥

ಸ್ಕಂಧದ ರೋಮಾಳಿಯು ಬಿಡ ।
ದೊಂದಿಸಿ ಪಿಡಿದೆತ್ತಿ ನೆಗೆದು ಸಂಧಿಸಿ ಬೆನ್ನಂ ॥
ಮುಂದಕೆ ಲಂಘಿಸುತಾಕ್ಷಣ ।
ದಿಂದಂ ಕಡು ಪವನಜವದೊಳ್ಗೈದಿತ್ತಾಗಳ್ ॥೫೬॥

ಮಹಿಯಂ ಮುಟ್ಟಿದುದಿಲ್ಲೆನೆ ।
ಬಹುಜವದಿಂದೈದಿ ಮೂರು ಯೋಜನದೆಡೆಗಂ ॥
ಪ್ರಹರ ಮಾತ್ರಕ್ಕೆ ಬರಲಾ ।
ಮಹಿಮೆಯ ಬಣ್ಣಿಸುವರಳವೆ ತುರಗಂ ಸಹಜಂ ॥೫೭॥

ಚಂಪಕ॥

ಶಿವಶಿವ! ಪೋದುದಿಂಕಿದು ತುರಂಗಮ ತೀಕ್ಷ್ಣಯುಗಾಂತಮಾರುತಂ।
ಭುವನ ಜನಕ್ಕೆ ತನ್ನ ಗತಿಯಂ ಪೊಸಮಿಂಚಿನ ಸಂಚಲತ್ವಮಂ ।
ತವೆನಿಜದೋರ್ಪ್ಪೆನೆಂದು ತುರಗಾಕೃತಿವೆತ್ತುದಿದಲ್ತೆ ನಿಶ್ಚಯಂ ।
ಕವಿನುತ ಘಂಟೆ ಭೂಮಿಪತಿಗಲ್ಲದೆ ಪೇಳ್ವೆರರಿಂಗೆ ಸಾಧ್ಯಮೋ ॥೫೮॥

ಮತ್ತೇಭ॥

ಭರದಿಂದೊತ್ತಿ ನಿಮಿರ್ದು ಪಾಯ್ದು ಪಿಡಿಯಲ್ ನೃತ್ಯಂಗಳಂ ಬೀರುತುಂ ।
ಧ್ವರೆಯಂ ಸೋಂಕಿ ನಭಕ್ಕೆ ಲಂಘಿಸಿ ಸುರರ್ಗಾಶ್ಚರ್ಯಮಂ ತೋರುಕೀ ।

ಧರೆಗುಚ್ಚೈಶ್ರವವಿಂದು ಬರ್ಪುದೆನಲ್ಕಂ ಚಾತುರ್ಯವಂ ತೋರುತಂ ।
ತುರಗಂ ಕೈವಶವಾಗೆ ಬಂದ ಸೊಬಗಿಂ ಘಂಟೇಂದ್ರ ಭೂಪಾಲಕಂ ।೫೯॥
ನೆರೆದಟ್ಟಾಲಕವೇರಿ ಗೋಪುರ ಮಹಾಪ್ರಾಕಾರ ಸೌಧಾಗ್ರಮಂ ।
ತರುಗಲ್ಗೊಂಡೆವೆಯಿಕ್ಕಲುಂ ಮರೆದು ಕಾಂತಾನೀಕ ಮತ್ತೆತ್ತಲುಂ ।
ಸುರಸೇವೀ ನಿಕುರುಂಬ ವೈದಿಭರದಿಂ ನೋಳ್ಪಂತೆ ಯೊಪ್ಪುತ್ತಿರಲ್ ।
ಧರೆಯೆಲ್ಲಂ ತೆರಪಿಲ್ಲೆನಲ್ ಪುರಜನಂ ಘಂಟೇಂದ್ರ ಭೂಪಾಲನಂ ॥೬೦॥

ಕಂದ॥

ಸುರಪನೊ ಜಯಂತನೋ ಪೇಳ್ ।
ಗಿರಿಜೇಶನ ಸಖನೊ ಸ್ಮರನೊ ಪೇಳೆಂದೆನುತಂ ॥
ತರುಣಿಯರು ನೆರೆದು ತಮ್ಮೊಳ ।
ಗಿರದಾಲೋಚಿಸುತ ನೋಡಿದರ್ ನೃಪವರನಂ ॥೬೧॥
ಪುರಜನ ಪರಿಜನವನಿತುಂ ।
ನೆರೆದೊಡನೆ ನಿವಾಳಿಯಿಟ್ಟು ಪೊಡೆವಡಲಾಗಳ್ ॥
ಧುರಧೀರ ಘಂಟಿ ನೃಪತಿಗೆ ।
ತರುಣಿಯರಾರತಿಯ ನೆತ್ತಿದರ್ ಸಂತಸದಿಂ ॥೬೨॥
ತೂರ್ಯತ್ರಯ ಸಂ[ರಾ]ವಂ ।
ಕಾರ್ಯ [ನಿ]ವೇದಕರ ಕಲಕಲ ಧ್ವನಿ ಸಹಿತಂ ॥
ಶೌರ್ಯದೊಡನುಬ್ಬಿ ಬೆಳೆದನಿ ।
ವಾರ್ಯಮೆನಲ್ ಪರ್ವಿದತ್ತು ಗಗನ ಮನೆಲ್ಲಂ ॥೬೩॥

ತರಳ॥

ತರಳ[ಹಾರ]ವ ತೊಟ್ಟು ಮಧ್ಯದೊಳಿಕ್ಕಿ ಕಾಂಚಿಯ ಕಂಠದೊಳ್ ।
ಚರಣ ನಂದುಗೆಯಿಟ್ಟು ಹಸ್ತಕೆ ಪಾದಯುಗ್ಮಕೆ ಕಂಕಣಂ ।
ಪರೆನೊಸಲ್ಗೆ ವಿಚಿತ್ರ ಕಜ್ಜಲ ಬೊಟ್ಟು ರಾಜಿಸಿ ಬೇಗದಿಂ ।
ತರುಣಿಯುರ್ವಿಪರೀತವೃತ್ತಿಯೊಳೈದಿ ನೋಡಿದರೀತನಂ ॥೬೪॥

ವ॥ ಇಂತು ಬಂದು ರಾಜಸಭೆಯಂ ಪೊಕ್ಕು ಕುಳ್ಳಿರಲೊಡನೆ ಸನ್ಮಾನದಿಂದುಡುಗೊರೆಯ ನಿತ್ತರದೆಂತೆನೆ—

ಕಂದ॥

ಉತ್ತಮ ವಸ್ತ್ರಾಭರಣಂ ।
ಚಿತ್ತಕ್ಕತಿಶಯದ [ತುರಗ] ಮಂಗಳಬೊಲ್ಲಂ ॥

ರತ್ನ ತುರಾಯುಂ ಸಹಿತಂ ।
ಮುತ್ತಿನ ಸತ್ತಿಗೆಯು ಘಂಟಿ ನೃಪವರಗಿತ್ತಂ ॥೬೫॥
ಒದಗಿಲಿ ನಿಜಾವುಶಾಹಂ ।
ಗಿದಿರಾಗುವುದೇಂದು ಪತ್ರ ರಾಯರ್ಮ್ಯದದಿಂ ॥
ಇದೆ ವುಡುಗೊರೆಯೆನುತಿತ್ತರ್ ।
ಕದನಕೆ ಕಲಿಭೀಮ ಘಂಟಿನೃಪವರಗಾಗಳ್ ॥೬೬॥
ವ॥ ಆ ಸಮಯದೊಳ್--- ।

ಕಂದ॥

ತನ್ನಯ ಚತುರಂಗ ಬಲ[ಂ] ।
ಸನ್ನುತ ಹರಿರಾಜರೊಸೆದು ಕೂಡಿಸಿಕೊಟ್ಟಂ ॥
ಪನ್ನೆರಡು ಸಾಸಿರದ ತುರ ।
ಗೋನ್ನತ ಸ್ಯೆನಿಕಪದಾತಿ ಗಜ [ ಘಟಿ ರಥಗಳ್.] ॥೬೭॥
ಚೆನ್ನಾಳ್ದರುತಿರೆ ಮುದದಿಂ ।
ದುನ್ನತ ಶೌರ್ಯಾವಲಂಬ ಘಂಟಿ ನೃಪಾಲಂ ॥
ಮುನ್ನೈದೆ ಪೋದ ಸ್ಯನ್ಯದ ।
ಸಾನ್ನಿಧ್ಯಕ್ಕೈದೆವಂದು ಕೂಡಿದ ನಾಗಳ್ ॥೬೮॥
ಮಂಗಳಬೊಲ್ಲನ ನೇರಿ ತು ।
ರಂಗದ ಪೌಜಿನೊಳು ತಾನೆ ಮುಂದೊತ್ತೆ ಕರಂ ॥
ತುಂಗ ತುರಂಗಂ ಜವದಿಂ ।
ಕಂಗೆಡಿಸಿದುದೊಂದು ಲಕ್ಷಕೋಟಿಯ ತೆರದಿಂ ॥೬೯॥
ಗರಿಮೂಡಿದೆರಳೆಯಂತಿರೆ ।
ತುರಗಂ ಕಣೆಗೊಂಡು ಪಾಯ್ದು ಭರದಿಂದಾಗ
ಸರಳುಚ್ಚಿ ತಾಗಿ ಭರದಿಂ।
ಪರೆನಿಮಿಷಂ ಬಿಡದೆ ಧರೆಯ ನೆಮ್ಮಿದುದಾಗಳ್ ॥೭೦॥

ವಾರ್ಧಿಕ॥

ಹಿಡಿ ಹಿಡಿಯೊ ಕಡಿ ಕಡಿಯೊ ತಡೆತಡೆಯೊ ಮುಂದೊತ್ತಿ ।
ಬಡಿ ಬಡಿಯೊ ಪೊಡೆಪೊಡೆಯೊ ಪೊಡವಿಯೊಳಗಡಿಗೆಡಹಿ ।
ನಡೆ ನಡೆಯೊ ಕಡುಜವದಿ ಸಿಡಿಸಿಡಿಯೊಳಿಡುತಿಡುತ ದಡಿದಡಿಯೊಳಿಡು ಮಿಡುಕದೆ ॥

# ಶಿವಾನುಭವ

( ತ್ರೈಮಾಸಿಕವು. )



ಸಂಪಾದಕ

ರಾ॥ ಸಾ॥ ಫ. ಗು. ಹಳಕಟ್ಟಿ.

ಬಿ.ಎ. ಎಲ್ ಎಲ್. ಬಿ.



ವಿಜಾಪುರ.

೭ ನೇ ಸಂಚಿಕೆ

ಸಪಟಂಬರ ೧೯೩೭

# ವಿಷಯಾನುಕ್ರಮಣಿಕೆ.


| ವಿಷಯುಗಳು. | ಲೇಖಕರ ಹೆಸರು. | ಪುಟ. |
| --- | --- | --- |
| ೧. ವೇದವಾಙ್ಮಯ | ಶ್ರೀ ಶಂಭುಲಿಂಗ ಸ್ವಾಮಿಗಳು ಒರೇಮಠ ವಿಜಾಪುರ. | ೧- ೬ |
| ೨. ಮುನಿಪುರದ ಮಹಾಂತ ಸ್ವಾಮಿಗಳು | (ಕವಿತೆ.) | ೬-೧೦ |
| ೩. ಪಂಚಾಚಾರಗಳು | ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. | ೧೧-೨೨ |
| ೪. ಇಷ್ಟಲಿಂಗದ ಅವಶ್ಯಕತೆ | 'ಶಾಂತವೀರ' ಬಬಲೇಶ್ವರ ಜಿ. ವಿಜಾಪುರ | ೨೩-೨೮ |
| ೫. ಪ್ರಾಪಂಚಿಕನಪಶ್ಚಾತ್ತಾಪ | (ಕವಿತೆ) ಲ. ಅ. ಶಿರಹಟ್ಟಿ ಮಾಸ್ತರ ವಿಜಾಪುರ. | ೨೯-೩೦ |
| ೬. ಕಾಯಕಗಳು | ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್ ಬಿ. | ೩೧-೪೪ |
| ೭. ಹೂಲಿಯ ಮಂಚಪಣ್ಣಗೆ ಮತವು | ಗೆಳೆಯರ ಗುಂಪಿನ ಚೆನ್ನಮಲ್ಲ. | ೪೫-೭೦ |
| ೮. ಸ್ಫುಟವಿಷಯ | ಸಂಪಾದಕರು. | ೭೧-೭೪ |
| ೯. ಘನಲಿಂಗನ ವಚನ | .. | ೧೭-೪೫ |
| ೧೦. ಬಿಳಿಗಿಯ ಅರಸುಗಳ ವಂಶಾವಳಿ (ಅಪೂರ್ಣ) | ಮಿ॥ ಬಿ. ರಾಮರಾವ. ಎ. ಎಮ್. ಮದ್ರಾಸ. | ೧೩-೩೨ |
| ೧೧. ಏಕೋತ್ತರ ಶತಸ್ಥಲ (ಅಪೂರ್ಣ) | | ೨೯-೪೪ |


## ಶಿವಾನುಭವ.

ಈ ಪತ್ರಿಕೆಯು ಮಾರ್ಚ, ಜೂನ, ಸಪ್ಟೆಂಬರ, ದಿಸೆಂಬರ ತಿಂಗಳುಗಳ ಮಧ್ಯಕ್ಕೆ ಹೊರಡುತ್ತದೆ.

## ವರ್ಗಣೀ ದರ.

ಪೋಷಕರು. ೧೦ ರೂ. ೮ ಆ. ಆಶ್ರಯದಾತರು. ೫ ರೂ. ೮ ಆ.
ವರ್ಗಣೀದಾರರು. ೩ ರೂ. ೮ ಆ. ಬಿಡಿಸಂಚಿಕೆ. ೧ ರೂ. ೪ ಆ.

ವಿಜಾಪುರ. ಮ್ಯಾನೇಜರ ಶಿವಾನುಭವ.


ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರಜದ ಹತ್ತರ ತಮ್ಮ ೧೬೨೦ (ಅ) ನೇ ಮನೆಯಲ್ಲಿ ಪ್ರಕಟಿಸಿದರು.

# ನವಕರ್ನಾಟಕ

ವೆಂಬ

## ಹೆಸರಿನ ಒಂದು ವಾರ ಪತ್ರವು ವಿಜಾಪುರದಲ್ಲಿ

**ರಾ॥ ಸಾ॥ ಫ. ಗು. ಹಳಕಟ್ಟಿ**

**ಬಿ. ಎ. ಎಲ್, ಎಲ್. ಬಿ. ವಕೀಲ**

ಇವರ ಸಂಪಾದಕತ್ವದಲ್ಲಿ ಶೀಘ್ರವಾಗಿಯೇ ಹೊರಡುವದು. ಈ ಪತ್ರಿಕೆಯ ಉದ್ದೇಶವು ಕರ್ನಾಟಕದಲ್ಲಿ ಐಕ್ಯತೆಯನ್ನುಂಟು ಮಾಡಿ, ನವ ಜಾಗ್ರತೆಯನ್ನು ಹುಟ್ಟಿಸುವದೂ ಸಮಾಜಸಂಸ್ಕರಣ, ಔದ್ಯೋಗಿಕ ಮತ್ತು ರಾಜಕೀಯ ಅಭಿವೃದ್ಧಿ, ಕರ್ನಾಟಕದ ಏಕೀಕರಣ ಇವೇ ಮೊದಲಾದ ವಿಷಯಗಳಿಗೋಸ್ಕರ ಜನ ಸಮುದಾಯದಲ್ಲಿ ಎಚ್ಚರಿಕೆಯನ್ನು ಹುಟ್ಟಿಸುವದೂ ಮುಖ್ಯವಾಗಿರುತ್ತದೆ. ಈ ಪತ್ರಿಕೆಗೆ ಎಲ್ಲ ಕರ್ನಾಟಕ ಬಂಧುಗಳು ಸುಸ್ವಾಗತವನ್ನಿತ್ತು ಸಹಾಯವನ್ನೀಯುವರೆಂದು ನಾವು ಹಾರೈಸುತ್ತೇವೆ.

**ವಿಜಾಪುರ.**
ತಾ. ೧೫-೯-೧೯೨೭

ಮ್ಯಾನೇಜರ
**ನವಕರ್ನಾಟಕ.**



ಶ್ರೀ ಕ್ಷೇತ್ರ ಎಡೂರ ವೀರಭದ್ರ ದೇವಾಲಯು.

# ಶಿವಾನುಭವ.

ವರ್ಷ. ೨ ಸಪ್ಟೆಂಬರ ೧೯೨೭ ಸಂಚಿಕೆ. ೭

## ವೇದವಾಙ್ಮಯ.

ಲೇಖಕರು— ಶ್ರೀ ಶಂಭುಲಿಂಗ ಸ್ವಾಮಿಗಳು ಹಿರೇಮಠ ವಿಜಾಪುರ.



ವೇದವಾಙ್ಮಯವು ಪ್ರಾಚೀನತಮ ಸ್ಥಿತಿ ಬೋಧಕವಾಗಿದೆ. ವೇದಕ್ಕೆ ವಾಙ್ಮಯೇತಿಹಾಸದಲ್ಲಿ ಅಗ್ರಸ್ಥಾನವು ಸಲ್ಲುವದು. ವೇದಮೂಲಕವಾಗಿಯೇ ಭಾರತೀಯರ ಜ್ಞಾನ, ವಿಚಾರ, ಭಾವನೆಗಳಿಗೆ ನಿಶ್ಚಿತ ಸ್ವರೂಪವು ಪ್ರಾಪ್ತವಾಗಿರುವದು. ಎಷ್ಟೋ ಸಾವಿರ ವರ್ಷಗಳಿಂದಲೂ ಕೋಟ್ಯವಧಿ ಭಾರತೀಯರು ವೇದಾಕ್ಷರವನ್ನು ಈಶ್ವರೀ ವಾಣಿಯೆಂದು ಒಡಂಬಡುತ್ತ ಬಂದಿದ್ದಾರೆ. ಪ್ರಕೃತದಲ್ಲಿ ಉಪಲಬ್ಧರೂಪವಾದ ಭಾರತೀಯ ವಾಙ್ಮಯ ಪ್ರಪಂಚಕ್ಕೆ ಮೂಲಾಧಾರ ಭೂತ ವೈದಿಕ ವಾಙ್ಮಯದಲ್ಲಿ ಗತಿಯನ್ನು ಸಂಪಾದಿಸದ ಹೊರತು ಭಾರತೀಯರ ಆಧ್ಯಾತ್ಮಿಕ ಜೀವನ ಕ್ರಮ ಹಾಗೂ ಸಂಸ್ಕೃತಿ ಇವುಗಳ ಸಂಬಂಧವಾದ ಜ್ಞಾನವನ್ನು ಪಡೆಯಲು ಅನ್ಯೋಪಾಯಗಳಿರುವದಿಲ್ಲ. ಆದ್ದರಿಂದ, ನಾವು ವೇದ ವಿಷಯಕವಾದ ಪೂಜ್ಯ ಬುದ್ಧಿಯನ್ನು ಅಬಾಧಿತವಾಗಿಟ್ಟುಕೊಳ್ಳುವದು ವಿಹಿತವು. ಈಗ ಯಾವುದಕ್ಕೆ ವೇದ ಅಥವಾ ವೈದಿಕ ವಾಙ್ಮಯವೆಂದು ಲೋಕದಲ್ಲಿ ಪ್ರಸಿದ್ಧಿಯಿರುವದೋ ಅದರಲ್ಲಿ ಸಂಹಿತೆ-ಬ್ರಾಹ್ಮಣ-ಆರಣ್ಯಕ ಹಾಗೂ ಉಪನಿಷತ್ತು ಎಂಬ ಮೂರುಬಗೆಯ ಗ್ರಂಥಗಳು ಅಂತರ್ಭೂತಗಳಾಗಿವೆ. ಇವುಗಳ ಬಗ್ಗೆ ಮುಂದೆ ವಿಂಗಡಿಸಿ ಬರೆಯುವೆವು. ಪ್ರಕೃತದಲ್ಲಿ, ‘ ವೇದ ’ ಎಂಬ ಶಬ್ದದ ಅರ್ಥವೇನೆಂಬುದರ ವಿಷಯವಾಗಿ ವಿಚಾರಿಸುವಾ. ವೇದದಲ್ಲಿ ‘ ವೇದ ’ ಎಂಬ ಒಂದೇ ಶಬ್ದವು ಪ್ರಯೋಗಿ

ಸಲ್ಪಡುವ 'ವೇದಸ್' ಎಂಬ ಶಬ್ದವೂ ನಿರ್ದೇಶಿಸಲ್ಪಟ್ಟಿದೆ. ಇವೆರಡರಲ್ಲಿ 'ವೇದ' ಶಬ್ದವು ಪುಲ್ಲಿಂಗಿಯು; 'ವೇದಸ್' ಶಬ್ದವು ನಪುಂಸಕ ಲಿಂಗಿಯು. ವೇದ ಹಾಗೂ ವೇದಸ್ ಎಂಬಿವೆರಡೂ ಶಬ್ದಗಳು 'ವಿದ್' ಧಾತುವಿನಿಂದ ನಿಷ್ಪನ್ನಗಳಾಗಿವೆ. ವೇದದ ಬಹು ಸ್ಥಾನಗಳಲ್ಲಿ ಸಾಮಾನ್ಯತಃ ಇವೆರಡೂ ಶಬ್ದಗಳ ಪ್ರಯೋಗವು ಕಂಡುಬರುವವು. 'ವಿದ್'-ತಿಳಿ, ಅರಿವು, ತಿಳುವಳಿಕೆ (೨ನೇ ಗಣ); ಮತ್ತು, 'ವಿದ್'-ದೊರಕಿಸುವಿಕೆ, (೬ನೇ ಗಣ) ಎಂಬ ಎರಡು ತೆರನಾದ ಧಾತುಗಳಿಗನುಸರಿಸಿರುವ ಅರ್ಥಗಳಲ್ಲಿ, ವೇದ ಶಬ್ದಾರ್ಥವು ಮೊಟ್ಟ ಮೊದಲು ಇದುವೇ ಅಭಿಮತವಾಗಿತ್ತೆಂದು ನಿಷ್ಕರ್ಷಿಸಲು ಶಕ್ಯವಿಲ್ಲ. ಆದರೂ ವೇದದಲ್ಲಿಯೇ ಕೆಲವೆಡೆಯೊಳು ವೇದ ಶಬ್ದದ ಅರ್ಥವು ಜ್ಞಾನವೆಂತಲೂ ವೇದಾಧ್ಯಯನವೆಂತಲೂ ಬ್ರಹ್ಮಯಜ್ಞವೆಂತಲೂ ಹಲವುತರವಾಗಿ ಹೇಳಲ್ಪಟ್ಟಿರುವಂತೆ ವೇದಸ್ ಶಬ್ದಾರ್ಥವಾದರೂ ಜ್ಞಾನ ಅಥವಾ ಧನವೆಂದು ನಿರೂಪಿಸಲ್ಪಟ್ಟಿದೆ. ಇದರಿಂದ, ವೇದ ಹಾಗೂ ವೇದಸ್ ಶಬ್ದಗಳಿಗೆ ನಿಶ್ಚಿತಾರ್ಥವೇ ಇಲ್ಲವೆಂದು ಭಾವಿಸಲಾಗದು. ಇವೆರಡೂ ಶಬ್ದಗಳ ಆಯಾ ಅರ್ಥಗಳು ಬೇರೆ ಬೇರೆ ವಾಕ್ಯಗಳಲ್ಲಿ ಸಂದರ್ಭಾನುಸಾರವಾಗಿ ಹೇಳಲ್ಪಟ್ಟರೂ ಒಟ್ಟಿನ ಮೇಲೆ ಬಹು ಸ್ಥಳಗಳಲ್ಲಿ ಜ್ಞಾನ, ಧನವೆಂಬ ಅರ್ಥಗಳಲ್ಲಿಯೇ ಪರ್ಯವಸಾನಾಭಿಪ್ರಾಯವು ಸ್ಫುಟವಾಗಿ ಗೋಚರವಾಗುವದರಿಂದಲೇ ವೇದಾರ್ಥ ಪ್ರಕಾಶಕರಾದ ಯಾಸ್ಕ, ಹರದತ್ತ, ಸಾಯಣ, ಮಹೀಧರ ಮುಂತಾದವರು ವೇದದ ಬೇರೆ ಬೇರೆ ವಾಕ್ಯಗಳಲ್ಲಿ ಕಂಡುಬರುವ 'ವೇದ' ಮತ್ತು 'ವೇದಸ್' ಎಂಬ ಶಬ್ದಗಳಿಗೆ 'ಉತ್ಕೃಷ್ಟ ಜ್ಞಾನ'-'ಯಜ್ಞ ಭಾಗಪ್ರಾಪಕ ಕರ್ಮ ವಿಷಯಕ ಜ್ಞಾನ,- ಐಹಿಕಾಮುಷ್ಮಿಕ ಸುಖಸಾಧನೀಭೂತಧನ' ಎಂಬುದಾಗಿ ಅರ್ಥಗಳನ್ನು ಬರೆದಿದ್ದಾರೆ. ಮೇಲೆ ಹೇಳಿದ ಜ್ಞಾನ ಅಥವಾ ಧನವೆಂಬ ಎರಡು ಬಗೆಯಾದ ಅರ್ಥಗಳಲ್ಲಿಯಾದರೂ ಜ್ಞಾನಾರ್ಥವನ್ನು ಧನಕ್ಕೂ ಧನಾರ್ಥವನ್ನು ಜ್ಞಾನಕ್ಕೂ ರೂಪಕದಿಂದ ನಿರ್ದೇಶಿಸಲ್ಪಟ್ಟಿರುವದೆಂದು ತಿಳಿಯಲು ಬಾಧಕವಿಲ್ಲವಾದುದರಿಂದ, ವೇದ ಅಂದರೆ ಜ್ಞಾನ, (ಪವಿತ್ರಜ್ಞಾನ); ಧರ್ಮಸಂಬಂಧಜ್ಞಾನ; ಅರ್ಥಾತ್ ಜ್ಞಾನರೂಪ ಧನದ ಕೋಶ (ಬೊಕ್ಕಸ)ವೇ ವೇದವು.

ಇನ್ನು, ವೇದಸ್ ಶಬ್ದದ ಪ್ರಚಾರವಿಲ್ಲದೆ, ವೇದ ಶಬ್ದವೇ ಬಳಕೆಯಲ್ಲಿರಲು ಕಾರಣವೇನೆಂದರೆ- ವೇದಸ್ ಶಬ್ದಾರ್ಥವು ಮೊದಲು ಧನ

ನೆಂತಲೂ ಒಳಿತ ಜ್ಞಾನನೆಂತಲೂ ಅರಿಯಲ್ಪಟ್ಟಿದ್ದಾಗಿ, ಕೆಲವು ಕಾಲಾನಂತರದಲ್ಲಿ ವೇದ ಶಬ್ದದ ಅರ್ಥವು ಜ್ಞಾನವೆಂಬುದಾಗಿಯೇ ನಿಶ್ಚಿತವಾಗಿ ಸರ್ವತ್ರ ವಿಶೇಷತಃ ಪ್ರಚಾರವಾದ ತರುವಾಯ ವೇದಸ್ ಶಬ್ದೋಚ್ಚಾರವು ಹಿಂದುಳಿದು ವೇದವೆಂಬ ಹೆಸರೇ ಪ್ರಸಿದ್ಧಿಗೆ ಬಂದಿರಬಹುದೆಂದು ತರ್ಕದ ಆಧಾರವಿದೆ.

‘ಶ್ರುತಿಸ್ತು ವೇದೋ ವಿಜ್ಞೇಯೋ’-ಶ್ರುತಿ ಅಂದರೆ, ವೇದವು (ಮನು.೨-೧೦) ಎಂಬಂತೆ ವೇದವು ಶ್ರುತಿಯೆಂದೂ ಹೇಳಿಸಿಕೊಳ್ಳುತ್ತದೆ. ಏಕೆಂದರೆ, ಈಶ್ವರನಿಂದ ಬೋಧಿಸಲ್ಪಟ್ಟದನ್ನು ಋಷಿಗಳು ಶ್ರವಣ ಪೂರ್ವಕ ತಿಳಿದರಾದ್ದರಿಂದ ಈ ವೈದಿಕ ವಾಙ್ಮಯಕ್ಕೆ ಶ್ರುತಿಯೆಂಬ ಹೆಸರೂ ವಾಡಿಕೆಯಲ್ಲಿದೆ. ಅರ್ಥಾತ್ ವೇದಕ್ಕೆ ಈಶ್ವರ ಪ್ರಣೀತತ್ವ (ಅಪೌರುಷೇಯತ್ವ) ವಿದೆಯೆಂದು ಭಾರತೀಯರ ಬಲವಾದ ಶ್ರದ್ಧೆಯುಂಟು. ಈತರದ ಶ್ರದ್ಧೆಯು ಭಾರತೀಯರಲ್ಲಿ ದೃಢಪಡಲು, ಬಹುತರವಾಗಿ ಋಷಿಗಳಿಗೆ ‘ಮಂತ್ರದ್ರಷ್ಟಾರಃ’ ಎಂಬ ವಿಶೇಷಣವನ್ನು ಹಚ್ಚುತ್ತಿರುವದೇ ಮುಖ್ಯ ಕಾರಣವಾಗಿರಬಹುದೆಂದು ಊಹಿಸಲವಕಾಶವಿದೆ.

‘ಮಂತ್ರ ದ್ರಷ್ಟಾರೋ ಹಿ ಋಷಯಃ’ ಅಂದರೆ- ಋಷಿಗಳು ತಪಃಪ್ರಭಾವದಿಂದ ಈಶ್ವರನ ಕೃಪೆಗೆ ಪಾತ್ರರಾಗಿ ತನ್ಮೂಲಕ ಅನಾದಿ ಸಿದ್ಧಗಳಾದ ಮಂತ್ರಗಳನ್ನು ಸಾಕ್ಷಾತ್ಕಾರ ಮಾಡಿಕೊಂಡರು, ಎಂಬ ಅರ್ಥವು. ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಋಷಿಗಳಿಂದ ಬೇರೆ ಬೇರೆ ಸೂಕ್ತಗಳು ರಚಿಸಲ್ಪಟ್ಟಿರುವವೆಂದು ವೇದದಲ್ಲಿಯ ಅನುಕ್ರಮಣಿಕೆಗಳಿಂದಲೇ ತಿಳಿದು ಬರುವದಾದ್ದರಿಂದ ವೇದವು ಮನುಷ್ಯ ಕೃತವಲ್ಲೆಂದು ಹೇಳುವದು ಹೇಗೆ? ಎಂದು ಶಂಕಿಸಲಾಗದು. ಅನಾದಿ ಸಂಸಿದ್ಧವಾದ ಪರಾ ಅಪರಾ ರೂಪ ವೇದ ವಿದ್ಯೆಯನ್ನು ನಂದ್ಯಾದಿ ಪ್ರಮಥರೂ ಬ್ರಹ್ಮಾದಿ ದೇವತೆಗಳೂ ಗೃತ್ಸಮದ ವಾಮದೇವ ಮುಂತಾದ ಋಷಿಗಳೂ ಈಶ್ವರನಿಂದಲೇ ಪಡೆವರೆಂಬ ಅರ್ಥ ಬೋಧಕಗಳಾದ—‘ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ’-‘ಯುಗಾಂತೇಽನ್ತರ್ಹಿತಾನ್ ವೇದಾನ್ ಸೇತಿಹಾಸಾನ್ ಮಹರ್ಷಯಃ। ಲೇಭಿರೆ ತಪಸಾ ಪೂರ್ವಮನುಜ್ಞಾತಾಃ ಸ್ವಯಂಭುವಾ ॥’,-‘ಋಷಯೋ ವೇದಾನ್ ತಪಸಾ ಪ್ರತಿಪೇದಿರೆ।’ ಎಂಬೀ ಮೊದಲಾದ ಶ್ರುತಿಸ್ಮೃತಿ ಪ್ರಮಾಣ ವಾಕ್ಯಗಳಿಂದ ವೇದಕ್ಕೆ ಅಪೌರುಷೇಯತ್ವವೇ ಸಿದ್ಧಿಸುವದು. ಮಾಧವನು, ತೈತ್ತಿರೀಯ

ಸಂಹಿತೆಗೆ 'ವೇದಾರ್ಥ ಪ್ರಕಾಶ' ವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ; ಅವರಲ್ಲಿ—'ಯಥಾ ವ್ಯಾಸ ವಾಲ್ಮೀಕಿ ಪ್ರಭೃತಯೋತ್ರ ತತ್ತದ್ಗ್ರಂಥ ನಿರ್ಮಾಣಾವಸರೇ ಕೈಶ್ಚಿದುಪಲಬ್ಧಾ ಅನ್ಯೈರತ್ಯವಿಚ್ಛಿನ್ನ ಸಂಪ್ರದಾಯೇ ನೋಪಲಭ್ಯನ್ತೇ। ನ ತಥಾ ವೇದ ಕರ್ತಾಪುರುಷಃ ಕಶ್ಚಿದುಪಲಬ್ಧಃ। ಪ್ರತ್ಯುತ ವೇದಸ ನಿತ್ಯತ್ವಂ ಶ್ರುತಿ ಸ್ಮೃತಿಭ್ಯಾಂ ಪೂರ್ವಮುದಾಹೃತಮ್।'—ಅಂದರೆ, ವ್ಯಾಸವಾಲ್ಮೀಕಿ ಮುಂತಾದ ಪುರುಷರು ಭಾರತ ರಾಮಾಯಣಾದಿ ಗ್ರಂಥ ಕರ್ತೃಗಳೆಂಬ ಸಂಗತಿಯು, ಆಯಾ ಗ್ರಂಥ ನಿರ್ಮಾಣ ಸಮಯದಲ್ಲಿ ಇದ್ದ ಜನರಿಂದ ಪ್ರತ್ಯಕ್ಷ ಅರಿಯಲ್ಪಟ್ಟದಾಗಿ ತತ್ಕಾಲಾನಂತರದಲ್ಲಿಯೂ ಬಿಡುವಿಲ್ಲದೆ ಪಾರಂಪರ್ಯ ಹಿಡಿದು ಈ ವರೆಗೂ ಸರ್ವತ್ರ ವಿದಿತವಾಗಿರುವಂತೆ, ಒಬ್ಬಾನೊಬ್ಬ ಪುರುಷನು ವೇದವನ್ನು ರಚಿಸಿದನೆಂಬುದು ಪ್ರಸಿದ್ಧವಿಲ್ಲ; ಮತ್ತೇನಂದರೆ—ಈ ಮೊದಲು ಉದಾಹರಿಸಲ್ಪಟ್ಟ ಶ್ರುತಿಸ್ಮೃತಿ ಪ್ರಮಾಣಾನುಸಾರವಾಗಿ, ವೇದಕ್ಕೆ ನಿತ್ಯತ್ವವೇ ಸಿದ್ಧಿಸುವದು, ಎಂದು ಹೇಳಲ್ಪಟ್ಟಿದೆ. ಇದರಿಂದ ಬ್ರಹ್ಮನಾಗಲಿ- ಋಷಿಗಳಾಗಲಿ ವೇದ ಕರ್ತೃಗಳಲ್ಲವೆಂಬುದು ಸಿದ್ಧಿಸುವದು. ಈ ಮೇಲೆ ನಾವು ಉದಾಹರಿಸಿರುವ 'ಯೋಬ್ರಹ್ಮಾಣಂ ವಿದಧಾತಿ, ( ಶ್ವೆ ಅ. ೬. ಮ. ೧೮) ಎಂಬ ಶ್ರುತಿ ವಚನಾರ್ಥವನ್ನು ವ್ಯಾಸ ಮಹರ್ಷಿಯು—

ಬ್ರಹ್ಮಾಣಂ ಮುನಯಃಪೂರ್ವಂ ಸೃಷ್ಟ್ವಾ ತಸ್ಮೈ ಮಹೇಶ್ವರಃ ।
ತ್ವಾನದ ಖಿಲಾನ್ವೇದಾನಾತ್ಮನ್ಯೇವ ಸ್ಥಿತಾನಿಮಾನ್॥(ಸೂತಸಂಹಿತೆ, ಖಂ.೧. ಅ.)

ಎಂಬುದಾಗಿ ನಿರೂಪಿಸಿದ್ದಾನೆ. ಇದರ ಭಾವವನ್ನು ವ್ಯಾಖ್ಯಾನಕಾರನಾದ ಮಾಧವನು—'ಸ್ವಯಮೇವ ಲೀಲಯಾ ಸಕಲ ವೇದಗ್ರಹಣ ಸಮರ್ಥಂ ಬ್ರಹ್ಮಾಣಂ ನಿರ್ಮಾಯ ಸ್ವಾತ್ಮನಿ ನಿತ್ಯ ಮವಸ್ಥಿತಾ ಏವ ವೇದಾಸ್ತಸ್ಮೈ ದತ್ತಾ। ನಚ ನಿತ್ಯ ಸಿದ್ಧವೇದ ಸಮರ್ಪಣೆ ಶಿವಸ್ಯೋಪಾಧ್ಯಾಯ ತುಲ್ಯತಾ| ಉಪಾಧ್ಯಾಯೋಹಿ ಸ್ವಯಮನ್ಯತೊ ಲಬ್ಧ್ವಾ ಶಿಷ್ಯಾನಧ್ಯಾಪಯತಿ । ಶಿವಸ್ತು ನೈವ ಮನ್ಯತೊಽಧೀತೆ ಸ್ವಾತ್ಮನಿ ನಿತ್ಯ ಮವಸ್ಥಿತಾ ನಾಮೇವ ತೇಷಾಂ ಬ್ರಹ್ಮದ್ವಾರಾ ಸಂಪ್ರದಾಯಂಪ್ರವರ್ತಯತಿ।'— ಅಂದರೆ, ಈಶ್ವರನು ತಾನೇ ಲೀಲೆಯಿಂದ, ಸಕಲವೇದಗಳನ್ನು ಗ್ರಹಿಸಲು ಶಕ್ತನಾದ ಬ್ರಹ್ಮನನ್ನು ಹುಟ್ಟಿಸಿ ತನ್ನಲ್ಲಿ ನಿತ್ಯ ಸಿದ್ಧಗಳಾದ ವೇದಗಳನ್ನು ಅವನಿಗೆ ಕೊಟ್ಟನು. ನಿತ್ಯಸಿದ್ಧವೇದ ಸಮರ್ಪಣದಲ್ಲಿ ಶಿವನಿಗೆ ಉಪಾಧ್ಯಾಯನ (ಶಿಕ್ಷಕನ) ಸಾದೃ

ರವು ಸಲ್ಲದು. ಉಪಾಧ್ಯಾಯನಾದರೊ ತಾನು ಅನ್ಯರಿಂದ ಸಂಪಾದಿಸಿದ ವಿದ್ಯೆಯನ್ನು ಶಿಷ್ಯರಿಗೆ ಕಲಿಸುತ್ತಾನೆ. ಶಿವನಾದರೊ ಪರರಿಂದ ಬೋಧಿಸಲ್ಪಟ್ಟವನಲ್ಲವಾದುದರಿಂದ ತನ್ನಲ್ಲಿ ಯಾವಾಗಲೂ ಸ್ವತಃ ಸಿದ್ಧಗಳಾದ ವೇದಗಳ ಸಂಪ್ರದಾಯವನ್ನು ಜಗತ್ತಿನಲ್ಲಿ ಬ್ರಹ್ಮನ ಮುಖದಿಂದ ಪ್ರಚುರಗೊಳಿಸಿದ್ದಾನೆ, ಎಂದು ಉಲ್ಲೇಖಿಸಿರುವನು. 'ಬ್ರಹ್ಮಣಃ ಸಕಲಾನಾ ವೇದಾನ್ ವಸಿಷ್ಠಃ ಪ್ರಾಪ್ತವಾನೃಷಿಃ। ತಸ್ಮಾಚ್ಛಕ್ತಿಸ್ತತೊ ಧೀಮಾನ್ ಪರಾಶರ ಮಹಾ ಮುನಿಃ॥ ಪರಾಶರಾನ್ಮಹಾ ಬುದ್ಧಿರ್ವೇದವ್ಯಾಸ ಮಹಾಮುನಿಃ॥' ಎಂಬಂತೆ, ಆ ಬ್ರಹ್ಮನಿಂದ ವಸಿಷ್ಠನು ಸಕಲವೇದಗಳನ್ನು ಪಡೆದನು; ವಸಿಷ್ಠನಿಂದ ಶಕ್ತಿ ಮುನಿಯೂ ಶಕ್ತಿಯಿಂದ ಬುದ್ಧಿಶಾಲಿಯಾದ ಪರಾಶರನೂ, ಪರಾಶರನಿಂದ ವ್ಯಾಸನೂ ಹೀಗೆ ಮಂತ್ರ ದ್ರಷ್ಟಾರರ ಪಾರಂಪರ್ಯ ವಿರುವದು- ಆದ್ದರಿಂದ, ಮಂತ್ರ ದ್ರಷ್ಟಾರರೆಂದರೆ ಮಂತ್ರ ಕರ್ತರೆಂದರ್ಥವಲ್ಲ.

ಹಾಗೂ, ಋಷಿಗಳು ಅಂದರೆ, ಮಂತ್ರ ಕರ್ತರು ಎಂಬ ಅರ್ಥಕ್ಕೆ ಪ್ರಮಾಣವಿಲ್ಲ. ಯದ್ಯಪಿ, 'ಯಥರ್ಷಿ ಮಂತ್ರ ಕೃತೊ ವೃಣೀತೆ, (ಆಪಸ್ತಂಭ. ಶ್ರೌ. ಸೂ) 'ಯ ಆರ್ಷೇಯಾ ಋಷಯಸ್ತೇಷಾಂಯೆ ಮಂತ್ರಕೃತಃ, (ಆಶ್ವಲಾಯನ ಶ್ರೌ. ಸೂ. ವೃತ್ತಿ) 'ಯಸ್ಯಯಜಮಾನಸ್ಯಯ ಋಷಯೋ ಗೋತ್ರ ಋಷಿತ್ವೇ ನೋಪಾಖ್ಯಾಯನ್ತೆ ಮಂತ್ರ ಕೃತಶ್ಚ,(ಆಪ. ಶ್ರೌ. ವೃತ್ತಿ. ರುದ್ರದತ್ತ) 'ಮಂತ್ರ ಕೃತಾಮೃಷೀಣಾಮ್ (ರಘುವಂಶ ೫-೪)' ಇತ್ಯಾದಿ ಪ್ರಯೋಗಗಳಿರುವದು ಕಂಡುಬರುವದು; ಆದರೂ 'ನಾಸ್ಮಾಕ ಮೇತೇಷು [ಋಷಿಷು] ಏತೆ ಮನ್ತ್ರಕೃತ [ಋಷಯಃ] ಏತೆ ಅಮನ್ತ್ರ ಕೃತಃ [ಋಷಯಃ] ಇತಿಸ್ಮರನ್ತಿ, (ಅಥರ್ವವೇದ, ೬. ೩. ೧೦).' ಎಂಬ ವಾಕ್ಯದಿಂದ, ಮಂತ್ರ ಕರ್ತರಲ್ಲದವರಿಗೂ ಋಷಿತ್ವವು ಸೂಚಿಸಲ್ಪಟ್ಟಿದೆ. ಮತ್ತು, 'ಅಥರ್ವಣಃ ಪುತ್ರಃದಧ್ಯಂಗ ಋಷಿಃ (ಋ. ೬, ೧೬, ೧೪;)—'ಕಣ್ವಸ್ಯ ಪುತ್ರಃ ವತ್ಸ ಋಷಿಃ, (ಋ. ೮, ೮, ೮,)— 'ಅಗ್ನೇಃ ಸೂನವಃ ಅಂಗಿರಸಃ ಋಷಯಃ(ಋ. ೧೦, ೬೨, ೫;) ಎಂಬುದಾಗಿ ಋಗ್ವೇದದಲ್ಲಿಯೇ ಅಥರ್ವಣ ಮಗನಾದ ದಧ್ಯಂಗ, ಕಣ್ವನ ಮಗನಾದ ವತ್ಸ, ಅಗ್ನಿಯ ಪುತ್ರರಾದ ಅಂಗಿರಸಾಭಿಧರು ಮುಂತಾದವರನ್ನು ಋಷಿಗಳೆಂಬುದಾಗಿ ನಿರ್ದೇಶ ಮಾಡಲ್ಪಟ್ಟಿದೆ; ಆದರೆ ವೇದದ ಅನುಕ್ರಮಣಿಕೆಯಲ್ಲಿ ಅವರ ಹೆಸರಿನ ಸೂಕ್ತವು ಒಂದಾದರೂ ಕಂಡುಬರು

ವದಿಲ್ಲ. 'ಪ್ರಸ್ಕಣ್ವ ಹರಿಶ್ಚಂದ್ರಾ ವೃಷೀ' (ಪಾ. ೬, ೧, ೧೫೩) ಎಂದು ಪಾಣಿನಿಯು ಹೇಳುತ್ತಾನೆ. ಆದರೆ, ಅನುಕ್ರಮಣಿಕೆಯಲ್ಲಿ ಹರಿಶ್ಚಂದ್ರನ ಹೆಸರಿನ ಒಂದು ಸೂಕ್ತವನ್ನಾದರೂ ಕೊಟ್ಟಿಲ್ಲ. ಈಗಿನ ಸಂಶೋಧಕರೆಂಬುವವರು ಹೇಳುವ ಮೇರೆಗೆ ಬಹಳ ಹಳೆಯದೆನಿಸುವ ಋಗ್ವೇದದಲ್ಲಿಯೂ, ಮೊದಲನೆಯ ಮಂಡಲವು ಎಲ್ಲಕ್ಕೂ ಹಳೆಯದೆಂತಲೂ ಹತ್ತನೆಯ ಮಂಡಲವು ಎಲ್ಲಕ್ಕೂ ಇತ್ತೀಚಿನದೆಂತಲೂ ನಿಶ್ಚಿತವೆನಿಸುವದಾದರೆ, ಎಲ್ಲಕ್ಕೂ ಹಳೆಯದೆಂದು ನಿರ್ಣೀತವಾದ ಮೊದಲನೆಯ ಮಂಡಲದ ಮೊದಲನೆಯ ಸೂಕ್ತದಲ್ಲಿಯ ಎರಡನೇ ಮಂತ್ರದಲ್ಲಿಯೇ- 'ಅಗ್ನಿಃ ಪೂರ್ವೇಭಿ ಋಷಿಭಿರೀಡ್ಯೋ ನೂತನೈರುತ,— ಈ ಅಗ್ನಿದೇವನು ಪ್ರಾಚೀನ ಹಾಗೂ ನವೀನ ಋಷಿಗಳಿಂದ ಸ್ತುತಿಸಲು ಯೋಗ್ಯನಾಗಿದ್ದಾನೆ, ಎಂದು ಹೇಳಲ್ಪಟ್ಟಿದೆ. ಇದರಿಂದ, ಋಗ್ವೇದ ನಿರ್ಮಾಣಕ್ಕಿನ್ನ ಮುಂಚೆಯೇ ಋಷಿಗಳು ಇದ್ದರೆಂಬುದು ಸ್ಪಷ್ಟವಾಗಿದೆ. 'ಮಂತ್ರ ಕರ್ತನು ಋಷಿಯು' ಎಂದೆನ್ನುವದಾದರೆ, ಮಂತ್ರ ನಿರ್ಮಾಣವಾದ ನಂತರ ಕೆಲವು ಕಾಲದ ಮೇಲೆ ಅವರ ಕರ್ತೃವಿಗೆ 'ಋಷಿ' ಎಂಬ ಹೆಸರು ದೊರೆಯುವದು ಸಂಭವನೀಯ ವೆನಿಸಬಹುದು. ಆದರೆ, ಇಲ್ಲಿಯಾದರೊ ಮಂತ್ರ ನಿರ್ಮಾಣಕ್ಕಿಂತ ಮುಂಚೆಯೇ 'ಋಷಿ' ಎಂಬ ಹೆಸರು ನಿರ್ದೇಶಿಸಲ್ಪಟ್ಟಿದ್ದಿತೆಂಬುದು ತಿಳಿದು ಬರುವದು. ಆದ್ದರಿಂದ ಋಷಿಯೆಂಬಾತನು ಸೂಕ್ತ ಕರ್ತೃವೇ ಆಗಿರುತ್ತಾನೆಂದಾಗಲಿ, ಸೂಕ್ತ ಕರ್ತೃವೇ ಋಷಿಯೆಂದಾಗಲಿ ವೇದ ಮೂಲಕ ನಿಶ್ಚಿತವಾಗುವದಿಲ್ಲ.

ಇನ್ನು, ಯಾಸ್ಕನು 'ಸಾಕ್ಷಾತ್ಕೃತ ಧರ್ಮಾಣ ಋಷಯೊ ಬಭೂವುಃ' (ನಿರುಕ್ತ. ೧, ೨೦.) ಎಂದು ಹೇಳಿದ್ದಾನೆ. ಇಲ್ಲಿ, ಋಷಿಗಳಿಂದ ಧರ್ಮವು ಸಾಕ್ಷಾತ್ಕರಿಸಲ್ಪಟ್ಟಿತು ಎಂಬರ್ಥವು. ವಿವಕ್ಷಿತವಲ್ಲದೆ, ಧರ್ಮವನ್ನು ಕಂಡು ಹಿಡಿಯತಕ್ಕವರು ಋಷಿಗಳೆಂಬರ್ಥವು ವಿವಕ್ಷಿತವಲ್ಲ. ಹಾಗಿದ್ದ ಪಕ್ಷದಲ್ಲಿ, ಆ ಯಾಸ್ಕಾಚಾರ್ಯನಿಂದಲೇ 'ತೇಽವರೇಭ್ಯಃ ಅಸಾಕ್ಷಾತ್ಕೃತ ಧರ್ಮೇಭ್ಯಃ [ಋಷಿಭ್ಯಃ] ಮಂತ್ರಾನ್ಸಂಪ್ರದುಃ, ಎಂದು ಹೇಳಲ್ಪಡುತ್ತಿದ್ದಿಲ್ಲ. ದುರ್ಗಾಚಾರ್ಯನು—'ಋಷಿರ್ದರ್ಶನಾತ್ ಇತಿ ಹಿವಕ್ಷ್ಯತಿ' ಎಂದು ಅವತರಣಿಕೆಯನ್ನು ಬರೆದು 'ಧರ್ಮವನ್ನ ಕಂಡು ಹಿಡಿದವರು ಅಥವಾ ಧರ್ಮದ್ರಷ್ಟಾರರು ಋಷಿಗಳು' ಎಂಬುದೇ ಯಾಸ್ಕನ ಅಭಿಪ್ರಾಯವೆಂಬ ಭಾವವನ್ನು ಹೊರಪಡಿಸಿದ್ದಾನೆ. ಆದರೆ, 'ಋಷಿರ್ದರ್ಶನಾತ್'' ಎಂಬುದು ಯಾಸ್ಕನ ಮತವಲ್ಲ. ಕಿಂತು ಔಪಮನ್ಯರದಾಗಿದೆ. ಯಾಸ್ಕನು 'ಇತಿ ಔಪಮನ್ಯವಃ'

ಎಂದು ಆ ಬಗ್ಗೆ ತನ್ನ ಅಸಮ್ಮತಿಯನ್ನು ವ್ಯಕ್ತ ಪಡಿಸಿದ್ದಾನೆ. ಇಷ್ಟೇ ಅಲ್ಲ 'ತದ್ಯದೇನಾಂಸ್ತಪಸ್ಯಮಾನಾನ್ ಬ್ರಹ್ಮ ಸ್ವಯಂಭ್ವಭ್ಯಾನರ್ಷತ್ ತದೃಷಯೋಽಭವನ್ ತದೃಷೀಣಾಮೃಷಿತ್ವಮ್' ಎಂಬೀ ಐತರೇಯ ಆರಣ್ಯಕದೊಳಗಿನ ಮಂತ್ರವನ್ನುದಾಹರಿಸಿ 'ಋಷಿ' ಎಂಬ ಶಬ್ದವು ದರ್ಶನಾರ್ಥಕ 'ಋಷ್' ಧಾತುವಿನಿಂದಾದುದಲ್ಲ, ಗಮನಾರ್ಥಕ 'ಋಷ್' ಧಾತುವಿನಿಂದಾಗಿದೆಯೆಂಬುದಾಗಿ ಅವನು (ಯಾಸ್ಕನು) ಪ್ರಮಾಣ ಪೂರ್ವಕ ಸ್ಪಷ್ಟವಾಗಿ ತೋರಿಸಿದ್ದಾನೆ 'ಏವಮುಚ್ಚಾವಚೈರಭಿಪ್ರಾಯೈರ್ಋಷೀಣಾಂ ಮಂತ್ರದೃಷ್ಟಯೋ ಭವನ್ತಿ' (ನಿರುಕ್ತ. ೭. ೧, ೩ ಎಂಬೀ ವಾಕ್ಯದ ಮೇಲೆ ದುರ್ಗಾಚಾರ್ಯನು 'ವಿದ್ಯಮಾನಾನೇವ ಹಿ ಮಂತ್ರಾಣಾಂ ಋಷಯೋ ದ್ರಷ್ಟಾರೋ ಭವನ್ತಿ' — ಮೊದಲಿದ್ದ ಮಂತ್ರಗಳನ್ನೇ ಸಾಕ್ಷಾತ್ಕರಿಸಿಕೊಂಡು ಋಷಿಗಳು ಮಂತ್ರ ದ್ರಷ್ಟಾರರೆನಿಸಿಕೊಳ್ಳುತ್ತಾರೆ, ಎಂದು ಹೇಳಿದ್ದಾನೆ.

(ಮುಂದೆ ಸಾಗುವದು.)

---

# ಮುನಿಪುರದ ಮಹಾಂತ ಸ್ವಾಮಿಗಳು.

## (ಕೃಷ್ಣರಾಜೇಂದ್ರ ಒಡೆಯರ ಮೈಸೂರ ಇವರಿಗೆ ಬರೆದ ಪದ್ಯಗಳು.)

---

(ನಾನು ಒಂದೆಡೆಯಲ್ಲಿ ಗ್ರಂಥಗಳನ್ನು ಶೋಧಿಸುತ್ತಿರುವಾಗ ಕೆಳಗೆ ಕಾಣಿಸಿದ ಸುಂದರವಾದ ಪದ್ಯಗಳು ನನ್ನ ಕಣ್ಣಿಗೆ ಬಿದ್ದವು. ಇವುಗಳನ್ನು ಮುನಿಪುರದ ಮಹಾಂತ ಸ್ವಾಮಿಗಳೆಂಬವರು ಬರೆದ ಹಾಗೆ ತಿಳಿಯುತ್ತದೆ. ಇವರು ಯಾರೆಂಬದು ನನಗೆ ತಿಳಿಯದು ಇವರು ಗತಿಸಿದ ಕೃಷ್ಣರಾಜ ಒಡೆಯರು ಮೈಸೂರ, ಇವರ ಕಾಲಕ್ಕೆ ಇದ್ದು, ತಮ್ಮನ್ನು ಕಾಣುವದಕ್ಕೋಸ್ಕರ ರಾಜರು ಇವರಿಗೆ ಹೇಳಿ ಕಳಿಸಿದಾಗ್ಗೆ ಸ್ವಾಮಿಗಳವರು ಈ ಕೆಳಗಿನ ಪದ್ಯಗಳನ್ನು ರಚಿಸಿ ಅವರ ಕಡೆಗೆ ಕಳಿಸಿದ ಹಾಗೆ ನಾನು ನೋಡಿದ ಪುಸ್ತಕದಿಂದ ತಿಳಿದು ಬರುತ್ತದೆ. ಸಂಪಾದಕ)

ನೀನೆಲ್ಲಿ ನಿನ್ನ ನಾಡೆಲ್ಲಿ ಕೇಳೆಲೆ ರಾಜ!।
ನಾನೆಲ್ಲಿ ನಾನಿರುವ ಸುಡುಗಾಡು ತಾನೆಲ್ಲಿ।
ಏನೆನ್ನನಾಶೆಯೆಂಬ ಪಾಶದಿ ಕಟ್ಟಿಹೆಯೋ ಕರ್ಪುರನು ಕಟ್ಟು ರಾಜಾ ॥೧॥
ಪರಶಿವಾನಂದ ಏಕಾಂತ ಗವಿಯೊಳಗಿರುವ।
ಪರಮ ಶಿವಯೋಗಿಯೆಂಬೀ ಹುಲಿಗೆ ಕೇಳ್ ನೃಪತಿ।
ಇರಿದೆ ಯಾಶಿಸಿ ಭಕ್ತಿ ಬಲೆಯು ನೀನುರೆ ಹಾಕದಿರೆ ಗೆಲಿವ ಪರಿಯಂತೆಂತೋ॥
ವರ ರಸನೆಯೊಳು ಮಂತ್ರ, ಘ್ರಾಣದೊಳು ಮಾರುತನು।
ವರರೂಪವೀ ದೇಹದೊಳಗಿರ್ಪ ತೆರದಿಂದ।
ಧೊರೆಯೆ, ಭೋಗದೊಳಿದ್ದು ಮಿಲ್ಲದಿಹ ಯೋಗೀಶಗೆಣೆಯಾರು ನೀನ
ರಿಯೆಯಾ ॥೨॥

ಮತ್ತೆ ಸಲೆ ರುದ್ರಗಣ ದೇವಗಣ ಪ್ರಮಥಗಣ।
ಭಕ್ತಗಣಗಳು ನಿನಗೆ ಹರಿಸಿದರು ಸತತೋತ್ತ।
ರೋತ್ತರವು ಧೊರೆತನ ಗುಣೈಶ್ವರ್ಯ ಭೋಗಗಳು ವೃದ್ಧಿಸುತ್ತಿರಲೆನ್ನುತ॥
ಮತ್ತವರು ಜನ್ಮ ಜನ್ಮಾಂತರದಲಮುವೆ ದೊರೆ।
ಯುತ್ತಲಿರಲೆಂದು ಹರಿಸಲಿ; ಮತ್ತೆ ನನಗೆ ಹರಿ।
ಸುತ್ತಿರಲಿ ಸರ್ವ ಕಾಲದಿ ಕುಂಬಳದ ಬುರುಡಿ ಕೈಜ್ಯ ಬಿಡದಿರಲೆನ್ನುತ॥೩॥

ಧರೆಯೊಳಗೆ ಮೆರೆವ ಮೈಸೂರಾಧಿಪನೆ ಕೇಳು।
ಬರಲೆಂತು ನಿನ್ನಲ್ಲಿ? ರಥಹಯಾನೆಗಳಿಲ್ಲ;।
ಮೆರೆವ ಪಲ್ಲಕ್ಕಿಲ್ಲ; ಹೊರುವಾಳು ಮುನ್ನಿಲ್ಲ; ಬಲು ಪುರಾತನದಿಂದಿಹ॥
ಹಿರಿಯುತ್ತು ನನಗಿರುವದರಿಂದ ಬರಲಾರೆ.।
ಕರಿಸುವದು ನಿನಗುಚಿತವಲ್ಲ. ಮೋಣ್ ಬೇಡ ಬಿಡು।
ಬರಿದೇತಕೀತವಕ? ಮನದೊಳುರು ಭಕ್ತಿಯಂ ಪಿಡಿದಲ್ಲಿ ಕಾಣೆನ್ನನು ॥೪॥

ನಿರುಪಾಧಿ ಯೋಗಿಯನು ಬಹಿರಂಗ ಯೋಜನೆಯ-।
ನರಿದು ವಿರಿಚಿಸಿ ನೀನು ಕರಿಸುವದು ತರವಲ್ಲ।
ಅರಹುವೆನರಸ ನೀನು ಮರವೆ ಮಾನಸನಾದೆ ಸಿರಿಭೋಗ ದೊರೆತನದಲಿ॥
ಹರಹರಿ ಬ್ರಹ್ಮ ಪದ ತೃಣಕೆ ಸಮಗಂಡಿರುವ।
ಪರಮ ಪಂಚಾಕ್ಷರುಚ್ಚರಣೆಯೊಳಗಿರುತಿರುವ।
ವರ ಲಿಂಗ ಜಲಧಿಯೊಳು ಸತತ ಮುಳುಗಿರ್ಪವಗೆ ನರರ ಹಂಗೇನು
ನೃಪತೀ॥೫॥

ಪರಮ ಕೈಲಾಸದೊಳು ಪರಶಿವನು ಶರಣರನು ।
ಕರೆದು ಕೇಳಿದನಾಗ ಹೋಗಿ ಧರೆಯೊಳಗಿನ್ನು ॥
ಹರಭಕ್ತರಿಗೆ ಕಂದನಾಗಿ ಷಟ್ಸ್ಥಲ ಮಾರ್ಗ ಪರುಹಿ ಬರುವವರಾರೆನೆ ।
ಶರಣರೆಲ್ಲರು ತಮ್ಮ ಚರಣ ಧೂಳಿಯ ತೆಗೆದು ।
ಇರದೊಂದು ಗೊಂಬೆಯನು ಕರುಣದಿಂ ರಚಿಸಿದರು ।
ವರನಾದ ಬಿಂದುಕಳೆ ತುಂಬಲೊಡನಾ ಶಿಶುವುಪಿಂ ಮುಪ್ಪಾಂತೆಂದಿತಾಗ ॥೬॥

ಆಗ ಪರಶಿವ ಮೂರ್ತಿ ಶಿಶು ಕಂಡು ನಸುನಕ್ಕು ।
ಏನಿದೇಂ ಸೋಜಿಗವು? ಮಗುವೆಂತು ಜನಿಸಿತೆನೆ ।
ನಾಗಭೂಷಣ ಗವರ 'ಚರಣ ಧೂಳಿಯ ತೆಗೆದು ಗೊಂಬೆಯೊಂದನು ಗೈದೆವು ।
ರಾಗದಿ ಬಳಿಕ ನಾದ ಬಿಂದು ಕಳೆ ತುಂಬಿದೆವು ।
ಕೂಗಿತಾಗದು 'ಅ ಉ ಮ' ಎಂಬ ನಾಮವನೆನಲು ।
ಯೋಗಿ ಪರಶಿವ ಕೇಳಿ 'ಜೋಪರ ಬ್ರಹ್ಮಶಿಶು' ಬಾರೆಂದು ಪೆಸರಿಟ್ಟನು ॥೭॥

ಪರಶಿವನು ಹರಭಕ್ತ ಹರಶರಣರೊಂದಾಗಿ ।
ಪರಮ ಪಶ್ಚಿಮ ಚಕ್ರ ಪಟ್ಟವನು ಕಟ್ಟಿದರು ।
ಪರಸಿದರು ಸಿಂಹಾಸನಾಧೀಶನಾಗೆಂದು ಮುದವೆರಸಿ ಹರಶರಣರು ॥
ಧರೆಯೊಳಗೆ ಹೋಗಿನ್ನು ಚರರೂಪದಲಿ ಮೆರೆದು ।
ವರಧರ್ಮವನ್ನರುಹಿ ಕರಣ ಗುಣಗಳ ಜಯಿಸಿ ।
ತರಿದಟ್ಟಿ ಮಲಮೂರನಾರು ವೈರಿಯ ಗೆದ್ದು, ತರುಳ ಬಾರೆಂದೊರೆದರು ॥೮॥

ನಮ್ಮಪ್ಪ ಪರಶಿವನು ನಮ್ಮವ್ವನಮ್ಮವ್ವೆ ।
ನಮ್ಮಕ್ಕ ನಾಗಮ್ಮನಲ್ಲದೆ, ಮಹಾ ದೇವಿ ।
ನಮ್ಮಮ್ಮ ನಿವರು ಕದಳಿಯ ಪೊಕ್ಕು ಬೈಲೊಡನೆ ಬೈಲಾಗಿ ನೆರೆಪೆರೆದರು ॥
ನಮ್ಮಣ್ಣ ಷಣ್ಮುಖನು. ಬಳಗವಾಗಣ ಗಡಣ ।
ನಮ್ಮ ಪ್ರಾಚೀನರರುವತ್ತು ಮೂವರು ಶರಣ ।
ರೆಮ್ಮನ್ನು ಪೋಗಗೊಡರೆಲೆ ರಾಜ ನಿನ್ನೆಡೆಗೆ. ಸ್ವಾತಂತ್ರ್ಯವಿಲ್ಲವೆನಗೆ ॥೯॥

ದೃಢಭಕ್ತ ಮೇದಾರ ಚೆನ್ನಯ್ಯ ನಂಬಲಿಯು ।
ಮೃಡಗೆ ಬಲು ಸವಿಯಾಯ್ತು. ಸವಿದನಲ್ಲದೆಯುಳಿದ ।
ಕಡುಧನಿಕ ಷೋಡಷಿಪರ ಸವಿಯ ಮೃಷ್ಟಾನ್ನವನ್ನೊಡೆಯ ಪರಶಿವನೊಲ್ಲನು ॥
ಷೋಡವಿಪತಿ ಕೇಳೆನ್ನ ಹಡೆದ ತಾಯುಮ್ಮವ್ವೆ ।
ಒಡಮಗನ ಸಲಹುವಳು. ಜಡಸಾಲ ವಿರದಿರಲು ।
ಬಡಿದೆನಗೆ ಕುಡಿಸುವಳು, ಚರತೀರ್ಥ ಶೇಷವೇ ಪಾಲಾಗೆ ಸವಿಯೆನ್ನುತ ॥೧೦॥

ನೀರೊಳಿಹ ಜೀವಿಗಳ ಬಯಲೊಳಗಿಡುವ ತೆರದಿ
ಊರೊಳಿಹ ಮೃಗಗಣವ ನಡವಿಗಟ್ಟುವ ತೆರದಿ ।
ಘೋರಪಡಿಸುವದೆನ್ನ ಸುಚಿತವಲ್ಲಿಲೆ ರಾಜ ಮನದೊಳಗೆ ತಿಳಿದು ನೋಡು ।
ಬಾಲಬ್ರಹ್ಮಿಯು ನಾನು ಬಳಸಿ ಬ್ರಹ್ಮಿಯು ನೀನು ।
ಹೇಳಲೇಂ ನಾನಿನ್ನು ತಿಳುವಳಿಕೆಯುಳ್ಳವಗೆ ।
ವೇಲೆ ಮಿಗೆ ಸುಖವಿರುವದೊಳಗೇನು ಸುಖವಿಲ್ಲ. ವೈಸೂರು ವೈಚೂರುವು ॥೧೧॥

ಅರಸ ಕೇಳ್ ನೀನೆನ್ನ ಮರಸವಿರು ಮೋದದಿಂ ।
ಪರಶಿವಾಜ್ಞೆಯು ನಾಂತು ಮರೆಯುವದು ತರವಲ್ಲ । ...
ಮೆರೆಯುವಡೆ ಛತ್ರ ಚಾಮರಗಳೆಂಬಾ ತಟ್ಟಿ ಕಪಬರಿಗೆಗ...ಳು ಪ್ರದ...ಗಳೆಂತು ॥

ಧರೆಯ ಭೋಗವನೊಲ್ಲೆ ಪರದ ಭೋಗವನೊಲ್ಲೆ ।
ಗುರು ಬಸವ ಪ್ರಮಥಗಣ ಮೆರೆಯ ಬೇಡೆನ್ನುವರು ।
ಹೊರಗೆ ರಂಜನೆ ಬೇಡ ಗುಪ್ತ ಭಕ್ತಿಯ ಮಾಡಿ ಮುಕ್ತಿವಡೆವುದು ರಾಜನೇ ॥೧೨॥

ಮೂರು ತೆರನಾಗಿರುವ ಧೀರ ಶಿವಯೋಗೀಶ ।
ಮಾರಹರ ಮೊದಲಾದ ಯಾರ ಹಂಗಿಗನಲ್ಲ ।
ತೋರುವೀ ಜಗದ ಸುಖ ವೈಭವಂಗಳನೆಲ್ಲ ತೃಣಕೆ ಸರಿ ಎಂದರಿವನು ॥
ಭೂರಮಣ ಕೇಳಿನ್ನ ಕರಿಸಿ ಘಾಸಿಸುವೇಕೆ? ।
ತೋರ ಮುತ್ತನು ಬೆಳ್ಳಿ ಬಂಗಾರಗಳ ನೊಲ್ಲೆ ।
ಬೇರೆ ಕುಂಬಳ ಬುರಡಿಯುಂ ಕಳುಹು ಮನನೊಪ್ಪಿರೊಡೆ ಗುಪ್ತ ಭಕ್ತಿಯಿಂದ ॥೧೩॥



# ಪಂಚಾಚಾರಗಳು.

ಲೇಖಕರು- ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್, ಎಲ್ ಬಿ. ವಿಜಾಪುರ.



ವೀರಶೈವರಲ್ಲಿ ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ, ಎಂಬ ಐದು ಆಚಾರಗಳು ಇವೆ. ಅವರಲ್ಲಿ ಅಷ್ಟಾವರಣಗಳು ಎಷ್ಟು ಮಹತ್ವವಾದವುಗಳೋ ಅಷ್ಟೇ ಪಂಚಾಚಾರಗಳೂ ಮಹತ್ವವಾದವು. ಇಷ್ಟೇ ಅಲ್ಲ, ಅಷ್ಟಾವರಣಗಳ ಪ್ರಭಾವವು ಮತ್ತು ಬಲವು ಪಂಚಾಚಾರಗಳಿಗನುಸರಿಸಿ ನಡೆಯುವದರ ಮೇಲೆ ಅವಲಂಬಿಸಿರುತ್ತವೆಂದು ಹಿರಿಯರು ತಿಳಿಯುತ್ತಾರೆ. ಅಷ್ಟಾವರಣಗಳು ಭಕ್ತನನ್ನು ರಕ್ಷಿಸಲು ಹೊದಿಕೆಗಳಂತೆ ಇದ್ದರೆ ಪಂಚಾಚಾರಗಳು ಅವನಿಗೆ ಕೇವಲ ಪ್ರಾಣದಂತೆ ಇವೆ ಎಂದು ವೀರಶೈವ ಗ್ರಂಥಕಾರರು ಮೇಲಿಂದ ಮೇಲೆ ಹೇಳುತ್ತಾರೆ. ವಚನ ಗ್ರಂಥಗಳಲ್ಲಿ "ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ" ಭಕ್ತನು ಆಚರಿಸಬೇಕೆಂದು ಹೇಳಿದ ಉಕ್ತಿಗಳು ಅಸಂಖ್ಯವಾಗಿವೆ. ಪಂಚಾಚಾರಗಳೇ ಭಕ್ತನನ್ನು ಸನ್ಮಾರ್ಗಕ್ಕೆ ಹಚ್ಚಲು ಸಹಾಯಕಾರಿಗಳು, ಅವುಗಳ ಚೈತನ್ಯವೇ ಅವನ ಚೈತನ್ಯವು, ಎಂದು ಅವರ ಅಭಿಪ್ರಾಯವು. ಇದರ ಮೇಲಿಂದ ಈ ಆಚಾರಗಳು ವೀರಶೈವ ಧರ್ಮದಲ್ಲಿ ಎಷ್ಟು ಮಹತ್ವದವಿರುತ್ತವೆಂಬದನ್ನು ವಾಚಕರು ಅರಿಯಬಹುದು.

ಪ್ರತಿಯೊಂದು ಧರ್ಮದಲ್ಲಿ ಅದರ ಸಾರವನ್ನು ಹೇಳತಕ್ಕ ಕೆಲವು ಕಟ್ಟುಗಳು ಅಥವಾ ನಿಯಮಗಳು ಇರುತ್ತವೆ. ಅವುಗಳ ಉದ್ದೇಶವು ಆ ಧರ್ಮದ ಮಹತ್ವದ ತತ್ವಗಳನ್ನು ಅತಿ ಸ್ಪಷ್ಟವಾಗಿ ಮತ್ತು ಸಂಗಡಲೇ ತಿಳುಹಿಕೊಡುವದು ಇರುತ್ತದೆ. ಒಂದು ಧರ್ಮದ ವಿಶಿಷ್ಟತೆಯನ್ನು ಇವುಗಳಲ್ಲಿ ಕಾಣಬಹುದು. ಕ್ರಿಶ್ಚನ್ ಧರ್ಮದಲ್ಲಿ ಮೋಜೆಸನು ಹೇಳಿದ ಹತ್ತು ನಿರ್ಬಂಧನೆಗಳು ಇಂಥವಿರುತ್ತವೆ. ಪ್ರತಿಯೊಬ್ಬ ಕ್ರಿಶ್ಚನನು ಅವು ಅತ್ಯಂತ ಮಹತ್ವವಾದವುಗಳೆಂದು ತಿಳಿಯುತ್ತಾನೆ. ಅದರಂತೆಯೇ ಬೌದ್ಧ ಧರ್ಮದಲ್ಲಿ ಪಂಚ ಶೀಲಗಳಿವೆ. ಹಾಗೆಯೇ ವೀರಶೈವರಲ್ಲಿ ಈ ಪಂಚಾಚಾರಗಳಿವೆ. ಇವುಗಳಂತೆ ಆಚರಿಸುವವನೇ ನಿಜವಾದ ವೀರಶೈವನು. ಒಟ್ಟಿಗೆ ಪಂಚಾಚಾರಗಳೆಂದರೆ ವೀರಶೈವ ಧರ್ಮದ ಸಾರವೆಂದು ಹೇಳಬಹುದು.

ವೀರಶೈವರಿಗೆ ವಾಡಿಕೆಯಾಗಿ ಪಂಚಾಚಾರದವರೆಂದು ಕರೆಯುವದುಂಟು. ಈ ಹೆಸರು ಕರ್ನಾಟಕದ ಕೆಲಭಾಗಗಳಲ್ಲಿ ವೀರಶೈವರಿಗೆ ಇನ್ನೂ ಇದೆ. ಆದರೆ ಈ ಹೆಸರಿನಿಂದ ವೀರಶೈವರನ್ನು ಯಾಕೆ ಕರೆಯಬೇಕೆಂದು ಕೇಳಿದರೆ ಇದಕ್ಕೆ ಮಾತ್ರ ಸರಿಯಾಗಿ ಉತ್ತರ ಕೊಡುವವರು ಈ ಕಾಲಕ್ಕೆ ಬಹು ಸ್ವಲ್ಪ ಜನರು ಇರುತ್ತಾರೆ. ಬಹುತರವಾಗಿ ಅವರು ಇದಕ್ಕೆ "ಪಂಚಾಚಾರ್ಯರ ವಂಶದವರು" ಎಂಬ ಅರ್ಥವನ್ನು ಮಾಡುವದುಂಟು. ಆದರೆ ಇದು ಅದರ ನಿಜವಾದ ಅರ್ಥವಲ್ಲ. ಇದರ ಅರ್ಥವು ಐದು ಆಚಾರಗಳನ್ನು ಪರಿಪಾಲಿಸುವವರು ಎಂದು ಇರುತ್ತದೆ.

ಈ ಆಚರಣೆಗಳ ವಿವರಣೆಯು, ಆಗಮ ಗ್ರಂಥಗಳು ವಚನ ಗ್ರಂಥಗಳು ವೀರಶೈವಾಚಾರ ಪ್ರದೀಪಿಕಾ೧ ಮೊದಲಾದ ಸಂಸ್ಕೃತ ಗ್ರಂಥಗಳು ಇವುಗಳಲ್ಲಿ ಸ್ಪಷ್ಟವಾಗಿ ಮಾಡಲ್ಪಟ್ಟಿರುತ್ತದೆ. ಈ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಇವುಗಳ ಅರ್ಥವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸಲು ನಾವು ಪ್ರಯತ್ನಿಸುತ್ತೇವೆ.

## ೧ ಲಿಂಗಾಚಾರ.

ಇದು ಐದು ಆಚಾರಗಳಲ್ಲಿ ಮೊದಲನೆಯದಾಗಿರುತ್ತದೆ. ಇದು ವೀರಶೈವನು ಆಚರಿಸತಕ್ಕ ಮಹತ್ವದ ಆಚಾರವಾಗಿರುತ್ತದೆ. ಈ ಬಗ್ಗೆ ವೀರಶೈವಾಚಾರ ಪ್ರದೀಪಿಕೆಯಲ್ಲಿ ಹೇಳಿರುವದೇನಂದರೆ:—"ವೀರಶೈವನು ದೀಕ್ಷೆಯನ್ನು ಹೊಂದಿ ಲಿಂಗಧಾರಿಯಾಗಿರತಕ್ಕದ್ದು. ಈ ದೀಕ್ಷೆಯು ಇಪ್ಪತ್ತೊಂದು ವಿಧವಾಗಿರುತ್ತದೆ. ಈ ಸಂಸ್ಕಾರವನ್ನು ಹೊಂದಿ ಅವನು ಪವಿತ್ರಭಾವವುಳ್ಳವನಾಗಿ ಆಚರಿಸತಕ್ಕದ್ದು. ಲಿಂಗಧಾರಿಯಾದ ಬಳಿಕ, ಅವನು ತನ್ನ ಇಷ್ಟಲಿಂಗವನ್ನು ಮಾತ್ರ ನಂಬತಕ್ಕದ್ದೇ ಹೊರತು ಇತರ ದೈವಗಳನ್ನು ನಂಬತಕ್ಕದ್ದಲ್ಲ." ಚನ್ನಬಸವೇಶ್ವರನು ತನ್ನ ವಚನದಲ್ಲಿ—"ಲಿಂಗವಲ್ಲದೆ ಅನ್ಯವನರಿಯದಿಹುದೇ ಲಿಂಗಾಚಾರ" ಎಂದು ಹೇಳಿರುವನು. ಅವನು ಮತ್ತೊಂದೆಡೆಯಲ್ಲಿ "ಶ್ರೀಗುರು ಕರುಣಿಸಿ ಕೊಟ್ಟ ಲಿಂಗಜಂಗಮವಲ್ಲದೆ ಅನ್ಯ ದೈವಂಗಳ ತ್ರಿಕರಣದಲ್ಲಿ ಅರ್ಚಿಸದಿರುವದೇ ಲಿಂಗಾಚಾರ

---

ಟೀಪು:- ೧ ಇದು ಬಹಳ ವರ್ಷಗಳ ಹಿಂದೆ ತೆಲುಗುಲಿಪಿಯಲ್ಲಿ ಅಚ್ಚು ಹಾಕಿದ ಗ್ರಂಥವು. ರಾ|| ಬ|| ಮಲ್ಲಪ್ಪ ವಾರದ ಇವರು ಅಚ್ಚು ಹಾಕಿದ ಗ್ರಂಥವಲ್ಲ.

ವೇಷಧಾರಿಯು ಎಂದು ಹೇಳಿರುವನು. ಹೀಗೆ ಪರೀಕ್ಷಿಸದ. ಲಿಂಗಧಾರಿ ಯಾಗಿ ಆ ಪವಿತ್ರ ಚಿಹ್ನಕ್ಕೆ ಅನುಗುಣವಾಗಿ ವರ್ತಿಸುವದು ಅವನ ಕರ್ತವ್ಯವು. ಅವನಲ್ಲಿ ಲಿಂಗದ ನಡೆ, ಲಿಂಗದ ನೋಟ, ಲಿಂಗದ ಕಳೆ, ವ್ಯಕ್ತವಾಗಿರತಕ್ಕದ್ದು. ಹೀಗೆ ಪರಮಾತ್ಮನಿಗೋಸ್ಕರವಾಗಿ ಆಚರಿಸುವದೇ ಲಿಂಗಾಚಾರವು ಇಲ್ಲದಿದ್ದರೆ ಅವನು ಭವಿ, ಅಂದರೆ ಪ್ರಪಂಚದಲ್ಲಿ ಮಗ್ನನಾದವನು ಎಂದು ಹೇಳತಕ್ಕದ್ದು.

## ೨ ಸದಾಚಾರ.

ಇದು ಎರಡನೇ ಆಚಾರವು. ಲಿಂಗಾಚಾರವುಳ್ಳವನು ಸದಾಚಾರಿ ಯಾಗಿರುವದು ಅವಶ್ಯವು. ಲಿಂಗಾಚಾರ ಮತ್ತು ಸದಾಚಾರ ಇವುಗಳಲ್ಲಿ ಪರಸ್ಪರ ಸಂಬಂಧವು ಬಹಳವಿರುತ್ತದೆ. ದುರಾಚಾರವು ಮನುಷ್ಯನಲ್ಲಿಯ ಲಿಂಗದ ಕಳೆಯನ್ನು ಅಡಗಿಸುತ್ತದೆ. ಆದರೆ ಸದಾಚಾರವು ಅದನ್ನು ಪ್ರಜ್ವಲಿಸುತ್ತವೆ. ಆದ್ದರಿಂದ ಲಿಂಗಾಚಾರವನ್ನು ಅನುಸರಿಸುವವನು ಸದಾ ಚಾರಿಯಾಗಿರುವದು ಅತ್ಯಂತಾವಶ್ಯಕವು.

ಸದಾಚಾರವೆಂದರೆ ನೀತಿಯಿಂದ ನಡೆಯುವದು, ಎಂದು ಅದರ ಸಾಮಾನ್ಯಾರ್ಥವಿರುತ್ತದೆ. ಆಧುನಿಕ ವಿದ್ವಾಂಸರು "ಸದಾಚಾರ" ಅಥವಾ "ನೀತಿ" ಇವಕ್ಕೆ ನಾನಾವಿಧ ವ್ಯಾಖ್ಯೆಗಳನ್ನು ಮಾಡುವದುಂಟು. ಆದರೆ ವೀರಶೈವ ವಚನಕಾರರು "ಎಲ್ಲ ಜನರ ಹಿತದೆಂಬುದೇ ಸದಾಚಾರ" ಎಂದು ಇದಕ್ಕೆ ಅರ್ಥವನ್ನು ಮಾಡಿದ್ದಾರೆ. ಸೂಕ್ಷ್ಮಾಗಮ ೮ ನೆಯ ಪಟಲ ೧೨ ನೇ ಶ್ಲೋಕದಲ್ಲಿಯಾದರೂ ಸದಾಚಾರದ ವ್ಯಾಖ್ಯೆಯು ಹೀಗೆಯೇ ಮಾಡಲ್ಪಟ್ಟಿದೆ.

ಸಜ್ಜನಶ್ಶಿವಭಕ್ತಶ್ಚ ಏನ ಮಾರ್ಗೇಣ ಸರ್ವದಾ।
ತುಷ್ಟಸ್ತೋಷಯತಿ ದೇವಿ ಸದಾಚಾರಃ ಸ ವೈ ಸ್ಮೃತಃ॥

ಎಂದರೆ ಸಜ್ಜನನೂ ಶಿವಭಕ್ತನೂ ಅದಂಥವನು ಯಾವಾಗಲೂ ಯಾವ ಮಾರ್ಗದಿಂದ ಸಂತುಷ್ಟನಾಗುವನೋ ಮತ್ತು ಎರಡನೆಯವರನ್ನು ಸಂತೋಷಗೊಳಿಸುವನೋ ಅದಕ್ಕೆ ಸದಾಚಾರವೆನ್ನತಕ್ಕದ್ದು. ಇದರ ಮೇಲಿಂದ ಉತ್ತಮರಾದ ಜನರಿಗೆ ಒಪ್ಪಿಗೆಯುಳ್ಳಂಥಾದ್ದೇ ಸದಾಚಾರ ವೆಂದು ವೀರಶೈವ ಪಂಡಿತರು ತಿಳಿದಿದ್ದಾರೆ. ನಿಜವಾಗಿ ಇದು ಸದಾಚಾರದ

ಯೋಗ್ಯವ್ಯಾಖ್ಯೆಯು. ಮನುಷ್ಯನಿಗೆ ನಾನಾ ವಿಧ ಪ್ರಸಂಗಗಳು ಒದಗುತ್ತವೆ. ಆಗ ಅವನು ಹ್ಯಾಗೆ ನಡೆಯಬೇಕೆಂಬದರ ಬಗ್ಗೆ ಸಾಮಾನ್ಯ ನಿಯಮಗಳನ್ನು ಮಾಡುವದು ದುಸ್ತರವು. ಒಂದು ಸಮಯದಲ್ಲಿ ಯೋಗ್ಯವೆಂದು ಕಂಡ ವರ್ತನೆಯು ಮತ್ತೊಂದು ಸಮಯಕ್ಕೆ ಅಯೋಗ್ಯವಾಗಬಹುದು. ಆದ್ದರಿಂದ ಆಗಮದಲ್ಲಿ ಮತ್ತು ವಚನಶಾಸ್ತ್ರದಲ್ಲಿ ಸುಜ್ಞರಿಗೆ ಒಪ್ಪಿಗೆಯಾಗುವಂತೆ ನಡೆಯುವದೇ ಸದಾಚಾರವೆಂದು ಹೇಳಿದೆ. ಈಗಿನ ಕಾಲಕ್ಕೆ ಬಹು ಮತದಂತೆ ವರ್ತಿಸುವದೇ ತಕ್ಕದ್ದೆಂಬ ತಿಳುವಳಿಕೆಯು ಬಲಗೊಳ್ಳುತ್ತಿದೆ. ರಾಜ್ಯ ಸೂತ್ರಗಳು ಈ ಪದ್ಧತಿಗೆ ಅನುಸಾರವಾಗಿ ನಡೆದಿವೆ. ಈ ದೃಷ್ಟಿಯಿಂದ ವೀರಶೈವಶಾಸ್ತ್ರಕಾರರು ಮಾಡಿದ ಸದಾಚಾರದ ಈ ವ್ಯಾಖ್ಯೆಯು ಸಮಂಜಸವೂ ವ್ಯವಹಾರ್ಯವೂ ಆಗಿರುತ್ತದೆ. ಪಾಶ್ಚಿಮಾತ್ಯರು ಸದಾಚಾರದಲ್ಲಿ ಧಾರ್ಮಿಕ ಕಟ್ಟಳೆಗಳನ್ನು ಸೇರ್ಪಡಿಸುವದಿಲ್ಲ. ಆದರೆ ಹಿಂದೂ ಶಾಸ್ತ್ರಜ್ಞರು ಹೀಗೆ ಭೇದವನ್ನು ಮಾಡುವದಿಲ್ಲ. ಅವರಂತೆಯೇ ವೀರಶೈವ ತತ್ವಜ್ಞರೂ ಭೇದವನ್ನು ಎಣಿಸುವದಿಲ್ಲ. ಅವರು ಇವೆರಡನ್ನೂ ಸಮ್ಮೇಲನ ಮಾಡಿ ಸದಾಚಾರವನ್ನು ವಿವರಿಸುತ್ತಾರೆ ಈ ದೃಷ್ಟಿಯಿಂದ ವೀರಶೈವಾಚಾರ ಪ್ರದೀಪಿಕೆಯ ಗ್ರಂಥಕಾರನು ಇದರಲ್ಲಿ ಎಂಟು ಭಾಗಗಳನ್ನು ಮಾಡಿದ್ದಾನೆ. ಅವು ಕೆಳಗೆ ಬರೆದ ಪ್ರಕಾರ:--

೧ **ಉತ್ಪನ್ನ ಶೀಲ:**- ಶಿವ ದೀಕ್ಷೆಯನ್ನು ಹೊಂದಿ ಅಜ್ಞಾನ ದೇಹವನ್ನು ಬಿಟ್ಟುಕೊಟ್ಟು ಲಿಂಗಾಂಗಿಯಾಗಿ ವ್ಯವಹರಿಸುವದೇ ಉತ್ಪನ್ನ ಶೀಲವು. ಅಂದರೆ ಲಿಂಗಧಾರಣೆಯಿಂದ ಯಾವ ನಡತೆಯು ಉತ್ಪನ್ನವಾಗುತ್ತದೋ ಅದೇ ಉತ್ಪನ್ನ ಶೀಲವು.

೨ **ಆಚಾರ ಶೀಲ:**- ತಾನು ಹೀಗೆ ಭಕ್ತನಾಗಿ ಆಚರಿಸುವದಲ್ಲದೆ ತನ್ನ ಪತಿ ಪತ್ನೀ ಸುತಾದಿಗಳು ಸಹ ಪಂಚಮುದ್ರಾನ್ವಿತರಾಗಿ ಪ್ರಾಣಲಿಂಗಿಗಳಂತೆ ಆಚರಿಸುವದೇ ಆಚಾರ ಶೀಲ. ಎಂದರೆ ಭಕ್ತನು ತಾನು ಸದಾಚಾರಿಯಾಗಿರುವದಲ್ಲದೆ ತನ್ನ ಕುಟುಂಬಸ್ಥರನ್ನೂ ಸಹ ಭಕ್ತರನ್ನಾಗಿ ಮಾಡಿ ಅವರೂ ಸದಾಚಾರಿಗಳಾಗಿ ವರ್ತಿಸುವಂತೆ ಮಾಡತಕ್ಕದ್ದು. ಹೀಗೆ ಯಾವನು ವರ್ತಿಸುತ್ತಾನೋ ಅವನು ಆಚಾರ ಶೀಲನು.

೩ **ಉದ್ಯೋಗ ಶೀಲ:**- ಉದ್ಯೋಗಿಯಾಗಿರುವದು ವೀರಶೈವ ಧರ್ಮದ ಪ್ರಕಾರ ಭಕ್ತನ ಕರ್ತವ್ಯವು. ಅವನು ಹೆರವರನ್ನು ಅವಲಂಬಿಸಿ ಹೊಟ್ಟೆ ಹೊರೆದುಕೊಳ್ಳತಕ್ಕದ್ದಲ್ಲ. ಆದ್ದರಿಂದ ಅವನೂ ತನ್ನ ತಂದೆ ಮತ್ತು

ಬಾಂಧವರೆಲ್ಲರೂ ಒಂದು ಕಾಯಕವನ್ನು ಅವಲಂಬಿಸಿ ಪಶುಪಾಶ ವಿಮುಕ್ತಿಗೋಸ್ಕರ ಪ್ರಯತ್ನಿಸತಕ್ಕದ್ದು. ಇದೇ ಉದ್ಯೋಗ ಶೀಲವು. ಹೀಗೆ ಸತ್ಕಾಯಕದಿಂದ ಆರ್ಜಿಸಿ ಶಿವ ಕಾರ್ಯಕ್ಕೆ ತಾನು ಪಡೆದಂಥಾದ್ದನ್ನು ಸಮರ್ಪಿಸತಕ್ಕದ್ದು. ಹೀಗೆ ವಿನಿಯೋಗಿಸುವದು ವೀರಶೈವ ಧರ್ಮವು. ಇದೇ ಉದ್ಯೋಗ ಶೀಲವು.

**೪ ಉತ್ಕಲ ಶೀಲ:**– ತನ್ನ ಮಕ್ಕಳೆಲ್ಲರು ವೀರಶೈವ ಧರ್ಮಾಚಾರ ಯುತರಾಗಿ ಭಕ್ತಿಯಿಂದ ತಮ್ಮ ಧಾರ್ಮಿಕ ಆಚರಣೆಗಳಲ್ಲಿ ತೊಡಗಿರು ವಂತೆ ಮಾಡುವದೇ ಉತ್ಕಲ ಶೀಲವು.

**೫ ಸಂಬಂಧ ಶೀಲ:**– ವೀರಶೈವನು ಶೈವ ಮಾರ್ಗವನ್ನು ಬಿಟ್ಟು ಕೊಟ್ಟು ಭವಿ ಪಾಕ ಮತ್ತು ತಾಮಸ ಆಹಾರಾದಿಗಳನ್ನು ಬಿಟ್ಟು ಕೊಡು ವಂಥಾದ್ದೇ ಸಂಬಂಧ ಶೀಲವು.

**೬ ಪ್ರಸನ್ನ ಶೀಲ:**– ಭಕ್ತನು ಷಡಕ್ಷರ ಮಂತ್ರ ಧ್ಯಾನದಲ್ಲಿ ನಿರತ ನಾಗಿ ಷಟ್ಸ್ಥಲ ಜ್ಞಾನವನ್ನು ಹೊಂದಿ ಲಿಂಗಾಂಗಿಗಳನ್ನು ಪ್ರೀತಿಸುತ್ತ ಆಚರಿಸುವದೇ ಪ್ರಸನ್ನ ಶೀಲವು.

**೭ ಉತ್ತಮ ಶೀಲ:**– ಎಂದರೆ ಗುರು ಲಿಂಗ ಜಂಗಮರನ್ನು ದಾಸ ನಂತೆ ಪೂಜಿಸುತ್ತ ಪಾದೋದಕ ಪ್ರಸಾದಮಯನಾಗಿ ಆಚರಿಸುವದೇ ಉತ್ತಮ ಶೀಲವು.

**೮ ಜ್ಞಾನ ಶೀಲ:**– ಭಕ್ತ ಜನರಲ್ಲದವರು ಪ್ರೀತಿಸುವಂಥ ಪದಾರ್ಥ ಗಳನ್ನು ಸೇವಿಸದಿರುವದು ಮತ್ತು ಅಪೇಯ ಪಾನ, ಅಭಕ್ಷ್ಯ ಭಕ್ಷಣಾದಿ ಗಳನ್ನು ಬಿಟ್ಟು ಕೊಟ್ಟು ವ್ಯವಹರಿಸುವಂಥಾದ್ದೇ ಜ್ಞಾನ ಶೀಲವು.

ಈ ಮೇರೆಗೆ ಸದಾಚಾರಗಳಲ್ಲಿ ಎಂಟು ಭಾಗಗಳು ಇರುತ್ತವೆ ಇವೆ ಲ್ಲವುಗಳ ಮೇಲಿಂದ ವಾಚಕರು ಸದಾಚಾರದ ಅರ್ಥವೇನಿರುವದನ್ನು ಕಂಡು ಹಿಡಿಯಬಹುದಾಗಿದೆ. ಸದಾಚಾರನೆಂದರೆ ಷಟ್ಸ್ಥಲ ಶಾಸ್ತ್ರದ ತತ್ವಗಳಿಗೆ ಅನುಸಾರವಾಗಿ ನೀತಿಯುತನಾಗಿ ತಾನು ನಡೆಯುವದಲ್ಲದೆ ತನ್ನ ಮನೆಯವರೆಲ್ಲರೂ ಹಾಗೆಯೇ ನಡೆಯುವಂತೆ ಮಾಡಿ ತ್ಯಾಜ್ಯಾಹಾ ರಾದಿಗಳನ್ನು ಬಿಟ್ಟು ಕೊಟ್ಟು ಪಾದೋದಕ ಪ್ರಸಾದೋಪ ಜೀವಿಯಾಗಿ ರತಕ್ಕದ್ದು. ಮತ್ತು ಒಂದು ಉದ್ಯೋಗವನ್ನು ಮಾಡಿ ಪರಾವಲಂಬಿಯಾ

ಗಿರದೆ ಸ್ವತಂತ್ರ ವೃತ್ತಿಯಿಂದ ಗುರು ಲಿಂಗ ಜಂಗಮದೊಡನೆ ಸಮರ್ಪಣ ಭಾವದಿಂದ ವ್ಯವಹರಿಸತಕ್ಕದ್ದು. ಇದೇ ಲಿಂಗಾಂಗಿಯ ಸದಾಚಾರ ಧರ್ಮವು.

ವಚನಕಾರರಲ್ಲಿ ಪ್ರಸಿದ್ಧನಾದ ಚನ್ನಬಸವೇಶ್ವರನಾದರೂ ಸದಾಚಾರದ ವ್ಯಾಖ್ಯೆಯನ್ನು ಹೀಗೆಯೇ ಮಾಡಿರುತ್ತಾನೆ. ಅವನು ತನ್ನ ವಚನಗಳಲ್ಲಿ ಒಂದು ಕಡೆಗೆ "ಸಜ್ಜನ ಕಾಯಕದಲ್ಲಿ ತಂದು, ಗುರುಲಿಂಗ ಜಂಗಮಕ್ಕೆ ಮಾಡಿ ನೀಡಿ, ನಿತ್ಯನಾಗಿರುವದೇ ಸದಾಚಾರ" ಎಂತಲೂ ಮತ್ತೊಂದೆಡೆಯಲ್ಲಿ "ಭಕ್ತನಾದೊಡೆ ಸತ್ಯಶುದ್ಧ ಕಾಯಕ, ಮಹೇಶನಾದೊಡೆ ಸತ್ಯಶುದ್ಧ ಭಿಕ್ಷನ ಬೇಡಿ ಸಮಸ್ತ ಪ್ರಾಣಿಗಳಲ್ಲಿ ಪಾತ್ರಾಪಾತ್ರವ ತಿಳಿದು ಹಸಿವು ತೃಷೆ ಶೀತಕ್ಕೆ ಪರಹಿತಾರ್ಥಿಯಾಗಿರ್ಪುದೇ ಸದಾಚಾರವೆಂಬೆನಯ್ಯ" ಎಂತಲೂ ಹೇಳಿದ್ದಾನೆ. ಇದರ ಮೇಲಿಂದ ಭಕ್ತ ಮಾಹೇಶ್ವರರು ಆಲಸ್ಯ ಭಾವವನ್ನು ಬಿಟ್ಟು ಕೊಟ್ಟು ಉತ್ತಮವಾದ ಕಾರ್ಯಗಳನ್ನು ಅವಲಂಬಿಸಿ ತಮಗೆ ದೊರಕಿದ ಧನವನ್ನು ಪಾತ್ರಾಪಾತ್ರ ವಿಚಾರ ಮಾಡಿ ಪರಹಿತಾರ್ಥಕ್ಕೋಸ್ಕರ ಉಪಯೋಗಿಸುವದೇ ಸದಾಚಾರವೆಂದು ಶಿವಶರಣರು ತಮ್ಮ ವಚನಗಳಲ್ಲಿ ಹೇಳಿರುವರು.

## ೩ ಶಿವಾಚಾರ.

ಶಿವಾಚಾರವೆಂದರೆ ಶಿವನಲ್ಲಿ ಮನಸ್ಸನ್ನು ಲೀನ ಮಾಡಿ ಶಿವಲಿಂಗದಲ್ಲಿ ಶಿಲಾ ಬುದ್ಧಿಯನ್ನು ಬಿಟ್ಟು ಕೊಟ್ಟು ಶಿವಸಂಸ್ಕಾರಯುತನಾಗಿ ಜಾತಿ ಭೇದಗಳನ್ನೆಣಿಸದೆ ಇರುವದೇ ಶಿವಾಚಾರವೆಂದು ಪ್ರದೀಪಿಕಾ ಕರ್ತನು ಹೇಳಿದ್ದಾನೆ. ವಚನಕಾರರು ಮಾಡಿದ ಅರ್ಥವಾದರೂ ಹೀಗೆಯೇ ಇರುತ್ತದೆ. ಚನ್ನಬಸವೇಶ್ವರನು ಒಂದೆಡೆಯಲ್ಲಿ "ಶಿವ ಭಕ್ತರಲ್ಲಿ ಜಾತಿ ವರ್ಣಾಶ್ರಮವನರಸದೆ ಅವರೊಕ್ಕುದ ಕೊಂಬುದೇ ಶಿವಾಚಾರ" ಎಂತಲೂ ಮತ್ತೊಂದೆಡೆಯಲ್ಲಿ "ಗುರು ಮಾರ್ಗಾಚಾರದಲ್ಲಿ ನಿಂದ ಶಿವಲಾಂಛನ ಧಾರಿಗಳಲ್ಲಿ ಪರಶಿವಲಿಂಗದಲ್ಲಿ ಬೆರಸಿ ಅರ್ಥ ಪ್ರಾಣಾಭಿಮಾನವನ್ನು ಅರ್ಪಿಸುವದೇ ಶಿವಾಚಾರವೆಂಬೆನಯ್ಯ" ಎಂತಲೂ ತನ್ನ ವಚನದಲ್ಲಿ ಹೇಳಿರುವನು. ಈ ಉಕ್ತಿಗಳ ಮೇಲಿಂದ ಯಾವತ್ತು ವಸ್ತುಗಳಲ್ಲಿ ಶಿವಭಾವವನ್ನು ಹೊಂದಿ ಜಾತಿ ಭೇದವನ್ನು ಎಣಿಸದಿರುವದೇ ಶಿವಾಚಾರವೆಂದು ತಿಳಿದು ಬರುತ್ತದೆ. ಆದರೆ ಅನೇಕರು ಶಿವಾಚಾರವೆಂದರೆ ಶಿವನೊಬ್ಬನನ್ನೇ

ಪೂಜಿಸಬೇಕು, ಇತರ ದೈವಗಳನ್ನು ಪೂಜಿಸಬಾರದು ಎಂದು ಎಣಿಸು ವದೇ ಶಿವಾಚಾರವೆಂದು ತಿಳಿದಿರುವರು. ಆದರೆ ವೀರಶೈವ ತತ್ವಜ್ಞರ ಪ್ರಕಾರ ಈ ವೃತ್ತಿಯು ಲಿಂಗಾಚಾರದಲ್ಲಿ ಬರುವದು. ಆದರೆ ಶಿವಾಚಾರ ದಲ್ಲಿ ಬರಲಾರದು. ಅವರ ಅಭಿಪ್ರಾಯದ ಪ್ರಕಾರ ಶಿವಾಚಾರವೆಂದರೆ ಭಕ್ತ ಜನರಲ್ಲಿ ಶಿವಭಾವವನ್ನು ಹೊಂದಿ ಅವರಲ್ಲಿ ಜಾತಿ ಭೇದವನ್ನೆಣಿಸ ದಿರುವದೇ ಇರುತ್ತದೆ.

## ೪ ಗಣಾಚಾರ.

ಇವರ ಅರ್ಥವು ವೀರಶೈವಾಚಾರ ಪ್ರದೀಪಿಕೆಯಲ್ಲಿ ಕೆಳಗೆ ಬರೆದ ಮೇರೆಗೆ ಹೇಳಿದೆ. "ಭಕ್ತನು ಶಿವನಿಂದೆಯನ್ನು ಕೇಳಿದರೆ ಅವರನ್ನು ಘಾತಿ ಸತಕ್ಕದ್ದು. ಇದಾಗದಿದ್ದರೆ ಶಪಿಸತಕ್ಕದ್ದು. ಇದೂ ಆಗದಿದ್ದರೆ ಆ ಸ್ಥಾನ ವನ್ನು ಬಿಟ್ಟು ಹೋಗತಕ್ಕದ್ದು. ಅಲ್ಲದೆ ಅವನು ತನ್ನಲ್ಲಿರುವ ಕೆಳಗೆ ಕಾಣಿ ಸಿದ ಭವಿಗಳನ್ನು ಬಿಟ್ಟು ಬಿಡತಕ್ಕದ್ದು. ಅವು ಯಾವವೆಂದರೆ:—ಅನೃತ, ಅಸ್ಥಿರವಾಕ್ಯ, ವಂಚನ, ಪಂಕ್ತಿ ಭೇದ, ಉದಾಸೀನತೆ, ಮತ್ತು ನಿರ್ದ ಯತ್ವ. ಇವುಗಳನ್ನು ಬಿಟ್ಟು, ಕೆಳಗೆ ಕಾಣಿಸಿದ ಆರು ಆಚಾರಗಳನ್ನು ಸ್ವೀಕರಿಸತಕ್ಕದ್ದು. ಅವು ಯಾವವೆಂದರೆ:—ಅಕ್ರೋಧ, ಸತ್ಯ ವಚನ, ಭವಿ ಭಕ್ತ ವಿಭೇದನ, ಅನುಗ್ರಹ, ಕ್ಷಮಾ, ಅಪಾತ್ರದ್ರವ್ಯಾರ್ಪಣ. ಅವನು ಜನ್ಮ ಮೃತ್ಯು ರಜ ಮೊದಲಾದ ಪಂಚ ಸೂತಕಗಳನ್ನು ಬಿಟ್ಟು ಕೊಡತಕ್ಕದ್ದು. ಮತ್ತು ವೀರಶೈವರಲ್ಲಿ ಪ್ರಸಿದ್ಧವಾಗಿರುವ ೬೪ ಶೀಲಗ ಳಂತೆ ನಡೆಯತಕ್ಕದ್ದು. ಈ ಆಚಾರವೇ ಗಣಾಚಾರವೆನಿಸುವದು."

ವಚನಕಾರರಾದರೂ ಗಣಾಚಾರದರ್ಥವನ್ನು ಹೀಗೆಯೇ ವಿವರಿಸಿ ರುವರು. ಚನ್ನಬಸವೇಶ್ವರನು:— "ಶಿವಾಚಾರದ ನಿಂದೆಯ ಕೇಳದಿಹುದೇ ಗಣಾಚಾರ" ಎಂತಲೂ "ಅಷ್ಟಾವರಣಂಗಳ ಮೇಲೆ ನಿಂದೆ ಕುಂದುಗಳು ಬಂದು ತಟ್ಟಿದಲ್ಲಿ ಗಣಸಮೂಹವ ನೊಡಗೂಡಿ ಆ ಸ್ಥಲವತ್ಯಜಿಸುವದೇ ಗಣಾಚಾರವೆಂಬೆನಯ್ಯ" ಎಂತಲೂ ಹೇಳಿದ್ದಾನೆ. ಅದೇ ಮೇರೆಗೆ "ಗುರು ಲಿಂಗ ಜಂಗಮ ಭಕ್ತರುಗಳ ನಿಂದಿಸುವ ದುರಾಚಾರಿಗಳ, ಭಕ್ತ ನಿಂದೆ ಹರನಿಂದೆ ಆಚಾರ ನಿಂದೆಯ ಮಾಳ್ಪ ಮಾಯಾ ವಾದಿಗಳ, ಇತರ ಮತಂಗಳಂ, ಪರದೈವಂಗಳಂ, ಶಿವಾಚಾರದ ವ್ರತಂಗಳಂ, ಕೆಡಿಸುವ

ಜೈನ ಬೌದ್ಧ ಚಾರ್ವಾಕ ಮಾಯಾವಾದಿಗಳು ಪ್ರಾಣಲಿಂಗ ಸಂಬಂಧಿಗಳಾದ ಭಕ್ತ ವ್ರತಂಗಳ ಕೆಡಿಸುವ ಪ್ರಯುಕ್ತದ ಸಮಯದಲ್ಲಿ ಪರವಾದಿಗಳ ಕಾಣುತಾಕ್ಷಣವೇ ಹಸ್ತ ಖಡ್ಗದಿಂದ ಅವರ ಪ್ರಾಣತ್ಯಾಗವಂ ಮಾಡುವದು. ಅಲ್ಲದೊಡೆ ಶಪಿಸುವದು. ಹಾಗಾಗದ ಪಕ್ಷದಲ್ಲಿ ಆ ಸ್ಥಾನಂಗಳ ತೊಲಗಿ ಹೋಗುವದು. ಇಂತಿಷ್ಟು ಆಗದ ಪಕ್ಷಕ್ಕೆ ತನ್ನ ಪ್ರಾಣವನಾದರೂ ತ್ಯಾಗವ ಮಾಡುವದು ಇಂತೀ ಪ್ರಕಾರದಲ್ಲಿ ಗಣಾಚಾರವನುಂಟು ಮಾಡುವದೇ ಗಣಾಚಾರವೆಂಬೆನಯ್ಯ'' ಎಂದು ಮುಕ್ತಾಯಿ ವಚನಕಾರನು ತನ್ನ ಉಕ್ತಿಯಲ್ಲಿ ಹೇಳಿದ್ದಾನೆ. ಹೀಗೆ ವೀರಶೈವನು ತಾನು ಹಿಡಿದ ಕಾರ್ಯಗಳನ್ನು ಸ್ಥಿರಬುದ್ಧಿಯಿಂದಲೂ ಧೈರ್ಯಸ್ಥೈರ್ಯ-ದಿಂದಲೂ ಜರಗಿಸತಕದ್ದು ಅವನ ಕರ್ತವ್ಯವು. ಅದರಲ್ಲಿ ಒದಗಿದ ಕಂಟಕಗಳಿಗೆ ಅವನು ಅಂಜತಕ್ಕದ್ದಲ್ಲ. ಇದು ಗಣಾಚಾರವೆನಿಸುವದು.

## ೫ ಭೃತ್ಯಾಚಾರ.

ವೀರಶೈವಾಚಾರ ಪ್ರದೀಪಿಕೆಯಲ್ಲಿ "ನಿಯಮ ಸಂಯುಕ್ತನಾಗಿ ಗುರುಲಿಂಗ ಜಂಗಮಕ್ಕೆ ದೇಹಾದಿಗಳನ್ನು ಅರ್ಪಿಸಿ ದಾಸಭಾವದಿಂದಿರುವದೇ ಭೃತ್ಯಾಚಾರ" ವೆಂದು ಹೇಳಿದೆ. ಇದರಲ್ಲಿ ದಾಸತ್ವ, ವೀರದಾಸತ್ವ, ಭೃತ್ಯತ್ವ, ವೀರಭೃತ್ಯತ್ವ ಎಂಬ ನಾಲ್ಕು ಭಾಗಗಳು ಮಾಡಲ್ಪಟ್ಟಿವೆ.

ವಚನಕಾರರ ಪ್ರಕಾರ ಭೃತ್ಯಾಚಾರದ ಅರ್ಥವಾದರೂ ಹೀಗೆಯೇ ಇರುತ್ತದೆ. ''ಶಿವಶರಣರೇ ಹಿರಿಯರಾಗಿ ತಾನೇ ಕಿರಿಯನಾಗಿ ಭಯ ಭಕ್ತಿಯಿಂದ ಆಚರಿಸುವದೇ ಭೃತ್ಯಾಚಾರವು" ಎಂತಲೂ ''ದಾಸತ್ವವು ವೀರದಾಸತ್ವವು, ಭೃತ್ಯತ್ವ, ವೀರಭೃತ್ಯತ್ವವುಳ್ಳವನಾಗಿ ಸ್ವಗೃಹ, ಸ್ವಧನ ಸ್ವದೇಹವು ಲಿಂಗಜಂಗಮ ಭಕ್ತರಿಗೆ ಸಮರ್ಪಣ ಮಾಡಿ ಇಂತೀ ಭಕ್ತಿಮುಖನಾಗಿ ದೇವಭಕ್ತರೇ ಹಿರಿದು ತಾ ಕಿರಿದಾಗಿ ಆಚರಿಸುವದೇ ಭೃತ್ಯಾಚಾರ" ಎಂತಲೂ ''ಜಾತ್ಯಾಶ್ರಮ ಕುಲಗೋತ್ರ ನಾಮರೂಪ ಕ್ರಿಯಾರಹಿತನಾಗಿ ಗುರೂಪಾವಸ್ಥೆಯಿಂದ ಗುರು ಪ್ರತ್ಯಕ್ಷವ ಮಾಡಿ ಆ ಗುರುವಿನಿಂದ ಚಿದ್ಘನ ಮಹಾಲಿಂಗವ ಪಡೆದು ಆ ಲಿಂಗ ಸಹಿತನಾಗಿ ಭಕ್ತಿ ಜ್ಞಾನ ವೈರಾಗ್ಯ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರ ಮೊದಲಾದ ಷಟ್ಸ್ಥಲ ಮಾರ್ಗದಿಂದ ಭಕ್ತ ಗಣಂಗಳಲ್ಲಿ ಪಂಚ ಸೂತಕಂಗಳ ಕಲ್ಪಿಸದೇ ಅವರಿದ್ದ ಸ್ಥಲಕ್ಕೆ ಹೋಗಿ ತನ್ನ ತನುಮನ ಧನಂಗಳ ಸಮ

ಪೀಸಿ ಅವರೊಳಕ್ಕೆ ಸಿಕ್ಕಿದ ಸ್ವೀಕರಿಸಿ ಹಸ್ತಾಂಜಲಿತನಾಗಿ ಪ್ರತ್ಯುತ್ತರವ ಕೊಡದಿರ್ದಡೆ ಭೃತ್ಯಾಚಾರವೆಂಬೆನಯ್ಯ” ಎಂತಲೂ ವಚನಕಾರರು ಹೇಳಿದ್ದಾರೆ. ಹೀಗೆ ಭೃತ್ಯಾಚಾರದ ಅರ್ಥವು ವೀರಶೈವ ಧರ್ಮಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ಈ ಪ್ರಕಾರ ವೀರಶೈವನು ಎಲ್ಲರೊಡನೆ ದಾಸಭಾವದಿಂದ ವರ್ತಿಸತಕ್ಕದ್ದು, ಎಂದೂ ಅಹಂಕಾರಿಯಾಗಿರತಕ್ಕದ್ದಲ್ಲ. ವೀರಶೈವರು ಪರಸ್ಪರರನ್ನು ಕಂಡಾಗ್ಗೆ ‘ಶರಣು ಶರಣಾರ್ಥಿ” ಎನ್ನುತ್ತಾರೆ. ಪತ್ರಗಳನ್ನು ಬರೆಯುವ ಕಾಲಕ್ಕೂ ಅವರು ಇದೇ ಶಬ್ದವನ್ನು ಉಪಯೋಗಿಸುತ್ತಾರೆ. ಇದು ಅವರಲ್ಲಿರತಕ್ಕ ಭೃತ್ಯಾಚಾರವನ್ನು ತೋರಿಸುತ್ತದೆ.

ಈ ಮೇರೆಗೆ ವೀರಶೈವ ಧರ್ಮಗ್ರಂಥಗಳಲ್ಲಿ ಪಂಚಾಚಾರಗಳ ವಿವರಣೆಯು ಇರುತ್ತದೆ. ಇದರ ಮೇಲಿಂದ ಆಗಮಗಳೂ ವಚನಗಳೂ ಬೇರೆ ಬೇರೆ ಸಂಸ್ಕೃತ ಗ್ರಂಥಗಳೂ ಇವುಗಳಲ್ಲಿ ಕಾಣಿಸಿದ ಅರ್ಥವು ಒಂದೇ ಇದೆಂಬುದು ವಾಚಕರಿಗೆ ಸ್ಪಷ್ಟವಾಗುವದು.

ಮೇಲ್ಕಂಡ ವಿವರಣೆಯು ಮೊದಲಿಗೆ ವಾಚಕರಿಗೆ ಬಹಳ ತೊಡಕುಳ್ಳದೆಂದು ತೋರಬಹುದು. ಆದರೆ ಸ್ವಲ್ಪ ವಿಚಾರ ಮಾಡಿದರೆ ಇವುಗಳ ಅರ್ಥವು ಬಹು ಸುಲಭವಿರುತ್ತದೆಂದು ಅವರಿಗೆ ತಿಳಿಯದೆ ಇರಲಾರದು.

ಈ ಪಂಚಾಚಾರಗಳ ಉದ್ದೇಶವು ಮನುಷ್ಯನು ಜಗತ್ತಿನಲ್ಲಿ ಹ್ಯಾಗೆ ನಡೆಯಬೇಕೆಂಬದನ್ನು ತಿಳಿಸುವದೇ ಮುಖ್ಯವಾಗಿರುತ್ತದೆ.

ವೀರಶೈವನು ತನ್ನ ಪ್ರತಿಯೊಂದು ಕಾರ್ಯವನ್ನು ಅತ್ಯಂತ ಧಾರ್ಮಿಕ ಉಜ್ವಲ ಭಾವದಿಂದ ಮಾಡತಕ್ಕದ್ದು, ಅವನು ಕೇವಲ ಐಹಿಕ ಭೋಗಾಪೇಕ್ಷೆಯಿಂದ ಯಾವದನ್ನೂ ಮಾಡತಕ್ಕದ್ದಲ್ಲ, ಅವನು ಲಿಂಗಾರ್ಪಣ ಭಾವದಿಂದ ಆಚರಿಸತಕ್ಕದ್ದು, ಇದೇ ಲಿಂಗಾಚಾರವೆಂದು ನಾವು ಅನ್ನಬಹುದು. ಮನುಷ್ಯನು ತನ್ನ ಇಂದ್ರಿಯ ಸುಖಕ್ಕಾಗಿ ಕಾರ್ಯಗಳನ್ನು ಮಾಡಿದ್ದಾದರೆ ಅವನಲ್ಲಿ ಲಿಂಗಾಚಾರ ವಿರಲಾರದು. ಇದು ಅವನನ್ನು ದುರ್ಮಾರ್ಗಕ್ಕೆ ಎಳಿಸುತ್ತದೆ. ಲಿಂಗವೆಂದರೆ ಕೇವಲ ಪೂಜಾರ್ಚನೆಗೋಸ್ಕರ ವೀರಶೈವನು ಧಾರಣ ಮಾಡುವ ಸ್ಥೂಲಲಿಂಗ ಮಾತ್ರವಲ್ಲ. ಷಟ್ಸ್ಥಲ ಶಾಸ್ತ್ರದ ಪ್ರಕಾರ ಅದಕ್ಕೆ ಒಂದು ವ್ಯಾಪಕಾರ್ಥವಿರುತ್ತದೆ. ಯಾವ ಪದಾರ್ಥವು ಪರಮಾತ್ಮನತ್ತ ಮನಸ್ಸನ್ನು ಎಳೆಯುತ್ತದೋ ಯಾವದರಲ್ಲಿ ಮತ್ತು ಯಾವದರಿಂದ ಉತ್ಕೃಷ್ಟತಮ ಭಾವಗಳೂ ಕೃತಿ

ಗಳೂ ಮನುಷ್ಯನಲ್ಲಿ ಪ್ರಕಟವಾಗುತ್ತವೋ ಅವೆಲ್ಲವೂ ಲಿಂಗ ಗುಣವುಳ್ಳವೆಂದು ನಾವು ಹೇಳಬಹುದು. ಇಂಥ ಪಾರಮಾರ್ಥಿಕ ಶ್ರೇಷ್ಠ ಭಾವವನ್ನು ನಿತ್ಯದ ವ್ಯವಹಾರದಲ್ಲಿ ಪ್ರಕಟಗೊಳಿಸುವದೇ ಲಿಂಗಾಚಾರವು.

ಸದಾಚಾರವು ಮುಖ್ಯವಾಗಿ ನೈತಿಕಾಚರಣೆಗೆ ಸಂಬಂಧಪಟ್ಟದ್ದಿರುತ್ತದೆ. ವೀರಶೈವನು ತಾನು ನೀತಿಯಿಂದ ವರ್ತಿಸುವದಲ್ಲದೆ ತನ್ನ ಕುಟುಂಬಸ್ಥರೂ ಸಮಾಜದವರೂ ಹೀಗೆಯೇ ವ್ಯವಹರಿಸುವಂತೆ ಮಾಡುವದಾದರೂ ಅವನ ಕರ್ತವ್ಯವಾಗಿರುವದು. ವೀರಶೈವನು ಆತ್ಮೋನ್ನತಿಗೋಸ್ಕರ ಪ್ರಯತ್ನಿಸುವದು ಅವಶ್ಯವು. ಆದರೆ ಅದೇ ಮೇರೆಗೆ ಅವನು ತನ್ನ ಕುಟುಂಬ ಮತ್ತು ಸಮಾಜ ಇವುಗಳ ಬಗ್ಗೆಯೂ ಪ್ರಯತ್ನಿಸುವದೊಂದು ಮಹತ್ತರವಾದ ಇನ್ನೊಂದು ಭಾರವು ಅವನ ಮೇಲೆ ಇದೆ. ಇದನ್ನಾದರೂ ಅವನು ಸರಿಯಾಗಿ ಜರಗಿಸತಕ್ಕದ್ದು. ಈ ವಿಷಯದ ಮಹತ್ವವನ್ನು ವೀರಶೈವ ಧರ್ಮಶಾಸ್ತ್ರಕಾರರು ಕಂಡು ಹಿಡಿದು ಆ ಬಗ್ಗೆಯೂ ಪ್ರಯತ್ನಿಸುವದು ಅವಶ್ಯವೆಂದು ಅವರು ಹೇಳುತ್ತಾರೆ. ಇದಾದರೂ ಸದಾಚಾರವು. ಇದರಂತೆಯೇ ಮನುಷ್ಯನು ಒಂದು ಉಪಜೀವನದ ಹೋರೆ ಅಂದರೆ ಕಾಯಕವನ್ನು ಕೈಕೊಂಡು ಅದನ್ನು ಅವನು ಸರಿಯಾಗಿ ಪಾರಮಾರ್ಥಿಕ ದೃಷ್ಟಿಯಿಂದ ನಿರ್ವಹಿಸತಕ್ಕದ್ದು. ಅವನು ಪರಾವಲಂಬಿಯಾಗಿರತಕ್ಕದ್ದಲ್ಲ. ಹೀಗೆ ವರ್ತಿಸುವದೂ ಸದಾಚಾರವಲ್ಲಿ ಬರುವದು ಹೀಗೆ ಈ ಎಲ್ಲ ವಿಷಯಗಳನ್ನು ಸದಾಚಾರವಲ್ಲಿ ಗಣಿಸುವದು ತಕ್ಕದ್ದಲ್ಲೆಂದು ಆಧುನಿಕ ಶಾಸ್ತ್ರಜ್ಞರು ಅನ್ನಬಹುದು. ಆದರೆ ಹಿಂದೂ ಧರ್ಮಶಾಸ್ತ್ರಕಾರರೂ, ಅದರಂತೆ ವೀರಶೈವರೂ ಈ ತೆರದ ಸಾಮಾಜಿಕ ಆಚರಣೆಗಳು, ವ್ಯವಹಾರ, ನೀತಿ ಮತ್ತು ಧರ್ಮ ಇವುಗಳಲ್ಲಿ ಪರಸ್ಪರ ಭಿನ್ನತೆಯನ್ನು ಕಲ್ಪಿಸಿಲ್ಲ. ಅವರ ದೃಷ್ಟಿಯ ಪ್ರಕಾರ ಅವೆಲ್ಲವುಗಳೂ ಪರಸ್ಪರಾವಲಂಬಿಗಳು. ವಿಚಾರ ಮಾಡಿ ನೋಡಿದರೆ ಈ ಅಭಿಪ್ರಾಯದಂತೆ ವರ್ತಿಸುವದರಲ್ಲಿಯೇ ಸಮಾಜದ ಮತ್ತು ದೇಶದ ಔನ್ನತ್ಯವು ಇರುತ್ತದೆ.

ಶಿವಾಚಾರವೆಂದರೆ ಎಲ್ಲವನ್ನೂ ಶಿವ ಭಾವದಿಂದ ನೋಡುವದು. ಈ ಭಾವದಿಂದ ಆಚರಿಸಿದರೆ, ಮನುಷ್ಯನಲ್ಲಿ ವಿಶ್ವ ಬಂಧುತ್ವದ ಶ್ರೇಷ್ಠ ವಿಚಾರಗಳು ಸಂಪೂರ್ಣವಾಗಿ ಮೂಡದೆ ಇರಲಾರವು. ಎಲ್ಲವನ್ನೂ ಪರಮಾತ್ಮನಿಗೆ ಸಂಬಂಧಿಸಿ ಅವನು ನೋಡುವನು. ಇಂಥವನಲ್ಲಿ ದ್ವೇಷಾಸೂಯೆಗಳು ಇರಲಾರವು. ಇವನು ಎಲ್ಲರನ್ನೂ ಸಮನಾಗಿ ಪ್ರೀತಿಸುವನು

ಮತ್ತು ಎಲ್ಲರಿಗೂ ಸರಿಯಾಗಿ ಉಪಕಾರ ಮಾಡುವನು. ಇವನು ಜಾತಿ ಭೇದಗಳನ್ನು ಎಣಿಸನು. ಇಂಥ ಸ್ವಭಾವ ವೃತ್ತಿಯುಳ್ಳವನೇ ಶಿವಾಚಾರಿಯೆಂದೆನಿಸಿಕೊಳ್ಳುವನು.

ಗಣಾಚಾರಿಯು ಸ್ಥಿರ ಮನಸ್ಸಿನವನಿರುತ್ತಾನೆ. ಅವನು ಹಿಡಿದ ಕೆಲಸವನ್ನು ಎಂದಿಗೂ ಬಿಡನು. ಅವನು ಷಟ್ಸ್ಥಲಗಳಲ್ಲಿ ಎರಡನೆಯದಾದ ಮಾಹೇಶ್ವರ ಸ್ಥಲದ ಆಚರಣೆಯುಳ್ಳವನು. ತಾನು ಕೈಕೊಂಡು ಕಾರ್ಯವನ್ನು ಜರಗಿಸುವಲ್ಲಿ ತನ್ನ ಪ್ರಾಣವನ್ನು ಸಹ ನೋಡುವವನಲ್ಲ. ಆದರೆ ನಿಷ್ಕಾರಣವಾಗಿ ಅವನು ಪರರನ್ನು ಪೀಡಿಸನು, ಅಥವಾ ಕೆಣಕನು. ಆದರೆ ಅತ್ಯಂತ ಸ್ವಾಭಿಮಾನಿಯು, ನಿಂದೆಯನ್ನು ತರಹರಿಸನು. ಹೀಗೆ ಅವನು ಅತ್ಯಂತ ಸತ್ಯಾಗ್ರಹಿಯಾಗಿ ವರ್ತಿಸುತ್ತಾನೆ. ಇದೇ ಗಣಾಚಾರವು.

ಭೃತ್ಯಾಚಾರಿಯು ಅತ್ಯಂತ ದೈನ್ಯಭಾವವುಳ್ಳವನು, ನಮ್ರನು ಮತ್ತು ವಿನಯ ಶೀಲನು. ಅವನಲ್ಲಿ ನಾನು ತಾನೆಂಬ ಭಾವವು ಸಂಪೂರ್ಣವಾಗಿ ಅಡಗಿ ಹೋಗಿರುತ್ತದೆ. ಗಣಾಚಾರ ಮತ್ತು ಭೃತ್ಯಾಚಾರ ಈ ಎರಡರಲ್ಲಿ ವೈಷಮ್ಯತ್ವವಿರುತ್ತದೆಂದು ಕೆಲವರು ತರ್ಕಿಸಬಹುದು. ಆದರೆ ಇದು ತಪ್ಪು ಇರುತ್ತದೆ. ಇವು ಎರಡೂ ಗುಣಗಳು ಜೋಡಿ ನಿಂದಿದ್ದರೆ ಅವು ಮತ್ತಿಷ್ಟು ಪ್ರಕಾಶಮಾನವಾಗುತ್ತ ಹೋಗುವವು. ಮನುಷ್ಯನು ಸ್ವಾಭಿಮಾನಿಯಾಗಿದ್ದರೂ ದೈನ್ಯ ಭಾವವುಳ್ಳವನಿರತಕ್ಕದ್ದು. ಸ್ವಾಭಿಮಾನಿಗೆ ದೈನ್ಯ ಭಾವವು ಅತ್ಯಂತಾವಶ್ಯಕವಾಗಿ ಇರತಕ್ಕ ಗುಣವು. ಇಲ್ಲವೆ ಹೋದರೆ ಅವನು ದುರಭಿಮಾನಿಯಾಗುವನು, ಅಹಂಕಾರಿಯಾಗುವನು. ಅದರಂತೆಯೇ ದೈನ್ಯ ಭಾವವುಳ್ಳವನು ಗಣಾಚಾರಿಯಾಗಿರುವನೂ ಅತ್ಯಾವಶ್ಯಕವು. ಇಲ್ಲವೆ ಹೋದರೆ ಅವನಲ್ಲಿದ್ದ ಭೃತ್ಯಾಚಾರದ ಲಾಭವನ್ನು ದುಷ್ಟ ಜನರು ತೆಗೆದುಕೊಂಡು ಅವನಿಗೂ ಸಮಾಜಕ್ಕೂ ಹಾನಿಯನ್ನುಂಟು ಮಾಡುವರು. ಆದ್ದರಿಂದ ಭೃತ್ಯಾಚಾರಿಯು ಗಣಾಚಾರಿಯಾಗಿರಲಿಕ್ಕೆಬೇಕು. ಮತ್ತು ಗಣಾಚಾರಿಯು ಭೃತ್ಯಾಚಾರಿಯಾಗಿರಲಿಕ್ಕೆಬೇಕು.

ಈ ಪ್ರಕಾರ ಪಂಚಾಚಾರಗಳ ಸಾಮಾನ್ಯ ಸ್ವರೂಪವಿರುತ್ತದೆ. ಇವು ಮನುಷ್ಯನ ಪ್ರಗತಿಗೆ ಅತ್ಯಾವಶ್ಯಕವಾದವುಗಳು. ಹೀಗೆ ಯಾವನು ನಡೆಯುತ್ತಾನೋ ಅವನು ತನ್ನನ್ನೂ ತನ್ನ ಸಮಾಜವನ್ನೂ ತನ್ನ ದೇಶವನ್ನೂ ಮುಂದೊಯ್ಯಲು ಸಮರ್ಥನಾಗುತ್ತಾನೆ. ವಿಚಾರ ಮಾಡಿ ನೋಡಿದರೆ

ಈ ಐದೂ ನೇಮಗಳು ಬಹು ಮಹತ್ವದವುಗಳು. ಈಗಿನ ಕಾಲಕ್ಕೆ ಈ ಆಚಾರಗಳಿಗೆ ವಿರುದ್ಧವಾದ ವರ್ತನೆ ಇದ್ದದರಿಂದಲೇ ಸಮಾಜದಲ್ಲಿಯೂ ದೇಶದಲ್ಲಿಯೂ ಅವನತಿಯು ಪ್ರಾಪ್ತವಾಗಿದೆ ಎಂದು ಹೇಳಬಹುದು. ಜನರಲ್ಲಿ ಸ್ವಾರ್ಥೈಕ ದೃಷ್ಟಿಯು ಮಾತ್ರ ಇದ್ದದರಿಂದ ಅವರಲ್ಲಿ ಲಿಂಗಾಚಾರವಿಲ್ಲ. ಅವರಲ್ಲಿ ನೈತಿಕ, ಸಾಮಾಜಿಕ ಕೌಟುಂಬಿಕ ಎಚ್ಚರವಿಲ್ಲದ್ದರಿಂದ ಸದಾಚಾರವಿಲ್ಲ. ಜಾತಿ ಭೇದದ ಭಯಂಕರ-ಒಡಕುಗಳು ಅವರಲ್ಲಿ ಉತ್ಪನ್ನವಾಗಿರುವದರಿಂದ ಶಿವಾಚಾರವಿಲ್ಲ. ಉಚ್ಚ ಧ್ಯೇಯವನ್ನು ಮುಂದಿಟ್ಟುಕೊಂಡು ಅದಕ್ಕೋಸ್ಕರ ತನುಮನಧನವನ್ನು ಸೂರೆ ಮಾಡುವವರು ಇಲ್ಲದ್ದರಿಂದ ಗಣಾಚಾರವಿಲ್ಲ. ಈ ಕಾಲಕ್ಕೆ ಎಲ್ಲರೂ ತಾವು ದೊಡ್ಡವರೆಂದು ಭಾವಿಸಿಕೊಂಡು ದಾಸೋಹ ಭಾವಕ್ಕೆ ಹೊರತಾಗಿ ನಡೆಯುವದರಿಂದ ಅವರಲ್ಲಿ ಭೃತ್ಯಾಚಾರವಿಲ್ಲ. ಇದರಿಂದ ದೇಶದಲ್ಲಿ ಒಡಕುಗಳು ಉಂಟಾಗಿವೆ. ಐಕ್ಯತೆಯಿಲ್ಲ. ದ್ವೇಷಾಗ್ನಿಗಳು ಪ್ರಜ್ವಲಿಸುತ್ತಲಿವೆ. ಆದರೆ ನಮ್ಮ ಪುರಾತನರು ನಡೆದ ನಡೆ ನುಡಿ ಬೇರೆ. ಅವರಲ್ಲಿ ತೇಜಃಪುಂಜವಾದ ಪಂಚಾಚಾರಗಳ ಹೊಳವು ಹೊಳೆಯುತ್ತಿತ್ತು. ಲಿಂಗದ ನಡೆನುಡಿಯಿಂದ ಶುದ್ಧವಾದ ಅವರ ಭಾವವೂ, ಅಂತಃಕರಣ ಪೂರಿತವಾದ ಅದರ ಸಾತ್ವಿಕ ಪವಿತ್ರ ಆಚರಣೆಯೂ ಜಾತಿ ಮಾತ್ಸರ್ಯಗಳಿಗೆ ಎಳ್ಳಷ್ಟು ಇಂಬುಗೊಡದ ಅವರ ವಿಶಾಲವಾದ ಹೃದಯವೂ, ಇಹ ಲೋಕದ ಭೋಗಗಳನ್ನು ತೃಣೀಕರಿಸಿ ಹಿಡಿದ ಕಾರ್ಯಕ್ಕೆ ಕಷ್ಟಪಡಲು ಹಿಂಜರಿಯದ ಅವರ ಸ್ಥೈರ್ಯ ಧೈರ್ಯಾದಿಗಳೂ ಅಹಂಭಾವವನ್ನು ಸಂಪೂರ್ಣವಾಗಿ ತ್ಯಜಿಸಿ ಎಲ್ಲರೂ ಹಿರಿಯರು ತಾವೊಬ್ಬರೇ ಕಿರಿಯರು ಎಂಬ ಭಾವವನ್ನು ತಾಳಿ ದಾಸೋಹ ಭಾವದಿಂದ ವರ್ತಿಸುವ ಅವರ ಭೃತ್ಯತ್ವ ವೃತ್ತಿಯೂ ಸಮಾಜದಲ್ಲಿ ಬಹು ಬಲವಾದ ಐಕ್ಯತೆಯನ್ನುಂಟು ಮಾಡಿದವು. ಆದ್ದರಿಂದ ಅವರು ದೇಶದಲ್ಲೆಲ್ಲ ಒಂದು ಮಹತ್ತರವಾದ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಕ್ರಾಂತಿಯನ್ನುಂಟು ಮಾಡಲಿಕ್ಕೆ ಶಕ್ತರಾದರು.



# ಇಷ್ಟಲಿಂಗದ ಅವಶ್ಯಕತೆ.

ಲೇಖಕ:--"ಶಾಂತವೀರ" ಬಬಲೇಶ್ವರ. ಜಿ|| ವಿಜಾಪುರ.

---

ಈ ಜಗತ್ತಿನಲ್ಲಿ ಹಿಂದುಸ್ಥಾನವು ದೇವರ ಮನೆ ಇದ್ದಂತೆ ಅದರ ಖ್ಯಾತಿಯು ಇದೆ. ಯಾಕಂದರೆ ಧರ್ಮದ ಬಗ್ಗೆ ಇವರಷ್ಟು ಗತಿಯನ್ನು ಇತರ ರಾಷ್ಟ್ರಗಳು ಹೊಂದಿರುವದಿಲ್ಲ. ಎಷ್ಟೋ ಸಾವಿರ ವರ್ಷಗಳ ಪೂರ್ವದಲ್ಲಿಯೇ ಧರ್ಮದ ಬಗ್ಗೆ ಶೋಧ ಮಾಡಿ, ಅದರಲ್ಲಿ ಅವರು ಮುಂದುವರಿದವರಿರುತ್ತಾರೆ. ಹಿಂದುಸ್ಥಾನದ ಪ್ರತಿಯೊಂದು ಹಳ್ಳಿಯನ್ನು ನೋಡಿದರೂ ಎಷ್ಟೋ ದೇವಾಲಯಗಳು ದೃಗ್ಗೋಚರವಾಗುತ್ತವೆ. ಅವುಗಳಲ್ಲಿಯಂತೂ ಶಿವ ದೇವಾಲಯಗಳು ಅಗಣಿತವಾಗಿ ದೊರೆಯುತ್ತವೆ. ಇಷ್ಟು ದೇವಾಲಯಗಳು ಅಸ್ತಿತ್ವದಲ್ಲಿ ಇರುವವಲ್ಲದೆ ಪ್ರತಿಯೊಬ್ಬ ಹಿಂದುವಿನ ಮನೆಯಲ್ಲಿಯೂ ದೇವರ ಮನೆ ಇದ್ದು ಅದರಲ್ಲಿ ದೇವತೆಯನ್ನು ಯಾವಾಗಲೂ ಅರ್ಚಿಸುವ ಪರಿಪಾಠವಿರುತ್ತದೆ. ಇದರಿಂದ ಹಿಂದುಗಳಲ್ಲಿ ಮೂರ್ತಿ ಪೂಜೆಯು ಎಷ್ಟು ರೂಢವಾಗಿದೆ ಎಂಬದು ತಿಳಿದು ಬರುತ್ತದೆ. ಆದರೆ ಇಲ್ಲಿ ನಿರಾಕಾರವಾದ ಪರಮಾತ್ಮನನ್ನು ಅರ್ಚಿಸುವದು ಹೇಗೆ ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಆದರೆ ನಿರಾಕಾರ ಸ್ವರೂಪವನ್ನು ಕಾಣಲು ಸಾಕಾರ ರೂಪವು ಅವಶ್ಯವಾಗಿಬೇಕು ಹ್ಯಾಗಂದರೆ ಒಬ್ಬ ಚಿಕ್ಕ ಬಾಲಕನು ಬೇಕಾದಷ್ಟು ಬುದ್ಧಿವಂತನಿರಬಹುದು. ಆದರೆ ಆತನಿಗೆ 'ಅ' ಎಂಬ ಅಕ್ಷರವನ್ನು ಪಾಟಿಯಮೇಲೆ ಬರೆದು ಅದಕ್ಕೆ ಮೂರ್ತಸ್ವರೂಪ ಕೊಟ್ಟಾಗಲೇ ಆತನಿಗೆ ಅದರ ಕಲ್ಪನೆಯು ಬರುವದಲ್ಲದೆ, ಹಾಗೆಯೇ ಎಂದಿಗೂ ಬರಲಾರದು. ಅದರಂತೆಯೇ ನಿರ್ಗುಣನಾದ ಪರಮಾತ್ಮನ ಕಲ್ಪನೆಯು ಮೊದಲು ಸಗುಣ ಮೂರ್ತಿಯ ಉಪಾಸನೆಯಿಂದಲೇ ಉಂಟಾಗುತ್ತದೆ. ಸ್ಥೂಲ ಸ್ವರೂಪವಾದ ನಮ್ಮ ಇಂದ್ರಿಯಗಳಿಗೆ ಸೂಕ್ಷ್ಮ ಸ್ವರೂಪದ ಅನುಭವ ಬರುವದು ಕಠಿಣವಾದ ಮಾತಾಗಿರುತ್ತದೆ. ಕಾರಣ ಸ್ಥೂಲಸ್ವರೂಪದ ಕಲ್ಪನೆಯಿಂದಲೇ ಸೂಕ್ಷ್ಮವನ್ನು ಕಾಣಬೇಕಲ್ಲದೆ ಕೇವಲ ಪರಮಾತ್ಮನನ್ನು ಸೂಕ್ಷ್ಮನೆಂದಾಕ್ಷಣಕ್ಕೆ ಅದರ ಅನುಭವವು ಎಂದೂ ಬರಲಾರದು. ಕಾರಣ ಸರ್ವರಿಗೂ ಮೂರ್ತಿಪೂಜೆಯು ಅವಶ್ಯಕವೆಂದು ತಿಳಿದುಬರುತ್ತದೆ.

## ಯಾವ ಮೂರ್ತಿಯನ್ನು ಪೂಜಿಸಬೇಕು.

ಹಿಂದುಗಳು ಲಿಂಗ, ವಿಷ್ಣು, ಲಕ್ಷ್ಮೀ, ಗಣಪತಿ, ದೇವೀ ಮುಂತಾದ ಎಷ್ಟೋ ವಿಗ್ರಹಗಳನ್ನು ಅರ್ಚಿಸುವದುಂಟು. ಇದರೆ ಇದರಲ್ಲಿ ಲಿಂಗ ಪೂಜೆಯಲ್ಲಿ ಶ್ರೇಷ್ಠತರದ ವಿಚಾರಗಳು ಅಡಕವಾಗಿವೆ. ಹ್ಯಾಗೆಂದರೆ ಲಿಂಗದ ಹೊರತಾಗಿ ಇತರ ದೇವತೆಗಳ ವಿಗ್ರಹಗಳು ಮನುಷ್ಯನಂತೆ ಕೈಕಾಲು ಮುಂತಾದ ಅವಯವಗಳಿಂದ ಕೂಡಿದ್ದಾಗಿರುತ್ತವೆ. ಅದರಿಂದ ಅರ್ಚಕನ ಮನಸ್ಸಿನಲ್ಲಿ ದೇವರಿಗೆ ಇಂದ್ರಿಯಗಳಿದ್ದು ಅವನು ನಮ್ಮಂತೆಯೇ ದುಃಖಿಸಬಹುದು, ನಮ್ಮಂತೆಯೇ ಆತನಿಗೆ ಹೆಂಡರು ಮಕ್ಕಳು ಇದ್ದು ಅವನಿಗೂ ಪ್ರಪಂಚದ ತೊಂದರೆಗಳಿರಬಹುದು, ಮತ್ತು ಕಡೆಗೆ ಅವನು ನಮ್ಮಂತೆ ಮರಣಕ್ಕಾದರೂ ಒಳಗಾಗಬಹುದು ಎಂಬ ಕಲ್ಪನೆಗಳು ಬರುವದು ಸಹಜವಾಗಿದೆ. ಆದರೆ ಲಿಂಗಮೂರ್ತಿಯಲ್ಲಿ ಈತರದ ಕಲ್ಪನೆಗಳು ಬರಲು ಅವಕಾಶವಿಲ್ಲ. ಅಂತೆಯೇ ಆಗಮಜ್ಞರು ಲಿಂಗಪೂಜೆಯೇ ಶ್ರೇಷ್ಠವೆಂದು ಘಂಟಾ ಘೋಷವಾಗಿ ಸಾರಿದ್ದಾರೆ.

## ಲಿಂಗವನ್ನು ಧರಿಸುವದೇಕೆ?

ಸರ್ವರಿಗೂ ಲಿಂಗಪೂಜೆಯು ಗ್ರಾಹ್ಯವಾದರೂ ಇಷ್ಟಲಿಂಗವೆಂಬದನ್ನು ವೀರಶೈವರು ಮಾತ್ರ ಧಾರಣವನ್ನು ಯಾಕೆ ಮಾಡುತ್ತಾರೆ, ಎಂಬ ಪ್ರಶ್ನೆಯು ಉದ್ಭವಿಸುವದು. ಆದರೆ ಇದರ ಬಗ್ಗೆ ವಿಚಾರ ಮಾಡಿದರೆ ಕಂಡುಬರುವದೇನಂದರೆ, ಮೊದಲು ವೇಳೆಯನ್ನು ನಕ್ಷತ್ರಗಳ ಮೇಲಿಂದಲೂ ಸೂರ್ಯ ಚಂದ್ರರ ಮೇಲಿಂದಲೂ ತಿಳಿಯುತ್ತಿದ್ದರು. ಆದರೆ ಇದು ಸಾಮಾನ್ಯ ಜನರಿಗೆ ತಿಳಿಯದ ಮಾತಾಯಿತು. ಆಗ್ಗೆ ಸರ್ವರಿಗೂ ತಿಳಿಯುವಂತೆ ಒಂದು ಗಳಿಗೆ ಬಟ್ಟಲವನ್ನು ನಿರ್ಮಿಸಿ ಅದನ್ನು ನೀರಿನಲ್ಲಿ ಬಿಡುವದರಿಂದ ಪ್ರತಿಗಳಿಗೆಗೂ ಅದು ತುಂಬಿ ಮುಳುಗುತ್ತಿತ್ತು. ಈ ಪ್ರಕಾರ ಆ ಗಳಿಗೆ ಬಟ್ಟಲಿನ ಸಹಾಯದಿಂದ ಕಾಲವನ್ನು ಅರಿಯ ತೊಡಗಿದರು. ನಂತರ ಸುಧಾರಿಸಿ ಒಂದು ಉಸುಕಿನ ಗಡಿಯಾರವನ್ನು ಶೋಧಿಸಿದರು. ಅದರ ಸಹಾಯದಿಂದ, ಕಾಲವನ್ನು ಕಂಡು ಹಿಡಿಯಲಿಕ್ಕೆ ಮೊದಲಿನಕ್ಕಿಂತಲೂ ಹೆಚ್ಚು ಅನುಕೂಲವಾಯಿತು. ಪ್ರವಾಸಕ್ಕೂ ಕೂಡಾ ಒಯ್ಯಲು ಅನುಕೂಲವಾಯಿತು. ನಂತರ ಮುಂದೆ ಇದಕ್ಕೂ ಸುಧಾರಿಸಿ ಈಗಿನ

ಈಗಿನ ಗಡಿಯಾರಗಳು ಉಂಟಾದವು. ಅವುಗಳ ಸಹಾಯದಿಂದ ಕಾಲವನ್ನು ಅರಿಯ ತೊಡಗಿದರು. ಯಾರ ಹತ್ತಿರ ಈ ಗಡಿಯಾರ ಇರುವದೋ ಅವರು ಇನ್ನಿತರ ಕಾಲ ತಿಳಿಸುವ ಗಡಿಯಾರಗಳ ಕಡೆಗೆ ಮನಸ್ಸು ಮಾಡಲು ಕಾರಣವಿಲ್ಲ. ಮತ್ತು ಯಾವನಿಗೆ ವೇಳೆಯು ಅತ್ಯಂತ ಮಹತ್ವದ್ದಾಗಿ ತೋರುವದೋ ಆತನು ಈ ಗಡಿಯಾರದಿಂದ ಎಂದೂ ಅಗಲಿರಲಾರನು. ಅದರಂತೆಯೇ ಆರ್ಯರಾದರೂ ಮೊದಲು ಅಗ್ನಿ, ವರುಣ, ಸೂರ್ಯ ಮುಂತಾದವುಗಳೇ ದೇವರೆಂದು ಅರ್ಚಿಸಲಾರಂಭಿಸಿದರು. ಮುಂದೆ ಕೆಲವು ಕಾಲ ಗತಿಸಿದ ನಂತರ ಇವರು ದೇವರಲ್ಲ. ನಮಗೂ ಇವರಿಗೂ ಆಧಾರವಾಗಿರುವ ದೇವರೊಬ್ಬನು ಬೇರೆ ಇರುವನೆಂದು ತಿಳಿದು ಆತನಿಗೆ ತಮ್ಮ ತೆ ಆಕೃತಿಗಳನ್ನು ಕೊಟ್ಟು ಪೂಜಿಸುವ ರೂಢಿಯು ಉಂಟಾಯಿತು. ಇದು ಕೆಲವು ಕಾಲ ಗತಿಸಿದ ನಂತರ ಆ ಪರಮಾತ್ಮನ ರೂಪವು ಇದೂ ಕೂಡಾ ಅಲ್ಲವೆಂದು ತಿಳಿದು ಕಡೆಗೆ ಲಿಂಗ ರೂಪದಿಂದ ಪೂಜಿಸುವ ರೂಢಿಯುಂಟಾಯಿತು. ಇದು ಕೆಲವು ಕಾಲ ಗತಿಸಿದ ನಂತರ ನಾವು ಪರಮಾತ್ಮನ ಅಂಶೀ ಭೂತರಿರುವದರಿಂದ ಆತನ ಚಿನ್ಹವಾದ ಲಿಂಗವನ್ನು ಬೇರೆಯಾಗಿ ಇಟ್ಟರೆ, ಅದು ಭೇದ ತೋರಿಸುವದೆಂದು ತಿಳಿದು ಅದನ್ನೇ ಧಾರಣ ಮಾಡುವ ರೂಢಿಯುಂಟಾಯಿತು. ಹೀಗೆ ಆರ್ಯರು ಹೇಗೆ ಹೇಗೆ ಸುಧಾರಿಸುತ್ತ ನಡೆದರೋ ಹಾಗೆ ಹಾಗೆ ಅವರ ವಿಚಾರಗಳೂ ಬದಲಾಗುತ್ತ ನಡೆದವು. ಕಡೆಗೆ ಅವರಿಗೆ ಲಿಂಗ ಧಾರಣವೇ ಯೋಗ್ಯವೆಂದು ಅನಿಸಿ ಇಷ್ಟಲಿಂಗ ರೂಪದಿಂದ ಧಾರಣ ಮಾಡುವ ಪದ್ಧತಿಯುಂಟಾಯಿತು. ಇದನ್ನೂ ಕೆಲವರು ಆಕ್ಷೇಪಿಸುತ್ತಾರೆ. ಏನಂದರೆಃ- ಪ್ರತಿಯೊಬ್ಬನ ಅಂತರಂಗದಲ್ಲಿ ಪ್ರಾಣಲಿಂಗ ಇರುವದು. ಅದರ ಉಪಾಸನೆಯನ್ನು ಮಾಡಿದರಾಯಿತು. ಹೊರಗೆ ಇಷ್ಟಲಿಂಗ ರೂಪದಿಂದ ಧಾರಣ ಮಾಡುವದೇಕೆ, ಎಂದು ಕೇಳುತ್ತಾರೆ. ಆದರೆ ಇದು ಸಮಂಜಸವಾಗಲಾರದು. ಯಾಕಂದರೆ, ಅತಂರ್ಯದಲ್ಲಿ ಏನು ಇರುವದಿಲ್ಲ. ಎಲ್ಲವೂ ಇರುತ್ತದೆ. ಆದರೆ ಯಾವದು ಒಳಗೆ ಇರುವದೋ ಅದೇ ಜಗದಲ್ಲಿ ತೋರುತ್ತದೆ. ಹೇಗಂದರೆ ನಮ್ಮಲ್ಲಿ ಸಪ್ಪಳ ಇರುವದರಿಂದಲೇ ಹೊರಗಿನ ಸಪ್ಪಳವನ್ನು ಕೇಳುತ್ತೇವೆ. ನಮ್ಮಲ್ಲಿ ಪ್ರಕಾಶವಿರುವದರಿಂದಲೇ ಹೊರಗಿನ ಪ್ರಕಾಶವನ್ನು ನೋಡುತ್ತೇವೆ. ನಮ್ಮಲ್ಲಿ ಜ್ಞಾನವಿರುವದರಿಂದಲೇ ಹೊರಗಿನ ಪದಾರ್ಥಗಳ ಜ್ಞಾನ ನಮಗಾಗುವದು. ಆದರೆ ಅದರ

ಪ್ರತೀತಿಯಾಗಬೇಕಾದರೆ ಮಾತ್ರ ಅಂತರಂಗದ ಶಕ್ತಿಯನ್ನು ಬಹಿರಂಗದಲ್ಲಿ ಪ್ರಕಟ ಮಾಡಬೇಕಾಗುವದು. ಈಗ್ಗೆ ಒಂದು ಸಣ್ಣ ಕೂಸನ್ನು ನಿರ್ಜನ ಪ್ರದೇಶದಲ್ಲಿಟ್ಟು ಆ ಕೂಸಿಗೆ ಹೊರಗಿನ ಸಪ್ಪಳಗಳ ಸಂಸರ್ಗವನ್ನು ತಪ್ಪಿಸಿದರೆ ಆ ಕೂಸು ಮೂಕವಾಗುತ್ತದೆಂದು ಎಷ್ಟೋ ಜನರ ಅಭಿಪ್ರಾಯವಿರುತ್ತದೆ. ಹೀಗಾಗಲು ಆ ಶಿಸುವಿಗೆ ಹೊರಗಿನ ಸಪ್ಪಳವು ಕೇಳದೆ ಇರುವದೇ ಕಾರಣವು. ಇದರಿಂದ ಅಂತರ್ಯದ ಶಕ್ತಿಯು ಪ್ರಕಟವಾಗಬೇಕಾದರೆ ಬಹಿರಂಗದಲ್ಲಿ ಕ್ರಿಯೆಯು ಅವಶ್ಯವೆಂದು ಸಹಜ ಸಿದ್ಧವಾಗುತ್ತದೆ. ಮತ್ತು ಓರ್ವ ವಿದ್ಯಾರ್ಥಿಗೆ ಮಾಸ್ತರನು ಒಂದು ಲೆಖ್ಖವನ್ನು ತಿಳಿಸಿದನೆಂದು ಕಲ್ಪಿಸಿರಿ. ಹೊರಗೆ ತಿಳಿಸಿದ ಲೆಖ್ಖವೇ ಆತನ ಅಂತರಂಗದಲ್ಲಿ ಸೇರಿ, ಆತನಲ್ಲಿ ಗೌಪ್ಯವಾಗಿ ಕುಳಿತ ಲೆಖ್ಖವನ್ನು ಎಬ್ಬಿಸುತ್ತದೆ. ಅದರಂತೆ ಹೊರಗಿನ ಲಿಂಗ ಪೂಜೆಯೋ ಅಂತರಂಗದ ಪ್ರಾಣಲಿಂಗವನ್ನು ಜಾಗ್ರತಗೊಳಿಸಲು ಸಾಧನವಾಗಿದೆ. ಕಾರಣ ಇಷ್ಟಲಿಂಗವನ್ನು ಪೂಜಿಸುವದು ಅವಶ್ಯವು. ಒಳಗಿನ ಹೊರಗಿನ ಲಿಂಗಗಳ ಸ್ವರೂಪ ಒಂದೇ ಇರುವದರಿಂದ ಒಳಗಿನ ಲಿಂಗವನ್ನು ಹೇಗೆ ಬಿಡಲಾಗುವದಿಲ್ಲವೋ, ಅದರಂತೆ ಹೊರಗಿನ ಲಿಂಗವನ್ನು ಕೂಡಾ ಬಿಡಲಾರದೆ ಧಾರಣ ಮಾಡಬೇಕಾಗುವದು. ಇಲ್ಲಿ ಅಂತರಂಗದ ಪ್ರಾಣಲಿಂಗದ ಅರಿವು ಉಂಟಾದನಂತರ ಹೊರಗಿನ ಲಿಂಗವನ್ನು ಬಿಡಬಹುದೇ, ಎಂದು ಪ್ರಶ್ನೆಯು ಉದ್ಭವಿಸುವದು. ಆದರೆ ಸ್ಥೂಲ ದೇಹಿಯಾದ ಮನುಷ್ಯನು ಯಾವಾಗಲೂ ಪ್ರಾಣಲಿಂಗ ಪೂಜೆಯಲ್ಲಿ ಇರುವದು ಆಗುವದಿಲ್ಲ. ಶರೀರ ಧರ್ಮಾನುಸರಿಸಿ ಆತನು ಪದೇ ಪದೇ ಬಹಿರ್ಮುಖ ವೃತ್ತಿಯುಳ್ಳವನಾಗಬೇಕಾಗುತ್ತದೆ. ಯಾವಾಗ್ಗೆ ಬಹಿರ್ಮುಖ ವೃತ್ತಿಯು ಬರುವದೋ ಆಗ್ಗೆ ಇಷ್ಟಲಿಂಗವು ಬೇಕೇಬೇಕು. ಅಂತೂ ಎಲ್ಲಿಯವರೆಗೆ ಸ್ಥೂಲ ದೇಹವಿರುವದೋ ಅಲ್ಲಿಯವರೆಗೆ ಇಷ್ಟಲಿಂಗವನ್ನು ಧರಿಸಲಿಕ್ಕೇ ಬೇಕು. ಇದೇ ವೀರಶೈವರ ನಿಜವಾದ ಸಿದ್ಧಾಂತವು.

## ಕಂಥೆಯನ್ನು ಏಕೆ ಕೂಡ್ರಿಸಬೇಕು.

ಲಿಂಗದಲ್ಲಿ ಶಿವ ಮತ್ತು ಶಕ್ತಿ ಇವುಗಳ ಸಂಬಂಧವಿರುತ್ತದೆ. ವೀರಶೈವ ಸಿದ್ಧಾಂತವು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವು. ಅಂದರೆ ಪರಮಾ

ತ್ಮನು ಶಕ್ತಿಯೊಡನೆ ಕೂಡಿ ಒಟ್ಟನೇ ಇರುತ್ತಾನೆಂಬುದು. ಹ್ಯಾಗೆದಂರೆ, ಸಕ್ಕರೆಯಲ್ಲಿ ಸಿಹಿ ಹ್ಯಾಗೆ ಇರುತ್ತದೋ ಅದರಂತೆ ಪರಮಾತ್ಮನಲ್ಲಿ ಶಕ್ತಿಯು ಅವಿನಾಭಾವಸಂಬಂಧಿಯಾಗಿರುತ್ತದೆ. ಶಿವರೂಪವಾದ ಬಾಣವು ಮತ್ತು ಶಕ್ತಿ ರೂಪವಾದ ಪೀಠವು ಬೇರೆ ಬೇರೆ ಇದ್ದರೂ ಅವು ಎಂದೂ ಅಗಲದಂತೆ ಅವುಗಳಿಗೆ ಕಂಥೆಯನ್ನು ಕೂಡ್ರಿಸಿ ಅದ್ವೈತವನ್ನು ತಂದು ಕೊಡುತ್ತಾರೆ. ಮತ್ತು ಕಂಥೆಯು ಬಣ್ಣವು ಕರೆಯದಿರುವದರಿಂದ ಪ್ರಕಾಶದ ಕಿರಣಗಳನ್ನು ಹೀರಿಕೊಳ್ಳುವದು ಅದರ ಸ್ವಭಾವವು. ಇದರಿಂದ ಅರ್ಚಕನ ನೇತ್ರಗಳಿಂದ ಹೊರಡುವ ಪ್ರಕಾಶವು ಆ ಲಿಂಗದಲ್ಲಿ ಸೇರಿ ಆತನ ಅಂತರಂಗ ಲಿಂಗಕ್ಕೂ ಇದಕ್ಕೂ ಸಂಬಂಧವಾಗುತ್ತದೆ. ಕರೆಯ ಬಣ್ಣವು ಪ್ರಕಾಶದಯಾವತ್ತು ಕಿರಣಗಳನ್ನು ಹೀರುತ್ತದೆಂದು ರಸಾಯನಶಾಸ್ತ್ರಜ್ಞರೂ ಒಪ್ಪುತ್ತಾರೆ. ಅಂತೇ ಲಿಂಗಕ್ಕೆ ಕಂಥೆಯನ್ನು ಕೂಡ್ರಿಸುತ್ತಾರೆ.

## ಲಿಂಗವನ್ನು ಯಾರು ಧಾರಣ ಮಾಡಬೇಕು.

ಯಾರಿಗೆ ಅಂತರಂಗದಲ್ಲಿರುವ ಪರಮಾತ್ಮನನ್ನು ಕಂಡು ಮುಕ್ತರಾಗಬೇಕೆಂದು ಎನಿಸುವದೋ ಅವರು ಪುರುಷನಾಗಲಿ, ಸ್ತ್ರೀಯಾಗಲಿ, ಬಾಲಕನಾಗಲಿ ಯಾರಿದ್ದರೇನು, ಅವಶ್ಯವಾಗಿ ಲಿಂಗವನ್ನು ಧಾರಣ ಮಾಡಬೇಕು. ಅಂತೇ ನಮ್ಮ ಧರ್ಮದಲ್ಲಿ ಕೂಸು ಹುಟ್ಟಿದ ಕೂಡಲೇ ಅದು ಹೆಣ್ಣೇ ಇರಲಿ, ಗಂಡೇ ಇರಲಿ, ಲಿಂಗಧಾರಣವನ್ನು ಮಾಡುತ್ತಾರೆ. ಇದರಿಂದ ಚಿಕ್ಕಂದಿನಿಂದಲೂ ಅದರ ಕಡೆಗೆ ಲಕ್ಷ್ಯ ಹತ್ತಿ, ಕಡೆಗೆ ಅದರಿಂದಲೇ ಆತನು ಮುಕ್ತನಾಗಲೆಂಬದಾಗಿದೆ. ಇದರಿಂದ ಈ ಪದ್ಧತಿಯು ಎಷ್ಟು ಉದಾತ್ತವಾಗಿರುವದೆಂಬದು ಕಂಡು ಬರುತ್ತದೆ. ಹ್ಯಾಗಂದರೆ. ಚಿಕ್ಕಂದಿನ ಸಂಸ್ಕಾರವು ಆತನ ಮರಣಾಂತ್ಯದ ವರೆಗೆ ಇರುತ್ತದೆಂಬದು ಸರ್ವರ ಅನುಭವದ ಮಾತಾಗಿರುತ್ತದೆ. ಅಂತೇ ನಮ್ಮ ಪೂರ್ವಜರು ಲಿಂಗ ಧಾರಣಕ್ಕೆ ಬಹಳ ಮಹತ್ವವನ್ನು ಕೊಟ್ಟಿರುತ್ತಾರೆ. ಈ ತರದ ಸಂಸ್ಕಾರಗಳು ಅನ್ಯಮತೀಯರಲ್ಲಿ ಇಲ್ಲ.

## ಸಾರಾಂಶ.

ಇಂಥ ಉದಾತ್ತವಾದ ತತ್ವದ ಮೇಲೆಯೇ ಲಿಂಗ ಧಾರಣವು ಸರ್ವಸಮ್ಮತವಾಗಿದೆ. ಆದರೆ ಅಜ್ಞಾನದಿಂದ ಕೆಲವರು ಅದರ ಮಹತ್ವವನ್ನು

ಅರಿಯುದವರಾಗಿದ್ದಾರೆ. ಯಾವ ಲಿಂಗ ಧಾರಣದಿಂದ ಪೂರ್ವದಲ್ಲಿ ಜ್ಞಾನಿಗಳು ಮುಕ್ತರಾದರೋ, ಯಾವ ಲಿಂಗಧಾರಣದಿಂದ ಅವರು ಇಡೀ ಜಗತ್ತಿಗೆ ತಮ್ಮ ಪ್ರಕಾಶವನ್ನು ಹರವಿದರೋ, ಯಾವ ಲಿಂಗಧಾರಣದಿಂದ ಜಗತ್ತಿನಲ್ಲಿ ಶಿವಾದ್ವೈತವೆಂಬ ದುಂದುಭಿಯನ್ನು ಬಾರಿಸಿದರೋ, ಅಂಥವರ ವಂಶಜರಾದ ನಾವುಗಳು ಅದರ ಬಗ್ಗೆ ಉದಾಸೀನ ವೃತ್ತಿಯಿಂದ ನಡೆದು ಅಧೋಗತಿಗೆ ಹೋಗುವದು ಸರಿಯಾಗಲಾರದು. ಮಾನವನ ಚರಿತ್ರೆಯು ಕಡೆಯ ಭಾಗವನ್ನು ನೋಡಿದರೆ ಅಲ್ಲಿ ಏನು ಕಂಡು ಬರುವದೆಂದರೆ, ಶಾಂತಿ! ಅಂಥ ಶಾಂತಿಯನ್ನು ಕಾಣುವದು ಪ್ರತಿಯೊಬ್ಬರ ಆದ್ಯ ಕರ್ತವ್ಯವಲ್ಲವೆ? ಕರ್ತವ್ಯ ಚ್ಯುತರಾಗಿ ಹೊರಗಿನ ವಿಷಯಗಳಿಗೆ ದಾಸರಾಗಿ ಶ್ರೇಷ್ಠವಾದ ಮಾನವ ಜನ್ಮದ ದುರುಪಯೋಗವನ್ನು ಮಾಡಿಕೊಳ್ಳುವದು ಪರಮ ಘಾತಕತನದ್ದಾಗಿರುತ್ತದೆ. ಬಾಹ್ಯ ಪದಾರ್ಥಗಳಿಂದಲೇ ಸುಖ ಶಾಂತಿಯನ್ನು ಹೊಂದುವೆವೆಂದು ಓಡಾಡುವ ಪಾಶ್ಚಿಮಾತ್ಯ ರಾಷ್ಟ್ರಗಳ ಬೆನ್ನು ಹತ್ತಿ ಆರ್ಯ ಧರ್ಮದಿಂದ ದೂರಾಗುವದು ಯುಕ್ತವಲ್ಲ. ಇಂದಿಲ್ಲ ನಾಳೆಯಾದರೂ ಆ ರಾಷ್ಟ್ರಗಳ ಓಡಾಟವು ನಿಲ್ಲುವದೆಂಬುವದು ಅನುಭವದ ಮಾತಾಗಿದೆ. ಯಾಕಂದರೆ ಹೊರಗೆ ಭೋಗ್ಯ ವಸ್ತುಗಳು ಬೆಳೆದರೂ ಅಂತರಂಗದಲ್ಲಿ ಎಂದೂ ಶಾಂತತೆಯು ಲಭಿಸಲಾರದು. ಕಾರಣ ಬಂಧುಗಳೇ! ಅಂತರಂಗದಲ್ಲಿ ಶಾಂತಿಯು ಲಭಿಸುವದಕ್ಕೆ ಪ್ರಯತ್ನಿಸಿರಿ. ಅಂತರಂಗದ ಶಾಂತತೆಗೆ ಬಹಿರಂಗದ ಲಿಂಗ ಪೂಜೆಯು ಅತ್ಯವಶ್ಯಕವಾಗಿರುತ್ತದೆಂಬುವದು ತಮಗಾದರೂ ಈಗ್ಗೆ ಮನವರಿಕೆಯಾಗಿರಬಹುದು. ಕಾರಣ ಸರ್ವರು ಬಹಿರಂಗದಲ್ಲಿ ಇಷ್ಟಲಿಂಗವನ್ನು ಅರ್ಚಿಸಿ ಅದರಿಂದ ತಮ್ಮ ಅಂತರಂಗದ ಪ್ರಾಣ, ಭಾವಲಿಂಗಗಳಲ್ಲಿ ಸಮರಸವನ್ನು ಹೊಂದಿ ಅಖಂಡವಾದ ಶಾಂತಿಯನ್ನು ಹೊಂದುವಿರೆಂದು ನಾನು ಬಯಸುತ್ತೇನೆ.



# ಪ್ರಾಪಂಚಿಕನ ಪಶ್ಚಾತ್ತಾಪ.

ಲೇಖಕ:- ಲ. ಅ. ಶಿರಪಟ್ಟಿ ಶಾಲಾ ಮಾಸ್ತರ ವಿಜಾಪುರ.

(ಶ್ರೀರಾಮಕೃಷ್ಣ ಪರಮಹಂಸರ ತತ್ತ್ವೋಪದೇಶದೊಳಗಿನ ಒಂದು ಉದಾಹರಣೆಯ ಅವಲಂಬನ.)

ರಾಗ; ಮುಖಾರಿ. ತಾಳ; ಝಂಪೆ. "ಅಂತಕನ ದೂತರಿಗೆ" ಎಂಬ ಪದದಂತೆ.

ಬರಿದೆ ಸಂಸಾರದಲಿ ಶಿಲುಕಿ ಬಲು ಬಳಲಿದೆನು |
ಪರಿಹರಿಸೋ ಪರಶಿವನೆ ಭವ ಬಂಧನವನು ॥ಪಲ್ಲ॥
ಮರುಳತನದಿಂದುರುಳಿದೆಂ ಮೋಹ ಕೂಪದೊಳು; ।
ಅರಿಯಲಿಲ್ಲಲ್ಲಿರುವ ವಿರಸತ್ವವ; ॥
ಭರದಿ ಹರಿದುದು ಮನವು ಸಂಸಾರ ಸುಂದರತೆ-।
ಗರದದರ ಸುಖವೆಂಬ ಮೃಗಜಲದ ಭ್ರಮೆಗೆ ॥೧॥
ಕಲಹದಲಿ ಸೇರಿ, ಬಲುಮೆಯ ತೋರಿ, ಗಣಿಸದಿರೆ।
ಎಳೆದು ನ್ಯಾಯಸ್ಥಾನಗಳಿಗವರನು, ॥
ಸಲೆ ವಿಡಿದು ಧನಯುತರ ಪಕ್ಷವುಂ ಹಣಸುರಿದು।
ಗೆಲಿದು, ಕಲಹದಿ ಪಿರಿದು ಜಾಣನೆನಿಸಿದೆನು ॥೨॥
ಪರರಿಗುಪಕಾರವಂ ನಟಿಸುತ್ತ ಸ್ವಾರ್ಥದೊಳೆ।
ಪರರನದರಿಂ ಹಂಗಣೆಯೊಳೆಳೆಯುತ ॥
ನೆರೆಸೇವೆಗೊಳ್ಳುತ್ತ ಮಾಡದಿರೆ ದೂಷಿಸುತ ।
ನರರೊಳೊಣ ಹೆಮ್ಮೆಯುಂ ಬರಿದೆ ತೋರಿದೆನು, ॥೩॥
ಕೆಲರ ವಂಚಿಸಿ, ಕೆಲರನಿನಿವಾತಿನಿಂದೊಲಿಸಿ,।
ಗಳಿಸಿಯುವರಿಂಗೊಳ್ಳು ಮನ್ನಣೆಯನು ॥
ಸಲೆ ಪದವಿಗಳ ಧರಿಸಿ, ಜನತೆಯಲಿ ಮುಂದೆನಿಸಿ।
ಬಲು ಮೆರಿಸಿದೆಂ ಸುಳ್ಳು ದೊಡ್ಡಸ್ತಿಕೆಯನು ॥೪॥
ಹೆರವರಿಂ ಮೊದಲೆನ್ನ ಮಂದಿರವು ಧರಿಸಿದುದು।
ಹರಳುಗನ್ನಡಿಕಳಸ ಗೋಪುರವನು ॥
ವರಭಕ್ಷ್ಯಗಳನುಂಡು ವಸ್ತ್ರ ಒಡವೆಗಳಟ್ಟು ।
ತರುಣಸುತರಿಂ ಸಹಿತ ಪರಿ ಶೋಭಿಸಿದೆನು ॥೫॥

ಎಂತಾದೊಡೇಸಿವುಗಳೊಂದರಿಂ ಮನಕೆ ಸುಖ-।
ಶಾಂತಿಯೊಂದಿನಿತಿಲ್ಲ; ಸುಖವೆನ್ನುತ ।।
ಭ್ರಾಂತಿಯಿಂ ಹಲವು ತರದಿಂ ಸೆಳೆದು ಗಳಿಸುತ್ತ।
ಸಂತುಷ್ಟಿಯುಂ ತೋರಿದು ಬೆಂದೆನನವರತ ॥೬॥

ಅತಿ ಜಾಣ ಕಾಗೆ; ಅರಿದೆಲ್ಲಿದೋರ್ಡಂ ಮರೆಗೆ।
ಚತುರತನದಿಂ ತೀಕ್ಷ್ಣ ದೃಷ್ಟಿಯಿಂದ॥
ಅತಿಕೀಳು ಜಂತುಗಳ, ಕೊಳೆವ ಕಸ ಚೂರುಗಳ।
ಸತತ ತನ್ನೊಡಲಕೆಂದಪಹರಿಪುದಲ್ತೆ ॥೭॥

ಹಾರಬಲ್ಲದು ಹದ್ದು ಆಕಾಶದೊಳಗಧಿಕ।
ದೂರವಾದೊಡೆ ದೃಷ್ಟಿ ಕೆಳಗಿರ್ಪುದು ॥
ದೂರದಿಂ ಸತ್ತ ಪ್ರಾಣಿಯ ಕೊಳೆವ ಮಾಂಸದಾ-।
ಹಾರವನರಿವುದು ತೀಕ್ಷ್ಣಘ್ರಾಣ ಬಲದಿ ॥೮॥

ಹದ್ದುಕಾಗೆಗಳಿಷ್ಟು ಜಾಣ್ಮೆ ಬಲವುಳ್ಳವಾ-।
ಗಿದ್ದೊಡೇನದರಿಂದ ಕಸಕಡ್ಡಿಯು॥
ಬಿದ್ದು ನಾರುವ ಭಕ್ಷ್ಯ ಪಡೆವುದಲ್ಲದೆ? ಹಾಗೆ।
ಬುದ್ಧಿವಂತರು ಭವದಿ ಗಳಿಸುವದು ಕೀಳು ॥೯॥

ಅಸಮಮತಿಯುತನಾಗಿ ಕೀಳಾದ ಹಣಕಾಸು।
ವಸನ ಕಸವರಗಳನೆ ಗಳಿಸಿಗಳಿಸಿ॥
ನಶಿಸದಿರುವಾಶೆಗಾಹುತಿಯಾಗಿ ಬರಿದೆಸಗಿ।
ಬಸವಳಿದೆನಲ್ಲದಿನ್ನೆಲ್ಲಿಹುದು ಸುಖವು ॥೧೦॥

ಜ್ಞಾಣನಾಂ ಪಡೆದೆನೇ ಸಾಧುಸಂಗವನು? ಸು-।
ಜ್ಞಾನಿಯಾಂ ಕಾಯ ಬಂಧನವಳಿದೆನೇ?॥
ಸ್ವಾನುಭವವಿಜ್ಞಾನವರಿದೆನೇ? ತಿಳಿದೆನೆ ನಿ-।
ಜಾನಂದ ವೃತ್ತಿಯುಂ? ಈ ಜಾಣ್ಮೆ ಸುಡಲಿ ॥೧೧॥

ಜೀಯ ಚಿನ್ಮಯ ಸಾಕು ಸಾಕಿನ್ನು ನೂಕದಿರು।
ಮಾಯದೀ ಲೋಕದಾಟದೊಳಿನ್ನನು;॥
ಬೇಯೆನು ಭವಾನುತಾಪದಿ; ಪಡೆಯೆ ನಿಜಸುಖವ।
ಪಾಯವಂ ತೋರು ದಯದಿಂದ ಪರಮಾತ್ಮಾ ॥೧೨॥

# ಕಾಯಕಗಳು.

ಲೇಖಕ- ರಾ|| ಸಾ|| ಫ. ಗು. ಹಳಕಟ್ಟಿ ಬಿ. ಏ. ಎಲ್, ಎಲ್. ಬಿ. ವಿಜಾಪುರ.

ಶಿವಶರಣರ ವಚನ ಗ್ರಂಥಗಳಲ್ಲಿ ಕಾಯಕವೆಂಬ ಶಬ್ದವು ಮೇಲಿಂದ ಮೇಲೆ ಬರುತ್ತದೆ. ಈ ಶಬ್ದದ ನಿಜವಾದ ಅರ್ಥವೇನೆಂಬದನ್ನು ತಿಳಿಯುವದು ಅತ್ಯಾವಶ್ಯಕವಾಗಿರುತ್ತದೆ. ಇದರ ಅರ್ಥವು ಈಗಿನ ಕಾಲಕ್ಕೆ ವಿಪರೀತವಾ'ಗ್ಗತ್ತದೆ. (ಕಾಯಕವೆಂದರೆ ವೀರಶೈವರಲ್ಲಿ ಭಿಕ್ಷೆ ಬೇಡತಕ್ಕ ಒಂದು ವಿಧವು ಎಂಬ ಅರ್ಥವು ಈಗ ಸಾಮಾನ್ಯವಾಗಿ ಇದಕ್ಕೆ ಬಂದಿದೆ. ಅವರಲ್ಲಿ ಕಾಯಕದ ಅಯ್ಯಗಳೆಂಬ ವರ್ಗವು ಇರುವದು ಎಲ್ಲರಿಗೂ ಗೊತ್ತಿದೆ. ಇವರಲ್ಲಿ ಮುಳ್ಳಾವಿಗೆಕಾಯಕ, ಗಂಟೆಯ ಕಾಯಕ, ಕಂಬದಕಾಯಕ ಎಂಬ ನಾನಾ ವಿಧ ಭೇದಗಳಿರುತ್ತವೆ. ಇವರು ಚಿತ್ರ ವಿಚಿತ್ರವಾದ ಉಡುಪುಗಳನ್ನು ಧರಿಸಿಕೊಂಡು ಗ್ರಾಮಾಂತರಗಳಲ್ಲಿ ಸಂಚರಿಸುತ್ತ ಜನರನ್ನು ನಿರ್ಬಂಧಿಸಿ ಭಿಕ್ಷೆಯನ್ನು ಎತ್ತುವದುಂಟು. ಇದರ ಮೇಲಿಂದ ಕಾಯಕವೆಂದರೆ ವೀರಶೈವರಲ್ಲಿಯ ಒಂದು ಭಿಕ್ಷುಕ ವರ್ಗವೆಂದು ಜನರು ಅನ್ನುವದು ಸಹಜಿಕವೇ. ಆದರೆ ವಚನ ಗ್ರಂಥಗಳಲ್ಲಿ ಇದಕ್ಕೆ ಈ ಅರ್ಥವು ಇರುವದಿಲ್ಲ.) ಅವುಗಳಲ್ಲಿ ಕಾಯಕದ ಅರ್ಥವು ಬಹು ಉದಾತ್ತವಾಗಿರುತ್ತದೆ. ಒಂದು ಭಾಷೆಯಲ್ಲಿ ಕಾಲಾಂತರದಿಂದ ಶಬ್ದಗಳ ಅರ್ಥವು ಬದಲಾಗುವದುಂಟು. ಈ ಸ್ಥಿತಿಯು ಈ ಕಾಯಕ ಶಬ್ದಕ್ಕೂ ಒದಗಿದೆ. ಇಷ್ಟೇ ಅಲ್ಲ, ಅದಕ್ಕೆ ಈಗ ಒಂದು ವಿಪರೀತ ಅರ್ಥವೂ ಉಂಟಾಗಿರುತ್ತದೆ.

## ಕಾಯಕಗಳ ಸಾಮಾನ್ಯ ಸ್ವರೂಪು.

(ವಚನ ವಾಙ್ಮಯದಲ್ಲಿ ಕಾಯಕವೆಂದರೆ ಒಂದು ಬಗೆಯಾಗಿ ಉದ್ಯೋಗ ಮಾಡುವದು, ಅಥವಾ ದುಡಿಯುವದು ಎಂದು ಇರುತ್ತದೆ) ಅದರಲ್ಲಿ ಭಿಕ್ಷೆ ಎಂಬ ಅರ್ಥವು ಇರುವದಿಲ್ಲ. ವೀರಶೈವನು ಒಂದು ಉದ್ಯೋಗವನ್ನು ಮಾಡಿ ಅದರಿಂದ ಬಂದದ್ದನ್ನು ಶಿವಾರ್ಪಣ ಭಾವದಿಂದ ಭೋಗಿಸುವದು, ಅವನ ಧರ್ಮವು. ಈ ಭಾವದಿಂದ ಅವನು ಒಂದು ಉದ್ಯೋಗ ಮಾಡಿ

ತನ್ನ ಚರಿತಾರ್ಥವನ್ನು ಸಾಗಿಸಿಕೊಳ್ಳುವದೇ ಕಾಯಕವೆಂದು ನಾವು ಅನ್ನ ಬಹುದು ವೀರಶೈವನು ಭಿಕ್ಷೆಯನ್ನು ಬೇಡಿ ತನ್ನ ಹೊಟ್ಟೆಯನ್ನು ಹೊರೆದು ಕೊಳ್ಳತಕ್ಕವನಲ್ಲ. ಬಸವೇಶ್ವರನ ಕಾಲದಲ್ಲಿ ಅನೇಕ ಶಿವಶರಣರು ಉದ್ಭವಿಸಿದ್ದು ಎಲ್ಲರಿಗೂ ಗೊತ್ತಿದೆ. ಈ ಶಿವಶರಣರೆಲ್ಲರೂ ಒಂದೊಂದು ಕಾಯಕವನ್ನು ಅವಲಂಬಿಸಿದವರಾಗಿದ್ದರು. (ಈ ಕಾಯಕಗಳನ್ನು ನಾವು ನೋಡಿದರೆ ಅವು ಈಗಿನಂತೆ ಮುಳ್ಳಾವಿಗೆಯ ಕಾಯಕ, ಗಂಟೆಯ ಕಾಯಕ, ತಿಕ್ಕೆಯ ಕಾಯಕ, ಎಂಬವೇ ನೊದಲಾದ ಹೆಸರುಗಳಿದ್ದದ್ದು ತೋರಿ ಬರವದಿಲ್ಲ. ಆದರೆ ಅವು ಸೂಜಿಯ ಕಾಯಕ, ಕಟ್ಟಿಗೆಯ ಕಾಯಕ, ನೇಗಿಯ ಕಾಯಕ, ನುಲಿಯ ಕಾಯಕ, ಮಡಿವಳ ಕಾಯಕ, ಹಡಪದ ಕಾಯಕ ಎಂಬಿವೇ ವೊದಲಾದವುಗಳು ಇದ್ದ ಹಾಗೆ ತೋರಿ ಬರುತ್ತವೆ. ಈ ಹೆಸರುಗಳು ಬೇರೆ ಬೇರೆ ಶರಣರು ಕೈಕೊಂಡಿದ್ದ ಧಂದೆಗಳನ್ನು ಅಥವಾ ಉಪಜೀವನದ ಹೋರೆಗಳನ್ನು ನಿರ್ದೇಶಿಸುತ್ತವೆ. ವೀರಶೈವನು ಈ ಉಪಜೀವನದ ಹೋರೆಗಳನ್ನು ಹ್ಯಾಗೆ ನಿರ್ವಹಿಸತಕ್ಕದ್ದೆಂಬದನ್ನು ಅರಿಯುವದೇ ಕಾಯಕಗಳ ಜ್ಞಾನವಾಗಿದೆ.)

ಮನುಷ್ಯನು ಮಾಡುವ ಉಪಜೀವನದ ಹೋರೆಗಳಿಗೆ ವಚನಕಾರರು ಒಂದು ಧಾರ್ಮಿಕ ಸ್ವರೂಪನ್ನು ಕೊಟ್ಟಿದ್ದಾರೆ. ವೀರಶೈವನು ತಾನು ಮಾಡುವ ಕಸಬನ್ನು ಪರಮಾತ್ಮನ ಸೇವೆಗಾಗಿ ಮಾಡಿ ಅದರಿಂದ ಬಂದಿದ್ದನ್ನು ಪ್ರಸಾದ ರೂಪವಾಗಿ ಸೇವಿಸುವದೇ ಅವನ ಕರ್ತವ್ಯವು. ಇದೇ ಕಾಯಕವು. ಒಂದು ವೇಳೆ ಅವನು ತನ್ನ ಕಸಬನ್ನು ಕೇವಲ ಐಹಿಕ ಸುಖಕ್ಕೋಸ್ಕರವಾಗಿ ಉಪಯೋಗಿಸುತ್ತಿದ್ದರೆ, ಅದು ಕಾಯಕವೆನಿಸಲಾರದು. ಅದು ಒಂದು ಉದರ ಪೋಷಣ ಸಾಧನೆ ಎಂದು ಮಾತ್ರ ಹೇಳಬಹುದು. ವೊದಲನೆಯದು ಮನುಷ್ಯನನ್ನು ಉಚ್ಚಸ್ಥಾನಕ್ಕೆ ಒಯ್ಯುತ್ತದೆ. ಆದರೆ ಎರಡನೆಯದು ಅವನನ್ನು ಕೀಳ ಸ್ಥಿತಿಗೆ ಒಯ್ಯುತ್ತದೆ. ವೊದಲನೆಯದು ಮನುಷ್ಯನ ಗುಣಗಳನ್ನು ವಿಕಾಸಗೊಳಿಸುತ್ತದೆ. ಆದರೆ ಎರಡನೆಯದು ಅವನನ್ನು ಸ್ವಾರ್ಥಪರಾಯಣತೆಗೆ ಎಳೆಯುತ್ತದೆ. ವೊದಲನೆಯದು ಸದಾಚಾರಕ್ಕೆ ಎಳೆಯುತ್ತದೆ. ಆದರೆ ಎರಡನೆಯದು ವಿಷಯ ಲೋಲುಪತೆಗೆ ಎಳೆಯುತ್ತದೆ. ವಚನ ಶಾಸ್ತ್ರಕಾರರದೃಷ್ಟಿಯಿಂದ ವೊದಲನೇ ರೀತಿಯಿಂದ ವರ್ತಿಸುವವರು ಭಕ್ತರು. ಆದರೆ ಎರಡನೆ ರೀತಿಯಿಂದ ವರ್ತಿಸುವವರು ಪ್ರಾಪಂಚಿ

ಕರು ಅಥವಾ ಭವಿಗಳು ಕಾಯಕ ಮತ್ತು ಕಸಬು ಈ ಎರಡು ಶಬ್ದಗಳಲ್ಲಿ ಇಷ್ಟು ಭಿನ್ನತೆಯು ಇರುತ್ತದೆ.

## ಕಾಯಕದ ಅರ್ಥ.

ವಚನಕಾರರ ದೃಷ್ಟಿಯಿಂದ ಕಾಯಕದ ನಿಜವಾದ ಅರ್ಥವನ್ನು ತಿಳಿಯಬೇಕಾದರೆ ಮನುಷ್ಯನು ತನ್ನ ಕ್ರಿಯೆ ಅಥವಾ ಕರ್ತವ್ಯವನ್ನು ಈ ಜಗತ್ತಿನಲ್ಲಿ ಹ್ಯಾಗೆ ಮಾಡಬೇಕೆಂಬದನ್ನು ಅರಿಯುವದು ಅತ್ಯವಶ್ಯವು. ವೀರಶೈವನು ಈ ಜಗತ್ತು ಕೇವಲ ಮಾಯಾಮಯವೆಂದು ತಿಳಿದು ಆಚರಿಸತಕ್ಕದ್ದಲ್ಲ. ಆದ್ದರಿಂದ ಜ್ಞಾನವು ಅವನಿಗೆ ಎಷ್ಟು ಮಹತ್ವವಾದದ್ದೋ ಅಷ್ಟೇ ಕ್ರಿಯೆಯೂ ಮಹತ್ವವಾಗಿದೆ. ಕ್ರಿಯೆಯನ್ನು ಮಾಡದ ವಿನಹಾ ಯಾವದೂ ಸಾಧ್ಯವಲ್ಲ. ಅಲ್ಲಮಪ್ರಭುದೇವರು ಈ ಬಗ್ಗೆ ಹೇಳಿರುವದೇನಂದರೆ,

> ಕ್ರಿಯಾ ಮಥನ ವಿಲ್ಲದೆಕಾಣ ಬಂದುದೆ ಇಕ್ಷುವಿನೊಳಗಣ ಮಧುರ? ಕ್ರಿಯಾ ಮಥನವಿಲ್ಲದೆ ಕಾಣ ಬಂದುದೆ ತಿಲದೊಳಗಣ ತೈಲ? ಕ್ರಿಯಾ ಮಥನವಿಲ್ಲದೆ ಕಾಣ ಬಂದುದೆ ಕ್ಷೀರದೊಳಗಣ ತುಪ್ಪ? ಕ್ರಿಯಾಮಥನವಿಲ್ಲದೆ ಕಾಣ ಬಂದುದೆ ಕಾಷ್ಠದೊಳಗಣ ಅಗ್ನಿ ? ಇದು ಕಾರಣ ನಮ್ಮ ಗುಹೇಶ್ವರ ಲಿಂಗವ ತನ್ನೊಳರಿದೆನೆಂಬ ಮಹಾಂತಂಗೆ ಸತ್ಕ್ರಿಯಾಚಾರಣೆಯೇ ಸಾಧನ ಕಾಣೆ ಭೋ!.

ಈ ಪ್ರಕಾರ ಕ್ರಿಯೆಯಿಂದ ಜ್ಞಾನದ ಹೆಚ್ಚುವಿಕೆಯು ಇರುತ್ತದೆ. ಅದರಿಂದಲೇ ಮನುಷ್ಯನ ವಿಕಾಸವು. ವೀರಶೈವನು ಪರಮಾತ್ಮನನ್ನು ಅರಿಯಬೇಕಾದರೆ ಜಗತ್ತನ್ನು ಬಿಟ್ಟು ಕೊಟ್ಟು ಏಕಾಂತವಾಸಿಯಾಗಿರುವದು ಅವಶ್ಯವಾಗಿರುವದಿಲ್ಲ. ಅವನು ಜಗತ್ತಿನಲ್ಲಿದ್ದು ಅಲ್ಲಿ ತನ್ನ ಕ್ರಿಯೆಗಳನ್ನು ಸರಿಯಾದ ರೀತಿಯಿಂದ ಮಾಡುತ್ತ ಹೋದರೆ ಪರಮಾರ್ಥವನ್ನು ಸಾಧಿಸಬಹುದು.

ಆದರೆ ಅವನು ತನ್ನ ಕ್ರಿಯೆಗಳನ್ನು ಕೇವಲ ಇಂದ್ರಿಯ ಸುಖಕ್ಕಾಗಿ ಮಾಡದೆ ಪಾರಮಾರ್ಥಿಕ ದೃಷ್ಟಿಯಿಂದ ಮಾಡುವದು ಅವಶ್ಯವು. ಹೀಗೆ ಮಾಡುವಲ್ಲಿ ಅವನು ಯಾವ ತರದ ಫಲ ಪದದ ಆಶೆಯನ್ನು ಮಾಡತಕ್ಕದ್ದಲ್ಲ. ಎಂದರೆ ತಾನು ಮಾಡುವ ಕ್ರಿಯೆಯಿಂದ ತನಗೆ ಏನಾದರೊಂದು ಫಲವು ಅಥವಾ ಲಾಭವು ದೊರಕೀತೆಂಬ ಉದ್ದೇಶದಿಂದ ಮಾಡತಕ್ಕದ್ದಲ್ಲ. ಅವನಲ್ಲಿ ಈ ಫಲಾಪೇಕ್ಷೆಯು ಇರಕೂಡದು. ಅವನು ಕಾಮ ರಹಿತನಾಗಿ

ವರ್ತಿಸತಕ್ಕದ್ದು. ಹೀಗೆ ಕ್ರಿಯೆಯನ್ನು ಮಾಡುವದೇ ಲಿಂಗಾಂಗಿಯ ಕರ್ತವ್ಯವು.

> ಫಲಪದದ ಆಶೆ ಮಾಡಲಾಗದು ನಿನ್ನ ಕ್ರಿಯೆಯಲ್ಲಿ. ಅದೇನು ಕಾರಣವೆಂದರೆ, ಬಯಕೆಯ ಭಕ್ತಿಯ ಪೂರ್ವ ಪುರಾತನರು ಮೆಚ್ಚರು. ನಮ್ಮ ಅಖಂಡೇಶ್ವರ ದೇವರು ಹಂಗಿನ ಭಕ್ತರನೊಲ್ಲ ನೋಡಾ.

> ಈ ಸತ್ಕ್ರಿಯೆಗೆ ಈ ಫಲ, ಈ ಪುಷ್ಪಕ್ಕೀ ಫಲ, ಎಂಬ ಕೈಕೂಲಿಕಾರರು ಅವರೆಲ್ಲ ಕರ್ಮಿಗಳಯ್ಯಾ. ಪುಣ್ಯಪಾಪವನುಂಬ ಕರ್ಮಿಗಳಯ್ಯಾ. ಸ್ವರ್ಗನರಕವನುಂಬ ಕರ್ಮಿಗಳಯ್ಯಾ. ಒಡಲ್ಗೊಡವೆ ಪಡೆದರ್ಥವ್ಯಡದೇವ ಸೊಡ್ಡಳನಿಗೆಂಬಾತ ಬೆಡಗಿನ ಶಿವಪುತ್ರ. ಉಳಿದವರೆಲ್ಲ ಜಗದ ಮಿತ್ರರು.

ಹೀಗೆ ವಚನಕಾರರು ಒಬ್ಬ ಭಕ್ತನು ನಿಷ್ಕಾಮಕರ್ಮದಿಂದ ಜಗತ್ತಿನಲ್ಲಿ ವ್ಯವಹರಿಸಬೇಕೆಂದು ನುಡಿದಿರುವರು. ಈ ಬಗೆಯ ಉಕ್ತಿಗಳನ್ನು ಶ್ರೀಕೃಷ್ಣನು ಅರ್ಜುನನಿಗೆ ಭಗವದ್ಗೀತೆಯಲ್ಲಿ ಬೋಧಿಸಿದ್ದನು ನಾವು ನೋಡುತ್ತೇವೆ. ಇದೇ ತತ್ವಗಳನ್ನು ವಚನಕಾರರು ತಮ್ಮ ವಿಶಿಷ್ಟ ಶಬ್ದಗಳಿಂದ ತಮ್ಮ ವಚನಗಳಲ್ಲಿಯೂ ನಿರೂಪಿಸಿರುವರು. ಹೀಗೆ ಲಿಂಗಾಂಗಿಯು ಲಿಂಗಾರ್ಪಣ ಭಾವದಿಂದ ತನ್ನ ಕ್ರಿಯೆಗಳನ್ನು ಮಾಡತಕ್ಕದ್ದು. ಲಿಂಗಾರ್ಪಣ ಭಾವನೆಂದರೆ ಕಾಮರಹಿತನಾಗಿ ತಾನು ಮಾಡುವ ಕ್ರಿಯೆಗಳನ್ನು ಶಿವನಿಗೋಸ್ಕರವೆಂದು ಭಾವಿಸಿ ಅದರಿಂದ ಬಂದದ್ದನ್ನು ಪ್ರಸಾದರೂಪವಾಗಿ ಸೇವಿಸುವದೇ ಇರುತ್ತದೆ. ಬಸವೇಶ್ವರನು ಒಂದೆಡೆಗೆ ಈ ಬಗ್ಗೆ ಅಂದಿರುವದೇನಂದರೆ,

> ಲಿಂಗಕ್ಕೆಂದೇ ನೆನೆವೆ, ಲಿಂಗಕ್ಕೆಂದೇ ಮಾಡುವೆ, ಲಿಂಗಕ್ಕೆಂದೇ ಕೂಡುವೆನು ನಾನಯ್ಯಾ. ಸಕಲ ಪದಾರ್ಥಂಗಳ ಲಿಂಗಕ್ಕೆಂದೇ ಭಾವಿಸುವೆ. ಅಂಗಗುಣಂಗಳನರಿಯೆನಯ್ಯಾ. ಲಿಂಗಕ್ಕೆಂದೇ ಕಾಮಿಸುವೆನು. ನಿಃಕಾಮಿಯಾಗಿ ಎನ್ನ ದೇಹೇಂದ್ರಿಯ ಮನ ಪ್ರಾಣಾದಿಗಳು ಲಿಂಗದ ಸತಿಯರಾಗಿ ಲಿಂಗಕ್ಕೆಂದೇ ಬಯಸಿ ಲಿಂಗಪ್ರಾಣಿಗಳಾದ ಕಾರಣ, ಲಿಂಗಕ್ಕೆಂದೇ ಕೈಕೊಂಬೆನು. ಅನರ್ಪಿತವನರಿಯೆ ಕೂಡಲಸಂಗಮದೇವಾ.

ಈ ದೃಷ್ಟಿಯಿಂದ ವೀರಶೈವನು ತನ್ನ ನಿತ್ಯದ ವ್ಯವಹಾರಗಳನ್ನು ಮಾಡತಕ್ಕದ್ದು. ಅವನು ಒಂದು ಉಪಜೀವನದ ಹೋರೆಯನ್ನು ಕೈಕೊಂಡು ಹೀಗೆಯೇ ಅವನು ಅದನ್ನು ನಿರ್ವಹಿಸತಕ್ಕದ್ದು. ಹೀಗೆ ತಾನು ಮಾಡಿದ್ದನ್ನೆಲ್ಲ ಪ್ರಸಾದರೂಪವಾಗಿ ಗ್ರಹಿಸಿದರೆ ಆ ಹೋರೆಯಿಂದ

ಅವನಿಗೆ ಹಾನಿಯು ಏನೂ ಆಗಲಾರದು. ಇಷ್ಟೇ ಅಲ್ಲ, ಅದು ಅವನ ಮೋಕ್ಷಕ್ಕೂ ಸಹಾಯಕಾರಿಯಾಗುವದು. ಹೀಗೆ ಒಂದು ಉದ್ಯೋಗ ವನ್ನು ಮಾಡುವದೇ ವಚನಕಾರರ ದೃಷ್ಟಿಯಿಂದ ಕಾಯಕವೆನಿಸಿಕೊ ಳ್ಳುವದು.

## ಕಾಯಕಗಳಲ್ಲಿ ಉಚ್ಚ ನೀಚ ತರಗತಿಗಳಿಲ್ಲ. ಎಲ್ಲವೂ ಶ್ರೇಷ್ಠವಾದವುಗಳು.

ಜಗತ್ತಿನಲ್ಲಿ ಉದ್ಯೋಗಗಳು ಅಥವಾ ಧಂದೆಗಳು ಅಸಂಖ್ಯವಾಗಿರು ತ್ತವೆ. ಆದರೆ ಒಬ್ಬ ಮನುಷ್ಯನು ಅವುಗಳಲ್ಲಿ ಯಾವದಾದರೊಂದನ್ನು ಗ್ರಹಿಸಿ ನಾವು ಮೇಲೆ ಹೇಳಿದ ಪ್ರಕಾರ ಅದನ್ನು ಕಾಯಕ ರೂಪದಿಂದ ಅವನು ಮಾಡಿದರೆ, ಅದು ಯಾವಾಗಲೂ ಶ್ರೇಷ್ಠವೆನಿಸಿಕೊಳ್ಳುವದು. ಆದ್ದರಿಂದ ಒಂದು ಉದ್ಯೋಗದ ಉಚ್ಚ ಅಥವಾ ನೀಚ ಸ್ಥಿತಿಯು ಅದು ಯಾವದು ಇವೆ, ಇವರ ಮೇಲೆ ಅವಲಂಬಿಸದೆ ಅದನ್ನು ಒಬ್ಬ ಮನುಷ್ಯನು ಯಾವ ಭಾವದಿಂದ ಮಾಡುತ್ತಾನೋ ಮತ್ತು ಅದನ್ನು ಹ್ಯಾಗೆ ಉಪ ಯೋಗಿಸುತ್ತಾನೋ ಇದರ ಮೇಲೆ ಅವಲಂಬಿಸಿರುತ್ತದೆ. ಈ ಬಗ್ಗೆ ಬಸ ವೇಶ್ವರನ ಒಂದು ಪ್ರಸಿದ್ಧವಾದ ವಚನವಿದೆ. ಅದು ಯಾವದೆಂದರೆ:--

> ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ ಎನ್ನೊಡಲಿಂಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದೊಡೆ, ಎನ್ನ ಮನಕ್ಕೆ ಮನವೇ ಸಾಕ್ಷಿ. ಶ್ಲೋಕ॥ ಅಶನೇಶಯನೇ ಯಾನೇ ಸಂಪರ್ಕೆ ಸಹ ಭೋಜನೇ। ಸಂಚ ರಂತಿ ಮಹಾ ಘೋರೆ ನರಕೆ ಕಾಲಮಕ್ಷಯಂ॥ ಎಂದುದಾಗಿ, ಈ ಶೃತಿಯು ಬಸವಣ್ಣನೋದುವನು. ಭವಿಯ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯ ಪ್ರಮಥರು. ಕೊಡು ವೆನುತ್ತರವನವರಿಗೆ. ಕೊಡಲಮ್ಮೆನು. ಹೊಲೆಹೊಲೆಯರ ಮನೆಯ ಹೊಕ್ಕಾದರೆಯೂ ಸಲೆ ಕೈಕೂಲಿಯ ಮಾಡಿಯಾದೊಡೆಯೂ, ನಿಮ್ಮ ನಿಲವಿಂಗೆ ಕುದಿವೆನಲ್ಲದೆ, ಎನ್ನೊಡಲವಸರಕ್ಕೆ ಕುದಿವೆನಾದಡೆ, ತಲೆ ದಂಡ ತಲೆದಂಡ ಕೂಡಲಸಂಗಮದೇವಯ್ಯ.

ಇದರಲ್ಲಿ ಬಸವೇಶ್ವರನು ಕಾಯಕವನ್ನು ಹ್ಯಾಗೆ ಮಾಡಬೇಕೆಂಬು ದನ್ನು ಬಹು ಚನ್ನಾಗಿ ವ್ಯಕ್ತಪಡಿಸಿದ್ದಾನೆ. ಒಬ್ಬ ಮನುಷ್ಯನು ಮಂತ್ರಿ ಪದದಂಥ ಮಹತ್ತರವಾದ ಪದವನ್ನು ಅಲಂಕರಿಸಿರಬಹುದು. ಅಥವಾ

ಹೊಲೆಯರ ಮನೆಯಲ್ಲಿ ಆಳಾಗಿ ದುಡಿಯುತ್ತಿರಬಹುದು. ಆದರೆ ಅವನು ಇದರಲ್ಲೆಲ್ಲ ಪರಮಾತ್ಮನ ನಿಲವನ್ನು ಎಂದರೆ ಸ್ವರೂಪನ್ನು ಹ್ಯಾಗೆ ಹೊಂದುವೆನೆಂದು ಹಾರೈಸುತ್ತಾ ಇದ್ದಿದ್ದಾದರೆ, ಅದು ಕಾಯಕಸ್ವರೂಪವಾಗುವದು.

ಹೀಗೆ ಕಾಯಕವೆಂದರೆ ಕೇವಲ ಉಪಜೀವನದ ಹೋರೆ ಮಾತ್ರವಲ್ಲ. ಅದರಲ್ಲಿ ಧಾರ್ಮಿಕ ಸ್ವರೂಪವೂ ಇರುತ್ತದೆ. ಅದೊಂದು ಪರಮಾತ್ಮನ ಸೇವೆ ಎಂತಲೂ ಭಾವಿಸಬಹುದು. ಆದ್ದರಿಂದ ಕಾಯಕಗಳಲ್ಲಿ ಭೇದವಿರಲಾರದು. ಎಲ್ಲವೂ ಅಷ್ಟೇ ಮಹತ್ವವಾದವುಗಳು. ಬಸವೇಶ್ವರನ ಕಾಲದಲ್ಲಿ ಒಕ್ಕಲುತನ, ಸಿಂಪಿಗ, ನೇಕಾರ, ಮಡಿವಳ, ನಾವಲಿಗ ಇಂಥ ಅನೇಕ ತರದ ಹೋರೆಗಳನ್ನು ಶಿವಶರಣರು ಮಾಡುತ್ತಿದ್ದದ್ದನ್ನು ನಾವು ನೋಡುತ್ತೇವೆ. ಆದರೆ ಅವರಲ್ಲಿ ನಿಚ್ಚೋಚ್ಚ ಭಾವಗಳು ಇದ್ದದ್ದು ಕಂಡುಬರುವದಿಲ್ಲ. ಯಾಕಂದರೆ, ಅವರು ತಮ್ಮ ಹೋರೆಗಳು ಕಾಯಕಗಳೆಂದು ತಿಳಿದು ಅವುಗಳನ್ನು ಹ್ಯಾಗೆ ಮಾಡತಕ್ಕದ್ದೋ ಹಾಗೆ ಮಾಡುತ್ತಿದ್ದದರಿಂದ, ಅವರಲ್ಲಿ ಹೆಚ್ಚು ಕಡಿಮೆ ಭಾವಗಳು ಉತ್ಪನ್ನವಾಗಲಿಲ್ಲ. ಬಸವೇಶ್ವರನ ಕಾಲದಲ್ಲಿದ್ದ ಸಿದ್ಧರಾಮೇಶ್ವರನು ತನ್ನ ಒಂದು ಉಕ್ತಿಯಲ್ಲಿ ಹೀಗೆ ಹೇಳಿರುತ್ತಾನೆ. ಏನಂದರೆ,

> ಬಲ್ಲಿದ ಬಾಣನ ಬಾಗಿಲ ಕಾಯುವವರು ಭೂತಗಳೇನಯ್ಯ?
> ಅಪ್ಪ ರೇವಣಸಿದ್ಧ ನೀರ ಹೊತ್ತನೆಂಬರು. ಅವನೇನು ಕೀಳನಯ್ಯ?
> ನಮ್ಮ ನೀರು ಹೊರುವವರು ಕೂಲಿಕಾರರೇನಯ್ಯ? 'ಸರ್ವೇಷಾಂ
> ಹೃದಿ ಸ್ಥಿತಶ್ಚಂದ್ರಮೌಳೀ' ಎಂಬಶೃತಿವಾಕ್ಯವನಂಬು, ನಂಬು, ಕಪಿಲ
> ಸಿದ್ಧ ಮಲ್ಲಿಕಾರ್ಜುನನ ಮುಂದೆ ಎಲೈ ಮನವೇ.

ಇದರ ಮೇಲಿಂದ ಶಿವನು ಬಾಣಾಸುರನ ಬಾಗಿಲ ಕಾಯ್ದನೆಂದು ಅವನ ದೇವತ್ವವೇನೂ ಹೋಗಲಿಲ್ಲ. ಅಥವಾ ರೇವಣಸಿದ್ಧೇಶ್ವರನು ನೀರು ಹೊತ್ತನೆಂದು ಅವನ ಮಹತ್ವವೇನೂ ಕಡಿಮೆಯಾಗಲಿಲ್ಲ ಎಂದು ಈ ವಚನಕಾರನು ಹೇಳಿದ್ದಾನೆ. ಆದ್ದರಿಂದ ವೀರಶೈವನಾದವನು ಯಾವ ಕಸಬನ್ನು ಮಾಡುತ್ತಿದ್ದರೂ ಅದರಿಂದ ಅವನಿಗೆ ಹೀನತೆಯು ಪ್ರಾಪ್ತವಾಗಲಾರದು.

ಆದರೆ ಸ್ಮೃತ್ಯಾದಿ ಗ್ರಂಥಗಳಲ್ಲಿ ಕಸಬುಗಳಿಗೆ ಈ ಪ್ರಕಾರ ಮಹತ್ವವು ಕೊಡಲ್ಪಟ್ಟಿಲ್ಲ. ಅವುಗಳು ಶೂದ್ರರ ಹೋರೆಗಳೆಂದು ತಿಳಿದು ಅವು ನಿರಾಕರಿಸಲ್ಪಟ್ಟವೆ. ಬ್ರಾಹ್ಮಣನು ಅವುಗಳನ್ನು ಮಾಡಬಾರನು. ಆದರೆ

ವೀರಶೈವರ ದೃಷ್ಟಿಯಿಂದ ಯಾವ ಕಸಬುಗಳೂ ಹೀಗೆ ಹೀನವಾದವುಗಳಲ್ಲ. ಯಾಕಂದರೆ ಅವುಗಳನ್ನು ಅವರು ಕಾಯಕಗಳೆಂದು ಭಾವಿಸಿ ಒಂದು ವಿಶಿಷ್ಟ ರೀತಿಯಿಂದ ಜರಗಿಸುತ್ತಾರೆ.

## ವೀರಶೈವನು ಕಾಯಕವಿಲ್ಲದೆ ಇರಕೂಡದು.

ವೀರಶೈವನು ಒಂದು ಕಾಯಕವನ್ನು ಅವಲಂಬಿಸಿಯೇ ತೀರಬೇಕು. ಹೀಗೆ ವಚನಕಾರರು ನಿರ್ಬಂಧವಾಗಿ ಹೇಳಿದ್ದಾರೆ. ಅವನು ಸೋಮಾರಿಯಾಗಿ ಪರಾವಲಂಬಿಯಾಗಿರಕೂಡದು. ಇದೇ ಬಸವಾದಿ ಪ್ರಮಥರ ಆಚರಣೆಯು. ಸೋಮಾರಿಯಾಗಿರುವವರನ್ನು ವಚನಕಾರರು ಬಹಳ ಹಳಿದಿರುತ್ತಾರೆ. ಒಬ್ಬ ವಚನಕಾರನು ಇಂಥವರ ಬಗ್ಗೆ ಅನ್ನುವದೇನಂದರೆ:—

> ಕಾಯಕಕಾರದೆ ವ್ಯೈಸೊಂಬತನದಿಂದ ಬೇರೆ ಕೂಳ ಗಳಿಸಲಾರದೆ ಹಸಿದಿಪ್ಪರಯ್ಯ. ಒಡಲು ಸೀರೆಯು ಗಳಿಸಲಾರದೆ ಕಚ್ಚುಟವ ಕಟ್ಟಿಕೊಂಡಿಪ್ಪರಯ್ಯ ಮಿಯಲು ಎಣ್ಣೆಯು ಗಳಿಸಲಾರದೆ ಮಂಡೆ ಬೋಳಾಗಿಪ್ಪರಯ್ಯ. ದಿಟದಿಂದ ಬಿಡಿಸಲರಿಯದೆ ಸಂಸಾರದ ಶಠೆಯನವಧರಿಸಿಕೊಂಡಿಪ್ಪವರಿಗೆ ನಾನಂಜುವೆನಯ್ಯ ಸಕಳೇಶ್ವರಾ.

ಆರದೆ = ಶಕ್ತನಾಗದೆ.; ವ್ಯೈಸೊಂಬತ್ತನ = ಶರೀರದ ಮಾಂದ್ಯ, ಆಲಸ್ಯ ಕಚ್ಚುಟ = ಲಂಗೋಟಿ; ಮಿಯು = ಸ್ನಾನ ಮಾಡು; ಅವಧರಿಸು = ಸ್ವೀಕರಿಸು

ಈ ಮೇರೆಗೆ ವೀರಶೈವನು ಭಿಕ್ಷಾಹಾರಿಯಾಗಿರದೆ ಒಂದು ಉದ್ಯೋಗವನ್ನು ಮಾಡಿ, ತನ್ನ ಉಪಜೀವನವನ್ನು ಸಾಗಿಸತಕ್ಕದ್ದು. ಇದೇ ಅವನ ಕರ್ತವ್ಯವು

ಶಂಕರ ದಾಸಿಮಯ್ಯನು ವೀರಶೈವ ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದಾನೆ ಈತನು ಮೊದಲು ಬ್ರಾಹ್ಮಣನು. ಅವನ ಹೆಸರು ಗಂಗಾಧರ ಭಟ್ಟ. ಆದರೆ ಅವನು ವೀರಶೈವನಾದಬಳಿಕ, ಅವನು ತನ್ನ ಗುರುವಿನ ಅಪ್ಪಣೆಯಿಂದ ಹೊಲಿಗೆಯ ಕಾಯಕವನ್ನು ಪ್ರಾರಂಭಿಸಿದನು. ಅಂದರೆ ಶಿಂಪಿಗನಾದನು. ಹೀಗೆ ಬಸವೇಶ್ವರನ ಕಾಲದಲ್ಲಿ ಎಲ್ಲ ಶಿವಶರಣರ ವೃತ್ತಾಂತವಿದೆ. ಅವರು ಮಾಡುವ ಕಾಯಕಗಳಿಂದ ಅವರಲ್ಲಿ ಯಾವ ಹೀನತೆಯೂ ಉಂಟಾಗಲಿಲ್ಲ. ನುಲಿಯ ಚಂದಯ್ಯನೆಂಬ

ವನು ನಾಲಿಯನ್ನು ತಂದು ಹಗ್ಗಗಳನ್ನು ಹೊಸೆದು ಅವುಗಳನ್ನು ಮಾರಿ ಜೀವಿಸುತ್ತಿದ್ದನು. ಒಂದು ದಿವಸ ಬಸವೇಶ್ವರನು ಅವನ ಬಡತನ ಸ್ಥಿತಿಯನ್ನು ಕಂಡು, ಕನಿಕರಪಟ್ಟು, ಅವನ ಮನೆಗೆ ಹೋಗಿ, ಚಂದಯ್ಯನ ಹೆಂಡಿತಿಯ ಕಯ್ಯಲ್ಲಿ ಬಹಳ ದ್ರವ್ಯವನ್ನು ಕೊಟ್ಟು ಬಂದನು. ಚಂದಯ್ಯನು ಮನೆಗೆ ಬಂದಬಳಿಕ ನಡೆದ ಸಂಗತಿಯನ್ನು ತಿಳಿದು ಸಿಟ್ಟಿನಿಂದ ಆ ದ್ರವ್ಯವನ್ನು ತಿಪ್ಪೆಗೆ ಒಗಿಸಿದನು. ಯಾಕಂದರೆ ಆ ದ್ರವ್ಯವು ತನ್ನ ಕಾಯಕದಿಂದ ಬಂದುದಾಗಿರಲಿಲ್ಲ. ಅದು ಎರಡನೆಯವರಿಂದ ಗಳಿಸದೆ ಬಂದುದಾಗಿತ್ತು. ಇಂಥದು ಶಿವಾರ್ಪಣಕ್ಕೆ ಸಲ್ಲದು ಎಂದು ಅದನ್ನು ಅವನು ನಿರಾಕರಿಸಿ ಬಿಟ್ಟನು. ಹೀಗೆ ಕಾಯಕವು ಮನುಷ್ಯನಿಗೆ ಅತ್ಯಾವಶ್ಯಕವಾಗಿದೆ. ಬಸವೇಶ್ವರನು ಒಂದೆಡೆಯಲ್ಲಿ ಹೇಳಿರುವದೇನೆಂದರೆ:—

ಭಕ್ತಿ ವಿಶೇಷವ ಮಾಡುವರೆ, ಹತ್ತು ಬೆರಳುಂಟು. ಹಾಸಿ ದುಡಿದರೆ, ತನಗುಂಟು, ತನ್ನ ಪ್ರಮಥರಿಗುಂಟು. ಮಾರಿ ತಂದೆಗಳಂತೆ ಎನಗೇಕಹುದಯ್ಯ? ರತ್ನದ ಸಂಕೊಲೆಯನಿಕ್ಕಿ ಕಾಡಿಹ ಕೂಡಲಸಂಗಮದೇವ, ಶಿವಧೋ.

ಹೀಗೆ ದುಡಿದು ಗಳಿಸಿದ್ದೇ ಶಿವಾರ್ಪಣಕ್ಕೆ ಸಲ್ಲುವದು. ಅದೇ ಪ್ರಸಾದವು. ಅದರಿಂದಲೇ ತಾನೂ ಹೆರವರೂ ಧನ್ಯರಾಗುವರು ಎಲ್ಲಿಂದಲೋ ಬಂದ ಶ್ರೀಮಂತಿಕೆಯಿಂದ ಇದು ಆಗದು ಎಂಬ ಅಭಿಪ್ರಾಯವನ್ನು ಬಸವೇಶ್ವರನು ಈ ವಚನದಲ್ಲಿ ವ್ಯಕ್ತಪಡಿಸಿದ್ದಾನೆ.

## ಕಾಯಕಗಳಿಂದ ಪರಮಾತ್ಮನ ಪೂಜೆ.

ಆದ್ದರಿಂದ ವಚನಕಾರರು ಕಾಯಕಗಳೆಂದರೆ ಪರಮಾತ್ಮನ ಒಂದು ಬಗೆಯ ಪೂಜೆ ಎಂದು ಭಾವಿಸಿ ಅದನ್ನು ವರ್ಣಿಸುತ್ತಾರೆ. ಪೂಜೆ ಎಂದರೆ ದಿನಾಲು ನಿಯಮಿತ ವೇಳೆಗೆ ಷೋಡಶೋಪಚಾರಾದಿ ವಿಧಿಗಳನ್ನು ಮಾಡುತ್ತ ತಾಸುಗಟ್ಟಲೆ ಕೂಡ್ರುವದು ಮಾತ್ರವಲ್ಲ. ಹೀಗೆ ಅನೇಕರು ದಿನಾಲು ಪೂಜೆಯನ್ನು ಮಾಡಿ ತಮ್ಮ ನಿತ್ಯದ ಹೋರೆಗಳಲ್ಲಿ ಅಧರ್ಮದಿಂದ ಆಚರಿಸುವದುಂಟು. ಆದರೆ ಈ ನಿತ್ಯದ ಹೋರೆಗಳಲ್ಲಿ ಸಹ ಒಂದು ಬಗೆಯ ದೇವರ ಪೂಜೆ ಇರುತ್ತದೆಂಬದನ್ನು ಅವರು ಅರಿಯರು. ಈ ಪೂಜೆಯ ತರವನ್ನು ವೀರಶೈವ ವಚನಕಾರರು ಕಂಡು ಹಿಡಿದು

ಆದರಂತೆ ಆಚರಿಸಬೇಕೆಂದು ತಮ್ಮ ವಚನಗಳಲ್ಲಿ ಬೋಧಿಸಿದ್ದಾರೆ. ಈ ಪೂಜೆಗೆ ಅವರು ಅತ್ಯಂತ ಮಹತ್ವ ಕೊಟ್ಟಿದ್ದಾರೆ. ಈ ಬಗ್ಗೆ ಒಬ್ಬ ವಚನಕಾರನು ಅನ್ನುವದೇನೆಂದರೆ:—

> ಕಾಯಕದಲ್ಲಿ ನಿರತನಾದೊಡೆ ಗುರು ದರ್ಶನವಾದಡೂ ಮರೆಯಬೇಕು, ಲಿಂಗಪೂಜೆಯಾದಡೂ ಮರೆಯಬೇಕು, ಜಂಗಮ ಮುಂದಿದ್ದಡೂ ಹಂಗು ಹರಿಯಬೇಕು, ಕಾಯಕವೇ ಕೈಲಾಸವಾದ ಕಾರಣ. ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು.

ಎಂದು ನುಡಿದಿದ್ದಾನೆ. ಇದರಲ್ಲಿ ಕಾಯಕವನ್ನು ಈ ವಚನಕಾರನು ಕೈಲಾಸವೆಂದು ಕರೆದಿದ್ದಾನೆ! ಸಾಮಾನ್ಯ ಹೋರೆಗಳಿಗೆ ವಚನಕಾರರು ಎಂಥ ಉಚ್ಚ ಸ್ವರೂಪವನ್ನು ಕೊಟ್ಟಿರುವರೆಂಬುದನ್ನು ವಾಚಕರು ಚನ್ನಾಗಿ ವಿಚಾರ ಮಾಡತಕ್ಕದ್ದು.

## ಕಾಯಕಗಳನ್ನು ಶುದ್ಧತೆಯಿಂದ ಮಾಡತಕ್ಕದ್ದು.

ಕಾಯಕವು ಇಷ್ಟು ಮಹತ್ವವಾದ ಬಳಿಕ ಅದನ್ನು ಎಲ್ಲರೂ ಅತ್ಯಂತ ಶುದ್ಧತೆಯಿಂದ ನಿರ್ವಹಿಸತಕ್ಕದ್ದೆಂಬದು ಸ್ಪಷ್ಟವು. ವೀರಶೈವನು ತನ್ನ ಹೋರೆಯಲ್ಲಿ ಅಧರ್ಮತನದಿಂದ ಎಂದೂ ವರ್ತಿಸತಕ್ಕದ್ದಲ್ಲ. ಇದು ಅರ್ಪಣಕ್ಕೆಯೋಗ್ಯವಾಗಲಾರದು. ಅವನು ಅದನ್ನು ಸತ್ಯತೆಯಿಂದಲೂ ಪ್ರಾಮಾಣಿಕತನದಿಂದಲೂ ಅಹಿಂಸೆಯಿಂದಲೂ ಜರಗಿಸತಕ್ಕದ್ದು. ಇದೇ ಅವನ ಕರ್ತವ್ಯವು. ಈ ಬಗ್ಗೆ ವಚನಕಾರರು ಅನ್ನುವದೇನಂದರೆ:—

> ಸತ್ಯ ಶುದ್ಧ ಕಾಯಕದಲ್ಲಿ ಚಿತ್ತಸ್ವಚ್ಛಂದವಾಗದಿರಬೇಕು. ನೇಮದ ಕೂಲಿಯಿಂದಿನ ನಿತ್ಯಕಾಯಕದಲ್ಲಿ ಸಂದಿರಬೇಕು. ನೇಮದಕೂಲಿಯ ಬಿಟ್ಟು, ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯ. ಈ ನಿನ್ನ ಸೇವೆ ನನಗೆ ನನ್ನ ಪ್ರಸಾದಕ್ಕೆ ಚಂಡೇಶ್ವರ ಲಿಂಗಕ್ಕೆ ಪ್ರಾಣವಯ್ಯ.

> ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ, ಚಿತ್ತ ಶುದ್ಧನಾಗಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯ ಪ್ರಿಯ ಅಮರೇಶ್ವರ ಲಿಂಗದ ಸೇವೆಯುಳ್ಳನ್ನಕ್ಕರ.

ಈ ಮೇರೆಗೆ ಮನುಸ್ಯನು ತನ್ನ ಕಾಯಕಗಳನ್ನು ಅತ್ಯಂತ ಚಿತ್ತ ಶುದ್ಧತೆಯಿಂದ ಮಾಡತಕ್ಕದ್ದು. ಅಂದರೆ ಅವನಿಗೆ ಲಕ್ಷ್ಮಿಯು ತಾನಾಗಿ ಒಲಿಯುವಳೆಂದು ಇಲ್ಲಿ ಹೇಳಲ್ಪಟ್ಟಿದೆ.

ಹೀಗೆ (ಬಸವಾದಿ ಪ್ರಮಥರು ಉಪಜೀವನದ ಹೋರಿಗೆಳಿಗೆ ಬಹು ಉದಾತ್ತ ಧಾರ್ಮಿಕ ಸ್ವರೂಪನ್ನು ಕೊಟ್ಟಿರುವರು. ಇದರಿಂದ ವೀರಶೈವನು ತನ್ನ ನಿತ್ಯಾಚರಣೆಯಲ್ಲಿ ಅತ್ಯಂತ ಶ್ರೇಷ್ಠತರವಾದ ವರ್ತನೆಯನ್ನು ತಲೆದೋರಿಸುವದು ಅವಶ್ಯವು. ಕಾರಣ ಅವನು ಯಾವಾಗಲೂ ಉದ್ಯೋಗಿಯಾಗಿರತಕ್ಕದ್ದು, ದುಡಿದು ಗಳಿಸತಕ್ಕದ್ದು, ಪರಾವಲಂಬಿಯಾಗಿರಕೂಡದು, ದೊರಕಿದ್ದನ್ನು ಶಿವಾರ್ಪಣ ಬುದ್ಧಿಯಿಂದ ವಿನಿಯೋಗಿಸತಕ್ಕದ್ದು, ಸತ್ಯ ಸಂಧನಾಗಿಯೂ ಶುದ್ಧನಾಗಿಯೂ ಆಚರಿಸತಕ್ಕದ್ದು, ಹೀಗೆ ಆಚರಿಸಿ ಗಳಿಸಿದ್ದನ್ನು ಪ್ರಸಾದ ರೂಪವಾಗಿ ಅನುಭವಿಸತಕ್ಕದ್ದು, ಹೀಗೆ ವರ್ತಿಸುವದೇ ಅವನ ಕರ್ತವ್ಯವು ಹೀಗೆಯೇ ಅವನು ತನ್ನ ಕಸಬುಗಳನ್ನು ಮಾಡತಕ್ಕದ್ದು. ಇದೇ ಕಾಯಕವು.)

ಈ ಪ್ರಕಾರ ಕಸಬುಗಳ ಬಗ್ಗೆ ಹಿಂದುಸ್ತಾನದ ಬೇರೆ ಯಾವ ಧರ್ಮದಲ್ಲಿಯೂ ವಿವೇಚಿಸಿದಂತೆ ತೋರಿ ಬರುವದಿಲ್ಲ. ಸಂಸಾರವು ನಿಸ್ಸಾರವು, ತ್ಯಾಜ್ಯವು ಎಂಬಿವೇ ವಿಚಾರಗಳು ಮಾತ್ರ ಅವುಗಳಲ್ಲಿ ಪ್ರಕಟವಾಗಿವೆ. ಇದರಿಂದ ಆ ಧರ್ಮಗಳು ಅವ್ಯವಹಾರ್ಯವಾಗಿರುತ್ತವೆ. ಅಂದರೆ ಧರ್ಮಕ್ಕೂ ವ್ಯವಹಾರಕ್ಕೂ ಸಂಬಂಧವು ಉಳಿದಿರುವದಿಲ್ಲ. ಆದರೆ ವೀರಶೈವ ಧರ್ಮದ ಸ್ವರೂಪು ಹೀಗೆ ಆಗಿರುವದಿಲ್ಲ. ಅದು ಒಂದು ವ್ಯವಹಾರಿಕ ಧರ್ಮವಾಗಿದೆ. ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಿದರೆ ಕಾಯಕದ ಸಂಬಂಧವಾಗಿದ್ದ ವಚನಕಾರರ ವಿಚಾರಗಳು ಬೇರೆ ಹಿಂದೂ ಮತಗಳಲ್ಲಿ ಇಲ್ಲವೆಂತಲ್ಲ. ಉದಾಹರಣಾರ್ಥವಾಗಿ ಭಗವದ್ಗೀತೆಯಲ್ಲಿ ಬಹುಸುಂದರವಾಗಿ ಇವು ವಿವೇಚಿಸಲ್ಪಟ್ಟಿವೆ. ಆದರೆ ಇಂಥ ತತ್ವಗಳನ್ನು ವ್ಯವಹಾರದಲ್ಲಿ ಸಾರ್ವತ್ರಿಕವಾಗಿ ತರಲು ಪ್ರಯತ್ನಿಸಿದ ಧರ್ಮಗಳು ಹಿಂದೀ ದೇಶದಲ್ಲಿ ಬಹು ಸ್ವಲ್ಪ ಇರುತ್ತವೆ. ಹೀಗೆ ಪ್ರಯತ್ನಿಸಿದವುಗಳಲ್ಲಿ ವೀರಶೈವ ಧರ್ಮಕ್ಕೆ ನಾವು ಅಗ್ರಸ್ಥಾನವನ್ನು ಕೊಡಬಹುದು. ವೀರಶೈವ ಧರ್ಮ ಪ್ರವರ್ತಕರು, ಅವರಲ್ಲಿ ವಿಶೇಷವಾಗಿ ಬಸವಾದಿ ವಚನಕಾರರು ಅನೇಕ ಕ್ರಾಂತಿಕಾರಕವಾದ ಸಾಮಾಜಿಕ ಸುಧಾರಣೆಗಳನ್ನು ಮಾಡಿದರು. ಅವು

ಗಳಲ್ಲಿ ಇವರು ಕಸಬುಗಳಿಗೆ ಕೊಟ್ಟ ಸ್ವರೂಪವು ಅತ್ಯಂತ ಮಹತ್ವದ್ದಿರುತ್ತದೆ. ಇದರಿಂದ ವೀರಶೈವ ಸಮಾಜದ ಮೇಲೆ ಕೆಲವು ವಿಶೇಷ ತರದ ಪರಿಣಾಮಗಳುಂಟಾದವು.

## ಸಮಾಜದ ಮೇಲೆ ಕಾಯಕದ ಪರಿಣಾಮಗಳು.

(ಕಾಯಕದ ಈ ವಿಚಾರಗಳಿಂದ ವೀರಶೈವ ಸಮಾಜವು ಉದ್ಯೋಗೀ ಸಮಾಜವಾಯಿತು. ಪೂರ್ವಕಾಲದಲ್ಲಿ ಕರ್ನಾಟಕವು ಧನ ಕನಕದಿಂದ ತುಂಬಿಕೊಂಡು ಶ್ರೀಮಂತಿಕೆಯಲ್ಲಿ ಹೆಸರಾಗಿತ್ತು. ಈ ಸ್ಥಿತಿಯು ಒದಗಬೇಕಾದರೆ ವೀರಶೈವರು, ಅವರಲ್ಲಿ ವಿಶೇಷವಾಗಿ ಬಸವಾದಿ ಪ್ರಮಥರು ಕಾಯಕಗಳಿಗೆ ಮಹತ್ವದ ಸ್ಥಾನವನ್ನು ಕೊಟ್ಟದ್ದೇ ಕಾರಣವೆಂದು, ಹೇಳಬಹುದು. ಅವರ ದೃಷ್ಟಿಯಿಂದ ಜಂಗಮರು ಸಹ ಕಾಯಕಗಳನ್ನು ಮಾಡತಕ್ಕದ್ದು. ಹೀಗೆ ಅವರ ವಾಕ್ಯಗಳಿವೆ. ಆದ್ದರಿಂದ ಜಂಗಮರು ವ್ಯಾಪಾರ, ಒಕ್ಕಲುತನ ಮಾಡಿದ್ದಾದರೆ ಅವರಿಗೆ ಯಾವ ಹೀನತೆಯೂ ಉಂಟಾಗಲಾರದು. ಆದರೆ ಬ್ರಾಹ್ಮಣರು ಈ ಬಗೆಯಾಗಿ ಕಸಬುಗಳನ್ನು ಕೈಕೊಂಡರೆ ಅವರ ಬ್ರಾಹ್ಮಣ್ಯವು ಹೋಗುತ್ತದೆ. ಹೀಗೆ ಸ್ಮೃತ್ಯಾದಿ ಗ್ರಂಥಗಳಲ್ಲಿ ಉಕ್ತಿಗಳು ಇವೆ. ಆದ್ದರಿಂದ ವೀರಶೈವ ಸಮಾಜದಲ್ಲಿ ಜಂಗಮರು ನಾನಾ ಬಗೆಯ ಉದ್ಯೋಗಗಳನ್ನು ಮಾಡುವದನ್ನು ನೋಡುತ್ತೇವೆ. ಬ್ರಾಹ್ಮಣರಂತೆ ಜಂಗಮರು ಒಂದು ಭಿಕ್ಷುಕ ವರ್ಗವಲ್ಲ.) ಹೀಗೆ ಬಸವಾದಿ ಪ್ರಮಥರು ಕಸಬುಗಳಿಗೆ ಧಾರ್ಮಿಕ ಸ್ವರೂಪ ಕೊಟ್ಟದ್ದರಿಂದ, ಸಮಾಜದಲ್ಲಿ ಇನ್ನೊಂದು ಮಹತ್ವದ ಪರಿಣಾಮವಾದದ್ದು ಆವುದೆಂದರೆ, ಒಬ್ಬ ಮನುಷ್ಯನು ಯಾವ ಕಸಬು ಮಾಡುತ್ತಿದ್ದರೂ ಅವನು ವೀರಶೈವ ಸಮಾಜವನ್ನು ಸೇರಲಿಕ್ಕೆ ಅನುವಾಯಿತು. ಹೀಗೆ ಕಾಯಕಗಳು ಜಾತಿ-ಭೇದವನ್ನು ಅಳಿಸಿದವು. ಒಬ್ಬ ಮನುಷ್ಯನು ಎಂಥ ಉದ್ಯೋಗ ಮಾಡುತ್ತಿದ್ದರೂ ಆ ಮೂಲಕ ಅವನು ಹೀನನೆಂದು ತಿಳಿಯಲು, ಆಸ್ಪದವಿಲ್ಲವಾಯಿತು. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಒಬ್ಬನು ಹೊಲೆಯ, ಬೇಡ, ಬ್ರಾಹ್ಮಣ, ಜೈನ ಯಾವನಿದ್ದರೂ ಅವನ ಉದ್ಯೋಗದ ಮೂಲಕ ಅವನು ಹೀನ ಕುಲದವನೆಂದು ಭಾವಿಸುವದು ಅಶಕ್ಯವಾಯಿತು.

## ಕಾಯಕಗಳ ಬಗ್ಗೆ ಇರುವ ಒಂದು ತಪ್ಪು ತಿಳುವಳಿಕೆ.

ಎಷ್ಟೋ ಜನರು ವೀರಶೈವ ಸಮಾಜದಲ್ಲಿ ಅನೇಕ ಕಸಬುದಾರರಿರುವದನ್ನು ನೋಡಿ, ಇದರ ಉದ್ದೇಶವು ಎರಡನೇ ಸಮಾಜದವರ ಸಂಬಂಧವಿಡದೆ, ತಾವಾಗಿಯೇ ಇರತಕ್ಕದ್ದು, ಭವಿಗಳ ಸಂಬಂಧವಿರಬಾರದು ಎಂದು ತಿಳಿದು ಶಿವಶರಣರು ಈ ಕಾಯಕಗಳನ್ನು ನಿರ್ಮಿಸಿದರು ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಇದು ತೀರ ತಪ್ಪು ಇರುತ್ತದೆ. ಹೀಗೆ ಇತರ ಸಮಾಜದವರ ಸಂಬಂಧವಿಡದೆ ವೀರಶೈವರು ವ್ಯವಹರಿಸುವದು ಹೇಗೆ? ಸ್ವತಃ ಬಸವೇಶ್ವರರು ಒಬ್ಬ ಭವಿಯು ಸೇವೆ ಮಾಡುತ್ತಿರಲಿಲ್ಲವೇ? ಆದ್ದರಿಂದ ಇದು ಕೇವಲ ದ್ವೇಷದ ಮಾತು. ಬಸವಾದಿ ಪ್ರಮಥರಲ್ಲಿ ಈ ತೆರದ ವಿಚಾರಗಳು ಎಂದೂ ಇರಲಿಲ್ಲ. ಆದರೆ ನಾನು ಮೇಲೆ ವಿವರಿಸಿದಂತೆ ಕಾಯಕಗಳ ಬಗ್ಗೆ ಅವರ ವಿಚಾರಗಳು ತೀರ ಬೇರೆಯಾಗಿವೆ.

## ಕಾಯಕಗಳ ಉದಾಹರಣೆಗಳು.

ಇನ್ನು ಮೇಲೆ ವಚನಕಾರರ ದೃಷ್ಟಿಯಿಂದ ಯಾವ ಯಾವ ಉದ್ಯೋಗಗಳು ಯುಕ್ತವಾದ ಕಾಯಕಗಳು ಎಂಬದನ್ನು ನಾನು ಇಲ್ಲಿ ಸ್ವಲ್ಪದರಲ್ಲಿ ವಿವೇಚಿಸಲು ಯತ್ನಿಸುತ್ತೇನೆ. ಇದರಿಂದ ಕಾಯಕಗಳ ಸ್ವರೂಪವು ವಾಚಕರ ಮನಸ್ಸಿನಲ್ಲಿ ಸ್ಪಷ್ಟವಾಗಿ ಬಿಂಬಿಸಬಹುದು.

**ಕೈಗಾರಿಕೆಗಳು**:— ಇವುಗಳಲ್ಲಿ ಒಕ್ಕಲುತನ, ನೇಕಾರಿಕೆ, ಹೊಲಿಯುವದು, ಬಣ್ಣಗಾರಿಕೆ, ಕುಂಬಾರಿಕೆ, ಮಡಿವಳ, ಕ್ಷೌರ, ಸಮ್ಮಗಾರಿಕೆ, ಇವೇ ಮೊದಲಾದ ನಾನಾಬಗೆಯ ಉದ್ಯೋಗಗಳು ಬರುತ್ತವೆ. ಬ್ರಾಹ್ಮಣರ ಗ್ರಂಥಗಳ ಪ್ರಕಾರ ಇವೆಲ್ಲ ಶೂದ್ರ ಅಥವಾ ವೈಶ್ಯರ ಕರ್ಮಗಳು. ಆದ್ದರಿಂದ ಅವು ಹೀನ ಉದ್ಯೋಗಗಳೆಂದು ಅವರು ಭಾವಿಸಿದ್ದಾರೆ. ಆದರೆ ಕಾಯಕದ ದೃಷ್ಟಿಯಿಂದ ಇವು ಉತ್ಕೃಷ್ಟ ಕಸಬುಗಳು, ಯಾಕಂದರೆ ಇವುಗಳಲ್ಲಿ ಒಬ್ಬ ಮನುಷ್ಯನು ದುಡಿದು ಗಳಿಸಬೇಕಾಗುತ್ತದೆ. ಪರಾಧೀನತೆ ಇಲ್ಲ. ಅಧರ್ಮಕ್ಕೆ ಇಂಬು ಕಡಿಮೆ. ಆದ್ದರಿಂದ ಶಿವಶರಣರು ಇಂಥ ಕೈಗಾರಿಕೆಗಳನ್ನೇ ಅವಲಂಬಿಸಿದರು. ವಿಚಾರ ಮಾಡಿ ನೋಡಿದರೆ ಒಕ್ಕಲುತನ ಮತ್ತು ಇಂಥ ಕಲಾ ಕೌಶಲ್ಯಗಳ ಮೇಲೆಯೇ ಸಮಾಜದ ಅಭಿವೃದ್ಧಿಯು ಇದೆ. ಆದ್ದರಿಂದ ಇವು ಶ್ರೇಷ್ಠವಾದ ಕಾಯಕಗಳೆಂದು ನಾವು ಹೇಳಬಹುದು.

**ವ್ಯಾಪಾರ:**—ಶ್ರಮಪಟ್ಟು ಅದಕ್ಕೆ ತಕ್ಕಷ್ಟು ಲಾಭ ಪಡೆದರೆ ಮಾತ್ರ ಕಾಯಕವು. ಈ ಉದ್ಯೋಗದಲ್ಲಿ ಅಲ್ಪಶ್ರಮ ಮಾಡಿ ಕುಯುಕ್ತಿಯಿಂದ ಬಹಳ ಹಣ ಗಳಿಸಬಹುದು. ಹೀಗೆ ಮಾಡಿದರೆ ಅದು ಕಾಯಕವೆನಿಸಿಕೊಳ್ಳಲಾರದು. ಅದು ಠಕ್ಕತನವು. ಆದ್ದರಿಂದ ವಚನಕಾರರಲ್ಲಿ ಅನೇಕರು, ಉದಾ:-ಬಸವೇಶ್ವರ ಮುಡಿವಾಳ ಮಾಚಿದೇವ ಮೊದಲಾದವರು ಬಹಳ ಕಡೆಗೆ ವ್ಯಾಪಾರಸ್ಥರನ್ನು ಬಹಳ ಹೀಯಾಳಿಸಿದ್ದಾರೆ.

**ದೊಡ್ಡ ಜಮೀನುದಾರರು:**—ಸ್ವತಃ ಹೊಲಗಸ್ತ ಮಾಡಿ ಬೆಳೆಯನ್ನು ಬೆಳೆದು ಶ್ರಮಪಟ್ಟದ್ದಷ್ಟೇ ಕಾಯಕವು. ಆದರೆ ರೈತರಿಂದ ಆಯಾಸವಿಲ್ಲದೆ ಬಂದ ಕಂದಾಯದ ಹಣವು ಕಾಯಕದಿಂದ ಬಂದುದಲ್ಲ. ಆದ್ದರಿಂದ ಯಾವ ಇನಾಮುದಾರರು ಅಥವಾ ಜಮೀನುದಾರರು ಕಷ್ಟಪಡದೆ ರೈತರಿಂದ ಬಂದ ಹಣದ ಮೇಲೆ ಉಪಜೀವಿಸಿ ತಮ್ಮ ಅಂಗ ಸೌಕರ್ಯಕ್ಕೂ ವೈಭವಕ್ಕೂ ಉಳಿದದ್ದನ್ನು ವೆಚ್ಚ ಮಾಡುವರೋ ಅವರು ಕಾಯಕವಂತರೆಂದು ಹೇಳಲಿಕ್ಕೆ ಬರಲಾರದು. ಅವರು ಪರೋಪಜೀವಿಗಳು.

**ರಾಜ್ಯ ಕಾರಭಾರ ಮತ್ತು ಸರಕಾರೀ ನೌಕರಿ:**—ಇದು ಜನಸೇವೆಯಲ್ಲಿ ಪರಿಣಮಿಸುತ್ತಿದ್ದರೆ ಕಾಯಕವೆನ್ನಿಸಿಕೊಳ್ಳುವದು. ಇಲ್ಲದಿದ್ದರೆ ಜುಲುಮೆಯೇ ಸರಿ.

**ಮಠಾಧಿಕಾರಿಗಳು:**—ಸಮಾಜೋದ್ಧರಣ ಕಾರ್ಯದಲ್ಲಿ ತೊಡಗಿ, ಅವಕ್ಕೆ ಪ್ರತಿಫಲವಾಗಿ ತಮ್ಮ ಉಂಬಳಿಯನ್ನು ಅನುಭವಿಸುತ್ತಿದ್ದರೆ ಕಾಯಕವು. ಇಲ್ಲದಿದ್ದರೆ, ಇದು ಕೇವಲ ಒಕ್ಕಲುತನದ ಕಾಯಕ. ಮಠದ ಕಾಯಕವಾಗಲಾರದು.

**ಫಂಡು ಕೂಡಿಸುವದು:**—ಜನಸೇವೆಗಾಗಿ ದುಡಿಯುತ್ತಿದ್ದರೆ, ಕಾಯಕವು, ಇಲ್ಲದಿದ್ದರೆ ಭಿಕ್ಷೆಯು.

**ಬಡ್ಡಿ ವ್ಯವಹಾರ:**—ಕಾಯಕವಾಗಲಾರದು. ಇದರಲ್ಲಿ ಯಾವ ದುಡಿಕೆಯು ಇಲ್ಲ. ಎಷ್ಟೋ ಕಡೆಗೆ ವಚನಕಾರರು ಇದನ್ನು ತಿರಸ್ಕರಿಸಿದ್ದಾರೆ. ಇದು ಕೇವಲ ಸೋಮಾರಿತನವು.

**ದೊಡ್ಡ ಕಾರಖಾನೆದಾರರು:**—ತಾವು ಶ್ರಮಪಟ್ಟು ಸಂಬಳ ದೊರಕಿಸಿದ್ದಷ್ಟೆ ಕಾಯಕವು. ಆದರೆ ಬಹಳ ಹಣ ಕೂಡಿಸಿ ದೊಡ್ಡ ಕಾರಖಾನೆಗಳನ್ನು ನಿರ್ಮಿಸಿ ಅಸಂಖ್ಯ ಜನರನ್ನು ಆರ್ಥಿಕ ಗುಲಾಮ

ಗಿರಿಗೆ ಗುರಿ ಮಾಡಿ ಬಂದದ್ದನ್ನು ತಮ್ಮ ವೈಭವಕ್ಕೆ ವೆಚ್ಚ ಮಾಡು ವಂಥಾದ್ದು ಕಾಯಕವಾಗಲಾರದು. ಅದು ಅಧರ್ಮವು.

ಈ ಮೇರೆಗೆ ವಾಚಕರು ಬೇರೆ ಬೇರೆ ಕಾಯಕಗಳ ಬಗ್ಗೆ ತಾವೇ ವಿಚಾರ ಮಾಡಬೇಕು. ಒಟ್ಟಿಗೆ ಕಾಯಕದ ಅರ್ಥವು ತಾನು ದುಡಿದು ಸಂಪಾದಿಸಿ ಅದನ್ನು ಶಿವಾರ್ಪಣ ಭಾವದಿಂದ ಭೋಗಿಸುವದೇ ಇರು ತ್ತದೆ. ದುಡಿಯದೇ ಬಂದದ್ದು ಮತ್ತು ಅಧರ್ಮದಿಂದ ಗಳಿಸಿದ್ದು ಕಾಯು ಕವಾಗಲಾರದು. ಯಾವ ಕಾಯಕಗಳಿಂದ ಒಬ್ಬ ಮನುಷ್ಯನು ಪರೋಪ ಜೀವಿಯಾಗಿರದೆ ಸ್ವತಂತ್ರನಾಗಿರಲು ಶಕ್ಯವಾದದ್ದೋ ಅದೇ ಶ್ರೇಷ್ಠತರ ವಾದದ್ದು.

## ಕಾಯಕಗಳ ಈಗಿನ ಸ್ವರೂಪ.

ಬಸವಾದಿ ಪ್ರಮಥರ ದೃಷ್ಟಿಯಿಂದ ಕಾಯಕಗಳ ನಿಜವಾದ ಅರ್ಥವು ಈ ಪ್ರಕಾರ ಇರುತ್ತದೆ. ಹೀಗಿದ್ದರೂ ಈ ಕಾಲಕ್ಕೆ ಈ ಶಬ್ದಕ್ಕೆ ವಿಪರೀತ ಅರ್ಥವು ಒದಗಿದ್ದು ಸಖೇದಾಶ್ಚರ್ಯವನ್ನುಂಟು ಮಾಡುತ್ತದೆ. ಈಗಿನ ಕಾಯಕದ ಅಯ್ಯಗಳನ್ನು ಕಾಯಕದ ಅರ್ಥವೇನೆಂದು ಕೇಳಿದರೆ ಬಸ ವೇಶ್ವರನು ಕಲ್ಯಾಣವನ್ನು ಬಿಟ್ಟುಕೊಟ್ಟು ಹೋಗುವ ಸಮಯಕ್ಕೆ ಅವನ ಹತ್ತರ ವಿದ್ದ ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮರು ತಮ್ಮ ಅಶ ನಕ್ಕೆ ತೊಂದರೆಯು ಬರಲಾಗಿ, ಅವರು ತಮ್ಮ ಗತಿ ಏನೆಂದು ಬಸವೇ ಶ್ವರನಿಗೆ ಕೇಳಲು, ಅವನು ಅವರಿಗೆ ಮುಳ್ಳಾವಿಗೆ ಕಾಯಕ, ಗಂಟೇ ಕಾಯಕ ಮೊದಲಾದ ಕಾಯಕಗಳನ್ನು ಮಾಡುತ್ತ ಭಿಕ್ಷೆಯಿಂದ ಉಪ ಜೀವಿಸಿರಿ ಎಂದು ಹೇಳಿ ಹೋದನಂತೆ! ಅದ್ದರಿಂದ ಈ ಕಾಯಕಗಳು ಉತ್ಪನ್ನವಾದಂತೆ!! ಇದು ಎಂಥ ವಿಸಂಗತನವು, ಎಷ್ಟು ವಿಪರೀತ ವಿಚಾರವುಳ್ಳದು!!! ಬಸವಾದಿ ಪ್ರಮಥರ ದೃಷ್ಟಿಯಿಂದ ಕಾಯಕಕ್ಕೆ ಈ ಅರ್ಥವು ಇಲ್ಲನೇ ಇಲ್ಲ. ಮಹಾತ್ಮನಾದ ಬಸವೇಶ್ವರನ ಹೆಸರಿಗೆ ಕುಂದು ತರುವಂಥ ಅನೇಕ ಆಖ್ಯಾಯಿಕೆಗಳು ದೇಶದಲ್ಲಿ ಇನ್ನೂ ರೂಢವಾ ಗಿವೆ. ಅವುಗಳಲ್ಲಿ ನಾನು ಈ ಲೇಖನದಲ್ಲಿ ವಿವೇಚಿಸಿದ್ದೊಂದು ಇರುತ್ತದೆ. ಈ ವಿಚಾರಗಳನ್ನು ದೂರ ಮಾಡಬೇಕಾದರೆ ಅತ್ಯಂತ ಶ್ರೇಷ್ಠತರವಾದ ವಚನಕಾರರ ವಚನ ವಾಙ್ಮಯವನ್ನು ಪ್ರಸಿದ್ಧಿಸಿ ಅವರ ತತ್ವಗಳನ್ನು ಹೊರಗೆಡುವುದೊಂದೇ ಮಾರ್ಗವಾಗಿದೆ.

---

# ಹೂಲಿಯು ಪಂಚವಣ್ಣಿಗೆ ಮಠವು.

## (ವೀರಶೈವ ಧರ್ಮದ ಪ್ರಾಚೀನತೆಯು ಬಗ್ಗೆ ಹೊಸ ಶೋಧಗಳು.)

(ಗೆಳೆಯರ ಗುಂಪಿನ ಚೆನ್ನಮಲ್ಲ ಬರೆದದ್ದು.)



ಹೂಲಿಯು ಮಠದ ಹಳೇ ಕಾಗದ ಪತ್ರಗಳು ಸಿಕ್ಕಿರದಿದ್ದರೆ ಅಲ್ಲಿಯು ಶಿಲಾಲಿಪಿಗಳಿಗೆ ಮಹತ್ವ ಬರುವ ಹಾಗಿರಲಿಲ್ಲ. ಇಂದಿಗೆ ಶೋಧಿಸಲ್ಪಟ್ಟಿರುವ ಹತ್ತಿಪ್ಪತ್ತು ಸಾವಿರ ಶಿಲಾಲಿಪಿಗಳಿಂದ ವೀರಶೈವ ಧರ್ಮಕ್ಕೆ ಇನ್ನಿಷ್ಟು ಲಾಭವೋ, ಅಷ್ಟೇ ಈ ಲಿಪಿಗಳಿಂದಲೂ ಸರಿ.

ಹೀಗೆಯೇ ಅಲ್ಲಿಯ ಶಿಲಾಲಿಪಿಗಳು ಸಿಕ್ಕಿರದಿದ್ದರೆ ಮಠದ ಕಾಗದ ಪತ್ರಗಳಿಗೂ ಐತಿಹಾಸಿಕ ದೃಷ್ಟಿಯಿಂದ ಬೆಲೆಯಿರಲಿಲ್ಲ. ಇದೇ ಕಾರಣದಿಂದ ಇಂದಿಗೆ ಎಷ್ಟೋ ಮಠಮಾನ್ಯಗಳ ರಿಕಾರ್ಡುಗಳು ನಿರಾಧಾರವೆಂದು ಐತಿಹಾಸಿಕರಿಂದ ನಿರಾಕರಿಸಲ್ಪಡುತ್ತಿವೆ. ಇದಿರಲಿ.

ಹೂಲಿಯು ಬೆಳಗಾವ ಜಿಲ್ಹೆಯಲ್ಲಿ ಸವದತ್ತಿಯಿಂದ ಐದು ಮೈಲು ದೂರದಲ್ಲಿದೆ. **ಇತಿಹಾಸ ಸಂಶೋಧಕರಿಗೆ ಇಲ್ಲಿ ತುಂಬಾ ಅನ್ನವಿದೆ. ಸಂಶೋಧಕರೆಂಬವರು ಒಮ್ಮೆಯಾದರೂ ಹೂಲಿಯುನ್ನು ಕಾಣುವದು ಅತ್ಯಾವಶ್ಯಕ. ಇದು ಭಾವಕರಿಗೆ ಪುಣ್ಯ ಕ್ಷೇತ್ರವಾಗಿದೆ. ಕವಿಗಳಿಗೆ ಸೊಬಗಿನ ಸುಗ್ಗಿಯಾಗಿದೆ.** ಬೇಕಾದವರು ಕಂಡುಂಡುತಣಿಯಲಿ.

ಹೂಲಿಯಿಂಥಾದ್ದೆಂದು ಇದು ಮೊದಲು ನಮಗೆ ಗೊತ್ತಿದ್ದಿಲ್ಲ. ಏನೋ ಶಿಲಾಲಿಪಿಗಳ ಆಗರವೆಂದು ಮಾತ್ರ ಕೇಳಿದ್ದೆವು. ಇದೊಂದೇ ಕಾರಣದಿಂದ ಅಲ್ಲಿಗೆ ಹೋಗಿ ಬರಬೇಕೆಂದು ಬಲು ದಿನದ ಬಯಕೆಯಿತ್ತು. ಅಲ್ಲದೆ ಅಲ್ಲಿಯು **ಸಂಶೋಧಕರೂ, ಜ್ಯೋತಿಷಿಗಳೂ ಆದ ಸಿದ್ಧಾಂತಿ ಶ್ರೀ ಶಿವಬಸಯ್ಯನವರಿಗೂ** ನಮ್ಮ ಗುಂಪಿನ ಗೆಳೆಯರೊಬ್ಬರಿಗೂ ಈ ಮೊದಲೆ ಪರಿಚಯವು ಬೆಳೆದು ಬಂದಿತ್ತು. ಇವೆಲ್ಲ ಕಾರಣಗಳಿಂದ ಅಲ್ಲಿಗೊಮ್ಮೆ ಹೋಗಬೇಕಾಗಿದ್ದಿತು. ಮನಸ್ಸಿನಲ್ಲಿದ್ದಂತೆ ಮೊನ್ನೆ ನಮ್ಮ ಗುಂಪಿನ ಇಬ್ಬರು ಗೆಳೆಯರು (ರಾಮಚಂದ್ರ ಬೆಳಗಾಂವಕರ ಬಿ.ಏ. ಹಾಗೂ ಹಲಸಂಗಿಯು ಚೆನ್ನಮಲ್ಲ) ಕೂಡಿ ಅಲ್ಲಿಗೆ ಹೋದೆವು. ಅಲ್ಲಿಯು ಶಿಲಾಲಿಪಿಗಳ ವಿಷಯುವನ್ನು ಹೇಳುವ ಮೊದಲು ಅಲ್ಲಿಯು **ಹಿರೇಮಠದ** ಬಗ್ಗೆ ಒಂದೆರಡು ಮಾತುಗಳನ್ನು ಹೇಳದಿರಲಿಕ್ಕೆ ಮನವೊಪ್ಪದು.

**ಹೂಲಿಯ ಹಿರೇಮಠವು ಪುರಾತನರ ಪುಣ್ಯ ಕೀರ್ತಿಯು.** ಈ ಮಠದ ಮೊಟ್ಟ ಮೊದಲಿನ **ಪಟ್ಟದ ದೇವರು** ಶಿವಪ್ರಸಾದದಿಂದ ಕಾಂಚಿಯಲ್ಲಿ ಜನ್ಮವೆತ್ತಿ, ಸಹ್ಯಾದ್ರಿಯ ಪೂರ್ವ ಶಾಖೆಯಾದ ಸಿದ್ಧಾಚಲದ ತಡಿಯಲ್ಲಿರುವ ಈ **ಪೂವಲ್ಲಿ (ಹೂಲಿ) ಯಲ್ಲಿ** ತಪೋನಿರತರಾಗಿ ಸಿದ್ಧ (Perfected by yoga) ಪದಕ್ಕೇರಿ **"ವರವೀ ಪುರುಷ"** ರೆಂದು ಪ್ರಖ್ಯಾತರಾದರು. ಇವರ ಹೆಸರು ಶ್ರೀ ಸಿದ್ಧಚೈತನ್ಯ ಶಿವಾಚಾರ್ಯರು. ಇವರು **ಪಂಚವರ್ಣ ಮಹಾ ಸೂತ್ರಕ್ಕೆ** ಭಾಷ್ಯವನ್ನು ಬರೆದಿರುವರಂತೆ. ‡ ಅಂತೆಯೇ ಇವರ ಮಠಕ್ಕೆ **ಪಂಚವಣ್ಣಿಗೆಯ ಮಠ**ವೆಂದು ಹೆಸರು ಬಂದಿರಬೇಕು. ಅಥವಾ ಕಾಶೀಸಿಂಹಾಸನದ ಪಂಚವರ್ಣ ಮಹಾ ಸೂತ್ರಕ್ಕೆ ಸೇರಿದ್ದೆಂದು ಈ ಹೆಸರು ಬಂದಿರಲೂ ಬಹುದು. ಆದರೆ ೧೬ ನೇ ಪಟ್ಟದ್ದೇವರನ್ನು ಸ್ತುತಿಸುವಾಗ ಒಂದು ಲೇಖದಲ್ಲಿ § **" ಪಂಚವರ್ಣ ಮಹಾ**

---

‡ ಈ ಮಠದ ಪಟ್ಟಾವಳಿಯ ಪ್ರತಿಗಳು ಮೂರಿವೆಯಂತೆ. ನಮಗೆ ಮಾತ್ರ ೬೦ ವರ್ಷಗಳ ಹಿಂದೆ ಬರೆದ ಒಂದೇ ಪ್ರತಿಯು ನೋಡಲಿಕ್ಕೆ ಸಿಕ್ಕಿತು. ಇನ್ನುಳಿದ ಎರಡು ಪ್ರತಿಗಳು ಕಾರಣಾಂತರದಿಂದ ಬೇರೂರಲ್ಲಿ ಉಳಿದಿವೆಯೆಂತಲೂ ಅವುಗಳಲ್ಲೊಂದರಲ್ಲಿ— ಆಯಾ ಸ್ವಾಮಿಗಳು ಬರೆದ ಗ್ರಂಥಗಳ ನಾಮನಿರ್ದೇಶವಿದೆಯೆಂದೂ ಶ್ರೀಸಿದ್ಧಾಂತಿ ಶಿವಬಸಯ್ಯನವರು ಹೇಳಿದರು. ಆ ಪ್ರತಿಗಳು ನಮ್ಮ ಕೈಗೆ ಸಿಕ್ಕ ಮೇಲೆ ಶಿವಾನುಭವ ವಾಚಕರಿಗೆ ಹೆಚ್ಚಿನ ವಿಷಯಗಳನ್ನೆಲ್ಲ ವಿವರವಾಗಿ ತಿಳುಹಿಸುವ ಇಚ್ಛೆಯಿದೆ.

§ ನಾವು ನೋಡಿದ ಪಟ್ಟಾವಳಿಯ ಕೋರೀಕಾಗದದ ಹೊತ್ತಿಗೆಯಲ್ಲಿ ಕೊನೆಗೆ ಒಂದು ಶಿಲಾಲೇಖದ ನಕಲು ಇದೆ "ಶಿಲಾಲೇಖಾದುದ್ಧೃತ್ಯ ಲಿಖಿತಮಿದಂ ತಾಲಪತ್ರಂ" ಎಂದು ಹೇಳಿ ಮುಂದೆ ಬರೆಯುತ್ತ ಹೋಗಿದ್ದಾರೆ ನಮಗೆ ಮೂಲ ಶಿಲಾಲಿಪಿಯೂ ಸಿಕ್ಕಲಿಲ್ಲ. ತಾಲಪತ್ರವೂ ಸಿಕ್ಕಲಿಲ್ಲ. ಇದರಲ್ಲಿ— ೧೬ ನೇ ಪಟ್ಟದ್ದೇವರಾದ ಶ್ರೀ ಶಿದ್ಧೇಶ್ವರ ಶಿವಾಚಾರ್ಯರಿಗೆ ಪುಲಕೇಸಿಯ ಮಾಂಡಲಿಕನಾದ ವೀರವರ್ಮನೆಂಬ ರಟ್ಟರಾಜನು ೫೪೬ ನೇ ಶಕದ ತಾರಣ ಸಂವತ್ಸರದ ಶ್ರಾವಣ ಬಹುಳಾಷ್ಟಮಿ ಗುರುವಾರದಲ್ಲಿ ಒಂಬತ್ತು ಊರುಗಳನ್ನು ಉಂಬಳಿಯಾಗಿ ಕೊಟ್ಟ ಹಾಗೆಯೂ ಆ ಸ್ವಾಮಿಗಳಿಂದ ಅವನು ಶಿವ ದೀಕ್ಷೆ ಹೊಂದಿದ ಹಾಗೆಯೂ ಹೇಳಿದೆ. ಆದರೆ ಪುಲಕೇಸಿಯ ಬಿರುದಾವಳಿಯ ರೀತಿಯನ್ನು ನೋಡಿದರೆ (ಶ್ರೀಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪೃಥ್ವೀ ವಲ್ಲಭ ಮಹಾ ರಾಜಾಧಿರಾಜ ಪರಮ ಭಟ್ಟಾರಕ **ಸತ್ಯಾಶ್ರಯ ಕುಳತಿಳಕ** ಚಾಳುಕ್ಯಾಭರಣ ಭಾರತಸಾರ್ವಭೌಮ ಇತ್ಯಾದಿ) ೫೪೬ನೇ ಶಕದ ಮೂಲ ಲೇಖದ ಯಥಾಯಥ ನಕಲಾಗಿರದೆ ಕ್ರಿಸ್ತೀಯ ೧೧-೧೨ನೇ ಶತಮಾನದನಂತರ ತಿದ್ದಿ ಬೆಳಿಸಿದ ಹಾಗೆ ತೋರುತ್ತದೆ.

**ಸೂತ್ರ ಸಂಪ್ರದಾಯ ಪ್ರವರ್ತಕಃ॥**'' ಎಂದು ಹೇಳಿರುವುದರಿಂದ ಕೊನೆಯ ಮಾತೇ ಬಲಪಡುವಂತಿದೆ. ಈ ಶ್ರೀಸಿದ್ಧಚೈತನ್ಯರು ಇಂದಿಗೆ ಎರಡು ಸಾವಿರದ ಎರಡು ನೂರಾ ಹತ್ತೊಂಭತ್ತು (೨೨೧೯) ವರ್ಷಗಳ ಒಂದೆ ಪಟ್ಟಾಧಿಕಾರಿಗಳಾಗಿ ೧೫೧ ವರ್ಷ ಅಧಿಕಾರ ನಡಿಸಿದರೆಂದು ಮಠದ **ಪಟ್ಟಾವಳಿಯಿಂದ** ಗೊತ್ತಾಗುವದು. ಇವರು ಧಿವ್ಯ ಯೋಗ ಬಲದಿಂದ ಇಷ್ಟು ಕಾಲ ಜೀವಿಸಿದ್ದು ಆಶ್ಚರ್ಯವಲ್ಲ. ಇದಿರಲಿ. ಶ್ರೀ ಸಿದ್ಧಚೈತನ್ಯ ಶಿವಾಚಾರ್ಯರು ಬ್ರಹ್ಮಸೂತ್ರಗಳಿಗೆ ವೃತ್ತಿಯನ್ನು ಬರೆದಿರುವರೆಂದು ಇದೇ ಮಠದ ಪ್ರಾಚೀನ ಸ್ವಾಮಿಗಳಲ್ಲೊಬ್ಬರಾದ ಶ್ರೀ ಶಿವಾನುಭವ ಶಿವಾಚಾರ್ಯರು ತಮ್ಮ ಶಿವಾದ್ವೈತ ದರ್ಪಣದಲ್ಲಿ ಹೇಳಿದ್ದಾರೆ. *

ಶ್ರೀ ಸಿದ್ಧಚೈತನ್ಯರಿಂದಿತ್ತ ಸ್ಥಿರ ಪಟ್ಟದ ಮೇಲೆ ೫೦ ಮಂದಿ ಸ್ವಾಮಿಗಳೂ, ಚರಪಟ್ಟದ ಮೇಲೆ ೪೩ ಮಂದಿ ಸ್ವಾಮಿಗಳೂ ಬಂದಿದ್ದಾರೆ. ಈಗಿನ ಪಟ್ಟದ್ದೇವರು ೫೧ ನೆಯವರು; ಚರಮೂರ್ತಿಗಳು ೪೪ ನೆಯವರು. **ಪೂರ್ವಿಕರ ಪುಣ್ಯಾಂಶವು ಇಂದಿಗೂ ಸರಿದಿಲ್ಲ.** ಇದೀಗ ಚರಪಟ್ಟವನ್ನಲಂಕರಿಸುವವರು **ಶ್ರೀಶ್ರೀ ನೀಲಕಂಠ ಶಿವಾಚಾರ್ಯರು.** ಇವರು ತುಂಬಾ **"ವಿನೀತ ವಿದಗ್ಧ''** ರು; **"ಎಲ್ಲ ಬಲ್ಲವರು"; "ಸರ್ವತ್ರ ಸಮದರ್ಶಿ"** ಗಳು; ಕಾಶಿಯಲ್ಲಿ ವಿದ್ಯಾವ್ಯಾಸಂಗ ಮಾಡಿದವರು; ಅನೇಕ ಬಿರುದಿನ ಉಪಾಧಿಗಳನ್ನು ಪಡೆದ ಬಹುಶ್ರುತರು. ಹಿಂದೆ ಬೆಳಗಾಂವಿಯ ಹಿಂದೂ ಮಹಾ ಸಭೆಗೆ ಸ್ವಾಗತಾಧ್ಯಕ್ಷರಾಗಿದ್ದರು. ಶ್ರೀಗಳು ತುಂಬಾ ಬಹುಶ್ರುತರಾದ್ದರಿಂದ ಅವರ ಸನ್ನಿಧಿಯಲ್ಲಿ ಕಳೆದ ಒಂದೆರಡು ದಿನಗಳು ತುಂಬಾ ಮೋಜಿನವು. ಅವರ ಮಾತಿನಲ್ಲಿ ನಿಷ್ಠುರ ಕರ್ಮಠತನದ ಕಠೋರ ಕಾಠಿಣ್ಯವೂ ಇಲ್ಲ; ನಿರ್ಬೀಜ ಪ್ರಳಾಪಗಾರಿಕೆಯ ನಿಸ್ಸಾರ ಶಿಥಿಲತೆಯೂ ಇಲ್ಲ. ತುಂಬಾ ರಸಾಳವಾಣಿ; ಉಪಯುಕ್ತ ವಿಷಯ. ಶ್ರೀಗಳ ತಮ್ಮಂದಿರೇ ಪಟ್ಟದ್ದೇವರು; ಅಣ್ಣಂದಿರು ಜ್ಯೋತಿಷಿಗಳು. ಅಣ್ಣಂದಿರ ವಯಸ್ಸು ಸುಮಾರು ೪೫ ವರ್ಷ. ಇವರು ತುಂಬಾ ಸಾಹಸಿಗರು. ಕೈಕಟ್ಟಿಕೊಂಡು ಕುಳಿತು ಕಾಲ ಕಳೆಯುವುದು ಇವರಿಗೆ ಎಷ್ಟೂ ಸೇರದು. ಯಾವಾಗಲೂ

---

* ಈ ಗ್ರಂಥದ ಹೊತ್ತಿಗೆ ಮಠದಲ್ಲಿದೆ. ವ್ಯಾಸರ ಮೂಲ ಬ್ರಹ್ಮ ಸೂತ್ರಗಳನ್ನೂ, ಪೂರ್ವಲ್ಲೀ ಸಿದ್ಧಚೈತನ್ಯರ ಚೈತನ್ಯ ವೃತ್ತಿಯನ್ನೂ, ನೀಲಕಂಠ ಶಿವಾಚಾರ್ಯರ ಭಾಷ್ಯವನ್ನೂ ಮಥಿಸಿ ಈ ಗ್ರಂಥವನ್ನು ಬರೆದಂತೆ ಗ್ರಂಥಕಾರರು ಹೇಳಿದ್ದಾರೆ.

ಕೈಯಲ್ಲಿ ಏನಾದರೊಂದು ಕೆಲಸವಿದ್ದೇ ತೀರಬೇಕು. ಶ್ರೀಗಳೂ ಶಿವಬಸವಯ್ಯನವರೂ ರಥಿಸಾರಥಿಗಳಂತಿದ್ದಾರೆ. ಅವರ ಸುಜ್ಞಾನ, ಇವರ ಸಾಹಸ, ಎರಡೂ ಸೇರಿ ತುಂಬಾ ಒಳಿತಾಗಿದೆ. ಆದ್ದರಿಂದಲೇ ಈ ಮಠದಿಂದ ಪಾಠಶಾಲೆ, ವಾಚನಾಲಯ, ಪಂಚಾಂಗ, ಗ್ರಂಥ ಪ್ರಚಾರ ಮುಂತಾದ ಎಷ್ಟೋ ಮಹತ್ವದ ಕಾರ್ಯಗಳು ಜರಗುತ್ತಿವೆ. ಅಲ್ಲದೆ ಶ್ರೀ ಶಿವಬಸವಯ್ಯನವರು ಸ್ವಪ್ರಯತ್ನದಿಂದ ಶಿಲಾಲಿಪಿಗಳನ್ನೋದುವುದಕ್ಕೆ ಕಲಿತಿದ್ದಾರೆ. ಅಲ್ಲಿಯ ಸಂದಿಗೊಂದಿಯೊಳಗಿನ ಲಿಪಿಗಳನ್ನೆಲ್ಲಾ ಓದಿ ಸಂಗ್ರಹಿಸಿದ್ದಾರೆ. ಅಲ್ಲದೆ ಹಾಳಾಗಿ ಹೋಗುತ್ತಿದ್ದ ಎಷ್ಟೋ ಲಿಪಿಗಳನ್ನ ಸರಕಾರದವರ ಸಹಾಯದಿಂದ ಭದ್ರವಾಗಿಡಿಸಿದ್ದಾರೆ. ಇಷ್ಟೊಂದು ಕಷ್ಟಪಟ್ಟು ಪ್ರಯತ್ನಿಸುತ್ತಿರುವವರಿಗೆ ನಮ್ಮವರ ಸಹಾಯವೆಂದರೆ ದೊಡ್ಡದೊಂದು ಶೂನ್ಯ. ನಮ್ಮವರಿಗೆ ಗೊತ್ತಿದ್ದ ಮಾತೆಂದರೆ ಒಂದೇ ಒಂದು. ಅದೇನೆಂಬಿರಾ? ಸಾಯುವ ವರೆಗೆ ಕಣ್ಣೆತ್ತಿಯೂ ನೋಡದೆ, ಸತ್ತಮೇಲೆ ಎತ್ತಿಕೊಂಡು ಅಳುವುದು ನಮ್ಮವರ ರೂಢಿ. ಇರುವವರೆಗೆ ಕೈಮೇಲೆ ನೀರು ಸಹ ಹನಿಸದೆ, ಸತ್ತ ಮೇಲೆ— "ಕರ್ನಾಟಕದ್ದೊಂದು ರತ್ನವು ಕಳಚಿ ಹೋಯಿತು." ಎಂದು ವರ್ತಮಾನ ಪತ್ರಗಳಲ್ಲಿ ಕೂಗಿ ಕೊಳ್ಳುವುದಕ್ಕೆ ಮಾತ್ರ ನಮ್ಮವರು ತುಂಬಾ ಶೂರರು. ಸತ್ತ ಮೇಲೆ ದುಃಖ ಪ್ರದರ್ಶನ ಮಾಡುವರಂತೆ! ಇರುವ ವರೆಗೆ ಅಂಥವರು ಕಷ್ಟಬಟ್ಟು ತೊಳಲಿ ಬಳಲಿ ದುಃಖಿಸಿ ಜೀವ ಕಳಕೊಳ್ಳಬೇಕು; ಆ ಮೇಲೆ ಇವರು ಉಂಡು ತಿಂದು ವಾದ್ಯ ಘೋಷದೊಡನೆ ದನಿಗೂಡಿಸಿ ದುಃಖ ಪ್ರದರ್ಶನ ಮಾಡುವುದಕ್ಕೆ ಹೊರಟು ತಮ್ಮ ವ್ಯಾಖ್ಯಾನ ಶಕ್ತಿಯ ಹೆಮ್ಮೆಯನ್ನು ಹೊರಸೂಸಬೇಕು!!! ಒಳ್ಳೇ ನ್ಯಾಯ. ಬಹಳವೆಂದರೆ ಸತ್ತವನ ಹೆಸರಿನಿಂದ ಚಿತ್ರವನ್ನೋ ಗೊಂಬೆಯನ್ನೋ ನಿಲ್ಲಿಸಿ, ಸ್ಮಾರಕವೆಂದು ಸಮಾಧಿಯೆಂದು ಕೈಮುಗಿದರೆ ತೀರಿತು; ಕೃತಾರ್ಥರಾದರು. ಇಂಥ ಧರ್ಮಾಭಿಮಾನಿಗೆ ಏನು ಕೊರತೆ? ಇದಿರಲಿ.

ಶ್ರೀಗಳೂ ಸಿದ್ಧಾಂತಿಗಳೂ ನಮಗೆ ತುಂಬಾ ನೆರವುಗೊಟ್ಟರು. ಶ್ರೀ ಶ್ರೀ ನೀಲಕಂಠ ಶಿವಾಚಾರ್ಯರು ತಮ್ಮ ಪೂರ್ವದ ಸ್ವಾಮಿಗಳು ಬರೆದ ಪ್ರಾಚೀನ ಗ್ರಂಥಾದಿಗಳ ವಿಷಯವನ್ನು ಹೇಳಿಕೊಟ್ಟರು. ಇದ್ದ ಕೆಲವು ಗ್ರಂಥಗಳನ್ನು ತೋರಿಸಿದರು. ತಕ್ಕಷ್ಟು ಓದಿಯೂ ಹೇಳಿದರು. ಇವುಗಳಲ್ಲೊಂದು ವೈಶೇಷಿಕ ದರ್ಶನದ ಮೇಲೆ ಬರೆದ ಪ್ರಕರಣ

ಗ್ರಂಥ. ಇದು ಎರಡು ಸಾವಿರ ವರ್ಷಗಳ ಹಿಂದೆ ಚರ ಪಟ್ಟಕ್ಕೆ ಬಂದ ಮೊಟ್ಟ ಮೊದಲನೆಯ ಚರಮೂರ್ತಿಗಳಾದ ಶಿವಾದಿತ್ಯ ಶಿವಾಚಾರ್ಯರು ಅಥವಾ ವ್ಯೋಮ ಶಿವಾಚಾರ್ಯರು ಬರೆದದ್ದು. ಇವರೇ ಬರೆದ ವ್ಯೋಮವತೀ ಭಾಷ್ಯವೆಂಬುದೊಂದು ಗ್ರಂಥವು ವೈಶೇಷಿಕ ದರ್ಶನದ ಮೇಲಿದೆಯೆಂದೂ, ಅದು ತಮ್ಮಲ್ಲಿ ಉಪಲಬ್ಧವಿದೆಯೆಂದೂ ಹೇಳಿದರು. ಅಲ್ಲದೆ ಚರಪಟ್ಟದ ಮೇಲಿನವರೊಬ್ಬರಾದ ಶ್ರೀ ಶಿವಾನುಭ ಶಿವಾಚಾರ್ಯರೆಂಬ ಪ್ರಾಚೀನಾಚಾರ್ಯರು–ಬ್ರಹ್ಮಸೂತ್ರ, ಚೈತನ್ಯವೃತ್ತಿ, ನೀಲಕಂಠ ಭಾಷ್ಯಗಳನ್ನು ಮಥಿಸಿ ಬರೆದ ಶಿವಾದ್ವೈತದರ್ಪಣವೆಂಬ ಗ್ರಂಥದ ಆದಿ ಭಾಗವನ್ನು ಓದಿ ಹೇಳಿದರು. ಈ ಗ್ರಂಥದ ಆದಿಯಲ್ಲಿ ಆಚಾರ್ಯರು ವ್ಯಾಸ ಮಹರ್ಷಿಗಳನ್ನೂ, ಪೂವರ್ಲ್ಲೀ ಸಿದ್ಧ ಚೈತನ್ಯರನ್ನೂ, ನೀಲಕಂಠ ಶಿವಾಚಾರ್ಯರನ್ನೂ ಹತ್ತಿಪ್ಪತ್ತು ಶ್ಲೋಕಗಳಿಂದ ಸ್ತುತಿಸಿದ ಬಳಿಕ ತಮ್ಮ ಹಿಂದಿನ ಗುರು ಪರಂಪರೆಯನ್ನು ಹೇಳಿಕೊಂಡಿದ್ದಾರೆ. * ಆ ಬಳಿಕ

---

* ಈ ಶಿವಾನುಭವ ಶಿವಾಚಾರ್ಯರು ಹೇಳಿಕೊಂಡಿರುವ ತಮ್ಮ ಹಿಂದಿನ ಗುರು ಪರಂಪರೆಯಲ್ಲಿ ನಾಲ್ಕೈದು ಮಾತ್ರವೇನೋ ಹೆಸರುಗಳಿವೆ. ಆಗ ನಮಗೆ ಟಿಪ್ಪಣಿ ಮಾಡಿಕೊಳ್ಳುವುದಕ್ಕೆ ಮರವೆಯಾಯಿತು. ಆದರೂ–ಶಿವಾನುಭವ ಶಿವಾಚಾರ್ಯರೆಂಬ ಹೆಸರಿನ ಸ್ವಾಮಿಗಳಾದವರೇ ಇಬ್ಬರು. ಚರ ಪಟ್ಟದಲ್ಲಿ ೯ರನೆಯವರೊಬ್ಬರು, ಹತ್ತೊಂಭತ್ತನೆಯವರೊಬ್ಬರು. ಒಬ್ಬರು ಶಾಲಿವಾಹನಶಕದ ಮೂರನೇ ಶತಮಾನದಲ್ಲಿದ್ದರು. ಇನ್ನೊಬ್ಬರು ಶಾಲಿವಾಹನ ಶಕದ ಒಂಭತ್ತನೇ ಶತಮಾನದಲ್ಲಿದ್ದರು. ಒಟ್ಟಿಗೂ ಶ್ರೀ ಬಸವಣ್ಣನವರಿಗಿಂತ ಪ್ರಾಚೀನರು. ಸದ್ಯಕ್ಕೆ ಅಲ್ಲಿಯ ಸ್ವಾಮಿಗಳು ಈ (ಶಿವಾದ್ವೈತದರ್ಪಣವೆಂಬ) ಗ್ರಂಥವನ್ನು ಅಚ್ಚುಗೊಳಿಸಲಿಕ್ಕಿರುವರು. ಇನ್ನೊಮ್ಮೆ ನಾವು ಈ ಶಿವಾನುಭವ ಶಿವಾಚಾರ್ಯರು (ಇಬ್ಬರಲ್ಲಿ) ಯಾರೆಂಬುದನ್ನು ವಿಚಾರ ಮಾಡಿ ಮುಂದೆ ಬರೆಯ ಬಹುದು ಇದಿರಲಿ, ಇವರು ನೀಲಕಂಠ ಶಿವಾಚಾರ್ಯರ ಭಾಷ್ಯವನ್ನು ಅಧಾರವಾಗಿಟ್ಟುಕೊಂಡಂತೆ ಹೇಳುವರು. ಇದು ವರೆಗೆ—ಭಾಷ್ಯಕಾರರಾದ ನೀಲಕಂಠ ಶಿವಾಚಾರ್ಯರ ವಿಷಯಕ್ಕೆ ಹೆಚ್ಚಿನ ಸಂಗತಿಗಳು ತಿಳಿದಿಲ್ಲ. ಅವರಿಗೆ ಹರದತ್ತ ನೆಂಬ ಶಿಷ್ಯನಿದ್ದ ಹಾಗೇನೋ ತಿಳಿದು ಬಂದ ಹಾಗಿದೆ. ಆದರೆ ಈ ಮಠದ ಪಟ್ಟಾವಳಿಯಲ್ಲಿ ಸ್ಥಿರಪಟ್ಟದಲ್ಲಿ ೧೦ನೆಯವರು ನೀಲಕಂಠ ಶಿವಾಚಾರ್ಯರೆಂಬವರಿದ್ದಾರೆ. ಅಲ್ಲದೆ ಅವರ ಅನಂತರವೇ ಪಟ್ಟಕ್ಕೆ ಬಂದ ೧೧ ನೆಯವರು ಹರದತ್ತ ಶಿವಾಚಾರ್ಯರೆಂಬವರಿದ್ದಾರೆ. ಈ ಗುರು ಶಿಷ್ಯರ ನಾಮಸಾದೃಶ್ಯದ ಮಟ್ಟಿಗೆ ನೋಡಿದರೆ ಭಾಷ್ಯಕಾರರಾದ ನೀಲಕಂಠ ಶಿವಾಚಾರ್ಯರು ಇವರೇ ಆಗಿರಬಹುದೋ ಏನೋ ಎಂಬ ವಿಚಾರಕ್ಕೆ ಅವಕಾಶವಿದೆ. ತಾಳೋಲೆಯ ಒಂದು ಪಟ್ಟಾವಳಿಯಲ್ಲಿ ಆಯಾ ಸ್ವಾಮಿಗಳ ಗ್ರಂಥಗಳನ್ನು ಹೇಳಿದೆಯಂತೆ. ಅದರಲ್ಲಿ ಈ ವಿಷಯವಿದೆಯೋ ಇಲ್ಲವೋ ಮುಂದೆ ವಿಚಾರಿಸಬಹುದು.

"ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಪ್ರಥಮ ಸೂತ್ರವನ್ನು ಕುರಿತು ಹೇಳುವಾಗ "ಅತಃ" ಎಂಬ ಪದಕ್ಕೆ "ಅಷ್ಟಾವರಣ ನಿಷ್ಠನೂ ಪಂಚಾಚಾರ ಪರಾಯಣನೂ ಆದ ಮೇಲೆ" ಎಂದು ವಿವರಣೆಯನ್ನು ಹೇಳಿ ಮುಂದೆ ಬ್ರಹ್ಮಲಕ್ಷಣವನ್ನು ಹೇಳ ತೊಡಗಿದ್ದಾರೆ. ಇದನ್ನು ನೋಡಿದರೆ ಇದು ಕೇವಲ ವೀರಶೈವ ಗ್ರಂಥವೆಂಬುದಕ್ಕೆ ಸಂದೇಹವಿಲ್ಲ.

ಸಿದ್ಧಾಂತಿ ಶ್ರೀ ಶಿವಬಸವಯ್ಯನವರು ನಮ್ಮನ್ನು ಜೊತೆಯಲ್ಲಿ ಕರೆದುಕೊಂಡು ಎಲ್ಲಾ ಕಡೆಗೆ ಅಡ್ಡಾಡಿ ಮಹತ್ವದ ಸ್ಥಾನಗಳನ್ನೂ, ಶಿಲಾಲಿಪಿಗಳನ್ನೂ, ಗುಡಿಗುಂಡಾರಗಳನ್ನೂ ಶ್ರಮವಹಿಸಿ ತೋರಿಸಿದರು.

ಹೂಲಿಯು ಪೂರ್ವಕಾಲದಲ್ಲಿ ಒಳ್ಳೇ ದೊಡ್ಡ ಪಟ್ಟಣವೂ ಪುಣ್ಯಕ್ಷೇತ್ರವೂ ಆಗಿದ್ದಿತು. ಸುಮಾರು ಕ್ರಿಸ್ತೀಯ ಹತ್ತು ಹನ್ನೊಂದನೇ ಶತಮಾನಗಳಲ್ಲಿ ಕಟ್ಟಿಸಿದ ಹಳೇ ಗುಡಿಗಳು ಅನೇಕವಾಗಿವೆ. ಈವೂರು ಗುಡ್ಡದ ಅಡಿಯಲ್ಲಿ ಕೊಳ್ಳದ ಬಳಿಯಲ್ಲಿ ಇರುವದರಿಂದ ತುಂಬಾ ಮನೋಹರವಾಗಿದೆ. ಊರ ಬಡಗಲ ಬದಿಗೆ ಹೊಂದಿ ಗುಡ್ಡದ ಬುಡವಿಡಿದು ಗುಡಿಗಳ ಗುಂಪಿದೆ. ಇಲ್ಲಿಯಿಂದ ಪಶ್ಚಿಮಕ್ಕೆ ಒಂದೆರಡು ಫರ್ಲಾಂಗಿನ ಮೇಲೆ ಕೊಳ್ಳದ ಕಡಿವಾಡಿಯಲ್ಲೊಂದು ಗುಡಿಯಿದೆ. ಅದರ ಬಳಿ ನಾಲ್ಕೂ ಮೂಲೆಗೆ ನಾಲ್ಕು ಲಿಂಗ ಮುದ್ರೆಯ ಕಲ್ಲುಗಳಿರುವುದರಿಂದ ಅದೊಂದು ಮಠವೆಂಬುದರಲ್ಲಿ ಸಂಶಯವಿಲ್ಲ. ಕಟ್ಟಡವೂ ಹೊಸಕಾಲದ್ದಲ್ಲ; ಹಿಂದಿನದು. ಮುಂದೆ ಮಂಟಪ, ಹಿಂದೆ ಚಿಕ್ಕ ಗರ್ಭಗುಡಿ. ಗರ್ಭಗುಡಿಯು ಮೂಲತಃ ಕಲ್ಲಲ್ಲಿ ಸ್ವಾಭಾವಿಕವಾಗಿ ಪೊಳ್ಳುಗೊಂಡದ್ದೊಂದು ಚಿಕ್ಕ ಗವಿ. ಇದಕ್ಕೆ ಸಾಮಾನ್ಯ ಜನರು ಕೊಳ್ಳಸಿದ್ದಪ್ಪನ ಗುಡಿಯೆನ್ನುವರು. ಆದರೆ ಮಠದ ಸ್ವಾಮಿಗಳು ಸಿದ್ಧ ನಂಜೇಶ್ವರರ ತಪೋ ಭೂಮಿಯೆಂದು ಹೇಳುವರು. ಆದರೆ ಯಾವ ಕಾಲದಲ್ಲಾದ ಸಿದ್ಧ ನಂಜೇಶ್ವರರೋ ಏನೊ ತಿಳಿಯದು. ಯಾಕೇದರೆ ಈ ಮಠದ ಪಟ್ಟಾವಳಿಯಲ್ಲಿ ಈ ಹೆಸರಿನ ಸ್ವಾಮಿಗಳು ಅನೇಕರಿದ್ದಾರೆ. * ಈ ಮಠದ ಒಂದು ಕಂಬದ ಮೇಲೆ

* ಸಿದ್ಧನಂದೀಶ್ವರರೆಂಬವರು ನಂಜು ನುಂಗಿ ದಕ್ಕಿಸಿದ್ದರಿಂದ ಸಿದ್ಧ ನಂಜೇಶ್ವರರೆಂಬ ಹೆಸರಿನಿಂದ ಪ್ರಸಿದ್ಧರಾದರೆಂದು ಒಂದು ಆಖ್ಯಾಯಿಕೆಯಿದೆ. ಪಟ್ಟಾವಳಿಯಲ್ಲಿ ಚರಪಟ್ಟದ ಮೇಲೆ ಬಂದವರಲ್ಲಿ ಮಾತ್ರ ಸ್ಪಷ್ಟವಾಗಿ ನಂಜೇಶ ಎಂಬ ಹೆಸರಿನವರು ಇಬ್ಬರಿದ್ದಾರೆ. ಚರಪಟ್ಟದ ೩೫ನೇ ಹಾಗೂ ೩೭ನೇ ಹೆಸರುಗಳನ್ನು ನೋಡಿರಿ. ಉಳಿದವರಲ್ಲೆಷ್ಟೋ ಸ್ವಾಮಿಗಳು ಸಿದ್ಧನಂದೀಶ್ವರ ಹಾಗೂ ಸಿದ್ಧಬಸವ ಎಂಬ ಸಮಾನಾರ್ಥದ ಹೆಸರಿನವರಿದ್ದಾರೆ.

ಪಡುವಲ ಮುಖವಾಗಿರುವ ಒಂದು ಶಿಲಾಲಿಪಿಯಲ್ಲಿ ಬರೆದದ್ದೇನೆಂದರೆ.

(೧) । ಶ್ರೀಜಯಂ॥ ರಟ್ಟ ವಂಶೋದ್ಭವಃ ಖ್ಯಾತೋ ವೀರಭೂಪೇನರಾರಿತಂ ಶ್ರೀಮತ್ಪಂಚವಣಿ

(೨) ಗೆ ಗುರುಗೇಹಂ ಶುಭಪ್ರದಂ॥ ಸ್ವಸ್ತಿ ಪೂವಲಿಯೂರೊಡೆಯ ವೀರ ವಿಜಯ

(೩) ರಸಂ ತನ್ನ ಪಿರಿಯ ವೀರವರ್ಮರಸರುಂ ಪಿಂದೆ ಮಾಡಿಸಿದೀ ಸ್ಥಾನಾಚಾರ್ಯ್ಯರಪ್ಪ-

(೪) ಷ್ಟಾವರಣ ಸಂಪನ್ನರುಂ ರುಗ್ಯಜುಃ ಸಾಮಾಥರ್ವಣ ವೇದಶಾಸ್ತ್ರ ಕೋವಿದರುಂ

(೫) ಪಂಚವಣಗಿ ಶ್ರೀಸಿದ್ಧನಂಜಾರ್ಯ್ಯರಾಲಯಮುಂ ಶ್ರೀ ಶಾಲಿವಾಹನ ಶಕೆ

(೬) ೯೦೧ ನೇ ಪ್ರಮಾದಿ ಸಂವಛ್ಛರೇ ಶ್ರಾವಣ ಶುದ್ಧ ಪೂರ್ಣಮಿಯಲು ಪುನಃಜೀ

(೭) ರ್ಣೋದ್ಧಾರಕ್ಕಂ ಮಾಡಿಸಿದಕಾರ್ಯ್ಯಕ್ಕಂ ಶುಬಂಬದ್ರಂ ಮಂಗಳಂ॥

(೮) ಆ ಪುಣ್ಯತಿಥಿಯಲು ವೀರವಿಜಯರಸಂ ತಂನ ಪಳಿಹಿತಂ ಬೆಳವಾ

(೯) ಡಿಯ ಕರುಕೇತಿಮಯ್ಯರಸನಂ ಕರೆದಗ್ರಹಾರಂ ಪೂವಲಿಯ ಶ್ರೀ

(೧೦) ಸಿದ್ಧ ನಂಜಾರ್ಯ್ಯರ ಪಾದಪ್ರಕ್ಷಾಲನಂಗೆಯ್ದುವರ ನಿಜಲಿಂಗ ಪೂಜಾದರ್ಮ

(೧೧) ಕಾರ್ಯ್ಯೋದ್ದೇಶದಿಂ ದಂಡದೋಷದೊಳಗೊಂದು ಬಾಗಂ ಮೂಡಣ ದಿಸಿಯಲು ಯ

(೧೨) ಡವನ ಹಳದ ಬಟ್ಟೆಯ ಮೇಲಣ ಭೂಮಿಯ ನಿಟ್ಟದರ್ಮಮುಂ ಸಾಸಿರ್ವರುಂ

(೧೩) ಸದ್ದರ್ಮದಿಂ ಪ್ರತಿಪಾಳಿಪರ್ ॥ಮಂಗಳಮಹಾ ॥ಶ್ರೀ॥೦॥

ಈ ಶಿಲಾಲಿಪಿಯು ಮೂಲತಃ ಮೇಲೆ ಹೇಳಿರುವ ೯೦೧ ನೇ ಶಕದಲ್ಲಿ ಬರೆದದ್ದಲ್ಲ. ಆದರೆ ಆ ಕಾಲದಲ್ಲಿ ಬರೆದದ್ದೆಂಬ ಭ್ರಮೆಯುಂಟಾಗುವಂಥ ಪ್ರಯತ್ನವನ್ನು ಮೇಲ್ಕಂಡ ಲೇಖವನ್ನು ಬರೆಯುವವರು ಮಾಡದೆ ಬಿಟ್ಟಿಲ್ಲ. ಅನುಸ್ವರದ ಸೂಜಿಗಳನ್ನೆಲ್ಲ ಅಕ್ಷರಗಳ ತಲೆಯ ಮೇಲೆ ಕೊಟ್ಟಿದ್ದಾರೆ. ಒಂದಾದರೂ ಅನುಸ್ವರದ ಸೂಜಿಯನ್ನು ಮರೆತಾದರೂ ಅಕ್ಷರದ ಮುಂದುಗಡೆಗೆ ಕೊಟ್ಟಿಲ್ಲ. ಯಾಕೆಂದರೆ ೯೦೧ ನೇ ಶಕದ ಸುಮಾರಿನ ಲಿಪಿಗಳಲ್ಲಿ

ಈ ಪದ್ಧತಿಯಿದ್ದಿತು. ಠ ಎಂಬದು ಕನ್ನಡದ್ದೊಂದು ರಕಾರ ಭೇದ. ಸಂಸ್ಕೃತದಲ್ಲಿದರ ಸಂಬಂಧವಿಲ್ಲ. ಆದರೆ ಮೇಲ್ಕಾಣಿಸಿರುವ ಲಿಪಿಯಲ್ಲಿ ಕನ್ನಡ ಸಂಸ್ಕೃತ ಎಲ್ಲಾ ವಿಧದ ರಕಾರಗಳಿಗೆ ಶಕಟ ರೇಫ (ಠ) ವೊಂದನ್ನೇ ಬಡಿದಿದ್ದಾರೆ. ಅಲ್ಲದೆ ಎಷ್ಟೋ ಅಕ್ಷರಗಳ ಉಕಾರ ಚಿಹ್ನವನ್ನು ಅಕ್ಷರದ ಮುಂದುಗಡೆಗೆ ಕೊಡದೆ ಕೆಳಗಡೆಗೆ ಕೊಟ್ಟಿದ್ದಾರೆ. ಯಾಕೆಂದರೆ ಶಿಲಾಲೇಖದಲ್ಲಿ ಹೇಳಿರುವ ಕಾಲದಲ್ಲಿ ಹಾಗೆ ರೂಢಿಯಿತ್ತು. ಇವೆಲ್ಲ ಕಾರಣಗಳಿಂದ ಇದು ಹಿಂದಿನ ಕಾಲದ ಬರಹದ ರೀತಿಯನ್ನನುಸರಿಸಿ ಮುಂದಿನ ಕಾಲದಲ್ಲಿಂದೋ ಬರೆದದ್ದೆಂದು ತೋರುತ್ತದೆ. ಇನ್ನು-೫ನೇ ಓಳಿಯಲ್ಲಿ "**ಶಾಲಿವಾಹನ ಶಕೆ**" ಎಂದು ಹೇಳಿದೆ. ಆದರೆ ಕ್ರಿಸ್ತಿಯ ೧೪ ನೇ ಶತಮಾನಕ್ಕಿಂತ ಮೊದಲು ಶಕವರ್ಷವನ್ನು ಹೇಳುವಾಗ "**ಶಾಲಿವಾಹನ**" ಎಂಬ ಶಬ್ದವನ್ನು ಸೇರಿಸುತ್ತಿದ್ದಿಲ್ಲ. ಬರೇ "**ಶಕವರ್ಷ**" ವೆಂದಾಗಲಿ "**ಶಕನೃಪಕಾಲಾತೀತ ಸಂವತ್ಸರಂಗಳ್**" ಎಂದಾಗಲಿ ಬರೆಯುವ ರೂಢಿಯಿತ್ತು. ಶಾಲಿವಾಹನ ಶಕೆವೆಂದುಪಯೋಗಿಸಿರುವ ಶಿಲಾಲಿಪಿಗಳಲ್ಲಿ ಈಗ ಸಿಕ್ಕಿರುವ ಮಟ್ಟಿಗೆ ೧೨೭೬ ನೇ ಶಕ (ಕ್ರಿ. ೧೩೫೪) ದಲ್ಲಿ ಬರೆದದ್ದೇ ಮೊಟ್ಟ ಮೊದಲಿನದೆಂದು ಇತಿಹಾಸ ಸಂಶೋಧಕರು ಹೇಳುತ್ತಾರೆ. ಆದ್ದರಿಂದ ಈ ಲಿಪಿಯು ೯೦೧ ನೇ ಶಕದಲ್ಲಿ ಬರೆದದ್ದಿರದೆ ೧೨೭೬ ರಿಂದಿತ್ತೀಚೆಗೆ ಎಂದೋ ಬರೆದದ್ದಿರುತ್ತದೆ. ಅಲ್ಲದೆ ಆರನೇ ಓಳಿಯಲ್ಲಿ **ಪ್ರಮಾದಿ ಸಂವತ್ಸರ**ವೆಂದಿದೆ. ಆದರೆ ಲೆಕ್ಕದಂತೆ ೯೦೧ ರಲ್ಲಿ ಪ್ರಮಾದಿಯಿರದೆ ಪ್ರಮಾಥಿ ಸಂವತ್ಸರವಿತ್ತು.

ಇದೇ ಮಠದ ಎಡ ಮಗ್ಗುಲಿಗೊಂದು ಕೋಣೆಯಿದೆ. ಅಲ್ಲಿ ನವಲಿಂಗೇಶ್ವರನಿದ್ದಾನೆ. ಲಿಂಗಾಯತ ಧರ್ಮ ರೀತಿಯಲ್ಲಿ **ನವಲಿಂಗ ಸಕೀಲವು** ತುಂಬಾ ಮಹತ್ವದ್ದೆಂದು ಎಲ್ಲರಿಗೂ ಗೊತ್ತು ಅಲ್ಲಿಯೂ ಒಂದು ಶಿಲಾಲೇಖದ ತುಂಡು ಬಿದ್ದಿದೆ. ಅದು ತುಂಬಾ ಕಚ್ಚು ಬಿದ್ದು ಹೋಗಿದೆ. ಅಲ್ಲದೆ ಮೇಲ್ಭಾಗವು ಒಡೆದೂ ಹೋಗಿದೆ. ಅದರಲ್ಲಿ—

(೧)

(೨) ..(ಕುಬೇ) ರನಳಕಾಪುರಮಂ ನಗುಗುಂ

(೩) ವಿಳಾಸದಿಂ ॥ಅಲ್ಲಿ॥ ಅಷ್ಟಾವರುಣ ಸಂಪನ್ನರುಂ

(೪) ರುಗ್ಯಜುಃ ಸಾಮಾಥರ್ವ್ವಣ ಸಮಸ್ತ ವೇದ ವೇದಾಂಗಾ

(೫) ನೇಕ ಶಾಸ್ತ್ರ ಪ್ರವೀಣರುಂ ಪೂವರೀಪುರದೇವ
(೬) ನಾಡಾರ ವೀರ ವಿಜಯರಸನ ಸುದಸ್ಪರ್ಣತಾರ್
(೭) ವೆನಿಪ ಪಂಚವಣೆಗಿಯ ಶ್ರೀ ಸಿದ್ಧನಂಜಾರ್ಯ್ಯರೆ
(೮) ನೆ ಮೆಚ್ಚದರಾರ್ ॥೦॥ ಸ್ವಸ್ತಿ ಶಕ ವರ್ಷ ೯೦೧ ನೆಯ
(೯) ಪ್ರಮಾದಿ ಸಂವತ್ಸರದ ಶ್ರಾವಣ ಶುದ್ಧ ಪೌ
(೧೦) ರ್ಣಮೆಯಲಿಯೂರೊಡೆಯ ಶ್ರೀ ಮಾದಾಚಾರ್ಯ್ಯರಮ
(೧೧) ಠಮುಮಂ ಜೀರ್ಣೋದ್ಧಾರಮಂ ಮಾಡೆ ಇವರ ನಿಜಲಿಂಗ
(೧೨) ಶೋಬೆಗೆಂದುಂ ಪಂಚಪಲ್ಲಿಯನಿಟ್ಟು ಕರಮೆಸೆದರ್॥
(೧೩) ಮಂಗಳ ಮಹಾ ಶ್ರೀ॥

ಈ ಲಿಪಿಯೂ ಕೂಡ ಮೇಲ್ಕಂಡ ೯೦೧ ನೆಯ ಶಕದ ಕಾಲಕ್ಕೆ ಸರಿಯಾಗಿ ಬರೆಯಿಸಿದ್ದಲ್ಲ. ಆದರೆ ಮೊದಲನೇ ಶಿಲಾಲಿಪಿಗಿಂತ ಇದು ನೂರಾರು ವರ್ಷ ಮುಂಚಿನದು. ಇಷ್ಟು ಮಾತ್ರ ಸರಿ. ಎರಡೂ ಲಪಿಯ ಅಕ್ಷರಗಳೂ ಪ್ರಾಚೀನವಲ್ಲ ಆದರೂ ಎರಡರಲ್ಲೂ ಒಂದೇ ವಿಷಯವಿದೆ. ಎರಡರಲ್ಲೂ ಸಂವತ್ಸರವು **ಪ್ರಮಾದಿ**ಯೆಂದೇ ಇದೆ. ಮೊದಲನೇ ಲಿಪಿಯಲ್ಲಿ ವೀರವಿಜಯ ರಾಜನು ವೀರವರ್ಮನ ವಂಶಜನೆಂದು ಹೇಳಿದೆ. ಆದರೆ ಸವದತ್ತಿಯಲ್ಲಿ ನಾವು ನೋಡಿದ ರಟ್ಟರಾಜರ ಶಿಲಾಲಿಪಿಗಳಲ್ಲಿ ಹೇಳಿರುವ ವಂಶಾವಳಿಯಲ್ಲಿ ಈ ಹೆಸರುಗಳು ಸಿಕ್ಕುವದಿಲ್ಲ. ಆದರೆ ಮೊದಲನೇ ಲಿಪಿಯಲ್ಲಿ ಹೇಳಿರುವ ವೀರವಿಜಯನ ಪಳಿಹಿತಂ ಕರಿಕೇತಿಮಯ್ಯನ ಹೆಸರು ಮಾತ್ರ ಅದೇ ಪ್ರಾಂತದಲ್ಲಿರುವ ಸೊಗಲ ಕ್ಷೇತ್ರದ ಶಿಲಾಲಪಿಯಲ್ಲಿ ಸಿಕ್ಕಪದು. ಅಲ್ಲದೆ ಸೊಗಲದ ಶಿಲಾಲಿಪಿಯು ಕಾಲವೂ ಇವೆರಡು ಲಿಪಿಗಳ ಕಾಲವೂ ಒಂದೇ. ಆದ್ದರಿಂದ ಈ ವೀರವಿಜಯ ರಾಜನು ಶೀರಾ ಕಾಲ್ಪನಿಕ ವ್ಯಕ್ತಿಯಾಗಿರದೆ. ಐತಿಹಾಸಿಕ ವ್ಯಕ್ತಿಯಾಗಿರಬೇಕೆಂದು ಊಹೆಗೆ ಆಸ್ಪದವಿದೆ. ಈಗ ಸಿಕ್ಕಿರುವ ಎರಡು ಲಿಪಿಗಳಿಗೂ ಮೂಲವಾದ ಇನ್ನೊಂದು ಯಾವದೋ ಲಿಪಿಯು ಇರಬಹುದು. ಅದು

* ಸೊಗಲದ ಶಿಲಾಲಿಪಿಯು ಎಪಿಗ್ರಾಫಿಯಾ ಇಂಡಿಕಾದ ೧೬ ನೇ ಸಂಪುಟದಲ್ಲಿ ಮೂರನೇ ನಂಬರಿನಿಂದ ಪ್ರಸಿದ್ಧವಾಗಿದೆ. ಈ ಶಾಸನದಲ್ಲಿ ಚಾಳುಕ್ಯ ರಾಜನಾದ ನೂರ್ಮಡಿ ತೈಲನ ಆಳಿಕೆಯಲ್ಲಿ ಶಕವರ್ಷದ ೯೦೨ ವಿಕ್ರಮ ಸಂವತ್ಸರದಲ್ಲಿ (ಕರಿಕೇತಿಮಯ್ಯನ ಹೆಂಡತಿ) ಕಂಚಿಯಬ್ಬೆಯು ಸುವರ್ಣಾಕ್ಷಿ ದೇವಾಲಯಕ್ಕೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಈಗ ನಷ್ಟವಾಗಿ ಹೋಗಿದ್ದರೂ ಹೋಗಿರಬಹುದು. ಅಥವಾ ಹಿಂದಿನಿಂದ ಬರೆದಿಡುತ್ತ ಬಂದ **ಛಪ್ಪನ್ನ ಪಟ್ಟಿಯು** * ಆಧಾರದಿಂದ ಮುಂದಿನವರು ಶಿಲಾಲಿಪಿಯಾಗಿ ಬರೆಯಿಸಿರಲೂ ಬಹುದು. ಏನೇ ಇರಲಿ ಈ ೯೦೧ ನೇ ಶಕಕಾಲದ ಸುಮಾರಿಗೆ ಸ್ಥಿರ ಪಟ್ಟದ ಮೇಲೆ ೨೪ ನೆಯವರಾದ ಸಿದ್ಧನಂಧೀಶ್ವರರೆಂಬವರು ಆಚಾರ್ಯರಾಗಿದ್ದರೆಂದು ಪಟ್ಟಾವಳಿಯಿಂದ ಗೊತ್ತಾಗುವದರಿಂದ ಈ ಲಿಪಿಗಳ ವಿಷಯವು ತೀರಾ ನಿರಾಧಾರವಾದದ್ದೆಂದು ಹೇಳಲಿಕ್ಕೆ ಬರುವಂತಿಲ್ಲ. ಇದಿರಲಿ.

ನವಲಿಂಗೇಶ್ವರನ ಕೋಣೆಯ ಮುಂದೆ ಒಂದು **ಮುನಿಯ ಮೂರ್ತಿಯಿದೆ. ತಲೆಯ ಮೇಲೆ ಜಡೆ. ಬಲಗೈಯಲ್ಲಿ ಜಪಮಾಲೆ. ಎಡಗೈಯಲ್ಲಿ ಇಷ್ಟಲಿಂಗ. ಕೊರಳಲ್ಲಿ ಜನ್ನಿವಾರದೊಡನೆ ಕಂಠಾಭರಣ. ಕುಳಿತದ್ದು ಧ್ಯಾನಸ್ಥವಾಗಿ.** ಮೂರ್ತಿಯು ಹನ್ನೆರಡನೇ ಶತಮಾನಕ್ಕಿಂತ ಈಚಿನದೆಂದು ಕಾಣುವದಿಲ್ಲ. ಕಲಾರೀತಿ ಅದಕ್ಕೂ ಮುಂಚಿನದು. ಶ್ರೀಗಳು ತಾವು ಸೊಗಲ ಕ್ಷೇತ್ರದಲ್ಲಿ ಹೀಗೆ ಇಷ್ಟಲಿಂಗವನ್ನು ಕೈಯಲ್ಲಿ ಹಿಡಿದ ಹೆಣ್ಣು ಮೂರ್ತಿಯನ್ನು ನೋಡಿದ ಹಾಗೆ ಹೇಳಿದರು. ಅದು ಕಂಚಿಯದ್ದೆಯದಾಗಿರಬಹುದೋ ಏನೋ ವಿಚಾರಕ್ಕೆ ಅವಕಾಶವಿದೆ.

ಇದೇ ಸ್ಥಳದಲ್ಲಿ ತುಸು ಎತ್ತರದ ಮೇಲೆ ಗುಡ್ಡದಘಡಿಯ ಮೇಲೊಂದು ಅಡಿಸಟ್ಟು ಹೆಜ್ಜೆ ಮೂಡಿದ ಹಾಗಿದೆ. ಸಿದ್ಧನಂಜೇಶ್ವರರು ಈ ಪರಿ ಇಲ್ಲಿ ತಪೋನಿರತರಾಗಿ ನಿಂತಿದ್ದರೆಂದು ಹೇಳುತ್ತಾರೆ. ಆದರೆ ಮುಸಲ್ಮಾನರು ತಮ್ಮ **ಹಜರತ್ ಅಲಿಯ** ಪಾದವೆಂದು ಮೇಲೆ ಗುಮುಟವನ್ನು ಕಟ್ಟಿ

---

* ಪ್ರತಿಯೊಂದು ಮಠದಲ್ಲಿ ತಮ್ಮ ತಮ್ಮ ಶಿಷ್ಯರ ಮನೆತನಗಳ ಟಿಪ್ಪಣೆಯ ಹೊತ್ತಿಗೆಯೊಂದಿರುವುದುಂಟು. ಅದರಲ್ಲಿ ತಮ್ಮ ಶಿಷ್ಯ ಮನೆತನಗಳ ವಂಶಾವಳಿ ಹಾಗೂ ಆಯಾ ವಂಶಾವಳಿಗೆ ಸಂಬಂಧಿಸಿದ ವಿಶೇಷ ವಿಷಯಗಳು ಮುಂತಾದುವುಗಳನ್ನೆಲ್ಲಾ ಬರೆಯುತ್ತ ಬರುವ ರೂಢಿಯಿದೆ. ಇಂಥ ಟಿಪ್ಪಣೆಗಳ ಹೊತ್ತಿಗೆಗೆ ಛಪ್ಪನ್ನ ಪಟ್ಟಿಯೆನ್ನುವರು. ಇಂಥಾದ್ದೊಂದು ಛಪ್ಪನ್ನ ಪಟ್ಟಿಯು ಹೂಲಿಯ ಮಠದಲ್ಲಿ ಈಗಲೂ ಇದೆ. ಅದರಲ್ಲಿ ರಟ್ಟರಾಜರ ವಿಷಯಕ್ಕೆ ತುಂಬಾ ವಿವರವಾಗಿ ಹೇಳಿದೆಯಂತೆ ಎಂದಿನಿಂದ ಇಂದಿನ ವರೆಗೆ ಅವರ ಇತಿಹಾಸವು ಅದರಲ್ಲಿದೆಯಂತೆ. ರಟ್ಟವಂಶದವರ ಮನೆತನಗಳು ಇಂದಿಗೂ ತುರುಕಾರಿ [ತುರುಕರ ಅರಿ] ಎಂಬ ಹಂಗಡವಾಗಿ ಇದ್ದಾರಂತೆ. ಇಂದಿಗೂ ಅವರು ಲಿಂಗಾಯತರಿದ್ದು ಹೂಲಿಯ ಮಠದ ಶಿಷ್ಯಮನೆತನದವರಾಗಿಯೇ ಇದ್ದಾರಂತೆ. (ಇಲ್ಲಿ ಶಿಷ್ಯರೆಂದರೆ ಮತಾನುಯಾಯಿಗಳು.

ದ್ದಾರೆ. ಇಂದಿಗೂ ಹೂಲಿಯ ಮಠದಲ್ಲಿ ಹೊಸದಾಗಿ ಪಟ್ಟಾಧಿಕಾರವಾಗ ಬೇಕಾದರೆ ಸಿದ್ಧನಂಜೇಶ್ವರರ ನಿಜಲಿಂಗ ಪೂಜೆಯು ಈ ಮಠವಲ್ಲಿಯೇ ಎಲ್ಲ ವಿಧಾನಗಳನ್ನು ಜರುಗಿಸುವ ರೂಢಿಯಿದೆ. ಈ ಕೊಳ್ಳದ ಮಠದ ನಾಲ್ಕು ದಿಕ್ಕಿಗೆ ನಾಲ್ಕು ಸಿದ್ಧಸ್ಥಾನಗಳವೆ. ಪೂರ್ವದಿಕ್ಕಿಗೆ ಗುಡಿಗಳ ಗುಂಪಿನಲ್ಲಿ **ಕೆರೆಸಿದ್ದಪ್ಪನ ಗುಡಿ,** ದಕ್ಷಿಣಕ್ಕೆ ಒಂದು ಗುಡ್ಡದ ತುದಿಯ ಮೇಲೆ **ಮಳಸಿದ್ದಪ್ಪನ ಗುಡಿ,** ಪಶ್ಚಿಮಕ್ಕೆ ಮೂರು ಮೈಲು ದೂರದಲ್ಲಿ ನಿರ್ಜನ ಪ್ರದೇಶದಲ್ಲಿ ಮೂರು ಕೊಳ್ಳಗಳು ಕೂಡಿದ ಕಾಡಿನಲ್ಲಿ **ವರವೀ ಸಿದ್ದಪ್ಪನ ಗುಡಿ,** ಉತ್ತರ ದಿಕ್ಕಿಗೆ ಒಂದು ಮೈಲು ದೂರ ಗುಡ್ಡದ ಕೊಳ್ಳ ದಲ್ಲಿ **ಗವಿಸಿದ್ದಪ್ಪ.** ಈ ನಾಲ್ವರ ನಡುವೆ ಆಡಿಪಟ್ಟಿನಿಂತ ಸಿದ್ಧನಂಜೇ ಶ್ವರರನ್ನು ಕುರಿತು, ಅವರ ಶಿಷ್ಯರಲ್ಲೊಬ್ಬನಾದ **ನಂದ್ಯಾಲ ನಂಜೇಶ** ನೆಂಬ ಕವಿಯು ತನ್ನ ಗುರುಗಳಾದ ಸಿದ್ಧನಂಜೇಶ್ವರರ ಚರಿತ್ರರೂಪವಾದ **ಗುರುರಾಜ ಚಾರಿತ್ರ** * ವೆಂಬ ಕಾವ್ಯದಲ್ಲಿ—

> "ಆಚಾರ್ಯರೇವಣಾಸಿದ್ಧೇಶ ಮರುಳಸಿ ।
> ದ್ಧಾಚಾರ್ಯ ರಾಮಿದೇವಾಚಾರ್ಯ ಗುರುಪಂಡಿ ।
> ತಾಚಾರ್ಯ ಚೌಕಮಧ್ಯದಿನಿಂದ ಪಂಚವಣ್ಣಿಗೆ
> ಸಿದ್ಧನಂಜೇಶ್ವರಂ ॥

ಎಂದು ಸ್ತುತಿಸಿ ಐದನೆಯಾಚಾರ್ಯರ ಬದಲಾಗಿ ತನ್ನ ಗುರುಗಳನ್ನು ಹೇಳಿದ್ದಾನೆ. ಈ ಮಠವು ಶ್ರೀ ವಿಶ್ವಾರಾಧ್ಯರ ಪೀಠಕ್ಕೆ ಸೇರಿದ್ದು. ಆದ್ದರಿಂದ ಕವಿಯು ಹೀಗೆ ಹೇಳುತ್ತಾನೆ.

ಪಶ್ಚಿಮ ದಿಕ್ಕಿಗಿರುವ ವರವೀ ಸಿದ್ದಪ್ಪನ ಸ್ಥಾನವು ಬಹಳೇ ಮನೋಹರವಾಗಿದೆ. ಸಿದ್ಧನಂಜೇಶ್ವರ ಮಠದಿಂದ ಪಡುವಲಿಗೆ ಮೂರು ಮೈಲು ಗುಡ್ಡದಲ್ಲಿ ನಡೆದುಕೊಂಡು ಹೋದರೆ **ಮುನವಳ್ಳಿಗೂ** ಹೂಲಿಗೂ ನಡುವೆ ಮೂರು ಕೊಳ್ಳಗಳು ಕೂಡಿದಲ್ಲಿ ಭವ್ಯವಾದೊಂದು ನಿರ್ಜನ ಸ್ಥಾನ ದಲ್ಲಿ ಗುಡ್ಡದ ಒಂದು ಮೈಗೆ ತನ್ನಿಂತಾನೇ ಉಂಟಾದ ಒಂದು ದೊಡ್ಡ

* ಗುರುರಾಜ ಚಾರಿತ್ರವನ್ನು ಕುರಿತು ಕವಿಚರಿತ್ರಕಾರರು ತಮ್ಮ ಕವಿಚರಿತೆಯ ಎರಡನೇ ಸಂಪುಟದ ೩೮೫ನೇ ಪುಟದಲ್ಲಿಯು ಕೆಲವು ಮಾತುಗಳನ್ನು ಹೇಳಿದ್ದಾರೆ. ಈ ಗ್ರಂಥದ ಒಂದು ಪ್ರತಿಯು ಹೂಲಿಯ ಮಠದಲ್ಲಿದೆ. ಕವಿಚರಿತೆಯಲ್ಲಿ ಹೇಳಿರುವುದನ್ನು ನೋಡಿದರೆ ಈ ಗ್ರಂಥದಿಂದ ಎಷ್ಟೋ ಮಹತ್ವದ ವಿಷಯಗಳು ಗೊತ್ತಾಗಬಹುದೆಂದು ತೋರುತ್ತದೆ. ಸದ್ಯದ ಮಟ್ಟಿಗೆ ಇಷ್ಟು ಮಾತ್ರ ಹೇಳಬಲ್ಲೆವು.

ಹೊದರಿನಲ್ಲಿ ಮೂರು ಲಿಂಗಗಳಿವೆ. ಅರುವತ್ತಡಿ ಆಳವಾದ ಕಿರಿಯುಗಲದ ಕೊಳ್ಳದಲ್ಲಿ ಗಿಡಮರಗಳ ಜುಂಪಿನಲ್ಲಿ ಇದೊಂದು ಒಳ್ಳೇ ರಮಣೀಯವಾದ ಸ್ಥಳ ಇದಕ್ಕೆ **ವರವಿ**ಯೆನ್ನುವರು. ಆದರೆ ಇದರ ಹತ್ತರ ಸಮೀಪದಲ್ಲಿ ಈ ಹೆಸರಿನ ಊರುಗೀರು ಏನೂ ಇಲ್ಲ. ಇದನ್ನು ನೋಡಿವರೆ ತುಂಬಾ ಭಾವೋದ್ದೀಪನವಾಗುತ್ತದೆ. ಇದೊಂದು ಯೋಗಾರಾಮುವೆಂದು ಮನವು ಥಟ್ಟನೆ ಒಪ್ಪಿಕೊಂಡು ಬಿಡುತ್ತದೆ. ಈ ನಿಸರ್ಗಸಿದ್ಧವಾದ ಗುಹೆಯು ಇದುರಿಗೆ ಗುಡ್ಡದ ನೆತ್ತಿಗೆ ದೊಡ್ಡದೊಂದು ಲೇಖವಿದೆ. ಅದು ಸುಮಾರು ಹದಿನಾಲ್ಕು ನೂರು ವರುಷಗಳಿಗೆ ಮುಂಚಿನದು. ಬಾದಾಮಿಯು **ಸತ್ಯಾಶ್ರಯ ಪೊಲೆಕೇಸಿವಲ್ಲಭರಾಜನು** ಇಲ್ಲಿ ಭೂದಾನ ಮಾಡಿದ ಹಾಗೆ ಉಲ್ಲೇಖವಿದೆ. ಇದರ ಮೇಲಿಂದ ಪುಲಿಕೇಶಿಯು ಕಾಲಕ್ಕೆ ಇದು ಪ್ರಸಿದ್ಧವಾದ ಪುಣ್ಯ ಕ್ಷೇತ್ರವಾಗಿದ್ದಿತೆಂಬುದು ನಿರ್ವಿವಾದವಾಗಿದೆ. ಈ ಸ್ಥಾನವು ಈ ಪೂರ ಮಠದ ಮೂಲ ಸ್ವಾಮಿಗಳಾದ ಶ್ರೀ ಸಿದ್ಧಚೈತನ್ಯರ ತಪೋಭೂಮಿಯಾಗಿರಬಹುದೆಂಬ ಊಹೆಗೆ ಅವಕಾಶವಿದೆ. ಯಾಕಂದರೆ ಪಟ್ಟಾವಳಿಯು ಒಂದಾನೊಂದು ಪ್ರತಿಯಲ್ಲಿ ಸಿದ್ಧಚೈತನ್ಯರಿಗೆ "**ವರವೀವ ಸಿದ್ಧ ಚೈತನ್ಯ**"ರೆಂದು ಹೇಳಿದೆಯಂತೆ. ಇದರ ಮೇಲಿಂದಲೇ ವರವೀ ಸಿದ್ದಪ್ಪನ **ಗುಡಿ**ಯೆಂದು ರೂಢಿಯಾಗಿರಬಹುದಾಗಿ ತೋರುತ್ತದೆ.

ಇನ್ನು ಹೂಲಿಯ ಮಠದ ಪಟ್ಟಾವಳಿಯು ಬಗ್ಗೆ ವಿಚಾರ ಮಾಡುವಾ.

## ಶ್ರೀಮತ್ಪೂವಲ್ಲೀ ಪಂಚವರ್ಣ ಬೃಹನ್ಮಠ ಪಟ್ಟಾವಲಿಃ.

| ನ. | ಪಟ್ಟಾಧಿಕಾರಗಳ ನಾಮಾವಲಿಯು. | ಸ್ಥಿರ ಶಕ ದಿಂದ | ಶಕದ ವರೆಗೆ | ಶಿಷ್ಯೈಕ್ಯ ಸ್ಥಾನ. |
|---|---|---|---|---|
| ೧ | ಶ್ರೀ ಸಿದ್ಧಚೈತನ್ಯ ಶಿವಾಚಾರ್ಯರು (ಜೀವಿಸಿದ ಕಾಲ) | | ೧೫೦ | ಪೂವಲ್ಲೀ |
| ೨ | ಘನಲಿಂಗ ಶಿವಾಚಾರ್ಯರು | | ೬೫ | ಪೂವಲ್ಲೀ |
| ೩ | ಕಾಲಮುಖ ಶಿವಾಚಾರ್ಯರು | ,, | ೪೪ | ಪೂವಲ್ಲೀ |
| ೪ | ನಂದಿಕೇಶ್ವರ ಶಿವಾಚಾರ್ಯರು | | ೯೮ | ಪೂವಲ್ಲೀ |
| ೫ | ಚಿದ್ಘನಲಿಂಗ ಶಿವಾಚಾರ್ಯರು | | ೩೫ | ಮುನಿಪಲ್ಲೀ |
| ೬ | ಕಾಲಾನನ ಶಿವಾಚಾರ್ಯರು | ೩೫. | ೧೧೦ | ಪೂವಲ್ಲೀ |

| | | | | |
|---|---|---|---|---|
| ೭ | ಶ್ರೀ | ಶಿಲೆಕಂಠ ಶಿವಾಚಾರ್ಯರು | ೧೧೦- ೧೬೭ | ಸಿದ್ಧಾಚಲ |
| ೮ | | ಚಿದ್ಘನಲಿಂಗ ಶಿವಾಚಾರ್ಯರು | ೧೬೭- ೧೯೬ | ಪೂವಲ್ಲೀ |
| ೯ | ,, | ಶಿವಶಕ್ತಿ ಶಿವಾಚಾರ್ಯರು | ೧೯೬- ೨೦೯ | ಸಿದ್ಧಾಚಲ |
| ೧೦ | ,, | ನೀಲಕಂಠ ಶಿವಾಚಾರ್ಯರು | ೨೦೯- ೨೭೨ | ಸಿದ್ಧಾಚಲ |
| ೧೧ | | ಹರದತ್ತ ಶಿವಾಚಾರ್ಯರು | ೨೭೨- ೨೯೮ | ಪೂವಲ್ಲೀ |
| ೧೨ | | ಚಿದ್ಘನಲಿಂಗ ಶಿವಾಚಾರ್ಯರು | ೨೯೮- ೩೫೯ | ಮುನಿಪಲ್ಲೀ |
| ೧೩ | ,, | ಕಾಲಾನನ ಶಿವಾಚಾರ್ಯರು | ೩೫೯- ೪೦೫ | ಪೂವಲ್ಲೀ |
| ೧೪ | | ಶಿವಯೋಗಿ ಶಿವಾಚಾರ್ಯರು | ೪೦೫- ೫೦೩ | ನಖಪುರ |
| ೧೫ | ,, | ಯೋಮ ಶಿವಾಚಾರ್ಯರು | ೫೦೩- ೫೩೧ | ಪೂವಲ್ಲೀ |
| ೧೬ | | ಸಿದ್ಧೇಶ್ವರ ಶಿವಾಚಾರ್ಯರು | ೫೩೧- ೬೧೬ | ಪೂವಲ್ಲೀ |
| ೧೭ | ,, | ವಿಶ್ವೇಶ್ವರ ಶಿವಾಚಾರ್ಯರು | ೬೧೬- ೬೭೨ | ನಖಪುರ |
| ೧೮ | | ಶಿವಯೋಗಿ ಶಿವಾಚಾರ್ಯರು | ೬೭೨- ೭೦೫ | ಮಹಾಕೂಟ |
| ೧೯ | | ಚಿದ್ಘನ ಶಿವಾಚಾರ್ಯರು | ೭೦೫ ೭೨೨ | ನಖಪುರ |
| ೨೦ | | ಮಹೇಶ್ವರ ಶಿವಾಚಾರ್ಯರು | ೭೨೨- ೭೫೯ | ಪೂವಲ್ಲೀ |
| ೨೧ | | ಚಂದ್ರಶೇಖರ ಶಿವಾಚಾರ್ಯರು | ೭೫೯- ೭೬೮ | ಪೂವಲ್ಲೀ |
| ೨೨ | | ಸಿದ್ಧೇಶ್ವರ ಶಿವಾಚಾರ್ಯರು | ೭೬೮- ೮೧೧ | ಸಿದ್ಧಾಚಲ |
| ೨೩ | ,, | ವಿಶ್ವೇಶ್ವರ ಶಿವಾಚಾರ್ಯರು | ೮೧೧- ೮೩೨ | ಸಿದ್ಧಾಚಲ |
| ೨೪ | | ಸಿದ್ಧನಂದೀಶ್ವರ ಶಿವಾಚಾರ್ಯರು | ೮೩೨- ೯೧೨ | ಸಿದ್ಧಾಚಲ |
| ೨೫ | | ಲಕುಲೀಶ ಶಿವಾಚಾರ್ಯರು | ೯೧೨- ೯೩೫ | ಪೂವಲ್ಲೀ |
| ೨೬ | | ಏಕೋದೇವ ಶಿವಾಚಾರ್ಯರು | ೯೩೫- ೯೫೧ | ಸಿದ್ಧಾಚಲ |
| ೨೭ | ,, | ಈಶಾನಯೋಗಿ ಶಿವಾಚಾರ್ಯರು | ೯೫೧- ೯೭೩ | ಪೂವಲ್ಲೀ |
| ೨೮ | ,, | ಸೋಮದೇವ ಶಿವಾಚಾರ್ಯರು | ೯೭೩- ೯೮೬ | ಪೂವಲ್ಲೀ |
| ೨೯ | | ಜ್ಞಾನಶಕ್ತಿ ಶಿವಾಚಾರ್ಯರು | ೯೮೬-೧೦೧೫ | ಸಿದ್ಧಾಚಲ |
| ೩೦ | ,, | ತತ್ಪುರುಷ ಶಿವಾಚಾರ್ಯರು | ೧೦೧೫-೧೦೨೮ | ಪೂವಲ್ಲೀ |
| ೩೧ | ,, | ಸಿದ್ಧೇಶ್ವರ ಶಿವಾಚಾರ್ಯರು | ೧೦೨೮-೧೦೮೬ | ಸಿದ್ಧಾಚಲ |
| ೩೨ | ,, | ಚಿದ್ಘನ ಶಿವಾಚಾರ್ಯರು | ೧೦೮೬-೧೧೦೭ | ಸಿದ್ಧಾಚಲ |
| ೩೩ | ,, | ಶಿವಶಕ್ತಿ ಶಿವಾಚಾರ್ಯರು | ೧೧೦೭-೧೧೨೬ | ಪೂವಲ್ಲೀ |
| ೩೪ | ,, | ವಾಮಶಕ್ತಿ ಶಿವಾಚಾರ್ಯರು | ೧೧೨೬-೧೧೭೯ | ಗುಮಗೊಳ್ಳ |
| ೩೫ | ,, | ರುದ್ರಶಕ್ತಿ ಶಿವಾಚಾರ್ಯರು | ೧೧೭೯-೧೨೧೬ | ನಖಪುರ |

| | | | |
|---|---|---|---|
| ೩೬ | ಶ್ರೀ ಈಶಾನಯೋಗಿ ಶಿವಾಚಾರ್ಯರು | ೧೨೧೬.೧೨೩೧ | ಸಿದ್ಧಾಚಲ |
| ೩೭ | ,, ಜ್ಞಾನಶಕ್ತಿ ಶಿವಾಚಾರ್ಯರು | ೧೨೩೧-೧೨೫೮ | ಪೂವಲ್ಲೀ |
| ೩೮ | ಸಾಂಬಶಕ್ತಿ ಶಿವಾಚಾರ್ಯರು | ೧೨೫೮.೧೨೯೩ | ನಖಪುರ |
| ೩೯ | ಸಿದ್ಧೇಶ್ವರ ಶಿವಾಚಾರ್ಯರು | ೧೨೯೩-೧೩೧೬ | ಪೂವಲ್ಲೀ |
| ೪೦ | ಚಂದ್ರಶೇಖರ ಶಿವಾಚಾರ್ಯರು | ೧೩೧೬-೧೪೦೭ | ಮುನಿಪಲ್ಲೀ |
| ೪೧ | ಸಿದ್ಧಲಿಂಗ ಶಿವಾಚಾರ್ಯರು | ೧೪೦೭ ೧೪೫೦ | ಅಸುಂಡಿ |
| ೪೨ | ,, ಸಿದ್ಧಬಸವ ಶಿವಾಚಾರ್ಯರು | ೧೪೫೦-೧೫೦೨ | ಅಸುಂಡಿ |
| ೪೩ | ,, ಗುರುಸಿದ್ಧ ಶಿವಾಚಾರ್ಯರು | ೧೫೦೨-೧೫೨೨ | ಗುಮುಗೊಳ್ಳ |
| ೪೪ | ಸಿದ್ಧಲಿಂಗ ಶಿವಾಚಾರ್ಯರು | ೧೫೨೨-೧೫೫೧ | ಹಂಚಿನಾಳ |
| ೪೫ | ,, ಸಿದ್ಧಬಸವಶಿವಾಚಾರ್ಯರು | ೧೫೫೧- ೧೬೩೦ | ಬೂದಿಹಾಳ |
| ೪೬ | ,, ಸಿದ್ಧಲಿಂಗ ಶಿವಾಚಾರ್ಯರು | ೧೬೩೦- ೧೬೫೮ | ಪೂವಲ್ಲೀ |
| ೪೭ | ,, ಸಿದ್ಧಬಸವ(ಗಡ್ಡದ ಪಟ್ಟದ) ಶಿವಾಚಾರ್ಯರು | ೧೬೫೮-೧೭೫೪ | ಪೂವಲ್ಲೀ |
| ೪೮ | ಶ್ರೀರುದ್ರ ಶಿವಾಚಾರ್ಯರು. | ೧೭೫೪-೧೭೭೪ | ನಾವಳ್ಳಿ |
| ೪೯ | ಗುರುಬಸವ ಶಿವಾಚಾರ್ಯರು | ೧೭೭೪- ೧೮೦೩ | ಉಗರಗೊಳ್ಳ |
| | ಸಿದ್ಧಬಸವ ಶಿವಾಚಾರ್ಯರು | ೧೮೦೩-೧೮೩೨ | ಪೂವಲ್ಲೀ |
| ೫೧ | ,, ಮಹೇಶ್ವರಶಿವಾಚಾರ್ಯರು | ೧೮೩೨- | |

| ನ. | ಚರ ಪಟ್ಟಾಧಿಕಾರಿಗಳ ನಾಮಾವಲಿಯು. | ಶಕ ದಿಂದ | ಶಕದ ವರೆಗೆ | ಶಿವೈಕ್ಯ ಸ್ಥಾನ. |
|---|---|---|---|---|
| ೧ | ಶ್ರೀ ಸಿದ್ಧಚೈತನ್ಯ ಶಿವಾಚಾರ್ಯರ. (ಜೀವಿಸಿದಕಾಲ) | | ೧೫೦ | ಪೂವಲ್ಲೀ |
| ೨ | ಶಿವಾದಿತ್ಯ ಶಿವಾಚಾರ್ಯರು | ,, | ೯೫ | ಕಂಚೀ |
| ೩ | ವಿಶ್ವೇಶ್ವರ ಶಿವಾಚಾರ್ಯರು | | ೭೮ | ಪೂವಲ್ಲೀ |
| ೪ | ನೀಲಕಂಠ ಶಿವಾಚಾರ್ಯರು | | ೮೦ | ಹೃಷೀಕೇಶ |
| ೫ | ಚಿದ್ಘನ ಶಿವಾಚಾರ್ಯರು | ೮೦- | ೧೧೮ | ಶ್ರೀಶೈಲ |
| ೬ | ಶಿವಾನುಭವ ಶಿವಾಚಾರ್ಯರು | ೧೧೮- | ೧೯೪ | ಪೂವಲ್ಲೀ |
| ೭ | ಸ್ವಪ್ರಭಾನಂದ ಶಿವಾಚಾರ್ಯರು | ೧೯೩- | ೨೩೦ | ಪೂವಲ್ಲೀ |
| ೮ | ,, ಚಿದಂಬರ ಶಿವಾಚಾರ್ಯರು | ೨೩೦- | ೨೪೨ | ನಖಪುರ |

| | | | |
|---|---|---|---|
| ೯ | ಶ್ರೀ ಚಿಚ್ಛಕ್ತಿ ಶಿವಾಚಾರ್ಯರು | ೨೪೨- ೨೯೧ | ಸಿದ್ಧಾಚಲ |
| ೧೦ | ಯೋಮ ಶಿವಾಚಾರ್ಯರು | ೨೯೧ ೩೦೧ | ಸಿದ್ಧಾಚಲ |
| ೧೧ | ,, ಚಿದಾನಂದ ಶಿವಾಚಾರ್ಯರು | ೩೦೧- ೩೫೮ | ಪೂವಲ್ಲೀ |
| ೧೨ | ಧವಳಾಂಗ ಶಿವಚಾರ್ಯರು | ೩೫೮- ೩೯೪ | ಧವಳೇಶ್ವರ |
| ೧೩ | ,, ಜ್ಞಾನಶಕ್ತಿ ಶಿವಾಚಾರ್ಯರು | ೩೯೪- ೪೩೯ | ಪೂವಲ್ಲೀ |
| ೧೪ | ಶಿವಶಕ್ತಿ ಶಿವಾಚಾರ್ಯರು | ೪೩೯- ೫೧೩ | ಮುನಿಪಳ್ಳಿ |
| ೧೫ | ವಾಮಶಕ್ತಿ ಶಿವಾಚಾರ್ಯರು | ೫೧೩- ೬೧೦ | ಪೂವಲ್ಲೀ |
| ೧೬ | ಲೋಕನಾಥ ಶಿವಾಚಾರ್ಯರು | ೬೧೦- ೬೬೩ | ಲೋಕಾಪುರ |
| ೧೭ | ಅಘೋರ ಶಿವಾಚಾರ್ಯರು | ೬೬೩- ೬೯೮ | ಪೂವಲ್ಲೀ |
| ೧೮ | ಸಿದ್ಧನಂದೀಶ್ವರ ಶಿವಾಚಾರ್ಯರು | ೬೯೮- ೮೧೩ | ಪೂವಲ್ಲೀ |
| ೧೯ | ಶಿವಾನುಭವ ಶಿವಾಚಾರ್ಯರು | ೮೧೩- ೮೭೧ | ಧವಳೇಶ್ವರ |
| ೨೦ | ಈಶಾನಯೋಗಿಶಿವಾಚಾರ್ಯರು | ೮೭೧- ೯೪೩ | ನಖಪುರ |
| ೨೧ | ಶಿವಶಕ್ತಿ ಶಿವಾಚಾರ್ಯರು | ೯೪೩-೧೦೦೬ | ಸಂಗಳ |
| ೨೨ | ಶ್ರೀರುದ್ರಶಕ್ತಿ ಶಿವಾಚಾರ್ಯರು | ೧೦೦೬-೧೦೨೧ | ಪೂವಲ್ಲೀ |
| ೨೩ | ಅಘಹರ ಶಿವಾಚಾರ್ಯರು | ೧೦೨೧-೧೦೪೨ | ಪೂವಲ್ಲೀ |
| ೨೪ | ಮುನೀಶ್ವರ ಶಿವಾಚಾರ್ಯರು | ೧೦೪೨-೧೦೬೧ | ನಖಪುರ |
| ೨೫ | ,, ಜ್ಞಾನಶಕ್ತಿ ಶಿವಾಚಾರ್ಯರು | ೧೦೬೧-೧೦೯೨ | ಹಂಪಿ |
| ೨೬ | ,, ಬ್ರಹ್ಮಶಕ್ತಿ ಶಿವಾಚಾರ್ಯರು | ೧೦೯೨-೧೧೬೭ | ಪೂವಲ್ಲೀ |
| ೨೭ | ಧವಳಾಂಗ ಶಿವಾಚಾರ್ಯರು | ೧೧೬೭ ೧೨೦೮ | ಸಂಗಳ |
| ೨೮ | ತತ್ಪುರುಷ ಶಿವಾಚಾರ್ಯರು | ೧೨೦೮-೧೨೪೫ | ನಖಪುರ |
| ೨೯ | ಸಿದ್ಧನಂದೀಶ್ವರಶಿವಾಚಾರ್ಯರು | ೧೨೪೫-೧೨೮೪ | ಕುರವತ್ತಿ |
| ೩೦ | ರುದ್ರಮುನಿ ಶಿವಾಚಾರ್ಯರು | ೧೨೮೪-೧೩೧೧ | ಮುನವಳ್ಳಿ |
| ೩೧ | ಅಘೋರ ಶಿವಾಚಾರ್ಯರು | ೧೩೧೧-೧೩೧೭ | ಪೂವಲ್ಲೀ |
| ೩೨ | ಸಿದ್ಧನಂದೀಶ್ವರಶಿವಾಚಾರ್ಯರು | ೧೩೧೭-೧೩೪೮ | ಬುಕ್ಕಸಾಗರ |
| ೩೩ | ಈಶಾನಯೋಗಿಶಿವಾಚಾರ್ಯರು | ೧೩೪೮ ೧೩೭೦ | ಪೂವಲ್ಲೀ |
| ೩೪ | ಸಿದ್ಧನಂದೀಶ್ವರಶಿವಾಚಾರ್ಯರು | ೧೩೭೦-೧೪೪೧ | ಪೂವಲ್ಲೀ |
| ೩೫ | ಚಿಕ್ಕನಂಜೇಶಶಿವಾಚಾರ್ಯರು | ೧೪೪೧-೧೪೯೮ | ಪೂವಲ್ಲೀ |
| ೩೬ | ಸಿದ್ಧಲಿಂಗ ಶಿವಾಚಾರ್ಯರು | ೧೪೯೮-೧೫೨೪ | ಸಿರಸಂಗಿ |
| ೩೭ | ಸಿದ್ಧನಂಜೇಶ್ವರಶಿವಾಚಾರ್ಯರು | ೧೫೨೪-೧೫೬೨ | ಸವದತ್ತಿ |

೩೮ ಶ್ರೀ ಸಿದ್ಧವೀರ ಶಿವಾಚಾರ್ಯರು ೧೫೬೨-೧೬೩೫ ಅವರಾದಿ
೩೯ ಶಿದ್ಧೇಶ್ವರ ಶಿವಾಚಾರ್ಯರು ೧೬೩೫-೧೬೯೭ ಹಡಗಲಿ
೪೦ ಗುರುಸಿದ್ಧ ಶಿವಾಚಾರ್ಯರು ೧೬೯೭-೧೭೨೭ ಲೋಕಾಪುರ
೪೧ ಸಿದ್ಧಬಸವಶಿವಾಚಾರ್ಯರು ೧೭೨೭-೧೭೫೧ ಕೊಟಬಾಗಿ
೪೨ ಸಿದ್ಧಲಿಂಗ ಶಿವಾಚಾರ್ಯರು ೧೭೫೧-೧೭೭೭ ಪೂವಲ್ಲೀ
೪೩ ಗುರುಸಿದ್ಧಶಿವಾಚಾರ್ಯರು ೧೭೭೭-೧೮೨೩ ಪೂವಲ್ಲೀ
೪೪ ನೀಲಕಂಠಶಿವಾಚಾರ್ಯರು ೧೮೨೩.

ಮೇಲ್ಕಾಣಿಸಿದ ಪಟ್ಟಾವಳಿಯ ಸತ್ಯತೆಯ ಬಗ್ಗೆ ಪ್ರಮಾಣಗಳೆಂದರೆ ಹೂಲಿಯ ಮದನಾಸುರ ದೇವರ ಗುಡಿಯಲ್ಲಿಯೂ ಕೆರೆ ಸಿದ್ಧೇಶ್ವರ ದೇವರ ಗುಡಿಯಲ್ಲಿಯೂ ಇರುವ ಎರಡು ಶಿಲಾಲಿಪಿಗಳೇ ಸರಿ. ಇವೆರಡರಲ್ಲಿ ಮದನಾಸುರ ದೇವರ ಗುಡಿಯೊಳಗಿರುವ ಲಿಪಿಯಲ್ಲಿ ನಾಲ್ಕು ಕಾಲದ ಶಾಸನಗಳು (ಸನದುಗಳು) ಇವೆ. ಈ ನಾಲ್ಕೂ ಶಾಸನಗಳು ಕ್ರಮವಾಗಿ–ಶಾಲಿವಾಹನ ಶಕದ ೧೦೫೬ನೇ ತಾರಣ, ೧೦೮೪ನೇ ಚಿತ್ರಭಾನು, ೧೦೯೬ನೇ ಕ್ರೋಧಿ, ೧೧೪೬ನೇ ತಾರಣ ಸಂವತ್ಸರಗಳಲ್ಲಿ ಬರೆಯಲ್ಪಟ್ಟಿವೆ. ಕೆರೆ ಸಿದ್ಧೇಶ್ವರ ದೇವಾಲಯದ ಶಾಸನವು ಶಾಲಿವಾಹನ ಶಕದ ೧೦೫೯ನೇ ಸರ್ವಜಿತು ಸಂವತ್ಸರದಲ್ಲಿ ಬರೆಯಲ್ಪಟ್ಟಿದೆ. ಒಟ್ಟಿಗೆ ಎರಡೂ ಲಿಪಿಗಲ್ಲುಗಳಲ್ಲಿ ಐದು ಸನದುಗಳಿವೆ. ಇವುಗಳಲ್ಲಿ––

**ಮೊದಲನೆಯದು**:– ಚಾಳುಕ್ಯ ತ್ರಿಭುವನಮಲ್ಲ ವಿಕ್ರಮಾದಿತ್ಯನ ದಂಡನಾಯಕನಾದ ಅನನ್ತಪಾಳನ ಅಳಿಯ ಲಕ್ಕರಸನು ಬೆಳುವಲನಾಡನ್ನಾಳುತ್ತಿದ್ದು, ಹೆಗ್ಗಡೆ ಸಿಂಗರಸನಿಗೆ ಹೇಳಿ ಹೂಲಿಯ ಶ್ರೀಮದನ್ಧಾಸುರ ದೇವರಿಗೆ ಅಲ್ಲಿಯ ದಂಡದೋಷದೊಳಗೊಂದು ಭಾಗವನ್ನು **ಸ್ಥಾನಾಚಾರ್ಯರಾದ ತತ್ಪುರುಷ ಪಂಡಿತರ** ಸಮಕ್ಷದಲ್ಲಿ ದಾನವಾಗಿ ಬಿಡಿಸಿರುವನು. ಇದಲ್ಲದೆ ಹೂಲಿಯ ಊರೊಡೆಯರಾದ ಸಾವಿರ ಮಂದಿ ಬ್ರಾಹ್ಮಣರೂ ಶಿವಯ್ಯಗೇರಿಯ ನಾಲ್ಕುಜನ ಪ್ರಮುಖರೂ ಅನ್ಧಾಸುರ ದೇವರಿಗೆ ಕೆಲವು ಸುಂಕಗಳನ್ನೂ, ಭೂಮಿಯನ್ನೂ ದಾನವಾಗಿ ಬಿಟ್ಟಿರುವರು.

ಈ ಶಾಸನದಲ್ಲಿ ಸ್ಥಾನಾಚಾರ್ಯರ ಪೂರ್ವ ಪರಂಪರೆ ಹೀಗೆ ಹೇಳಿದೆ:—

ಈ ಮಹಿಯೊಳ್ನೆಗಳ್ದರ್ವಿ ।
ದ್ಯಾಮಹಿಮೋನ್ನತಿಯೊಳುಗ್ರತಪದೊಳ್ಮುಕ್ತಿ- ॥
ಶ್ರೀಮುಖ ಮಣಿಮುಕುರರ್ಕಾ ।
ಳಾಮುಖರೇನೋ ಪರಾನ್ಮುಖರ್ ಮುನಿಮುಖ್ಯರ್ ॥

ಅವರೊಳ್ಹೂಲಿಯ ದೇವರೆಂಬರೆಸೆವರ್ ನಿಷ್ಠಾಗ್ರಗಣ್ಯರ್ ಬಳಿ- ।
ಕ್ಕವರಿಂದಂ ಲಕುಳೀಶ ದೇವರವರಿಂ ವಜ್ರಾಣಿದೇವರ್ ಗುಣ- ॥
ಪ್ರವರರ್ ಸರ್ವ್ವಕಳಾಗಮ ಪ್ರಥಿತ ವಿದ್ಯೇಶಾನಯೋಗೀಂದ್ರರೇ- ।
ನವರಿಂ ಪೆಂಪಿನ ಸೋಮದೇವಮುನಿಪರ್ ವಿಶ್ವಂಭರಾಭಾಗದೊಳ್ ॥

ರುಚಿರೋದ್ಯದ್ರತ್ನರೋಚಿಸ್ತಬಕ ವಿಳಸಿತಾನೇಕ ಭೂಪಾಳ ಚೂಡಾ ।
ನಿಚಯ ಪ್ರೋದ್ಘೃಷ್ಟ ಪಾದದ್ವಯ ನುಪಗತ ಸಾರಸ್ವತಂ ನೂತ್ನ
ಧರ್ಮ್ಮೋ ।
ಪಚಯಾಂಭೋರಾಶಿ ಕಾಳಾನನ ನಿಖಿಳಮುನೀಂದ್ರೋತ್ತಮಂ
ಮೋಕ್ಷಲಕ್ಷ್ಮೀ ।
ಕುಚಕುಂಭಾಳಂಕೃತೋರಸ್ಥಳ ನಮಳಯಶ ಜ್ಞಾನಶಕ್ತಿವ್ರತೀಂದ್ರಂ ॥

ಏಕರಿಯತೆ ಬಹುತರ್ಕ್ಕ ।
ವ್ಯಾಕರಣಂ ಜ್ಞಾನಶಕ್ತಿ ಪಂಡಿತದೇವ- ॥
ರ್ಗೇಕಾಕ್ಷರಮೆಂದು ಮಹೀ ।
ಲೋಕಂ ಬಣ್ಣಿಸುವುದವರ ಮಹಿಮೋನ್ನತಿಯಂ ॥

ವಿತತಯಶಂ ಚಳುಕ್ಯಕುಳ ತಿಗ್ಮಕರಂ ಭುವನಯ್ಕಮಲ್ಲಭೂ- ।
ಪತಿ ಬಳಿಯಟ್ಟಿ ತನ್ಮುನಿಪದಾಬ್ಜಯುಗಕ್ಕೆ ವಿನಮ್ರನಾಗಿ ನಿ- ॥
ಶ್ಚಿತಮತಿ ಕೊಟ್ಟುಪೂಜೆಯೊಳೆ ಮಾಡಿಸಿದರ್ ಶಿವಗೇಹಮಂ ಶಿಳಾ ।
ಯತನಮನಿಂತು ಮಾಡಿಪರೆ ಪೇಳೆನುತುಂ ಧರೆಬಣ್ಣಿಪನ್ನೆಗಂ ॥

ಅವರಣುಗಿನ ಶಿಷ್ಯರಿಳಾ ।
ಪ್ರವರರ್ ಗುಣಗಣ ಸಮನ್ವಿತರ್ ನಾನಾ ಶಾ- ॥
ಸ್ತ್ರವಿದರ್ ತತ್ಪುರುಷರ್ ದಿ- ।
ಗ್ವಿವರಂಗಳ ನಮಳಕೀರ್ತ್ತಿಯಿಂ ಧವಳಿಸಿದರ್ ॥

( ಈ ಆರು ವೃತ್ತಗಳು ಮೂಲ ಶಿಲಾಲಿಪಿಯಲ್ಲಿ ೭ನೇ ಪಂಕ್ತಿಯಿಂದ ೧೫ನೇ ಪಂಕ್ತಿಯವರೆಗೆ ಅಡಕವಾಗಿವೆ. )

ಪ್ರಖ್ಯಾತರಾದ ಕಾಳಾಮುಖ ಮುನೀಶ್ವರರನೇಕರಲ್ಲಿ * **ಪೂಲಿಯ ದೇವರೆಂಬವರೊಬ್ಬರು** ಆಜನ್ಮ ಬ್ರಹ್ಮಚಾರಿಗಳು. ಅವರ ಶಿಷ್ಯರು **ಲಕುಳೀಶ್ವರ ದೇವರು.** ಅವರ ಶಿಷ್ಯರು **ವಖ್ಖಾಣಿದೇವರು.** ಅವರ ಶಿಷ್ಯರು **ಈಶಾನಯೋಗೀಂದ್ರರು.** ಅವರ ಶಿಷ್ಯರು **ಸೋಮದೇವ ಮುನಿಗಳು.** ಅವರ ಶಿಷ್ಯರು **ಜ್ಞಾನಶಕ್ತಿ ವ್ರತೀಂದ್ರರು.** ಇವರು ಅನೇಕ ರಾಜರಿಂದ ಪೂಜೆಗೊಂಡವರು. ಕಲ್ಯಾಣದ ಚಾಳುಕ್ಯ ವಿಕ್ರಮಾದಿತ್ಯ ತ್ರಿಭುವನಮಲ್ಲ ರಾಜನ ಅಣ್ಣನಾದ ಭುವನೈಕಮಲ್ಲ ಸೋಮೇಶ್ವರನು ಪಾದಪೂಜೆಮಾಡಿ ಕೊಟ್ಟ ದ್ರವ್ಯದಿಂದ ಇವರು ಶಿವಾಲಯವನ್ನು ಕಟ್ಟಿಸಿದರು. ಇವರ ಶಿಷ್ಯರೇ **ತತ್ಪುರುಷ ಪಂಡಿತರು.**

ಈ ಏಳು ಹೆಸರುಗಳೂ ಪಟ್ಟಾವಳಿಯಲ್ಲಿ ಕ್ರಮವಾಗಿ ಸಿಕ್ಕುತ್ತವೆ. ಪಟ್ಟಾವಳಿಯಲ್ಲಿ ೬೪ರಿಂದ ೭೦ರ ವರೆಗಿನ ಪಟ್ಟದ ಸ್ವಾಮಿಗಳ ಹೆಸರುಗಳನ್ನು ಈ ಶಾಸನೋಕ್ತಗಳಾದ ಹೆಸರುಗಳಿಗೆ ಸರಿ ಹಚ್ಚಿ ನೋಡಿದರೆ-೬೪ನೇಯವರಾದ ಸಿದ್ಧೇಶ್ವರರೆಂಬವರನ್ನು **ಪೂಲಿಯ**ದೇವರೆಂದೂ, ೬೬ನೇಯವರಾದ ಏಕೋದೇವರನ್ನು ವಖ್ಖಾಣಿದೇವರೆಂದೂ ಶಿಲಾಲಿಪಿಯಲ್ಲಿ ಹೇಳಿದ್ದು ಕಾಣುತ್ತದೆ. ಆದರೆ ಉಳಿದ ಹೆಸರುಗಳು ತುಂಬಾ ಯಥಾಯಥವಾಗಿವೆ. ಬಾಧಕವೇನೂ ಇಲ್ಲ. ಅಲ್ಲದೆ ಶಾಸನದಲ್ಲಿ ಹೇಳುವ ಕಾಲದಲ್ಲಿ ತತ್ಪುರುಷ

* ಮೈಸೂರು ಸೀಮೆಯಲ್ಲಿ-ಹಾಸನ ತಾಲೂಕಿನ **ಮುದುಗೆರೆ** ಗ್ರಾಮದ ಶಿಲಾಲಿಪಿಯಲ್ಲಿ-

" ಒಪ್ಪುಗುಂ। ಮುದುಗೆರೆ ದೇವರಾಜನ ಪುರಕ್ಕೆಣೆಯಾಗಿ ಮಹೀವಿಭಾಗದೊಳ್। ಅಲ್ಲಿಗೆ ಮುನಿಪತಿ ಕೀರ್ತಿವಲ್ಲಿಯೆ ಮಿಸುಪಂತೆ ಧವಳತನು ಕೆಂಜೆಡೆ ಸುಲಿಪಲ್ಲು ವರಮುದ್ರೆ ಲಾಕುಳಸಲ್ಲಕ್ಷಣವೊಗೆದನಂದು **ಮುದುಗೆರೆ** ಮುನಿಪಂ॥ ಆ **ಮಹಾಮುನೀಂದ್ರನ ನಿಜನಾಮಾಂಕಿತ ಮೆಂತೆಂದಡೆ** ಸ್ವಸ್ತಿಯಮ ನಿಯಮ ಸ್ವಾಧ್ಯಾಯಧ್ಯಾನ ಧಾರಣ ಮೋನಾನುಷ್ಠಾನ ಜಪ ಸಮಾಧಿ ಶೀಲ ಸಂಪನ್ನರುಂ ಜ್ಞಾನಪ್ರಸನ್ನರುಂ ಸಕಲ ಶಾಸ್ತ್ರಯಂತ್ರ ತಂತ್ರ ಪ್ರವೀಣರುಂ ಪರಚಿತ್ತಜಾಣರುಂ ಶ್ರೀಮನ್ಮಹಾದೇವ ದೇವೋತ್ತಮ ಪಾದಾಂಭೋಜ ಭೃಂಗರಪ್ಪ ಶ್ರೀಮದು **ನಾಗರಾಶಿ ಪಂಡಿತದೇವರು.** "

ಎಂದು ನಾಗರಾಶಿ ಪಂಡಿತರಿಗೆ ಮುದುಗೆರೆ ಮುನಿಪನೆಂದು ಹೇಳಿರುವ ಹಾಗೆ-ಮೇಲ್ಕಾಣಿಸಿದ **ಹೂಲಿಯ ಶಿಲಾಶಾಸನದಲ್ಲಿ ಅಲ್ಲಿಯ ಶ್ರೀಸಿದ್ಧೇಶ್ವರ ಮುನಿಗಳೆಂಬವರಿಗೇ ಪೂಲಿಯ ದೇವರೆಂದು** ಕರೆದಿರುವುದು ಆಶ್ಚರ್ಯವಲ್ಲ.

ಪಂಡಿತರು ಸ್ವಾಮಿಗಳಾಗಿ **ಇದ್ದರೆಂದು** ಪಟ್ಟಾವಲಿಯ ಕಾಲದಿಂದಲೂ **ಗೊತ್ತಾಗುತ್ತದೆ. ಇದಿರಲಿ.**

ಮದನಾಸುರ ದೇವಾಲಯದ ಒಂದೇ ಶಿಲಾಲಿಪಿಯಲ್ಲಿ ಒಂದರಕೆಳಗೊಂದರಂತೆ ಬರೆದ ನಾಲ್ಕು ಶಾಸನಗಳೊಳಗೆ **ಎರಡನೆಯದರಲ್ಲಿ:—**

**ಬಿಜ್ಜಳರಾಯನ ಆಳಿಕೆಯ ಏಳನೇ ವರ್ಷದಲ್ಲಿ**-ಎಂದರೆ ಶಾಲಿವಾಹನ ಶಕದ ೧೦೫೪ನೆಯ **ಚಿತ್ರಭಾನು** ಸಂವತ್ಸರದಲ್ಲಿ ಶ್ರೀ ಮದನಸ್ವಾಸುರ ದೇವರ ಸ್ಥಾನದಾಚಾರ್ಯರಾದ ಶ್ರೀ ಜ್ಞಾನಶಕ್ತಿದೇವರು ಪೂಲಿಯ ಗ್ರಹಾರದೊಡೆಯರಾದ ಸಾವಿರಮಂದಿ ಬ್ರಾಹ್ಮಣರ ಸಮಕ್ಷದಲ್ಲಿ ದೇವರಿಗೆ ಭೂಮಿಯನ್ನು ಬಿಟ್ಟಿರುವರು. ಈ **ಜ್ಞಾನಶಕ್ತಿ ದೇವರು** ಪಟ್ಟಾವಲಿಯಲ್ಲಿ ಚರಪಟ್ಟದ ೫೫ನೇ ಸ್ವಾಮಿಗಳೆಂದು ತೋರುತ್ತದೆ.

**ಮೂರನೇ ಶಾಸನದಲ್ಲಿ**-ಊರೊಡೆಯರೂ ಸೆಟ್ಟಿಗಳೂ ಭೂದಾನ ಮಾಡಿದ ಹಾಗೆ ಹೇಳಿದೆ. ಆದರೆ ಸ್ಥಾನಾಚಾರ್ಯರ ನಾಮ ನಿರ್ದೇಶವಿಲ್ಲ.

**ನಾಲ್ಕನೇ ಶಾಸನದಲ್ಲಿ**-ಸಾಲಿಗ ಸಮಯದವರು ಊರೊಡೆಯರಾದ ಸಾವಿರಮಂದಿಯ ಸನ್ನಿಧಾನದಲ್ಲಿ ಶ್ರೀ ಮದಂಧಾಸುರ ದೇವರ ಸ್ಥಾನಾಚಾರ್ಯರಾದ **ವಾಮಶಕ್ತಿ ದೇವರಿಗೆ** ದಾನಕೊಟ್ಟ ಹಾಗೆ ಹೇಳಿದೆ. ಇಲ್ಲಿ ಹೇಳಿರುವ ಹೆಸರಿನ ಸ್ವಾಮಿಗಳು ಸ್ಥಿರ ಪಟ್ಟದ ಮೇಲೆ ೩೪ನೆಯವರಾಗಿದ್ದಾರೆ.

**ಕೆರೆ ಸಿದ್ಧೇಶ್ವರ ದೇವರ ಗುಡಿಯ ಶಾಸನದಲ್ಲಿ:**--ಹೂಲಿಯ **ಕಳಸ ವಳ್ಳಿಗೇರಿಯ** ನೂರು ಮಂದಿ ಮಹಾ ಜನಂಗಳು ಕಳಶೇಶ್ವರ ದೇವರಿಗೆ ಶಾಲಿವಾಹನ ಶಕದ ೧೦೬೯ನೆಯ ಸರ್ವಜಿತು ಸಂವತ್ಸರದಲ್ಲಿ ಪತ್ತಿಯನ್ನು ಬಿಟ್ಟ ಹಾಗೆ ಹೇಳಿದೆ. ಇದರಲ್ಲಿ ಕಳಶೇಶ್ವರ ಪದಕಮಳ ಭೃಂಗರಾದ ಸೋಮೇಶ್ವರ ಪ್ರತೀಶನನ್ನೂ ಅವನ ಗುರುವನ್ನೂ ಹೀಗೆ ಹೊಗಳಿದೆ.

"ಅಲ್ಲಿಯಾಚಾರ್ಯರು ॥
ಸ್ನಾನ ಜಪ ಹೋಮ ನಿಯಮ ।
ಧ್ಯಾನಾನುಷ್ಠಾನ ಶೀಲ ತತ್ಪರನಂ ಸ-॥
ಜ್ಞಾನ ನಿಧಿ ಮಾನ ನಿಧಿಯೆಂ ।
ದಾನಂದದೆ ಪೊಗಳ್ವುದವನಿ ಸಿದ್ಧೇಶ್ವರನಂ ॥
ಬೌದ್ಧಾರ್ಹತ ಸಾಂಖ್ಯಾಯಾ ।
ಬೋದ್ಧೃಗಳೆಂದೆಂಬ ಬಿರುದು ಸಂದುದು ಜಗದೊಳ್ ॥

ಸಿದ್ಧೇಶ್ವರ ಪಂಡಿತರ್ಗ- ।
ತ್ಯುದ್ಧತವಾದೀಭ ಸಿಂಹನೆನೆ ಮೆಚ್ಚಿದರಾರ್ ॥
ಅವರ ಶಿಷ್ಯರು ॥
ಅಘಹರ ಮುನೀಶ್ವರ- ।
ಜಘನ್ಯಯುತಿ ತತಿಯೊಳೆಂದು ಸಮನೆನಬರ್ಕ್ಕುಂ ॥
ಲಘು ಗುಣರಹಿತಂ ಭುವನದೊ- ।
ಳ ಘೋರಜಪ ನಿಷ್ಠಿತಾ(ತ್ಮ) ಸೋಮೇಶ್ವರನಂ ॥
ಜಳನಿಧಿ ಪರೀತವಸುಧಾ ।
ತಳದೊಳು ನೈಷ್ಠಿಕ ಮುನೀಶ್ವರಾರಾಧ್ಯಂ ಶ್ರೀ ॥
ಕಳಶೇಶ ದೇವ ಪದಕಮ ।
ಳ ಭೃಂಗ * ಸೋಮೇಶ್ವರ ಬ್ರತೀಶಂ ಸ್ತುತ್ಯಂ ॥

( ಈ ನಾಲ್ಕು ಕಂದಪದ್ಯಗಳು ಮೂಲಶಿಲಾಲಿಪಿಯಲ್ಲಿ ೧೭ನೇ ಪಂಕ್ತಿಯಿಂದ ೨೪ನೇ ಪಂಕ್ತಿಯ ವರೆಗೆ ಅಡಕವಾಗಿವೆ. )

ಇಲ್ಲಿ-ಪರವಾದಿ ಗಜಗಳಿಗೆ ಸಿಂಹನಂತಿದ್ದ ಸಿದ್ಧೇಶ್ವರ ಹಾಗು ಅವರ ಶಿಷ್ಯ ಸೋಮೇಶ್ವರ ವ್ರತಿ. ಈ ಸೋಮೇಶ್ವರ ವ್ರತಿಗಳಿಗೆ ಅವರ ಅಘೋರ ಜಪನಿಷ್ಠೆಯಿಂದ ಅಘಹರ ಮುನೀಶ್ವರರೆಂಬ ಹೆಸರು ಬಂದ ಹಾಗೆ ಹೇಳಿದೆ. **ಇವರಲ್ಲಿ ಮೊದಲನೆಯುವರು ಪಟ್ಟಾವಳಿಯಲ್ಲಿ ಸ್ಥಿರಪಟ್ಟದ ೩೧ನೇ ಸ್ವಾಮಿಗಳೂ, ಎರಡನೆಯುವರು ಚರಪಟ್ಟದ ೨೩ನೇ ಸ್ವಾಮಿಗಳೂ ಆಗಿರಬಹುದೆಂದು ತೋರುತ್ತದೆ.**

ಇದುವರೆಗಿನ ವಿವರಣೆಯಿಂದ **ಹೂಲಿಯ ಮಠದ ಪಟ್ಟಾವಳಿಯು ಕಾಲ್ಪನಿಕವಾಗಿರದೆ ಐತಿಹಾಸಿಕವಾಗಿದೆಯೆಂಬುದು ಸ್ಪಷ್ಟ ಸಿದ್ಧಾಂತವಾದಂತಾಯಿತು.**

ಇನ್ನು- ಮೇಲ್ಕಾಣಿಸಿದ ಶಿಲಾಲಿಪಿಗಳಲ್ಲಿ ಈ ಸ್ವಾಮಿಗಳಿಗೆ (ಸ್ಥಾನಾಚಾರ್ಯರಿಗೆ) **ಕಾಳಾಮುಖ ಮುನಿಮುಖ್ಯರೆಂದು** ಹೇಳಿದೆ. ಹಾಗಾದರೆ ಈ ಕಾಳಾಮುಖರು ಯಾರು ? ಇಂದಿನವರೆಗೆ ಕಾಳಾಮುಖರ ಶಿಲಾಲಿಪಿಗಳು ಸಾವಿರಾರು ಸಿಕ್ಕಿವೆ. ಆದರೂ ನಿಶ್ಚಿತವಾಗಿ ಇವರು ಇಂಥವರೇ ಎಂದು ಯಾವ ಐತಿಹಾಸಿಕರೂ ಸ್ಥಿರಸಿದ್ಧಾಂತವನ್ನು ಸಪ್ರಮಾಣವಾಗಿ ಹೇಳಿಲ್ಲ. ಎಷ್ಟೋ ಶಿಲಾಲಿಪಿಗಳಲ್ಲಿ ಕಾಳಾಮುಖರಿಗೆ-“ ವರಮುನಿಪ ಶಿವಾ

---

* ಇಲ್ಲಿ ಪ್ರಾಸ ತಪ್ಪದೆ.

ಗಮದೊಳ್ ನಿರತರ್" † "ಲಾಕುಳಾಗಮ ಸಮಯ ಸಮುದ್ಧರಣರ್ ‡ ಶಿವಧರ್ಮ ಪ್ರತಿಪಾಳಕರ್" § ಮುಂತಾದುದಾಗಿ ವಿಶೇಷಿಸಿ ಹೇಳಿದೆ. ಹಾಗಾದರೆ ಇವರು ಎಂಥಾ ಶೈವರಾಗಿರ ಬಹುದು? ಕ್ರಿಸ್ತೀಯ ೧೧ನೇ ಶತಮಾನದಿಂದ ೧೩ನೇ ಶತಮಾನದ ವರೆಗಿನ ಶಿಲಾಲಿಪಿಗಳೆಷ್ಟು ಸಿಕ್ಕಿವೆಯೋ ಅಷ್ಟೂ ಪರೀಕ್ಷಿಸಿ ನೋಡಿದರೆ ಇಡಿ ಕನ್ನಡ ನಾಡಿನ ಊರೂರಿನ ಶಿವದೇವಾಲಯಗಳ ಸ್ಥಾನಾಚಾರ್ಯರೆಲ್ಲ ಕಾಳಾಮುಖರೇ ಇದ್ದರೆಂದು ಕಾಣುವದು. ಹಾಗಾದರೆ ಇಂಥಾ ವಿಸ್ತಾರವಾದ ಜನಾಂಗವು ಯಾವ ಕಾಲದಲ್ಲಿ ಏನಾಗಿ ಹೋಯಿತು? ಇತಿಹಾಸ ಸಂಶೋಧಕರ ಹೊರತು ಈ ಕಾಳಾಮುಖ ಶಬ್ದವು ಇನ್ನಾರಿಗೆ ಗೊತ್ತಿದೆ? ಇಷ್ಟೊಂದು ಹೇಳ ಹೆಸರಿಲ್ಲದೆ ಹ್ಯಾಗೆ ಹೋಯಿತು? ಧರ್ಮಾಂತರ ಮಾಡಿದರೆಂದರೆ ಯಾವ ಕಾಲಕ್ಕೆ ಮಾಡಿದರು? ಎಲ್ಲಾರೂ ಮಾಡಿದರೇ? ಕ್ರಿಸ್ತೀಯ ಹದಿಮೂರನೇ ಶತಮಾನದವರೆಗೂ ಕಾಳಾಮುಖರಿದ್ದರೆಂದು ಶಿಲಾಲಿಪಿಗಳಿಂದ ತಿಳಿಯುತ್ತದೆ. ಅನಂತರ ಅಂಥಾ ಪ್ರಬಲವಾದ ಹೊಸ ಧರ್ಮಕ್ರಾಂತಿ ಯಾವುದಾಯಿತು? ಬಸವಣ್ಣನವರ ಕಾಲವು ಮುಂಚೆಯೇ ಮುಗಿದು ಹೋಗಿದ್ದಿತು. ಹಾಗಾದರೆ ಮಧ್ವಾಚಾರ್ಯರ ಕಾಲದ ಕ್ರಾಂತಿಯ ಹೊರತು ಇನ್ನಾವುದೂ ಆ ಕಾಲಕ್ಕಿರಲಿಲ್ಲ. ಆದರೆ ಇಂಥಾ ಓಜಸ್ವಿಯಾದ ಕಾಳಾಮುಖರು ತಮ್ಮ "ಶಿವಧರ್ಮ ಪ್ರತಿಪಾಳಕತ್ವ" ವನ್ನು ತೊರೆದು ಎಲ್ಲಾರೂ ವೈಷ್ಣವರಾಗಿರುವುದು ಸಂಭವವಲ್ಲ ಹಾಗಾದರೆ ಯಾವಾಗ ಏನಾದರು?

ಇವರು ಮೂಲತಃ ಯಾವದೋ ಒಂದು ವಿಧದ ಶೈವರಾಗಿದ್ದು ಮುಂದೆ ವೀರಶೈವರಾದರೆಂದು ಇಟ್ಟುಕೊಂಡರೂ ಒಪ್ಪುವದಿಲ್ಲ. ಯಾಕೆಂದರೆ ಬಸವಣ್ಣನವರ ಕಾಲದಿಂದ ಮುಂದೆ ವೀರಶೈವ ಧರ್ಮದಲ್ಲಿ ಇಂಥಾ ಭರತಿಯಾಗುವಷ್ಟು ತೇಜವುಳಿದದ್ದು ಇತಿಹಾಸಕ್ಕೆ ಗೊತ್ತಿಲ್ಲ. ಅವರು ಧರ್ಮಾಂತರ ಮಾಡಿದ್ದೇ ಆದರೆ ಬಸವಣ್ಣನವರ ಕಾಲದಲ್ಲಿ ಮಾಡಬಹುದಾಗಿತ್ತು. ಅನಂತರದ ಕಾಲದಲ್ಲಿ ಇಂಥಾ ತೇಜಸ್ವಿಗಳಾದ ಕಾಳಾಮುಖರನ್ನು ಸೋಲಿಸಿ ಧರ್ಮಾಂತರ ಮಾಡಿಸುವ ಸಾಮರ್ಥ್ಯವು ವೀರಶೈವ

---

† ಹಾಸನಜಿಲ್ಲೆಯ ಅರಸೀಕೆರೆಯ ತೊಂಭತ್ತನೇಶಾಸನದಲ್ಲಿ ಈ ಮಾತು ಹೇಳಿದೆ.

‡ ,, ೪೬ನೇ ಶಾಸನದಲ್ಲಿ

§ ಹಾಸನ ತಾಲೂಕಿನ ೭೧ನೇ ಶಾಸನದಲ್ಲಿ

ಧರ್ಮದಲ್ಲುಳಿದಿರಲಿಲ್ಲವೆಂಬುದು ಸರ್ವಸಮ್ಮತವಾಗಿದೆ. **ಆದ್ದರಿಂದ ಅವರು ಧರ್ಮಾಂತರ ಮಾಡಿರುವ ಸಂಭವವಿಲ್ಲ.** †

ಹಾಗಾದರೆ ಈ ಕಾಲಾಮುಖರ ಬಗ್ಗೆ ಇಂದಿಗೆ ನಮಗೆ ತಿಳಿದ ಮಟ್ಟಿಗೆ ವಿವರಿಸಿ ಹೆಚ್ಚಿನ ಶೋಧಗಳಿಗಾಗಿ ಮುಂದೆ ಯತ್ನಿಸುವ ಬಯಕೆಯನ್ನು ಮಾತ್ರ ಅರಿಕೆ ಪಡಿಸುವೆವು.

ಮೈಸೂರು ಶೀಮೆಯ ಶಿಕಾರಿಪುರದ ತಾಲೂಕಿನಲ್ಲಿರುವ **ಬಳ್ಳಿಗಾಂವೆಯೆಂಬುದು** ಈ ಕಾಳಾಮುಖರದೊಂದು ಮುಖ್ಯಸ್ಥಾನವಂತೆ. ( ಶ್ರೀ ಅಲ್ಲಮಪ್ರಭುಗಳು ಇದೇ ಬಳ್ಳಿಗಾಂವೆಯವರೆಂದು ತೋರುತ್ತದೆ. ಇದಿರಲಿ. ) ಅಲ್ಲಿಯ ಶಿಲಾಲಿಪಿಗಳಲ್ಲಿ ಅವರ ವಿಷಯವು ಸಂಪೂರ್ಣವಾಗಿ ಹೇಳಿದೆಯಂತೆ. ಆದರೆ ನನ್ನಲ್ಲಿ ಆ ಶಾಸನ ಪುಸ್ತಕವಿಲ್ಲ. ಮುಂದೆ ಸಂಪಾದಿಸಿ ಹೆಚ್ಚಿಗೆ ಬರೆಯುವೆ.

ನಮಗೆ ತಿಳಿದಿರುವ ಮಟ್ಟಿಗೆ ಕಾಳಾಮುಖರ ಹೆಸರುಗಳ ಮುಂದೆ-ದೇವ, ಪಂಡಿತ, ರಾಶಿ, ಶಕ್ತಿ, ಶಿವ, ಜೀಯ್ಯ ಮುಂತಾದ ಉಪಾಧಿಗಳು ಸೇರಿರುವುದುಂಟು ದೃಷ್ಟಾಂತಕ್ಕೆಂದು ಅವರ ಕೆಲವು ಹೆಸರುಗಳನ್ನಿಲ್ಲಿ ಹೇಳುವೆವು —

ಭುಜಂಗದೇವರು, ತ್ರಿಲೋಚನದೇವರು, ಶಿವದೇವರು, ಶಿವಶಕ್ತಿ, ರುದ್ರಶಕ್ತಿ, ಈಶಾನ್ಯಶಕ್ತಿ, ತ್ರೈಲೋಕ್ಯಶಕ್ತಿ, ಅನಂತಶಕ್ತಿ, ಉತ್ತಮಶಕ್ತಿ,

---

† ಹೂಲಿಯ ಮಠದ ಪೂರ್ವಾಚಾರ್ಯರು ಬರೆದ ಗ್ರಂಥಗಳ ವಿಷಯದಲ್ಲಿ ಹಿಂದೆ ಹೇಳಿದೆಯಷ್ಟೆ. ಅದನ್ನು ನೆನೆದರೆ ಈ ಮಠದ ಪೂರ್ವಾಚಾರ್ಯರು ಸಾಮಾನ್ಯರಾಗಿರಲಾರರೆಂದು ತೋರುತ್ತದೆ. ಬಸವಣ್ಣನವರ ಅನಂತರ ಮುನ್ನೂರು ವರ್ಷಗಳವರೆಗೂ ಇವರು ಕಾಳಾಮುಖರಾಗಿದ್ದು ಅನಂತರ ವೀರಶೈವ ಸ್ವಾಮಿಗಳಾದರೆಂದು ಹೇಳುವುದು ಅಷ್ಟೊಂದು ಸಮಂಜಸವಾಗಿ ಕಾಣದು. ಸ್ಥಿರಪಟ್ಟಾವಳಿಯನ್ನು ನೊಡೀದರೆ ೪೦ನೇ ಪಟ್ಟದಿಂದೀಚಿಗಿನ ಹೆಸರುಗಳು ಮಾತ್ರ ವೀರಶೈವರ ಹೆಸರುಗಳಂತೆ ಕಾಣುತ್ತವೆ. ಮುಂಚಿನ ಹೆಸರುಗಳೆಲ್ಲಾ ಕಾಳಾಮುಖರ ಹೆಸರುಗಳೆಂದು ಶಿಲಾಲಿಪಿಗಳಲ್ಲಿ ಸಿಕ್ಕುವಂಥವುಗಳಂತಿವೆ. ಇಂದಿಗೆ ಮುನ್ನೂರೇ ವರುಷಗಳ ಹಿಂದೆ ಇಂಥಾ ಮಠವು ಧರ್ಮಾಂತರ ಮಾಡಿದ್ದೀತೆಂಬುದು ಸಮರ್ಪಕವಾಗಿ ಕಾಣದು. ಆದರೂ ನಾವು ಆ ಮಠದ ಪಟ್ಟಾವಳಿಯ ಇನ್ನುಳಿದ ಎರಡು ಪ್ರತಿಗಳನ್ನು ನೋಡಿ ಹೆಚ್ಚಿನ ಐತಿಹಾಸಿಕ ವಿವರಣೆಯನ್ನು ಮುಂದೆ ಪ್ರಸಿದ್ಧಿಸಬಯುಸುವೆವು.

* ಶ್ರದ್ಧೇಯ ಶ್ರೀ ಹರ್ಡೇಕರ ಮಂಜಪ್ಪನವರು ತಮ್ಮ ಬಸವಚರಿತ್ರೆಯ ೮ನೇ ಪುಟದಲ್ಲಿ ಈ ಬಗ್ಗೆ ಹೀಗೆ ಹೇಳಿರುವರು:—

ವಿಮಳಶಕ್ತಿ, ಶಾನ್ತಿಶಕ್ತಿ, ರೇಚಶಕ್ತಿ, ಸರ್ವ್ವಶಕ್ತಿ, ತ್ರಿಭುವನಶಕ್ತಿ, ಕಲ್ಯಾಣಶಕ್ತಿ, ವಾಮಶಕ್ತಿ, ನಾರಸಿಂಹಶಕ್ತಿ; ಬ್ರಹ್ಮರಾಶಿ, ತೇಜೋರಾಶಿ, ಗಂಗರಾಶಿ, ಧರ್ಮರಾಶಿ, ದೇವರಾಶಿ, ನಾಗರಾಶಿ, ಕಾಲಭೈರವಪಂಡಿತದೇವರು, ಯೋಗೇಶ್ವರ ಪಂಡಿತದೇವರು, ಸೂರ್ಯಾಭರಣಪಂಡಿತದೇವರು, ಅಪರೇಶ್ವರಪಂಡಿತರು, ವರೇಶ್ವರಪಂಡಿತರು, ಲೋಕಾಭರಣಪಂಡಿತರು, ಕೊಮಾರಸಿಂಗಿಪಂಡಿತರು, ಜಗತೇಶ್ವರಪಂಡಿತರು ಲಕುಳೀಶ್ವರಬ್ರತೀಶ್ವರರು, **ಕಾಶ್ಮೀರಮುನೀಂದ್ರರು,** ಹೊನ್ನಜೀ

---

" ಮಿ. ರೈಸ್ ಸಾಹೇಬರು ಮೈಸೂರು ಇನ್‌ಸ್ಕ್ರಿಪ್‌ಶನ್ಸ್ ಎಂಬ ಪುಸ್ತಕದಲ್ಲಿ ಬೆಳ್ಳಿಗಾವಿಯ ಶಿಲಾಲಿಪಿಗಳ ವಿಷಯಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಆನೇ ಲಿಪಿಯಲ್ಲಿರುವದೇನೆಂದರೆ:-ಹಿರೇಮಠ, ಪಂಚಲಿಂಗನ ಮಠ, ತ್ರಿಪುರಾಂತಕನ ಮಠ, ವಾಮಶಕ್ತಿ ಮಠ, ಕೋಡಿಯ ಮಠ ಎಂಬ ಐದು ಮಠಗಳಲ್ಲಿ ಮೂಳಿಗ ಮಧುಕೇಶ್ವರ ಪಂಡಿತ, ಸರ್ವೇಶ್ವರ ಪಂಡಿತದೇವ ಜ್ಞಾನಶಕ್ತಿದೇವ ಮೊದಲಾದ ಮಠಾಧಿಕಾರಿಗಳಿದ್ದರು. ಈ ಪಟ್ಟಣದಲ್ಲಿ ಮಾಚಿಸೆಟ್ಟಿ, ಮಾಣಿಕಸೆಟ್ಟಿ, ಮಹಾದೇವಸೆಟ್ಟಿ ಮೊದಲಾದ ವೀರಬಣಜಿಗರು ಪ್ರಮುಖರಾಗಿದ್ದರು.

ಹತ್ತನೇ ಲಿಪಿಯಲ್ಲಿ ಹೇಳಿರುವುದೇನೆಂದರೆ ಈ ಸೆಟ್ಟಿರು ನೇಪಾಳ, ಕುಡುಂಬ, ಕಾಂಬೋಜ, ಗೊಲ್ಲ, ಲಾಳ, ಬರ್ಬರ ಮೊದಲಾದ ದೇಶಗಳಿಗೆ ಜಲಸ್ಥಲ ಮಾರ್ಗಗಳಿಂದ ವ್ಯಾಪಾರಕೋಸ್ಕರ ಹೋಗುತ್ತಿದ್ದರು. **ಇವರು ಲಿಂಗವನ್ನು ಮಸ್ತಕದಲ್ಲಿ ಧರಿಸುತ್ತಿದ್ದರು.** ಮತ್ತು ಕೈಲಾಸ ಸಿಶಾನೆ, ಶ್ವೇತಚ್ಛತ್ರಗಳನ್ನು ಉಪಯೋಗಿಸುತಿದ್ದರು.

ಈ ವೀರ ಬಣಜಿಗರು ವೀರಶೈವರಲ್ಲಿಯೋ ಒಂದು ವರ್ಗಕ್ಕೆ ಸೇರಿದವರೆಂದು ಮಿ. ರೈಸ್ ಸಾಹೇಬರೇ ಹೇಳಿದ್ದಾರೆ. ಈ ಶಿಲಾಲಿಪಿಗಳು ಕ್ರಿಸ್ತಶಕದ ೧೧೧೩ನೆಯ ಇಸವಿಯಲ್ಲಿ ಬರೆಯಲ್ಪಟ್ಟಿವೆ. " --ಇತ್ಯಾದಿ.

ಶ್ರೀ ಮಂಜಪ್ಪನವರ ಪುಸ್ತಕದಲ್ಲೇನೋ ಹೀಗೆ ಅವತರಣವಿದೆ. ಆದರೆ ನಾವು ನೋಡಿದ್ದರಲ್ಲಿ ಐಹೊಳ್ಳಿಯ ಐನೂರುಮಂದಿ ಬ್ರಾಹ್ಮಣರ ಒಕ್ಕಣಿಕೆಯಲ್ಲಿ- "………ಚತುಸ್ಸಮಯ ನಿಸ್ತಾರಕರುಂ । ವೀರಬಣಂಜುಸಮಯ ಸಮುದ್ಧರಣರುಂ……… ನಾನಾದಿಪ್ರಶಸ್ತಿ ಸಹಿತಂ । ಚತುರ್ಯುಗ ಚತುರಾಭಿದಾನ ಪರಂಪರಾಯಮಾನಮಪ್ಪ ಶ್ರೀಮದನಾದಿಯಗ್ರಹಾರಂಬಣಂಜದಾದಿಪಟ್ಟಣ……ಮಪ್ಪ ಅಯ್ಯಾ ವಳೆಯ ಅಯ್ನೂರ್ವರಸ್ವಾಮಿಗಳು " ಎಂದು ಹೇಳಿದೆ. (ವಿಚಾರಾರ್ಹವಾಗಿದೆ.) ಶಿವಮೊಗ್ಗಾ ಜಿಲ್ಲೆಯ ಸೊರಬ ತಾಲೂಕಿನ ೨೬೯ನೇ ಶಾಸನ.

* ಈ ಹೆಸರು ಬಿಜಾಪುರ ಜಿಲ್ಲೆಗೆ ಸೇರಿದ ಬಾಗೇವಾಡಿಯ ತಾಲೂಕಿನ ಮುತ್ತಿಗೆಯ ಶಿವನಗುಡಿಯೊಳಗಿನೊಂದು ಶಿಲಾಲಿಪಿಯಲ್ಲಿದೆ. ಪೂಲಿಯದೇವರ್

ಯ್ಯರು, ಹೊಲಜೀಯ್ಯ, ಬೆಟ್ಟಜೀಯ್ಯ, ದುದ್ದಜೀಯ್ಯ, ಶಂಕರ ಜೀಯ್ಯ, ಭೂಪಜೀಯ್ಯ, ಮಾತಜೀಯ್ಯ, ಕರ್ತಾರಜೀಯ್ಯ, ಕಲ್ಲಿ ಜೀಯ್ಯ, ಭೀಮಜೀಯು, ಸಾತಜೀಯು, ಬೈರಜೀಯು, ರುದ್ರಜೀಯು ಮಾರಜೀಯು, ಬೆನಕಜೀಯು, ಸಿಂಗಜೀಯು, ನಾಗಜೀಯು, ಲಿಂಗ ಜೀಯು, ಗದ್ಮಜೀಯು, ಮಾದಜೀಯು? ಭೂತಜೀಯು, ಅನಂತ ಜೀಯು ಇತ್ಯಾದಿ. ‡

ಇವರಲ್ಲಿ ಕೆಲವರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದ ಮುನಿಗಳೂ, ಕೆಲವರು ಸಂಸಾರಿಗಳೂ ಇರುತ್ತಿದ್ದರೆಂಬ ಬಗ್ಗೆ ಹೇರಳವಾಗಿ ಆಧಾರಗಳು ಸಿಕ್ಕುವವು. ಇವರ ಹೆಸರಿನ ಹಿಂದೆ ಬರೆಯುವ ಒಕ್ಕಣಿಕೆಗಳಲ್ಲಿಯೂ ವಿಪ್ರರ ಒಕ್ಕಣಿಕೆಗಳಲ್ಲಿಯೂ ಭೇದಗಳಿವೆ. ವಿಪ್ರರ ವಕ್ಕಣಿಕೆಗಳಲ್ಲಿ ಯಜನ ಯಾಜನಾದಿ ಷಟ್ಕರ್ಮನಿರತರೆಂದು ಹೇಳಿರುವಂತೆ ಇವರ ವಕ್ಕಣಿಕೆಗಳಲ್ಲಿ ಕಾಣುವದಿಲ್ಲ. ಆದರೆ ಕೆಲವು ಕಡೆಗೇನೋ ಹೋಮಗಳ ಉಲ್ಲೇಖವಿದೆ. ಹಿಂದಿನ ಕಾಲದಲ್ಲಿ ಊರೂರಿನ ಮಹಾಜನಂಗಳೆಂದರೆ ಬ್ರಾಹ್ಮಣರೆಂದೇ ಕಾಣುತ್ತದೆ. ಊರಲ್ಲಿ ಯಾವ ಕಾರ್ಯವೂ ಇವರ ಸನ್ನಿಧಾನದಲ್ಲೇ

---

ಮುದಗೆರೆ ಮುನಿಹರಿ ಎಂಬ ಹೆಸರುಗಳಂತೆಯೇ ಇದೂ ಇರಬಹುದೋ ಏನೋ ವಿಚಾರಾರ್ಹವಾಗಿದೆ. ಮುತ್ತಿಗೆಯ ಶಾಸನದಲ್ಲಿ—

“ ಶ್ರೀಮದ್ಬಾಜಂಗದೇವರ ಶಿಷ್ಯರು ತ್ರಿಲೋಚನದೇವರವರ ಶಿಷ್ಯರು ಬಾಳಸೂರ್ಯಾರ್ಯರವರ ಶಿಷ್ಯರು ಶ್ರೀ ಕಾಶ್ಮೀರ ಪಂಡಿತ ದೇವರು. . ”

“ಸೂರಿಜನಂಗಳೊಳ್ನುಡಿಯುನೀ ಜಗದೊಳ್ಜಯವಾದಿಯಾಗೆ ಕೈ |
ಶಾರದೆ ವೇದಸಾರ ರಚಿತಾಭರಣಾನ್ವಿತೆಯಾಗಿ ವಾಣಿ ಕಾ ॥
ಶ್ಮೀರದೆ ಕೂಡಿಬಂದು ವಿಜಯಾಪುರದೊಳ್ನೆಲಸಲ್ಕೆಗಳ್ದ ಕಾ |
ಶ್ಮೀರ ಮುನೀಂದ್ರನೊಳ್ನುಡಿಗೆ ಸೋಲದರಾರ್ಸುರಾಡಿಸಂದು ತಾರ್ಕಿಕರ್ ॥

ಎಂದು ಹೇಳಿದೆ. ಕಾಶ್ಮೀರದಲ್ಲಿ ಜಯಹೊಂದಿ ಬಂದು ವಿಜಾಪುರದಲ್ಲಿ ಶಾರದಾದೇವಿಯನ್ನು ನೆಲೆಗೊಳಿಸಿದನೋ, ಅಥವಾ ಮೂಲತಃ ಕಾಶ್ಮೀರದಿಂದಲೇ ಬಂದನೋ ಸಂದೇಹಾಸ್ಪದವಾಗಿದೆ.

‡ “. ಕಲ್ಯಾಣಶಕ್ತಿ ಪಂಡಿತರ ತಮ್ಮ ಕರಿಯಜೀಯರ ಮಗಂ ಧರ್ಮರಾಶಿ ಪಂಡಿತರಂ ಕಿರಿಯ ಮಹದೇವರಾಶಿ ಪಂಡಿತರ ಕಾಲಂಕರ್ಚಿ . . . ಮಹೇಶ್ವರ ಗಣಾವತಾರನುಮೆನಿಸಿದ ಬೆಳ್ಳಪ್ಪಯ್ಯ ನಾಯಕನು . . . . ಕಲಿದೇವರ ದೇಗುಲಂ ಮಾಡಿಸಿದರುಂ. ” (ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ ೨೧೦ನೇ ಶಾಸನ.) ಆದ್ದರಿಂದ ರಾಶಿ, ಶಕ್ತಿ, ಜೀಯ ಇವು ಭಿನ್ನ ಸಮಯಗಳಲ್ಲ.

ಆಗುತ್ತಿದ್ದವು. ಅಲ್ಲಲ್ಲಿಯ ದೇವಾಲಯಗಳಲ್ಲಿ ಈ ಮಹಾ ಜನಂಗಳೂ **ಸ್ಥಾನಾಚಾರ್ಯರ ಪಾದಮಜ್ಜನ ಮಾಡಿ** ಎಷ್ಟೋ ದಾನಧರ್ಮಗಳನ್ನು ಮಾಡುತ್ತಿದ್ದರು ಎಂದು ಶಿಲಾಲಿಪಿಗಳಿಂದ ತಿಳಿಯುವದು.

ಮೈಸೂರ ಶೀಮೆಯ ಹಾಸನಜಿಲ್ಲೆಯ ಅರಸೀಕೆರೆ ತಾಲೂಕಿನ ಓರಿಯೂರಲ್ಲಿ ಸಿಕ್ಕ ೧೦೮ ನೇ ಶಾಸನದಲ್ಲಿ **ಕಾಳಾಮುಖರಿಗೆ ಗಣಂಗಳು** ಎಂದು ಹೇಳಿದೆ. ಆ ಶಾಸನದ ಮುಖ್ಯಾಂಶವನ್ನಿಲ್ಲಿ ಕೊಟ್ಟು, ಕೆಲವು ಮಾತುಗಳನ್ನು ಹೇಳಿ ಸದ್ಯದ ಮಟ್ಟಿಗೆ ಲೇಖವನ್ನು ಮುಗಿಸುವೆ.

ಮಲೆಯೂಳ ಕುಳದ ವಡ್ಡವ್ಯವಹಾರಗಳಲ್ಲಿ ಕಂಡನಂಬಿಸೆಟ್ಟಿಯೆಂಬವನಿಗೆ ಕುಂಜನಂಬಿಸೆಟ್ಟಿಯೆಂಬ ಮಗನಿದ್ದನು. ಅವನು—

''ಹರಪದ ಪೂಜೆಯೊಳ್ ಹರಕಥೋಚಿತ ತತ್ತ್ವಸುಖಾನುಸೇವೆಯೊಳ್
**ಹರಸಮಯ ಪ್ರಭಾವ ಪರಿವರ್ತನದೊಳ್** ಹರಭಕ್ತಿಯೊಳ್ ಹರ॥
ಸ್ಮರಣದೊಳಾವಗಂ ತನುಧನಂ ಮನಮೆಂಬಿವನೆಯ್ದೆ ಕೂಡಿಸು।
ಸ್ಥಿರಮೆನಿಸಿರ್ಪನೇಂ ಸುಕೃತ ಪುಂಜನೊ ಕುಂಜನಿಳಾತಳಾಗ್ರದೊಳ್॥

**ತನುವಂ ಜಂಗಮದೆಡೆಯೊಳ್।**
ಮನಮಂ ಶ್ರೀಸೋಮನಾಥ ಪದಪಂಕಜದೊಳ್ ॥
ವಿನಿಯೋಗಿಸಿ ಕುಂಜಂ ನೆ-।
ಟ್ಟನೆ ಪಡೆದಂ ಪುಣ್ಯಪದಮನಾ ಶಿವಪದಮಂ॥

ಅಂತಾತಂ ದೇವಲೋಕಾವಳೋಕನ ಸ್ಥಿರನಪ್ಪುದು ಮಿತ್ತಲೂ।
**ಮುತ್ತಮಹೊಸವೂರೆಸೆವುದು** ಸಮಸ್ತ ಸೌಖ್ಯಾವಾಸಂ॥

ಅಲ್ಲಿ ನಿಜಸುತ ಪರೋಕ್ಷದೊ।
ಳ್ಲಲ್ಲಿಗೆ ಕೆಲಸವೆಸೆಯೆ ಕುಂಜನ ಹೆಸರಿಂ॥
ಕಲ್ಲ ಶಿವಾಲಯಮಂ ಪಡಿ।
ಯಿಲ್ಲೆಂದೆನೆ ಕಂಡನಂಬಿ ತಾನೆತ್ತಿಸಿದಂ॥

ಇಂತೀ ಸಮಸ್ತ ಭೂಮಿಯೆಲ್ಲವನುಂ ಸಕನೃಪ ವರುಷ ೧೧೭೭ ಆನಂದ ಸಂವತ್ಸರದ ಪುಶ್ಯ ಶುದ್ಧ ೧೧ ಸೋಮವಾರ ಆ

ಕಂಡನಂಬಿಸೆಟ್ಟಿಯರು * ಶ್ರೀ ಕುಂಜೇಶ್ವರ ದೇವರ ಶ್ರೀಪಾದಂಗಳ ಮೇಲೆ ಧಾರಾಪೂರ್ವಕಂ ಮಾಡಿ ಆ ಕುಂಜೇಶ್ವರ ದೇವರ ಸ್ಥಾನವನು ಆ ಕಂಡ ನಂಬಿಸೆಟ್ಟಿಯರು ತಮ್ಮ ಮಗಳು **ಗಣಕುಮಾರಿಚಂದವ್ವೆಗೆ** ಆ ಕುಂಜೇಶ್ವರ ದೇವರ ಶ್ರೀಕಾರ್ಯವ ನಡಸಿ ಆ ಸ್ಥಾನಕ್ಕೆ ಕಾನೊಡೆಯಳಾಗಿ ಆಕೆಗೆ ಹೊಂಬಳಿಯ ಭೂಮಿಯನ್ನು ಸಲ್ಲುವಂತಾಗಿ ಶ್ರೀ ಕುಂಜೇಶ್ವರ ದೇವರ ಸನ್ನಿಧಾನದಲುಂ ಶ್ರೀಮತ್ರಿಭುವನ ರಾಜಧಾನಿ **ದೋರಸಮುದ್ರ**ದ **ರಾಜಗುರು ರುದ್ರಶಕ್ತಿ ದೇವರ** ನೂರಿಪ್ಪತ್ತು ಸ್ಥಾನಿಕರ ಕಂಪಣಾಚಾರ್ಯರು ಮುಖ್ಯವಾದ **ಅಸಂಖ್ಯಾತ** ಮಹಾಗಣಂಗಳ ಸನ್ನಿಧಾನದಲು **ಎರಡು ಮುತ್ತನ ಹೊಸವೂರು** ಸಮಸ್ತ ಪ್ರಜೆಗಾವುಂಡುಗಳ ಸ್ಥಾನಿಕರ ಸನ್ನಿಧಾನದಲು ಧಾರೆಯ ನೆರೆದುಕೊಟ್ಟರು. ಆ ರಾಜಗುರುರುದ್ರಶಕ್ತಿದೇವರುಂ ನೂರಿಪ್ಪತ್ತು ಸ್ಥಾನಿಕರುಂ ಕಂಪಣಾಚಾರಿ ರಾಜಧಾನಿ ಅರಸಿಕೆರೆಯ **ಮಾದಜೀಯ ಭೂತಜೀಯ** ಮುಚ್ಚರ **ಅನಂತಜೀಯನೊಳಗಾದ ಅಸಂಖ್ಯಾತ** ಮಹಾಗಣಂಗಳು **ನೆರೆದು ಆ ಚಂದವೆಗೆ ವಿಭೂತಿಪಟ್ಟವನು ಕಟ್ಟಿ ಗಣಕುಮಾರಿತನವನು** ಕೊಟ್ಟುಯಿಾ ಕುಂಜೇಶ್ವರ ದೇವ ಸ್ಥಾನಕ್ಕೆ ಮಠದೆರೆ ಮುಖ್ಯವಾಗಿ ಸಮಸ್ತ ತೆರೆಯನುಂ ಆಚಂದ್ರಾರ್ಕಂ ಬರಂ ಸರ್ವಮಾನ್ಯವಾಗಿ ಧಾರೆಯನೆರದು ಕೊಟ್ಟರು॥

ಈ ಶಾಸನದಿಂದ ಕಾಳಾಮುಖರು ಮಾಹೇಶ್ವರ ಗಣಂಗಳೇ ( ಜಂಗಮರೇ) ಎಂಬಂಶವು ಸ್ಪಷ್ಟವಾಗುತ್ತದೆ. ಬಲ್ಲವರು ಹೆಚ್ಚಿಗೆ ಸಂಶೋಧನ ಮಾಡುವರೆಂದು ನಂಬಿ ನಾನಿಲ್ಲಿಗೆ ಬೀಳ್ಕೊಳ್ಳುವೆ. ಇತಿ—ಓಂ ಶ್ರೀ ಓಂ॥

---

* ಈ ಕಂಡನಂಬಿಯನ್ನು ಹರಸುವ—

"ಸಿರಿಯಾಳ್ಗಂ ಬಸವಯ್ಯನೊಳ್ಪೆಸೆವ............ಮಂಬಾಣನು ।
ದ್ಧರಭೋಗಂ ಸಲೆಚೋಳನುದ್ಭಟನತರ್ಕ್ಯಂ ಕಿಂದಬಲ್ಲಾಳನೀ ॥
ಧರೆಕೊಂಡಾಡುವ ದಾಸಿಮಯ್ಯ ನೆಸೆದಿರ್ದ್ದೀ ಭಕ್ತಸಂದೋಹವಾ ।
ದರದಿಂ ಕಾಳರ ಕಂಡನಂಬಿ ನಿನಗೀಗುದ್ಬೋಧ ಸಂಪತ್ತಿಯಂ ॥"

ಎಂಬ ಪದ್ಯದಲ್ಲಿ ಬಸವಣ್ಣನವರ ಹಾಗೂ ಪುರಾತನರ ಹೆಸರು ಹೇಳಿರುವುದನ್ನು ನೋಡಿದರೆ ಇವನ ಮಗಳಗಣಕುಮಾರಿತನದ ವಿಭೂತಿಪಟ್ಟಕ್ಕೆ ನೆರೆದ ಅಸಂಖ್ಯಾತ ಮಹಾಗಣಂಗಳು ವೀರಶೈವ ಜಂಗಮರೇ ಆಗಿರಬಹುದೆಂದು ಊಹೆಗೆ ಹೆಚ್ಚು ಅವಕಾಶವಿದೆ. (ಈ ಪದ್ಯವನ್ನು ಅರಸೀಕೆರೆಯ ೧೧೯ ನೇ ಶಿಲಾಲಿಪಿಯಿಂದ ಎತ್ತಿ ಬರೆದಿರುವೆ.)

# ಸ್ಫುಟವಿಷಯುಗಳು.

ಶಿವಾನುಭವ ಪತ್ರಿಕೆಯ ಮುಖ್ಯ ಉದ್ದೇಶವು ವೀರಶೈವ ಧರ್ಮತತ್ವ ಪ್ರಸಾರ, ಗ್ರಂಥ ಮತ್ತು ಇತಿಹಾಸ ಶೋಧನೆ ಇವುಗಳೇ ಮುಖ್ಯವಾಗಿರುತ್ತವಷ್ಟೇ. ಹಿಂದಿನ ಸಂಚಿಕೆಯಲ್ಲಿ ನಾವು ಈ ಸಂಶೋಧನ ಕಾರ್ಯದಲ್ಲಿ ನಮಗೆ ಸಹಾಯವಾದವರ ಹೆಸರುಗಳನ್ನು ತಿಳಿಸಿದ್ದೇವೆ. ಈ ಸಾರೆ ಇತಿಹಾಸ ಸಂಶೋಧನಕಾರ್ಯದಲ್ಲಿ ನಮಗೆ ವಿಶೇಷವಾಗಿ ಸಹಾಯವಾಗಿರುವ ಕೆಲವು ಮಹನೀಯರ ಪರಿಚಯವನ್ನು ನಮ್ಮ ವಾಚಕರಿಗೆ ಮಾಡಿಕೊಡಲು ಅಪೇಕ್ಷಿಸುತ್ತೇವೆ-

**ರಾ|| ರಾ|| ಚನಮಲ್ಲಪ್ಪ ಗಲಗಲಿ ಸಾ|| ಹಲಸಂಗಿ:**-ಇವರು ಈ ಸಂಶೋಧನ ಕಾರ್ಯದಲ್ಲಿ ಪ್ರಸಿದ್ಧರಾಗಿರುವರೆಂಬದು ಎಲ್ಲರಿಗೂ ಗೊತ್ತಿದೆ. ಅವರ ಕಾರ್ಯಗಳು ಅತ್ಯಂತ ಶ್ಲಾಘನೀಯವಾಗಿವೆ. ಅವರು ಶಿಲಾಲೇಖಗಳನ್ನು ಬಹು ಚನ್ನಾಗಿ ಓದಬಲ್ಲರು. ಅವರ ಒಂದು ಲೇಖವನ್ನು ಈ ಸಾರೆಯು ಶಿವಾನುಭವದಲ್ಲಿ ಕೊಟ್ಟಿರುತ್ತೇವೆ. ಅದು ಎಷ್ಟು ಮಹತ್ವದ್ದಿರುತ್ತದೆಂಬುದನ್ನು ವಾಚಕರೇ ತಿಳಿದು ನೋಡತಕ್ಕದ್ದು. ಇದರಿಂದ ವೀರಶೈವರ ಮಠಗಳು ಎಷ್ಟು ಪುರಾತನದವುಗಳೆಂಬದು ವ್ಯಕ್ತವಾಗುತ್ತದೆ. ಈ ತೆರದ ಶೋಧದಿಂದ ವೀರಶೈವ ಸಮಾಜದಲ್ಲಿ ಕಾಲಕಾಲಕ್ಕೆ ಯಾವ ಯಾವ ಸ್ಥಿತ್ಯಂತರಗಳು ಉಂಟಾಗುತ್ತ ಬಂದವು, ಅದರ ಪ್ರಾಚೀನತೆ ಇವೇ ಮೊದಲಾದ ಸಂಗತಿಗಳನ್ನು ತಿಳಿಯಲು ಬಹಳ ಅನುಕೂಲವಾಗುತ್ತದೆ. ರಾ|| ರಾ|| ಚನ್ನಮಲ್ಲಪ್ಪನವರ ಅನುಕರಣವನ್ನು ನಮ್ಮಲ್ಲಿಯ ವಿದ್ಯಾವಂತರು ಮಾಡಿದ್ದಾದರೆ, ವೀರಶೈವ ಸಮಾಜದ ಇತಿಹಾಸ ಸಂಶೋಧನ ಕಾರ್ಯವು ತೀವ್ರವೇ ಆಗುವದರಲ್ಲಿ ಸಂದೇಹ ವಿರಲಾರದು.

**ಶಿ|| ಮೂ|| ಸಿದ್ಧಾಂತಿ ಶಿವಬಸಯ್ಯನವರು ಹೂಲಿ:**-ಇವರು ಮಾಡುತ್ತಲಿರುವ ಕಾರ್ಯಗಳ ಬಗ್ಗೆ ರಾ|| ರಾ|| ಚನಮಲ್ಲಪ್ಪನವರು ಈ ಸಂಚಿಕೆಯಲ್ಲಿಯ ತಮ್ಮ ಲೇಖದಲ್ಲಿ ಸವಿಸ್ತಾರವಾಗಿ ವಿವರಿಸಿರುವರು. ಶಿ|| ಮೂ|| ಶಿವಬಸಯ್ಯನವರು ತಾವು ಓದಿದ ಶಿಲಾಲೇಖಗಳ ಹಸ್ತಲಿಖಿತ ಪ್ರತಿಗಳನ್ನೆಲ್ಲ ನಮ್ಮ ಕಡೆಗೆ ಕಳಿಸಿರುವರು. ಅವು ಹೂಲಿಯ ಗ್ರಾಮಕ್ಕೆ ಸಂಬಂಧಿಸಿದ್ದವಿರುತ್ತವೆ. ಹೀಗೆಯೇ ತಮ್ಮ ಭಾಗದಲ್ಲಿರುವ ಶಿಲಾ ಶಾಸನಗಳನ್ನು ಸಂಶೋಧಿಸಿ ನಮ್ಮ ಕಡೆಗೆ ಕಳಿಸುತ್ತಲಿರುವೆನೆಂದು ಅಭಿವಚನ

ಕೊಟ್ಟಿರುವರು. ಅವರು ಕಳಿಸಿದ ಶಿಲಾಶಾಸನದ ಪ್ರತಿಗಳಲ್ಲಿ ಪುಲಿಕೇಶಿಯು ಶಿಲಾಶಾಸನವೇ ಬಹು ಪುರಾತನ ಕಾಲದ್ದು. ಮತ್ತೊಂದು ಶಿಲಾಶಾಸನದ ಪ್ರತಿಯಲ್ಲಿ ಬ್ರಾಹ್ಮಣರು ಒಂದು ಜೈನ ಬಸ್ತಿಯನ್ನು ಕಟ್ಟಿಸಿದ್ದರ ಉಲ್ಲೇಖ ಉಂಟು! ಇದರ ಮೇಲಿಂದ ಈ ಸಮಾಜಗಳು ಪೂರ್ವಕಾಲದಿಂದ ಪರಸ್ಪರ ವಿರೋಧ ಮಾಡುತ್ತ ಬಂದಿರುವವೆಂಬ ಕಲ್ಪನೆಯು ಸುಳ್ಳೆಂದು ತೋರಿ ಬರುತ್ತದೆ. ಹೀಗೆಯೇ ಶಿ॥ ಮೂ॥ ಶಿವಬಸಯ್ಯನವರು ತಮ್ಮ ಶೋಧದ ಕಾರ್ಯಗಳನ್ನು ನಡಿಸುವರೆಂದು ನಾವು ಅವರಿಗೆ ವಿನಂತಿ ಮಾಡಿಕೊಳ್ಳುತ್ತೇವೆ.

**ರಾ॥ ರಾ॥ ಗೊಲ್ಲಾಳ ಪೂಜಾರಿ ವಿಜಾಪುರ:**- ಇವರೂ ಶಿಲಾಶಾಸನಗಳನ್ನು ಚನ್ನಾಗಿ ಓದಲಿಕ್ಕೆ ಕಲಿತಿದ್ದಾರೆ. ಇವರು ತಮ್ಮ ಶಾಲೆಯ ಸೂಟಿಯಲ್ಲಿ ಮೊಗಲಾಯಿಯಲ್ಲಿರುವ ಏವೂರ, ಮುದನೂರ, ಮತ್ತು ವಿಜಾಪುರ ಜಿಲ್ಲೆಯಲ್ಲಿಯ ಹಿಪ್ಪರಿಗಿ, ಕಲಕೇರಿ ಇವೇ ಮೊದಲಾದ ಸ್ಥಳಗಳಿಗೆ ಹೋಗಿ ಶಾಸನಗಳನ್ನು ಓದಿ ತಮ್ಮ ಪ್ರತಿಗಳನ್ನು ನಮ್ಮ ಕಡೆಗೆ ತಂದು ಕೊಟ್ಟಿರುವರು. ಇವರ ಅನುಕರಣವನ್ನು ನಮ್ಮಲ್ಲಿಯ ಹೈಸ್ಕೂಲ ಮತ್ತು ಕಾಲೇಜದ ವಿದ್ಯಾರ್ಥಿಗಳು ಮಾಡಬಹುದಲ್ಲವೇ? ಏವೂರು ಈ ಗ್ರಾಮವು ಮೊದಲಿನ ಕಾಲದಲ್ಲಿ ಪ್ರಸಿದ್ಧ ಸ್ಥಾನವಿತ್ತೆಂದು ತೋರುತ್ತದೆ. ಅಲ್ಲಿ ಒಂದು ವಿದ್ಯಾರ್ಥಿಗಳ ದೊಡ್ಡ ಶಿಕ್ಷಣಾಲಯವಿತ್ತೆಂದು ತಿಳಿದು ಬರುತ್ತದೆ. ಮುದನೂರ ವೀರಶೈವ ಶಿವಶರಣರಲ್ಲಿ ಪ್ರಸಿದ್ಧನಾದ ದೇವರದಾಸಿಮಯ್ಯನ ಸ್ಥಾನವು ಇದು ಪೂರ್ವಕಾಲದಲ್ಲಿ ವಿಸ್ತೃತ ಪಟ್ಟಣವಿತ್ತೆಂದು ತೋರುತ್ತದೆ. ಹಿಂದಿನ ಅವಶೇಷಗಳು ಅಲ್ಲಿ ಇನ್ನೂ ಬಹಳ ಇವೆ. ಹಿಪ್ಪರಿಗೆಯು ಮಡಿವಾಳ ಮಾಚಿದೇವನ ಸ್ಥಾನವು ಅಲ್ಲಿ ಕಲ್ಲಿನಾಥನ ಒಂದು ಪ್ರಸಿದ್ಧ ದೇವಾಲಯವಿದೆ. ಅಲ್ಲಿ ಅನೇಕ ಶಿಲಾಶಾಸನಗಳು ಇವೆ. ಕಲಕೇರಿ (ಕಲ್ಕೆರೆ)ಯು ಪೂರ್ವಕಾಲದಲ್ಲಿ ಒಂದು ಅಗ್ರಹಾರವಾಗಿತ್ತು. ರಾ॥ ರಾ॥ ಗೊಲ್ಲಾಳ ಇವರು ಇಲ್ಲಿಯ ಶ್ರೀ ಸಿದ್ಧೇಶ್ವರ ಹಾಯಸ್ಕೂಲಿನಲ್ಲಿ ವಿದ್ಯಾರ್ಥಿಗಳಿದ್ದು ಅವರ ಪರಿಶ್ರಮವು ಅಭಿನಂದನೀಯವಾಗಿದೆ.

**ರಾ॥ ರಾ॥ ಚನಮಲ್ಲಪ್ಪ ಅಬಕಾರ ಸಾ॥ ಬನಹಟ್ಟಿ ಸಂ॥ ಜಮಖಂಡಿ:**–ಇವರು ತೇರದಾಳ ಗ್ರಾಮದಲ್ಲಿ ತಮಗೆ ದೊರೆದ ತಾಮ್ರಪಟದ ಉಚ್ಚನ್ನು ತೆಗೆದು ಅದನ್ನು ನಮ್ಮ ಕಡೆಗೆ ಕಳಿಸಿದ್ದಾರೆ. ಇದಕ್ಕೋಸ್ಕರ ಅವರ ಆಭಾರವನ್ನು ನಾವು ಮನ್ನಿಸುತ್ತೇವೆ.

ಈ ಯಾವತ್ತು ಮಹನೀಯರಿಗೆ ನಮ್ಮ ಅಭಿನಂದನವು. ಈ ತೆರದ ಸಂಶೋಧನ ಕಾರ್ಯವು ಹಗುರಾದದ್ದಲ್ಲ. ತಾಮ್ರಶಾಸನ, ಶಿಲಾಶಾಸನ, ಹಳೆಯೋಲೆ ಗ್ರಂಥಗಳನ್ನು ಹುಡಿಕಿ, ತಿಳಿಯಲಾರಧ ಅಕ್ಷರಗಳನ್ನು ಗುರ್ತಿಸಬೇಕಾಗುತ್ತದೆ. ಇದು ಬಹಳ ಬೇಸರಗೊಳಿಸುವ ಕೆಲಸ. ಎಷ್ಟೋ ಸಾರೆ ಲೇಖಗಳನ್ನು ಅತ್ಯಂತ ಶ್ರಮಪಟ್ಟು ಓದಿದ ಬಳಿಕ ಅವುಗಳಲ್ಲಿ ಮಹತ್ವದ ಸಂಗತಿಗಳು ಏನೂ ಹೊರಡದೆ ಇರಬಹುದು. ಆದರೂ ಉತ್ಸಾಹಗುಂದದೆ, ಮತ್ತೆಲ್ಲಿಯಾದರೂ ಮಹತ್ವದ ಸಂಗತಿಗಳು ಹೊರಬೀಳಬಹುದೆಂದು ಆಶೆಯನ್ನು ಮಾಡುತ್ತ ತಮ್ಮ ಶೋಧವನ್ನು ನಡಿಸಿಯೇ ತೀರಬೇಕು. ಇದಕ್ಕೆ ಎಷ್ಟು ಶ್ರಮ ಮತ್ತು ತಾಳ್ಮೆ ಬೇಕಾಗುವದೆಂಬದನ್ನು ವಾಚಕರೇ ತರ್ಕಿಸಲಿ. ಆದರೆ ಕರ್ನಾಟಕದ ಸಂಸ್ಕೃತಿ, ವೀರಶೈವರ ಇತಿಹಾಸ ಇವೇ ಮೊದಲಾದವುಗಳ ನಿಜಸ್ಥಿತಿಯನ್ನು ತಿಳಿಯಬೇಕಾದರೆ ನಾವು ಈ ಪ್ರಕಾರ ಪರಿಶ್ರಮ ಪಡಲೇಬೇಕಾಗಿದೆ.

ಈ ಕಾರ್ಯವನ್ನು ನಾವು ಸರಕಾರದವರ ಕಡೆಗೆ ಸಂಪೂರ್ಣವಾಗಿ ಒಪ್ಪಿಸುವದು ಒಳಿತಲ್ಲವೆಂದು ನಮ್ಮ ಅಭಿಪ್ರಾಯವಿದೆ. ಕರ್ನಾಟಕದಲ್ಲಿಯ ವಿದ್ವಾಂಸರೇ ಇದಕ್ಕೆ ಕೈಹಚ್ಚಬೇಕು. ಇದರಿಂದ ಇತರರಿಗೆ ತಿಳಿಯದಂಥ ಬಹು ಬೆಲೆಯುಳ್ಳ ಸಂಗತಿಗಳು ಹೊರಬೀಳುವವೆಂದು ನಾವು ನಿಶ್ಚಯ ಪೂರ್ವಕವಾಗಿ ಹೇಳಬಲ್ಲೆವು. ಇದಲ್ಲದೆ ಈಗಿನ ಶಿಲಾಶಾಸನ ಅಧಿಕಾರಿಗಳು ತಮ್ಮ ಶೋಧದ ಕಾರ್ಯಗಳನ್ನು ಬಹು ಸಾವಕಾಶವಾಗಿ ನಡಿಸಿರುವರು. ಅವರ ಕ್ರಮವನ್ನು ನೋಡಿದರೆ, ಈ ಕಾರ್ಯವು ಮುಗಿಯಲಿಕ್ಕೆ ಅನೇಕ ಶತಮಾನಗಳು ಬೇಕಾಗಬಹುದೆಂದು ನಮಗೆ ತೋರುತ್ತದೆ. ಅಲ್ಲಿಯವರೆಗೆ ನಾವು ಸುಮ್ಮನೇ ಕೂಡಬೇಕೋ? ಆದ್ದರಿಂದ ಆಯಾ ಭಾಗದ ಜನರು ಸರಕಾರದ ಮಾರ್ಗವನ್ನು ನೋಡದೆ ಒವತ್ವಸ್ಥಿಸಿಂದ ಈ ಕಾರ್ಯಕ್ಕೆ ಪ್ರವೃತ್ತರಾಗಬೇಕೆಂದು ನಮ್ಮ ಆಗ್ರಹದ ವಿನಂತಿ ಇದೆ.

**ಬಿ. ರಾಮರಾವ ಎಮ್. ಏ.** ಸೀನಿಯರ್ ಟ್ರಾನ್ಸಲೇಟರ ಮದ್ರಾಸಃ- ಇವರ ವಾಙ್ಮಯ ಪರಿಶ್ರಮವು ಅಪೂರ್ವವಾಗಿರುವದು. ಅವರು ಅತ್ಯಂತ ಪ್ರಯತ್ನ ಪಟ್ಟು ಶಿವತತ್ವರತ್ನಾಕರವೆಂಬ ಸಂಸ್ಕೃತ ಉದ್ಗ್ರಂಥವನ್ನು ಪರಿಶೋಧಿಸಿ ಅಚ್ಚು ಹಾಕಿಸಿರುವರು. ಇದು ಶ್ರೀಮನ್ಮಹಾರಾಜ ಮೈಸೂರ ಧೊರೆಗಳವರಿಗೆ ಸಮರ್ಪಿಸಲ್ಪಟ್ಟಿದೆ. ಕೆಳದಿ ಅರಸನೂ ವಿದ್ವಾಂಸನೂ ವಾಙ್ಮಯಸಹಾಯಕನೂ ಆದ ಬಸವರಾಜನಿಂದ ಈ ಗ್ರಂಥವು ರಚಿ

ಸಲ್ಪಟ್ಟಿದೆ. ಇದು ಹಿಂದೂ ನಾಗರೀಕತೆಯ ಜ್ಞಾನವನ್ನು ಹೊಂದಲಪೇಕ್ಷಿಸುವವರಿಗೆ ಕೈಗನ್ನಡಿಯಂತಿದೆ. ಇದರಲ್ಲಿ ವೀರಶೈವಧರ್ಮ ಸಂಬಂಧವಾಗಿ ಅಲ್ಲಲ್ಲಿ ವಿವೇಚನೆಗಳು ಬಂದಿರುವವಲ್ಲದೆ, ವಿಜಯನಗರದ ಇತಿಹಾಸ, ಕೆಳದಿಯ ರಾಜ್ಯ ಚರಿತ್ರೆ, ಸಂಗೀತ , ವೈದ್ಯ, ನಗರದ ರಚನೆ ಮೊದಲಾದ ನಾನಾವಿಧ ವಿಷಯಗಳು ಬಂದಿವೆ. ಇದೊಂದು ಹಿಂದೂಧರ್ಮದ ವಿಶ್ವಕೋಶವೆಂದು ಹೇಳಬಹುದು. ಹೀಗೆ ಒಬ್ಬ ವೀರಶೈವ ರಾಜನ ಕೃತಿಯನ್ನು ಪ್ರಸಿದ್ಧಿಸಲು ಪ್ರಯತ್ನ ಮಾಡಿದ ಮಿ॥ ರಾಮರಾಯರಿಗೆ ಇಡೀ ವೀರಶೈವ ಸಮಾಜವು ಋಣಿಯಾಗಿದೆ. ಈ ಗ್ರಂಥದ ಬಗ್ಗೆ ಒಂದು ಸವಿಸ್ತಾರವಾದ ಲೇಖವು ಅವಶ್ಯವಾಗಿದ್ದು ಅದನ್ನು ಮತ್ತೊಂದು ಸಾರೆ ನಾವು ಶಿವಾನುಭವದಲ್ಲಿ ಕೊಡುವೆವು.

**ಕರವೀರಪ್ಪ ಶಿವಪ್ಪ ಭಪ್ರಿ ಸಾ॥ ನಿಪ್ಪಾಣಿ**:- ಈ ಮಹನೀಯರು ಒಬ್ಬ ಶಾಲಾ ಮಾಸ್ತರರಿದ್ದು, 'ಶ್ರೀಕ್ಷೇತ್ರ ಎಡೂರ' ಎಂಬ ಹೆಸರಿನ ಗ್ರಂಥವನ್ನು ಮರಾಠಿಯಲ್ಲಿ ಲಿಖಿಸಿದ್ದಾರೆ. ಇದರಲ್ಲಿ ವೀರಶೈವ ವಚನಕಾರರಲ್ಲಿ ಪ್ರಸಿದ್ಧನಾದ ಕಾಡಸಿದ್ಧೇಶ್ವರರ ಚರಿತ್ರೆಯೂ, ಅವರ ಮಹತ್ವಗಳೂ ವಿಸ್ತಾರವಾಗಿ ಕೊಡಲ್ಪಟ್ಟಿವೆ. ಅವರ ಮಠಗಳಲ್ಲಿ ಕೊಲ್ಹಾಪುರಕ್ಕೆ ಸಮೀಪವಾಗಿರುವ ಸಿದ್ಧಗಿರಿ, ಬೆಳಗಾವ ಜಿಲ್ಹೆಯಲ್ಲಿರುವ ಎಡೂರ ಮತ್ತು ಕೊಣ್ಣೂರು ಇವುಗಳೇ ಮಹತ್ವವಾದವುಗಳು. ಗ್ರಂಥಕರ್ತರು ಬಹು ಪರಿಶ್ರಮ ಬಟ್ಟು ಅನೇಕ ಶೋಧಗಳನ್ನು ಮಾಡಿ ಈ ಗ್ರಂಥವನ್ನು ರಚಿಸಿರುವರು. ಇದರಲ್ಲಿ ಈ ದೇವಸ್ಥಾನಕ್ಕೆ ಸಂಬಂಧಪಟ್ಟ ಅನೇಕ ಸುಂದರವಾದ ಚಿತ್ರಗಳು ಕೊಡಲ್ಪಟ್ಟಿವೆ. ಇವರ ಗ್ರಂಥವನ್ನು ವೀರಶೈವ ಸಮಾಜದವರು ಗ್ರಹಿಸಿ, ಶೋಧಕರಿಗೆ ಅವಶ್ಯವಾಗಿ ಪ್ರೋತ್ಸಾಹಿಸತಕ್ಕದ್ದು.



ಶಿವಾನುಭವ ಗ್ರಂಥಮಾಲಾ ನಂ: ೧೩

# ಘನಲಿಂಗನ ವಚನಗಳು.



ಸಂಪಾದಕರು

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್ ಎಲ್, ಬಿ. ವಕೀಲ.



ವಿಜಾಪುರ.

೧೯೨೭

ಬೆಲೆ ೬ ಆಣೆ.

# ಪ್ರಸ್ತಾವನೆ.

ಘನಲಿಂಗನು ತೋಂಟದಾರ್ಯನ ಶಿಷ್ಯನೆಂದು ಈ ಗ್ರಂಥದಲ್ಲಿಯ ೧೭ ನೇ ವಚನದಿಂದ ತಿಳಿಯುತ್ತದೆ. ಆದ್ದರಿಂದ ಆತನ ಕಾಲವು ೧೫ ನೇ ಶತಮಾನದ ಅಂತ್ಯಭಾಗವಾಗಿರಬಹುದು. ವಿರುಪಾಕ್ಷ ಪಂಡಿತನು ತನ್ನ ಚನ್ನಬಸವ ಪುರಾಣದಲ್ಲಿ ಈತನು ವಿರಕ್ತ ತೋಂಟದಾರ್ಯನ ಶಿಷ್ಯನೆಂದು ಉಲ್ಲೇಖಿಸಿದ್ದಾನೆ. ಅದೇ ಮೇರೆಗೆ ಸಿದ್ಧೇಶ್ವರ ಪುರಾಣದಲ್ಲಿಯೂ ಇವನ ಉಲ್ಲೇಖವು ಇದೆ. ತೋಂಟದಾರ್ಯನ ಕಾಲಕ್ಕೆ ಈತನು ವೀರಶೈವ ಪಂಡಿತರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ್ದನು. ಘನಲಿಂಗನು ತಾನು ಸುತ್ತೂರು ಸಿಂಹಾಸನಕ್ಕೆ ಹೊಂದಿದವನೆಂದು ಈ ಗ್ರಂಥದಲ್ಲಿ ಹೇಳಿಕೊಂಡಿದ್ದಾನೆ. ಆದ್ದರಿಂದ ಅವನು ಇದೇ ಗ್ರಾಮದವನಾಗಿರಬಹುದು. ಆದರೆ ಈ ಸುತ್ತೂರು ಎಲ್ಲಿ ಇದೆ ಎಂಬದು ನಮಗೆ ಇನ್ನೂ ತಿಳಿದಿಲ್ಲ. ಇವನ ವಚನಗಳು ದೊಡ್ಡವಿದ್ದರೂ ಅವುಗಳ ಭಾಷೆಯು ಉಚ್ಚತರದ್ದಿರುತ್ತದೆ. ಅವನು ತನ್ನ ವಿಚಾರಗಳನ್ನು ಬಹಳ ಪ್ರೌಢರೀತಿಯಿಂದ ವಿಸ್ತರಿಸಿದ್ದಾನೆ. ಇವುಗಳಲ್ಲಿ ಷಟ್ಸ್ಥಲ ಶಾಸ್ತ್ರದ ಮುಖ್ಯ ಮಾರ್ಗಗಳು ಸಂಕ್ಷೇಪವಾಗಿಯೂ ವಿಶದವಾಗಿಯೂ ವಿವರಿಸಲ್ಪಟ್ಟಿರುತ್ತವೆ. ಇವನು ಮಾಡಿದ ಈ ಗ್ರಂಥಕ್ಕೆ ವಚನ ವಾಙ್ಮಯದಲ್ಲಿ ಒಂದು ಉಚ್ಚಸ್ಥಾನವನ್ನು ಕೊಡಬಹುದು. ಈಗಿನ ಪ್ರತಿಯಲ್ಲಿ ಕಠಿಣ ಶಬ್ದಗಳ ಅರ್ಥವೂ ಪ್ರತಿಯೊಂದು ವಚನದ ಕೆಳಗೆ ಕೊಡಲ್ಪಟ್ಟಿರುತ್ತದೆ.

ಈಗಿನ ಪ್ರತಿಯನ್ನು ಶಿ॥ ಮೂ॥ ಬುದ್ದಯ್ಯ ಪುರಾಣಿಕ, ಮತ್ತು ಶ್ರೀ ಶಿವಯೋಗ ಮಂದಿರ ವ್ಯವಸ್ಥಾಪಕ ಇವರು ಕಳಿಸಿದ ಹಸ್ತಲಿಖಿತ ಪ್ರತಿಗಳು ಮತ್ತು ನನ್ನ ಹತ್ತರವಿದ್ದ ಒಂದು ಪ್ರತಿ ಇವುಗಳ ಮೇಲಿಂದ ಸಿದ್ಧಪಡಿಸಿರುತ್ತೇನೆ. ಮೇಲ್ಕಂಡ ಉಭಯತರು ನನಗೆ ಈ ಗ್ರಂಥದ ಪ್ರತಿಗಳನ್ನು ಕಳಿಸಿ ಕೊಟ್ಟಿದ್ದಕ್ಕೆ ನಾನು ಅವರ ಆಭಾರಿಯಾಗಿದ್ದೇನೆ.

ತಾ. ೧೩-೯-೨೭

**ವಿಜಾಪುರ.**



**ಫ. ಗು. ಹಳಕಟ್ಟಿ.**

ಯಾದಲ್ಲಿಯೇ ಬ್ರಹ್ಮನ ಸೃಷ್ಟಿಯೆಂಬ ಸೆರೆಮನೆ ಹಾಳಾಯಿತ್ತು. ಪ್ರಾರಬ್ಧ ಕರ್ಮ ನಾಸ್ತಿಯಾದಲ್ಲಿಯೇ ವಿಷ್ಣುವಿನ ಸ್ಥಿತಿಯೆಂಬ ಸಂಕೋಲೆ ತಡೆಗಡಿಯಿತ್ತು. ಆಗಾಮಿ ಕರ್ಮನಾಸ್ತಿಯಾದಲ್ಲಿಯೆ ರುದ್ರನ ಸಂಹಾರವೆಂಬ ಪ್ರಳಯಾಗ್ನಿ ಕೆಟ್ಟಿತ್ತು. ಇಂತೀ ಮೂವರಂ ದಾಂಟಿದಲ್ಲಿಯೇ ತಂದೆ ತಾಯಿಗಳು ಎನ್ನ ಕೈವಿಡಿದೆತ್ತಿಕೊಂಡು, ಬಸವಾದಿ ಪ್ರಮಥರ ಕೈವಶವ ಮಾಡಿದರಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಮಡಗು = ಇಡು, ಕೂಡಿಹಾಕು, ಮುಚ್ಚಿಡು; ಸಂಚಿತ = ಕೂಡಿಸಲ್ಪಟ್ಟ; ಅನುಮಾಡು = ಸಿದ್ಧಮಾಡು; ಆಗಾಮಿ = ಮುಂದಿನ; ತಡೆಗಡಿ = ಮುರಿ, ಕೊಯ್ಯು;

೨೪. ತೊಟ್ಟು ಬಿಟ್ಟ ಹಣ್ಣಾಗಿ ಎನಗೆ ನಿಜೈಕ್ಯದ ಬಟ್ಟೆ ನಿರುತವಾಯಿತ್ತಯ್ಯ. ಪರಿಭವಕ್ಕೆ ತರುವ ಪಂಚ ಭೂತಂಗಳೆಂಬ ಪಾರಕವ ಪಂಚಬ್ರಹ್ಮಕ್ಕೊಪ್ಪಿಸಿದೆ. ಅಗಣಿತ ಕರಣಂಗಳನೊಳಕೊಂಡು, ಸುಖ ಒಂದು ದುಃಖ ಹದಿನಾರಕ್ಕೊಳಗು ಮಾಡುವ ಆತ್ಮನೆಂಬ ಪಾರಕವ ಪರಬ್ರಹ್ಮಕ್ಕೊಪ್ಪಿಸಿದೆ. ಉತ್ಪತ್ತಿ, ಸ್ಥಿತಿ, ಪ್ರಳಯವೆಂಬ ಪಾರಕವ ಮೂವರಿಗೊಪ್ಪಿಸಿದೆ. ಇಂತಪ್ಪ ಋಣಂಗಳಂ ತಿದ್ದಿ, ಸಿರಿವಂತನಾಗಿ, ಭವರಾಜನ ಬಲವ ಗೆಲಿದೆ. ಭೂತಳದ ಭೋಗ ನಚ್ಚು ಮೆಚ್ಚೆಂಬ ಕೊಳವಂ ಕಳೆದೆ. ನಾನು ಹೊಕ್ಕು ಹೊರಡುವ ತ್ರಿಭುವನನೆಂಬ ತ್ರಿಪುರವಂ ಸುಟ್ಟು, ಸಂಸಾರವೆಂಬ ಸಪ್ತ ಸಮುದ್ರಂಗಳಂ ದಾಂಟಿದೆ. ಉನ್ಮನಿಯ ಪುರದ ಬಚ್ಚಬರಿಯ ಬೆಳಗಿನ ಬಯಲ ಬ್ರಹ್ಮವ ಮರೆಹೊಕ್ಕೆನಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ

ನಿರುತ = ಸತ್ಯ, ನಿಶ್ಚಯ; ಪಾರಕ = ತೊಂದರೆ, ಅಡ್ಡಿ; ಕೊಳ = ಸರೋವರ

೨೫. ಮುಂದನರಿಯದ ಮತಿಗೆಟ್ಟ ಮರುಳ ಮನವೇ, ಕಾಲಕಾಮರ ಗೆಲುವ ಉಪಾಯವಾವುದೆಂದು ತಲೆಯೂರಿ ನೆಲನ ಬರೆವುತಿಪ್ಪೆ. ಮೊಲ ಜಂಬುಕಂಗಳ ಹುಯ್ಯಲಿಗೆ, ಆನೆ ಘೌಜನಡ್ಡಮಾಡಬೇಕೇ? ಕಾಲಕಾಮರ ಗೆಲುವುದಕ್ಕೆ ಆಲೋಚನೆ ಏತಕಯ್ಯಾ, ಮನವೇ? ಪಂಚೇಂದ್ರಿಯಂಗಳು ಪಂಚ ಬ್ರಹ್ಮವನಪ್ಪಿ ಅಗಲದಿಪ್ಪುದೆ ಪಂಚಬಾಣನ ಹರಣದ ಕೇಡು. ನಾನು ಪರಬ್ರಹ್ಮದಲ್ಲಿಯೇ ಜನನ. ಎನ್ನ ತನು ಮನಧನಂಗಳ ಪರಬ್ರಹ್ಮಕ್ಕೆ ಮಾರು ಗೊಟ್ಟೆನೆಂಬ ನಿಚ್ಚಟದ ನುಡಿಯೆ ಕಾಲನ ಗಂಟಲಗಾಣ. ಅದು ಹೇಗೆಂದೊಡೆ ಲಿಂಗಾಂಕಿತವಾದ ವೃಕ್ಷಂಗಳ ಮಂಡಲಾಧಿ

ಯಾದಲ್ಲಿಯೇ ಬ್ರಹ್ಮನ ಸೃಷ್ಟಿಯೆಂಬ ಸೆರೆಮನೆ ಹಾಳಾಯಿತ್ತು. ಪ್ರಾರಬ್ಧ ಕರ್ಮ ನಾಸ್ತಿಯಾದಲ್ಲಿಯೇ ವಿಷ್ಣುವಿನ ಸ್ಥಿತಿಯೆಂಬ ಸಂಕೋಲೆ ತಡೆಗಡಿಯಿತ್ತು. ಆಗಾಮಿ ಕರ್ಮನಾಸ್ತಿಯಾದಲ್ಲಿಯೆ ರುದ್ರನ ಸಂಹಾರವೆಂಬ ಪ್ರಳಯಾಗ್ನಿ ಕೆಟ್ಟಿತ್ತು. ಇಂತೀ ಮೂವರಂ ದಾಂಟಿದಲ್ಲಿಯೇ ತಂದೆ ತಾಯಿಗಳು ಎನ್ನ ಕೈವಿಡಿದೆತ್ತಿಕೊಂಡು, ಬಸವಾದಿ ಪ್ರಮಥರ ಕೈವಶವ ಮಾಡಿದರಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಮಡಗು = ಇಡು, ಕೂಡಿಹಾಕು, ಮುಚ್ಚಿಡು; ಸಂಚಿತ = ಕೂಡಿಸಲ್ಪಟ್ಟ; ಅನುಮಾಡು = ಸಿದ್ಧಮಾಡು; ಆಗಾಮಿ = ಮುಂದಿನ; ತಡೆಗಡಿ = ಮುರಿ, ಕೊಯ್ಯು;

೨೪. ತೊಟ್ಟು ಬಿಟ್ಟು ಹಣ್ಣಾಗಿ ಎನಗೆ ನಿರ್ಮೈಕ್ಯದ ಬಟ್ಟೆ ನಿರುತವಾಯಿತ್ತಯ್ಯ. ಪರಿಭವಕ್ಕೆ ತರುವ ಪಂಚ ಭೂತಂಗಳೆಂಬ ವಾರಕವ ಪಂಚಬ್ರಹ್ಮಕ್ಕೊಪ್ಪಿಸಿದೆ. ಅಗಣಿತ ಕರಣಂಗಳನೊಳಕೊಂಡು, ಸುಖ ಒಂದು ದುಃಖ ಹದಿನಾರಕ್ಕೊಳಗು ಮಾಡುವ ಆತ್ಮನೆಂಬ ವಾರಕವ ಪರಬ್ರಹ್ಮಕ್ಕೊಪ್ಪಿಸಿದೆ. ಉತ್ಪತ್ತಿ, ಸ್ಥಿತಿ, ಪ್ರಳಯವೆಂಬ ವಾರಕವ ಮೂದೇವರಿಗೊಪ್ಪಿಸಿದೆ. ಇಂತಪ್ಪ ಋಣಂಗಳಂ ತಿದ್ದಿ, ಸಿರಿವಂತನಾಗಿ, ಭವರಾಜನ ಬಲವ ಗೆಲಿದೆ. ಭೂತಳದ ಭೋಗ ನಚ್ಚು ಮೆಚ್ಚೆಂಬ ಕೊಳವಂ ಕಳೆದೆ. ನಾನು ಹೊಕ್ಕು ಹೊರಡುವ ತ್ರಿಭುವನನೆಂಬ ತ್ರಿಪುರವಂ ಸುಟ್ಟು, ಸಂಸಾರನೆಂಬ ಸಪ್ತ ಸಮುದ್ರಂಗಳಂ ದಾಂಟಿದೆ. ಉನ್ಮನಿಯ ಪುರದ ಬಚ್ಚಬರಿಯ ಬೆಳಗಿನ ಬಯಲ ಬ್ರಹ್ಮನ ಮರೆಹೊಕ್ಕೆನಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ

ನಿರುತ = ಸತ್ಯ, ನಿಶ್ಚಯ; ವಾರಕ = ತೊಂದರೆ, ಅಡ್ಡಿ; ಕೊಳ = ಸರೋವರ

೨೫. ಮುಂದನರಿಯದ ಮತಿಗೆಟ್ಟ ಮರುಳ ಮನವೇ, ಕಾಲಕಾಮರ ಗೆಲುವ ಉಪಾಯವಾವುದೆಂದು ತಲೆಯೂರಿ ನೆಲನ ಬರೆವುತಿಪ್ಪೆ. ಮೊಲ ಜಂಬುಕಂಗಳ ಹುಯ್ಯಲಿಗೆ, ಆನೆ ಫೌಜನಡ್ಡಮಾಡಬೇಕೇ? ಕಾಲಕಾಮರ ಗೆಲುವುದಕ್ಕೆ ಆಲೋಚನೆ ಏತಕಯ್ಯಾ, ಮನವೇ? ಪಂಚೇಂದ್ರಿಯಂಗಳು ಪಂಚ ಬ್ರಹ್ಮವನಪ್ಪಿ ಅಗಲದಿಪ್ಪುದೆ ಪಂಚಬಾಣನ ಹರಣದ ಕೇಡು. ನಾನು ಪರಬ್ರಹ್ಮದಲ್ಲಿಯೇ ಜನನ. ಎನ್ನ ತನು ಮನಧನಂಗಳ ಪರಬ್ರಹ್ಮಕ್ಕೆ ಮಾರು ಗೊಟ್ಟೆನೆಂಬ ನಿಚ್ಚಟದ ನುಡಿಯೆ ಕಾಲನ ಗಂಟಲಗಾಣ. ಅದು ಹೇಗೆಂದೊಡೆ ಲಿಂಗಾಂಕಿತವಾದ ವೃಕ್ಷಂಗಳ ಮಂಡಲಾಧಿ

ಪತಿ ಮೊದಲಾಗಿ ಮುಟ್ಟಲಮ್ಮ. ಆನೆಯು ತನುಜನ ಅಡು ಮುರಿದಡೆ, ಹೀನ ವಾರಿಗಪ್ಪುದಯ್ಯ? ಈ ಪ್ರಕಾರದ ಸವ್ಯಜ್ಞಾನದಿಂದ ನಿಮ್ಮ ಶರಣರು ಕಾಲಕಾಮರ ಗೆಲಿದರಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಜಂಬುಕ = ನರಿ; ಹುಯ್ಯಲು = ಒದರಾಟ, ಗುಲ್ಲು, ಪಂಚಬಾಣ = ಕಾಮ; ಮಾರು ಕೊಡು = ಬದಲು ಕೊಡು, ತಿರಿಗಿ ಕೊಡು, ಒಪ್ಪಿಸು; ನಿಚ್ಚಟ = ಸತ್ಯತೆಯುಳ್ಳ; ಮಂಡಲಾಧಿಪತಿ = ಅರಸು;

೨೬. ನುಡಿವೆನು. ನುಡಿಯಲಂಜುವೆನಯ್ಯಾ. ಲಿಂಗದ ವಿನೋದಾರ್ಥವಾಗಿ ಗಮನವಂಕುರಿಸಿ, ಒಂದಾನೊಂದು ದೇಶಕ್ಕೆ ಹೋಗುತ್ತಿಪ್ಪಾಗ ಅರಣ್ಯ ಮಧ್ಯದಲ್ಲಿ ಹಸಿವೆದ್ದು ಅಸುವ ನಂಡಲೆವುತಿರುವಲ್ಲಿ, ತೃಷೆಯೆದ್ದು ಮನವ ಮತಿಗೆಡಿಸಿ, ಹಲ್ಲುಹತ್ತಿ ನಾಲಿಗೆ ತರಗಾಗಿ ಮೂರ್ಛೆಯಾಗುತಿರುವ ಸಮಯದಲ್ಲಿ ಕರ್ಜೂರ, ಮಾವು, ಜಂಬೂಫಲಂಗಳೊಳಗಾದ ಎಲ್ಲ ಫಲಂಗಳು ಕಾಯುನ್ಮುಕ್ತಿ, ಜೀವನ್ಮುಕ್ತಿಯೆಂಬ ಸಂಜೀವನ ರಸವ ತುಂಬಿಕೊಂಡು, ವೃಕ್ಷಂಗಳಡಿಯಲ್ಲಿ ಬಿದ್ದಿರಲು, ಕಣ್ಣಿನಲ್ಲಿ ನೋಡಿ, ಮನದಲ್ಲಿ ಬಯಸಿ, ಕೈಮುಟ್ಟಿ ಎತ್ತಿದೆನಾದಡೆ, ಎನ್ನ ವಿರಕ್ತಿ ಎಂಬ ಪತಿವ್ರತಾ ಭಾವಕ್ಕೆ ಅದೇ ಹಾನಿ ನೋಡಾ. ಅದೇನು ಕಾರಣವೆಂದೊಡೆ, ಅಂಗಭೋಗ ಅನರ್ಪಿತ, ಲಿಂಗಭೋಗ ಪ್ರಸಾದವೆಂದು ಆದ್ಯರ ವಚನ ಸಾರುತ್ತಿದ್ದಾವೆ ನೋಡಾ. ಇದುಕಾರಣ ಅನರ್ಪಿತವ ಭುಂಜಿಸಿ, ತನುವ ರಕ್ಷಣ್ಯವ ಮಾಡಿ ಶುನಕನ ಬಸಿರಿನಲ್ಲಿ ಬಂದು ಹೊಲೆಯರ ಬಾಗಿಲ ಕಾಯ್ದು ಹಲಪಾಹಾರವನುಂಡು. ನರಕಕ್ಕಿಳಿಯಲಾರದೆ ಮುಂದ ನರಿಯದೆ ನುಡಿದೆನಯ್ಯ. ಸತಿಯ ಭಾಷೆ ಪತಿಗೆ ತಪ್ಪದಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ತರಗು = ಒಣ ಎಲೆ.

೨೭. ಒಡ ಒಡಕು ಹುರಳಿಯ ಹೊಟ್ಟೆಯ ಹುರಿವಾಕೆಯ ಕೈಯ್ಯ ಸೊಟ್ಟ, ಕುರುಡುಗಣ್ಣ, ಮೆಲುವಾತ ದೊಡ್ಡ ಮೂಕೊರೆಗ ಇಂತಿವರು ತಮ್ಮ ಭೋಗಕ್ಕೆ ಸುರಪತಿಯ ಭೋಗವ ಜರಿವ ನರಗುರಿಗಳ ನಾನೇನೆಂಬೆನಯ್ಯ ಘನಲಿಂಗಿಯ ಮೋಹದ ಚನ್ನ ಮಲ್ಲಿಕಾರ್ಜುನಾ.

ಮೆಲು = ತಿನ್ನು; ಮೂಕೊರೆಗ = ಕೊಯ್ದ ಮೂಗಿನವ,

೨೮. ಎನ್ನ ಮನೋ ಮಧ್ಯದೊಳಗೊಂದು ಅನುಮಾನ ಅಂಕುರವಾಯಿತ್ತು ಕೇಳಾ ಎಲೆ ತಂಗಿ. ಲಿಂಗಾಣತಿಯಿಂದ ಬಂದ ಪದಾರ್ಥವನು ಮನವೊಪ್ಪಿ ಲಿಂಗಕ್ಕೆ ಕೊಟ್ಟುದೆ ಪ್ರಸಾದ. ಆ ಪ್ರಸಾದದ ಒಳಗಿರ್ದ ರಸವೇ ಪ್ರಸಾದ. ಹೊರಗಿರ್ದುದೇ ಹಿಪ್ಪೆ. ಮತ್ತಂ ಹೊರಗಿರ್ದ ಮಧುರವೇ ಪ್ರಸಾದ ಒಳಗಿರ್ದುದೇ ಕಠಿಣ. ಕಠಿಣಿಸಿ ಕೊಂಬುದೆಂಬ ಸುಖಿತನದ ನುಡಿಯು ಲಂಜಿ ನಡಗುತಿಪ್ಪೆನಯ್ಯ. ಅದೇನು ಕಾರಣ ನಡಗುತಿರ್ಪೆ? ಪ್ರಸಾದವೇ ಪರತತ್ವವೆಂದು ಪ್ರಮಥ ಗಣಂಗಳ ಸಮ್ಯಜ್ಞಾನದ ನುಡಿ ಉಲಿವುತ್ತಿದೆ. ಇದುಕಾರಣ ಪ್ರಸಾದವೆಂಬ ಪರತತ್ವದಲ್ಲಿ ಜ್ಞಾನ ಅಜ್ಞಾನಂಗಳೆರಡು ಹುದಿಗಿಪ್ಪವೆಂದು ನಾನುಡಿಯಲಮ್ಮೆ ತಥಾಪಿ ನುಡಿದಡೆ ಎನಗೆ ಮರ್ತ್ಯದ ಮಣಿಹವೆಂದೆಂದಿಗೂ ತೀರದೆಂದು ಕಠಿಣ ಪದಾರ್ಥವ ಲಿಂಗಕ್ಕೆ ಕೊಟ್ಟು ಕೊಳಲಮ್ಮೆನಯ್ಯಾ ಘನಲಿಂಗಿಯ ಮೋಹದ ಚನ್ನ ಮಲ್ಲಿಕಾರ್ಜುನಾ.

ಆಣತಿ= ಆಜ್ಞೆ; ಕಠಿಣಿಸು = ತೊಂದರೆಗೊಳಿಸು, ಅಮ್ಮೆ = ಶಕ್ಯನಲ್ಲ,

೨೯. ಪಿಂಡ ಬ್ರಹ್ಮಾಂಡಂಗಳಿಲ್ಲದಂದು ಅಷ್ಟದಿಕ್ಪಾಲಕರ ಹುಟ್ಟಿಲ್ಲದಂದು ನಿಷ್ಕಲ ಪರಂಜ್ಯೋತಿ ತಾನೊಂದೇ ನೋಡಾ. ಅದು ತನ್ನ ಚಿತ್ಕಾಂತಿಯು ಸಂಗಸಮರಸದಿಂದ ಮಹಾಲಿಂಗವೆನಿಸಿತ್ತು. ಆ ಮಹಾಲಿಂಗವೇ ತನ್ನ ಪರಮಾನಂದದಿಂದ ಪ್ರಸಾದಲಿಂಗವೆಂದು, ಜಂಗಮಲಿಂಗವೆಂದು, ಶಿವಲಿಂಗವೆಂದು. ಗುರುಲಿಂಗವೆಂದು, ಆಚಾರಲಿಂಗವೆಂದು, ಹೀಗೆ ಪಂಚಲಿಂಗವೆನಿಸಿತ್ತು. ಆ ಪಂಚಲಿಂಗಂಗಳ ಪ್ರಾಣ ಲಿಂಗಮುಖ ಪದಾರ್ಥಂಗಳಾವಾವೆಂದೊಡೆ, ಆಚಾರ ಲಿಂಗಕ್ಕೆ ಗುರು ಲಿಂಗವೇ ಪ್ರಾಣ, ಆ ಪ್ರಾಣ ಲಿಂಗಕ್ಕೆ ಆಚಾರಲಿಂಗವೇ ಅಂಗ, ಆ ಅಂಗಕ್ಕೆ ಆಚಾರಲಿಂಗದ ಆಚಾರಾದಿ ಪ್ರಸಾದ ಲಿಂಗಂಗಳೇ ಪಂಚಮುಖ, ಆ ಮುಖಂಗಳಿಗೆ, ಪಂಚಪ್ರಕಾರದ ಗಂಧಗಳೇ ದ್ರವ್ಯ ಪದಾರ್ಥ. ಗುರುಲಿಂಗಕ್ಕೆ ಶಿವಲಿಂಗವೇ ಪ್ರಾಣ, ಆ ಪ್ರಾಣಕ್ಕೆ ಗುರುಲಿಂಗವೇ ಅಂಗ, ಆ ಅಂಗಕ್ಕೆ ಗುರುಲಿಂಗದ ಆಚಾರಾದಿ ಪ್ರಸಾದ ಲಿಂಗಂಗಳೇ ಪಂಚಮುಖ, ಆ ಪಂಚಮುಖಂಗಳಿಗೆ ಪಂಚಪ್ರಕಾರದ ರಸಂಗಳೇ ದ್ರವ್ಯ ಪದಾರ್ಥ. ಶಿವಲಿಂಗಕ್ಕೆ ಜಂಗಮಲಿಂಗವೇ ಪ್ರಾಣ, ಆ ಪ್ರಾಣಕ್ಕೆ ಶಿವಲಿಂಗವೇ ಅಂಗ, ಆ ಅಂಗಕ್ಕೆ ಶಿವಲಿಂಗದ ಆಚಾರಾದಿ ಪ್ರಸಾದ ಲಿಂಗಂಗಳೇ ಪಂಚಮುಖ, ಆ ಮುಖಂಗಳಿಗೆ ಪಂಚಪ್ರಕಾರ ಸ್ವರೂಪಂಗಳೇ ದ್ರವ್ಯ ಪದಾರ್ಥ. ಜಂಗಮ ಲಿಂಗಕ್ಕೆ ಪ್ರಸಾದ ಲಿಂಗವೇ ಪ್ರಾಣ, ಆ ಪ್ರಾಣಕ್ಕೆ ಜಂಗಮಲಿಂಗವೇ ಅಂಗ, ಆ

ಅಂಗಕ್ಕೆ ಜಂಗಮಲಿಂಗದ ಆಚಾರಾದಿ ಪ್ರಸಾದ ಲಿಂಗಂಗಳೇ ಪಂಚಮುಖ, ಆ ಮುಖಂಗಳಿಗೆ ಪಂಚಪ್ರಕಾರದ ಸ್ಪರ್ಶನಂಗಳೇ ದ್ರವ್ಯಪದಾರ್ಥ, ಆ ಪ್ರಸಾದ ಲಿಂಗಕ್ಕೆ ಮಹಾಲಿಂಗವೇ ಪ್ರಾಣ, ಆ ಪ್ರಾಣಕ್ಕೆ ಆ ಪ್ರಸಾದ ಲಿಂಗವೇ ಅಂಗ, ಆ ಅಂಗಕ್ಕೆ ಪ್ರಸಾದ ಲಿಂಗದ ಆಚಾರಾದಿ ಪ್ರಸಾದ ಲಿಂಗಂಗಳೇ ಪಂಚಮುಖ, ಆ ಮುಖಂಗಳಿಗೆ ಪಂಚಪ್ರಕಾರದ ನಾದಂಗಳೇ ದ್ರವ್ಯಪದಾರ್ಥ. ಈ ಪ್ರಕಾರದಲ್ಲಿ ಪಂಚಲಿಂಗಂಗಳೇ ಪ್ರಾಣ, ಲಿಂಗಮುಖ ಪದಾರ್ಥ, ಇಂತಿವರ ನೆಲೆಯ ತಿಳಿದು ತಟ್ಟು ಮುಟ್ಟಿದ ಸುಖಂಗಳು ಆಯಾಯ ಮುಖಂಗಳಿಗೆ ಕೊಟ್ಟು ತೃಪ್ತಿಯ ಭಾವದಿಂದ ಮಹಾಲಿಂಗಕ್ಕೆ ಸಮರ್ಪಿಸುವ ಅವಧಾನ ನಿಮ್ಮ ಶರಣರಿಗಲ್ಲದೆ ಮಿಕ್ಕಿನ ಜಡ ಜೀವಿಗಳವರೆತ್ತ ಬಲ್ಲರಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಅವಧಾನ = ಲಕ್ಷ, ಏಕಾಗ್ರತೆ,

೩೦. ಆಚಾರಲಿಂಗವ ಅಂಗೈಯೊಳಗಳವಡಿಸಿಕೊಂಡು ಮಜ್ಜನಕ್ಕೆರೆದು, ಶ್ರೀಪುಂಡ್ರವಂ ಧರಿಸಿ, ಪುಷ್ಪ ಜಾತಿಗಳಿಂದರ್ಚಿಸಿ, ಪೂಜೆಯ ಮಾಡುವ ಕರದಲ್ಲಿ ಆ ಪೂಜೆಗೆ ಮೆಚ್ಚಿ ಪಂಚಸ್ಪರ್ಶನಂಗಳಂ ಮರೆಯಲೊಡನೆ, ಆ ಕರದಲ್ಲಿ ಜಂಗಮಲಿಂಗ ನೆಲೆಗೊಂಡಿತ್ತು. ಆ ಲಿಂಗದ ಪ್ರಕಾಶಮಂ ನೋಡುವ ನೇತ್ರಂಗಳು ಆ ಪ್ರಕಾಶಕ್ಕೆ ಮೆಚ್ಚಿ ಪಂಚ ವರ್ಣಂಗಳಂ ಮರೆಯಲೊಡನೆ ಆ ನೇತ್ರಂಗಳಲ್ಲಿ ಶಿವಲಿಂಗ ನೆಲೆಗೊಂಡಿತ್ತು. ಆ ಲಿಂಗದ ಸದ್ವಾಸನೆಯಂ ವಾಸಿಸುವ ಘ್ರಾಣ, ಆ ವಾಸನೆಗೆ ಮೆಚ್ಚಿ ಪಂಚಗಂಧಂಗಳಂ ಮರೆಯಲೊಡನೆ ಆ ಘ್ರಾಣದಲ್ಲಿ ಆಚಾರಲಿಂಗ ನೆಲೆಗೊಂಡಿತ್ತು. ಆ ಲಿಂಗವಂ ಮಂತ್ರಸ್ವರೂಪವನೆತ್ತಿಕೊಂಡಾಡುವ ಜಿಹ್ವೆ ಆ ಮಂತ್ರಕ್ಕೆ ಮೆಚ್ಚಿ, ಪಂಚರಸಂಗಳಂ ಮರೆಯಲೊಡನೆ ಆ ಜಿಹ್ವೆಯಲ್ಲಿ ಗುರುಲಿಂಗ ನೆಲೆಗೊಂಡಿತ್ತು. ಆ ಲಿಂಗವಂ ಮನವೊಲಿದು ಹಾಡುವ ನಾದಮಂ ಕೇಳಿದ ಶ್ರೋತ್ರ, ಆ ನಾದಕ್ಕೆ ಮೆಚ್ಚಿ, ಪಂಚನಾದಂಗಳಂ ಮರೆಯಲೊಡನೆ ಆ ಶ್ರೋತ್ರದಲ್ಲಿ ಪ್ರಕಾಶವಲಿಂಗ ನೆಲೆಗೊಂಡಿತ್ತು. ಆ ಲಿಂಗವಂ ನೆನೆವ ಮನ, ಆ ನೆನಹಿಂಗೆ ಮೆಚ್ಚಿ, ಪಂಚ ಪರಿಣಾಮಂಗಳಂ ಮರೆಯಲೊಡನೆ, ಆ ಮನದಲ್ಲಿ ಮಹಾಲಿಂಗ ನೆಲೆಗೊಂಡಿತ್ತು. ಈ ಷಡಿಂದ್ರಿಯಂಗಳು ಆ ಲಿಂಗವನಪ್ಪಿ ಅಗಲದ ಕಾರಣ ಆ ಲಿಂಗ ಒಲಿದು ಷಡಿಂದ್ರಿಯಂಗಳಲ್ಲಿ ಲಿಂಗವಾಗಿ ನೆಲೆಗೊಂಡಿತ್ತು. ಇಂತಪ್ಪ ಇಷ್ಟಲಿಂಗದಲ್ಲಿ ಸಹಜ ಶರಣ ನಿಷ್ಠೆ ನಿಬ್ಬೆರಗಾಗಿ ಧ್ಯಾನ ಯೋಗಮಂ ಕೈಕೊಂಡು, ಷಡ್ವರ್ಣಂಗಳ

ಮರೆಯುಲೊಡನೆ ಆ ಲಿಂಗ ಒಲಿದು, ಅಂಗವೇಧಿಸಿ ಜ್ಞಾನಕ್ರಿಯಂಗಳಲ್ಲಿ ಷಡ್ವಿಧ ಪ್ರಾಣಲಿಂಗವಾಗಿ ನೆಲೆಗೊಂಡಿತ್ತು. ಆ ಪ್ರಾಣಲಿಂಗಂಗಳಂ ಶರಣ ಮಂತ್ರ ಮಾಲೆಯಿಂ ಹೃದಯದೊಳಿಂಬಿಟ್ಟು, ಮನದರಳ್ದ ತಾವರೆಯಲ್ಲಿ ಜಾಗ್ರ ಸ್ವಪ್ನದಲ್ಲಿ ಪೂಜಿಸುವ ಧಾರಣ ಯೋಗದೊಳಿದ್ದು ಕ್ರಿಯೆಯ ಮರೆಯುಲೊಡನೆ, ಆ ಲಿಂಗ ಒಲಿದು, ಮನವೇಧಿಸಿ ಭಾವಂಗಳಡಗಿ ತ್ರಿವಿಧ ಭಾವಲಿಂಗವಾಗಿ ನೆಲೆಗೊಂಡಿತ್ತು. ಆ ಭಾವಲಿಂಗಂಗಳಂ ಶರಣ ಒಡವೆರೆಯುಲೊಡನೆ ಕರ್ಪೂರ ಹೋಗಿ ಉರಿಯ ಪಿಡಿದಂತಾದ ಸಮಾಧಿಯೋಗದೊಳಿದ್ದು, ಜ್ಞಾನವ ಮರೆಯುಲೊಡನೆ ಆ ಶರಣಂಗೆ ಆ ಲಿಂಗ ಒಲಿದು ಸರ್ವಾಂಗ ಲಿಂಗವಾಯಿತ್ತು ಆತನೆ ಪರಬ್ರಹ್ಮ. ಇದನರಿಯದೆ ಜ್ಞಾನಕ್ರಿಯೆಗಳಿಂದಾಚರಿಸಿ, ಲಿಂಗಾಂಗ ಸಂಯೋಗವಾಗದೆ, ಕೆರಹಿನ ಟ್ಟಿಗೆ ನಾಯಿ ತಲೆದೂಗುವಂತೆ ತಮ್ಮ ಅರುಹಿಂಗೆ ತಾವೆ ತಲೆದೂಗಿ, ಅಹಂಬ್ರಹ್ಮನೆಂಬ ಚೌರಾಸಿ ಹೊಲೆಯರ ಎನಗೊಮ್ಮೆ ತೋರದಿರಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಅಳವಡಿಸು = ಸಿದ್ಧಪಡಿಸು; ಪರಿಣಾಮ = ಸುಖ; ನಿಬ್ಬೆರಗು = ಸಂಯೋಗ, ವೇಧಿಸು = ಕೂಡು; ಒಡವೆರೆ - ಸಂಯೋಗವಾಗು, ಕೂಡು; ಅರುಹು = ಜ್ಞಾನ,

೩೧. ಕರ್ತಭೂತಳದ ವರ್ತಮಾನಕ್ಕೆ ಹೇಸಿ, ಮನ ಓತು, ನಿರ್ವಾಣದಾಸೊಹಮಂ ಕೈವಿಡಿದು ಎನ್ನ ತನುವೇ ವನಿತೆ, ಕರಣಂಗಳೇ ದ್ರವ್ಯ, ಉರವಣಿಸಿದ ಭಕ್ತಿಯೇ ನೆಲ, ಇಂತೀ ತ್ರಿವಿಧ ಪದಾರ್ಥಂಗಳಂ ಹಿಡಿದು ಗಣಂಗಳ ಮುಂದೆ ಕರಪಾತ್ರೆಯೆಂಬ ಕಾಯಕಮಂ ಕಟ್ಟಿದೆ. ಎನ್ನ ಸಮಯಾಚಾರಕ್ಕೆ ಷಷ್ಠಮ್ನ ಮಂಟಪದಲ್ಲಿ ಗುರುವ ತಡೆದೆ. ತ್ರಿಪುಟಿಯ ಮಂಟಪದಲ್ಲಿ ಲಿಂಗವ ತಡೆದೆ. ಹೃದಯ ಮಂಟಪದಲ್ಲಿ ಜಂಗಮವ ತಡೆದೆ. ಎನ್ನ ಸ್ವಯಕಾಯಕಮಂ ತಂದು, ರೂಪು ಪದಾರ್ಥಂಗಳಂ ನಿರ್ಭಾವ ಪರಿಯಾಣದಲ್ಲಿ ಗಡಣಿಸಿ ಗುರುವಿನ ಮುಂದಿಕ್ಕಿದೆ. ರುಚಿ ಪದಾರ್ಥಂಗಳಂ ಸುಮನ ಪರಿಯಾಣದಲ್ಲಿ ಲಿಂಗದ ಮುಂದಿಕ್ಕಿದೆ. ತೃಪ್ತಿ ಪದಾರ್ಥಂಗಳಂ ಭಾವ ಪರಿಯಾಣದಲ್ಲಿ ಗಡಣಿಸಿ ಜಂಗಮದ ಮುಂದಿಕ್ಕಿದೆ. ಇಂತೀ ನಿರಂಜನ ಗುರುಲಿಂಗಜಂಗಮ ಸವಿದ ಒಕ್ಕು ಮಿಕ್ಕ ತ್ರಿವಿಧ ಪ್ರಸಾದವನುಂಡು, ತ್ರಿವಿಧ ಕರ್ಮನಾಸ್ತಿಯಾಗಿ ನಾನು ಬದುಕಿದೆನಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಓ = ಪ್ರೀತಿಸು; ನಿರ್ವಾಣ = ಮುಕ್ತಿ; ಗಡಣಿಸು = ಕೂಡಹಾಕು; ಒಗು = ಬಿಡು, ಚಲ್ಲು; ನಿರಂಜನ = ಶುದ್ಧ

೩೨. ಶಿವಪ್ರಸಾದ ಬೀಸರ ಹೋಗಬಾರದೆಂದು ಎಚ್ಚರಿಕೆ ಅವಧಾನದಿಂದರ್ಪಿಸಿ, ಪ್ರಕ್ಷಾಲನ ಲೇಹ್ಯ ಅಂಗಲೇಪನದಿಂದ ಅವಧಾನವ ಮಾಡುತಿಪ್ಪ ಪರಮವಿರಕ್ತರೇ, ಪದಾರ್ಥವಂ ಕರದಲ್ಲಿ ತಂದುಕೊಟ್ಟರೇನು ಮಾಡಿಕೊಂಬಿರಯ್ಯಾ. ಭಕ್ತರು ಕ್ರಿಯೆವಿಡಿದು ಪದಾರ್ಥವ ಪರಿಯಾಣದಲ್ಲಿ ತಂದರೆ ಭಯಭಕ್ತಿಯಿಂದ ಒಯ್ಯಾರದಲ್ಲಿ ಪ್ರಸಾದವ ಸಲಿಸುವದೆ ಎನ್ನ ಕ್ರಿಯಕ್ಕೆ ಸಂದಿತ್ತು. ಅದಲ್ಲದೆ ಎನ್ನ ಕರಪಾತ್ರದಲ್ಲಿಗೆ ತಂದು ಭಿಕ್ಷವ ನೀಡಿದರೆ ಕೊಂಡುದೆ ಪ್ರಸಾದ, ಒಕ್ಕದೆ ಪದಾರ್ಥ, ಅದು ಎನ್ನ ಜ್ಞಾನಕ್ಕೆ ಸಂದಿತ್ತು. ಅದು ಹೇಗೆಂದೊಡೆ, ಹರಿ ಶಬ್ದವ ಕೇಳೆನೆಂದು ಭಾಷೆಯ ಮಾಡಿದ ಶಿವಭಕ್ತೆ ಸತ್ಯಕ್ಕನ ಮನೆಗೆ ಶಿವನು ಜಂಗಮವಾಗಿ ಭಿಕ್ಷಕ್ಕೆ ಬಂದು ಹರಿ ಎನ್ನಲೊಡನೆ ಹರನ ಬಾಯ ಹುಟ್ಟಿನಲ್ಲಿ ತಿವಿದಳು. ಅದು ಅವಳ ಭಾಷೆಗೆ ಸಂದಿತ್ತು. ಅವಳು ಶಿವದ್ರೋಹಿಯೇ? ಅಲ್ಲ. ನಾನು ಸಂಸಾರ ಸಾಗರದಲ್ಲಿ ಬಿದ್ದು ಏಳುತ್ತ ಮುಳುಗುತ್ತ ಕಟುಕ ನೀರ ಕುಡಿವ ಸಮಯದಲ್ಲಿ ಶಿವನ ಕೃಪೆಯಿಂದ ನನ್ನಿಂದ ನಾನೆ ತಿಳಿದು ನೋಡಿ ಎಚ್ಚತ್ತು ಮೂರು ಪಾಶಂಗಳ ಕುಣಿಕೆಯ ಕಳೆದು, ಭೋಗ ಭುಕ್ತ್ಯಾದಿಗಳ ನತಿಗಳೆದು, ಅಹಂಕಾರ ಮಮಕಾರಂಗಳನಳಿದು, ಉಪಾಧಿಕೆ ಒಡಲಾಸೆಯಂ ಕಡೆಮೆಟ್ಟಿ ಪೊಡವಿಯ ಸ್ನೇಹವರ ಹುಡಿಗುಟ್ಟಿ ಉಟ್ಟುದ ತೊರೆದು ಊರ ಹಂಗಿಲ್ಲದೆ ನಿರ್ವಾಣಿಯಾಗಿ, ನಿಜಮುಕ್ತಿ ಸೋಪಾನವಾಗಿಪ್ಪ ಕರಪಾತ್ರೆಯೆಂಬ ಬಿರಿದ ಬಸವಾದಿ ಪ್ರಮಥರರಿಕೆಯಾಗಿ ಶಿವನ ಮುಂದೆ ಕಡುಗಲಿಯಾಗಿ ನಾನು ಕಟ್ಟಿದ ಬಿರಿದಿಂಗೆ ಹಿಂದು ಮುಂದಾದರೆ ಶಿವನು ಮೂಗ ಕೊಯ್ದು ಕನ್ನಡಿಯ ತೋರಿ ಅಣಕವಾಡಿ ನಗುತಿಪ್ಪನೆಂದು ನಾನು ಕರಪಾತ್ರದಲ್ಲಿ ಸಂದೇಹವಿಲ್ಲದೆ ಸಲಿಸುತಿಪ್ಪೆನು. ಆ ಸಮಯದಲ್ಲಿ ಕೊಂಡುದೆ ಪ್ರಸಾದ ಒಕ್ಕುದೇ ಪದಾರ್ಥ ಇದು ಎನ್ನ ಸಮ್ಯಜ್ಞಾನದ ಬಿರಿದಿಂಗೆ ಸಂದಿತ್ತು. ನಾನು ಪ್ರಸಾದ ದ್ರೋಹಿಯೇ? ಅಲ್ಲ. ಇಂತಲ್ಲದೆ ನಾನು ಮನಸಿಂಗೆ ಬಂದಂತೆ ಉಂಡುಟ್ಟಾಡಿ, ರೂಪರಸ ಗಂಧವೆಂಬ ತ್ರಿವಿಧ ಪ್ರಸಾದದಲ್ಲಿ ಉದಾಸೀನವ ಮಾಡಲಮ್ಮೆನು. ಮಾಡಿದೆನಾದರೆ ವರಾಹ ಕುಕ್ಕುಟನ ಬಸುರಲ್ಲಿ ಬಪ್ಪುದು ತಪ್ಪದು. ಇದ ಕಡೆಮುಟ್ಟೆ ನಡಿಸು ನಡಿಸಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಬೀಸರವೋಗು = ನಾಶವಾಗು, ಕೆಡು; ಲೇಹ್ಯ = ನೆಕ್ಕತಕ್ಕ; ಸಂದಿತ್ತು, ಒಪ್ಪಿತ್ತು; ಅತಿಗಳೆ = ವಿಾರು, ಬಿಡು; ಹುಡಿಗುಟ್ಟು = ನಾಶಮಾಡು; ಅಣಕ = ಚೇಷ್ಟೆ, ವರಾಹ = ಹಂದಿ; ಕುಕ್ಕುಟ = ಕೋಳಿ.

೩೩. ಅರ್ಪಿತ ಅವಧಾನದ ಕ್ರಮವ ವಿಸ್ತರಿಸಿ ಒಪ್ಪವಿಟ್ಟು ಹೇಳಿಹೆ, ಕೇಳಿರಣ್ಣಾ. ಭಿನ್ನ ಭೋಜನ, ಪ್ರಸಾದ ಭೋಜನ, ಸಹ ಭೋಜನವೆಂದು ಲಿಂಗಾರ್ಪಿತ ಮೂರು ಪ್ರಕಾರವಾಗಿಪ್ಪುದು. ಮುಂದಿಟ್ಟ ಸಕಲ ಪದಾರ್ಥಂಗಳ ಲಿಂಗಕ್ಕೆ ಕೊಟ್ಟು, ಆ ಲಿಂಗವುಂ ಸೆಜ್ಜೆಯ ಮನೆಗೆ ಬಿಜಯಂಗೈಸಿ ಅಂದಂದಿಂಗೆ ಬಂದ ಪದಾರ್ಥವುಂ ಲಿಂಗಕ್ಕೆ ಕೊಡದೆ ಕೊಂಬುದೀಗ ಭಿನ್ನ ಭೋಜನ, ಮುಂದಿಟ್ಟ ಸಕಲ ಪದಾರ್ಥಂಗಳಂ ಲಿಂಗಕ್ಕೆ ಒಂದೇವೇಳೆ ಕೊಡದೆ ಎತ್ತಿದ ಭೋಜ್ಯವುಂ ಲಿಂಗಕ್ಕೆ ಕೊಟ್ಟು ಆ ಭೋಜ್ಯವುಂ ಇಳುಹದೆ ಕೊಂಬುದೀಗ ಪ್ರಸಾದ ಭೋಜನ, ಮುಂದಿಟ್ಟ ಸಕಲ ಪದಾರ್ಥಂಗಳ ಲಿಂಗಕ್ಕೆ ಮೊದಲುಕೊಟ್ಟು, ಮತ್ತೆ ಭೋಜ್ಯ ಭೋಜ್ಯಕ್ಕೆ ಕೊಟ್ಟು ಕೊಂಬುದೀಗ ಸಹ ಭೋಜನ, ಇಂತೀ ತ್ರಿವಿಧ ಭೋಜನದಂತರಂಗದನ್ವಯುವ ನಿಮ್ಮ ಶರಣರೇ ಬಲ್ಲರಯ್ಯಾ ಘನ ಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಒಪ್ಪ = ಸೌಂದರ್ಯ, ಸರಿಯಾದದ್ದು; ಸೆಜ್ಜೆ = ಇರುವಸ್ಥಳ; ಭೋಜ್ಯ = ಉಣ್ಣತಕ್ಕ ಪದಾರ್ಥ; ಅನ್ವಯ = ಸಂಬಂಧ.

೩೪. ಶಿವನ ಕೃಪೆಯಿಂದ ಎನ್ನ ಪುಣ್ಯ ಹಣ್ಣಿದಂತೆ ಸರ್ವಾಂಗದಲ್ಲಿ ಪ್ರಸಾದಂಗಳ ನಾನು ಎಡೆಬಿಡದೆ, ಆಚಾರ ಪ್ರಸಾದವೇ ಆದಿ ಪ್ರಸಾದವೆಂದು ಧರಿಸಿರ್ದ ಸಂಭ್ರಮುವ ನೋಡಾ. ಎಲೆ ಅಮ್ಮ ಮುಕ್ತಿಪದವ ತೋರುವ ಪ್ರಸಾದವ ತತ್ವದ ಎರಡರ ಮೇಲೆ ಧರಿಸಿದೆ. ಆ ಪ್ರಸಾದವೇ ಆದ್ಯಂತವಪ ಪಂಚಪ್ರಸಾದಂಗಳ ಪಂಚಸ್ಥಾನದಲ್ಲಿ ಧರಿಸಿದೆ. ಪ್ರಸಿದ್ಧ ಪ್ರಸಾದವ ಆಕಾಶದಲ್ಲಿ ಧರಿಸಿದೆ. ಸಿದ್ಧ ಪ್ರಸಾದವ ಬ್ರಹ್ಮರಂಧ್ರದಲ್ಲಿ ಧರಿಸಿದೆ. ಶುದ್ಧಪ್ರಸಾದವ ಶಿಖಿಯಲ್ಲಿ ಧರಿಸಿದೆ. ಮಹಾ ಪ್ರಸಾದವ ಪಶ್ಚಿಮದಲ್ಲಿ ಧರಿಸಿದೆ. ಇಂತಪ್ಪ ಬ್ರಹ್ಮವೆಂಬ ಮಹಾ ಪ್ರಸಾದಂಗಳ ನಾನು ದಿವಾರಾತ್ರಿ ಎನ್ನದೆ, ಪೂಜೆಯ ಮಾಡಿದಲ್ಲಿಯೇ ಎನಗೆ ಪರಮಾರ್ಥದರಿವು ಕೈಸಾರಿತ್ತು. ಆ ಪರಮಾರ್ಥದರಿವು ಕೈಸಾರಿದಲ್ಲಿಯೇ ಎನ್ನ ತನು, ಮನ, ಧನಂಗಳು ಪದಾರ್ಥಂಗಳಾದವು. ಆ ಪದಾರ್ಥಂಗಳ ಏಕಚಿತ್ತ ಮನೋಭಾವದಲ್ಲಿ ತೋರಿಟದ ಸಿದ್ಧಲಿಂಗನೆಂಬ ನಿಃಷ್ಕಲ ಬ್ರಹ್ಮಕ್ಕೆ ಸಮರ್ಪಿಸಿದಲ್ಲಿಯೇ ಎನಗೆ

ಅನಿತ್ಯವು ಕೆಟ್ಟು, ನಿತ್ಯವೆಂಬುದು ನಿಜವಾಯಿತಯ್ಯ ಘನಲಿಂಗಿಯ ಮೋಹದ ಚನ್ನ ಮಲ್ಲಿಕಾರ್ಜುನಾ.

೩೫. ಮುಕ್ತಿಗೆ ಸದಾ ಸಂಧಾನದಲಿ ಇರಬೇಕೆಂದು ಶಿವಶರಣರು ನುಡಿವುತಿಪ್ಪರು. ಆ ಸಂಧಾನದ ಹೊಲಬನಾನರಿಯೆ. ಎನಗೆ ಮುಕ್ತಿಯಿಲ್ಲ. ಇನ್ನೇವೆ ಇನ್ನೇವೆನೆಂದು ಕಂಬನಿದುಂಬಿ ಕರಗುತಿಪ್ಪ ಮನವೇ, ಗುರು ಕೊಟ್ಟ ಸಂಧಾನವೇ ಕರಕಮಲದಲ್ಲಿ ಪ್ರಸನ್ನತ್ವ ಪ್ರಸಾದವಂ ಪ್ರತ್ಯಕ್ಷವಾಗಿ ತೋರುತ್ತಿದೆ. ಗುರುಕೊಟ್ಟ ಸಂಧಾನವೇ ಎಂಟೆಸಳಿನ ಚೌವಳದ ಮಧ್ಯ ದಲ್ಲಿ ಹೊಂಗಳಸದಂತೆ ಥಳಥಳನೆ ಹೊಳೆವುತ್ತಿದೆ. ಗುರುಕೊಟ್ಟ ಸಂಧಾ ನವೇ ಮುಪ್ಪುರದ ಮಧ್ಯದಲ್ಲಿ ರತ್ನ ಮಿಂಚಿನಂತೆ ಕುಡಿವರಿದು ಉರಿವು ತ್ತಿದೆ. ಗುರುಕೊಟ್ಟ ಸಂಧಾನವೇ ಪಂಚಪತ್ರದ ಮಧ್ಯದಲ್ಲಿ ಬೆಳ್ದಿಂಗಳಲತೆ ಯಂತೆ ಬೀದಿವರಿದು ಬೆಳಗು ಬೀರುತ್ತಿದೆ. ಈ ಪ್ರಕಾರದ ಬೆಳಗೆ ಮುಕ್ತಿಗೆ ಸಂಧಾನವಾಗಿ ಒಪ್ಪುತಿಪ್ಪುದು. ಇದನೆ ಕಣ್ದುಂಬಿ ನೋಡಿ ಇದನೆ ಮನವ ಣಿವಂತೆ ಹಾಡು. ಇದನೆ ಅಪ್ಪಿ ಅಗಲದಿಪ್ಪುದೇ ನಿಜಮುಕ್ತಿ. ಇದಕೆ ತಪ್ಪದು. ನೀನಂಜಬೇಡ. ಗುರುಕೊಟ್ಟ ಸಂಧಾನವ ಮರೆದು ಭಿನ್ನವಿಟ್ಟು ಲಕ್ಷಿಸುವ ಸಂಧಾನವೆಲ್ಲ ಭವದ ಸಂಧಾನವಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಹೊಲಬು = ಮಾರ್ಗ; ಹೊಂಗಳಸ = ಬಂಗಾರದ ಕಳಸ; ಮುಪ್ಪುರ = ಮೂರು ಊರುಗಳಿರುವಸ್ಥಳ; ಕುಡಿವರಿ = ಹಬ್ಬು; ಬೀದಿವರಿ = ಪಸರಿಸು;

೩೬. ಕುಂದಣಕ್ಕೆ ಒಪ್ಪುವ ಒರೆಜಣ್ಣದ ಮಿಶ್ರುವ ಚಿನ್ನ ಒರೆವವ ಬಲ್ಲನಲ್ಲದೆ ಗೈದುಂಬ ಒಕ್ಕಲ ಮಗನೆಂತು ಬಲ್ಲನಯ್ಯಾ? ವಸ್ತುವನೊಡ ಗೂಡುವ ಸಂಧಾನದ ನುಡಿಯ ಗಡಣದ ಬೆಳಗ ಲಿಂಗಸಂಧಾನಿ ಬಲ್ಲನ ಲ್ಲದೆ ಅರಿವು ಮರವೆಯನೊಳಗೊಂಡಿಪ್ಪ ವೇಷಧಾರಿಗಳವರೆತ್ತಬಲ್ಲರಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಗಡಣ = ಸಮೂಹ.

೩೭. ಕತ್ತಲೆ ಸತ್ತು ಬೆಳಗು ಬೀದಿವರಿಯಿತ್ತು ನೋಡಾ. ಎಲೆ ಅವ್ವಾ ಪಂಚತತ್ವಂಗಳ ಮೇಲಿಪ್ಪ ಆಚಾರ ಲಿಂಗದ ನೈಷ್ಠೆಯುಬಲದಿಂದ ಅಖಂಡಿತ ಕರಣಂಗಳನೊಳಗೊಂಡಿಪ್ಪ ಈ ಷಣತ್ರಯಂಗಳ ಭೋಗವನಿಕ್ಕಿ ತ್ಯಾಗಾಂಗಿ ಯಾದೆ. ಹದಿನೇಳು ತತ್ವಂಗಳ ಮೇಲಿಪ್ಪ ಜಂಗಮಲಿಂಗದ ಎಚ್ಚರಿಸ ಬಲದಿಂದ ಅನಂತ ಸವಿಯ ನೊಳಗೊಂಡಿಪ್ಪ ಷಡುರಸಂಗಳಲ್ಲಿ ಲಿಂಗ

ಭೋಗೋಪ ಭೋಗಿಯಾಗಿ, ಭೋಗಾಂಗಿಯಾದೆ. ಮೂರು ತತ್ವಂಗಳ ಮೇಲಿಪ್ಪ ನಿರಾಕಾರಲಿಂಗದ ಅರುಹಿನ ಬಲದಿಂದ ಪ್ರಣವು ಪಂಚಾಕ್ಷರಿಯಂ ಸ್ಮರಿಸಿ, ಮನ ಮಹಾಲಿಂಗದಲ್ಲಿ ಯೋಗವಾಗಿ, ಯೋಗಾಂಗಿಯಾದೆ. ಚಿಪ್ಪ್ರಹ್ಮಾಂಡದೊಳಗಣ ಏಳು ತಾವರೆಯ ಮೇಲಿಪ್ಪ ನಿಃಕ್ಕಲ ಚಿದ್ಬಿಂದುಲಿಂಗಕ್ಕೆ ಪ್ರಾಣಪೂಜೆಯಂ ಮಾಡಿ, ಮನ ಮಹಾಜ್ಞಾನದ ಬಲದಿಂದ ನವದ್ವೀಪಂಗಳ ಲಿಂಗಂಗಳ ಬೆಳಗು ಪಿಂಡಾಂಡದಲ್ಲಿ ಪ್ರಭಾವಿಸಿ ತೋರುತಿಪ್ಪುದಾಗಿ, ನಾನು ಸರ್ವಾಂಗಲಿಂಗಿಯಾದೆನಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಬೀದಿವರಿ = ಹೊರಹೊರಡು, ಪ್ರಸಾರವಾಗು; ಅಖಂಡಿತ= ಸಂಪೂರ್ಣವಾಗಿರುವ; ಈ ಷಣತ್ರಯ = ದ್ರವ್ಯ ಹೆಂಡತಿ ಮತ್ತು ಮಕ್ಕಳು ಇವರಿಗೋಸ್ಕರ ಆಶೆ; ಪ್ರಭಾವಿಸು= ಒಡಮೂಡು;

೩೮. ಮಣ್ಣಹಿಡಿದವರೆಲ್ಲರು ಬ್ರಹ್ಮನ ಸೃಷ್ಟಿಗೊಳಗಾದರು ಹೊನ್ನ ಹಿಡಿದವರೆಲ್ಲರು ವಿಷ್ಣುವಿನ ಸ್ಥಿತಿಗೊಳಗಾದರು. ಹೆಣ್ಣಹಿಡಿದವರೆಲ್ಲರು ರುದ್ರನ ಸಂಹಾರಕ್ಕೊಳಗಾದರು. ಹೊನ್ನು, ಹೆಣ್ಣು, ಮಣ್ಣು ಬಿಟ್ಟು ಲಿಂಗ ಸಂಯೋಗವನರಿಯದೆ, ಸದಾಚಾರದಲ್ಲಿ ತಿರಿದುಂಡು, ಆತ್ಮಸುಖಿಯಾದವರೆಲ್ಲರು ಫಲಭೋಗಕ್ಕೊಳಗಾದರು. ನಾನು ಮೂರನುಬಿಟ್ಟು ಆರುಕಂಡು ಮೂದೇವರ ಗೆಲಿದೆ ಆರುಬಿಟ್ಟು ಮೂರಕಂಡು ಮನವುಳುಗಿ ಮೂರೊಂದು ಪದವದಾಂಟಿ ಶಿವನೊಳಗಾದೆನಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

೩೯. ಶರಣಸಂಭಾಷಣೆಯಿಂದ ಪುರಾತರ ವಚನದ ಪರಮಾಮೃತವ ದಣಿಯಲುಂಡು, ಆ ವಚನದ ಹೆಜ್ಜೆವಿಡಿದು ಹೋಗಿ, ತ್ರಿವಿಧಲಿಂಗದ ಅನ್ಯಂತವುಂ ಅರಿದು, ಆ ಲಿಂಗಂಗಳಂ ಅರಿವಿಡಿದಾಚರಿಸಿ, ಷಡಂಗಷಡ್ವಿಧ ಲಿಂಗಂಗಳಿಗೆ ಮಾತೃಸ್ಥಾನವಾದ ನಿಷ್ಕಲ ಬ್ರಹ್ಮವೆನಿಪ್ಪ ಸಿದ್ಧಲಿಂಗ ಪ್ರಭುವಕಂಡು, ಆ ಸಿದ್ಧಲಿಂಗ ಪ್ರಭುವಂ ಹೃದಯ ತ್ರಿಪುಟಿ ಸುಷುಮ್ನ ಎಂಬ ಮೂರು ಸಿಂಹಾಸನದ ಮೇಲೆ ಗುರುಲಿಂಗಜಂಗಮವೆನಿಸಿಕೊಂಡು, ಮೂರ್ತಿಗೊಳಿಸಿ ತುಂಬಿತುಳಕದ, ಮಂದಮಾರುತನ ವ್ಯಸೋಂಕದ, ಭಾನುವಿನ ಕಿರಣಕ್ಕೆ ಬಳಲದ, ಚಂದ್ರೋದಯಕ್ಕೆ ಅಂಪವಾಗದ, ಜನರ ಕಣ್ಮನಕ್ಕೆ ಅಗೋಚರವಾದ ಜಾಜಿ, ಸಂಪಿಗೆ ಇರುವಂತಿಗೆ, ಮಲ್ಲಿಗೆ, ಕೆಂದಾವರೆ, ಸೇವಂತಿಗೆ ಎಂಬ ಭಾವ ಪುಷ್ಪಂಗಳಲ್ಲಿ ಪೂಜೆಯಂ ಮಾಡಿ,

ಬೀಗಿ ಬೆಳೆವುತಿಪ್ಪಶರಣಂಗೆ ಮತ್ತೆ ಅನುಭಾವದ ಸುಖಸವಿದೋರ್ಪುದೆ ಅಯ್ಯಾ? ಕೆನೆಸಾಧ್ಯವಾದಬಳಿಕ ಹಾಲಿನ ಹಂಗೇತಕಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ?

ಕೆಳದಿ = ಸ್ನೇಹಿತಳು; ಬೀಗು = ಹೆಚ್ಚಾಗು;

೪೦. ಲಿಂಗಾಂಗ ಸಂಬಂಧದ ಭೇದವ ನರಿಯದೆ ನಾವು ಲಿಂಗಾಂಗ ಸಂಬಂಧಿಗಳೆಂದು ಅಂದಚಂದವಾಗಿ ನುಡಿದುಕೊಂಬ ಕ್ರಿಯಾಭ್ರಾಂತರು ನೀವು ಕೇಳಿರಿ ಲಿಂಗಾಂಗ ಸಂಬಂಧದ ಉತ್ತರೋತ್ತರದ ನಿರ್ಣಯವ. ಹೊರಗಣ ಹುವ್ವನೇತಂದು ಸ್ಥೂಲ ತನುವಿನ ಮೇಲಿಪ್ಪ ಆಚಾರಲಿಂಗಮಂ ಪೂಜೆಯಂ ಮಾಡಿ, ತನುವಸಮರ್ಪಿಸಿ ಬೇಡಿಕೊಂಡು ಹೊರಗಣ ಹೊನ್ನು. ಹೆಣ್ಣು. ಮಣ್ಣು ಷಟ್ಕರ್ಮಂಗಳಂ ಬಿಟ್ಟುದೆ ಇಷ್ಟಲಿಂಗದ ಪೂಜೆ. ಒಳಗಣ ಹುವ್ವನೇತಂದು ಸೂಕ್ಷ್ಮತನುವಿನ ಮೇಲಿಪ್ಪ ಜಂಗಮ ಲಿಂಗಮಂ ಪೂಜೆಯಂ ಮಾಡಿ, ಮನವ ಸಮರ್ಪಿಸಿ ಉಪಾವಸ್ಥೆಯಂ ಮಾಡಿ, ಒಳಗಣ ಅಂತಃಕರಣಂಗಳ ಸುಟ್ಟುದೆ ಪ್ರಾಣಲಿಂಗದ ಪೂಜೆ. ಮನೋಮಧ್ಯದೊಳಗಿಪ್ಪ ಭಾವಪುಷ್ಪವನೆ ತಂದು ಕಾರಣ ತನುವಿನ ಮೇಲಿಪ್ಪ ತೃಪ್ತಿಲಿಂಗಮಂ ಪೂಜೆಯಂ ಮಾಡಿ ಸಂತೋಷಮಂ ಸಮರ್ಪಿಸಿ ದೈನ್ಯಂ ಬಿಟ್ಟು, ಜ್ಞಾನ ಕ್ರಿಯಗಳಳಿದುದೆ ಭಾವಲಿಂಗದ ಪೂಜೆ. ಈ ಪ್ರಕಾರ ಲಿಂಗಾಂಗದ ಸಾಧಕತ್ವಮಂ ಶಿವರಾತ್ರೆಯ ಸಂಕಣ್ಣಂಗೊಲಿದಂತೆ ಎನ ಗೊಲಿದು ಕರುಣಿಸಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಉಪಾವಸ್ಥೆ = ಅಭಿಲಾಷೆ.

೪೧. ಪರಮ ಲಿಂಗಾಂಗಿಯ ಇರವು ಎಂತಪ್ಪುದಯ್ಯ ಎಂದೊಡೆ, ವಾಕ್ಕು ಮೂಲ ಮಂತ್ರದಲ್ಲಿ ಜೋಕೆ ಗುಂದದೆ, ಪಾಣಿ ಶಿವಲಿಂಗಪೂಜೆಗೆ ಮಾಣದೆ, ಮನಸಂದು ಪಾದ ಏಕಾಂತ ವಾಸಕ್ಕೆ ಹರುಷದಿಂದ ಪದ ವಿಟ್ಟು, ಗುಹ್ಯಬ್ರಹ್ಮಚಾರಿಯಾಗಿ, ಆನಂದವಮಂ ಅಳಿದು, ಪಾಯುವಿನ ಗುಣ ಅದಕ್ಕದು ಸಹಜವೆಂದು ನೆಲೆಯುಮಾಡಿ, ಕರ್ಮೇಂದ್ರಿಯಂಗಳ ಕಾಲ ಮುರಿದು, ಶಬ್ದ ಮೊದಲು ಗಂಧ ಕಡೆಯಾದ ನಾಲ್ಕೊಂದು ವಿಷ ಯಂಗಳು ತನುಮನವ ಸೋಂಕುವದಕ್ಕೆ ಮುನ್ನವೇ ಲಿಂಗಾರ್ಪಣವ ಮಾಡಿ, ಆ ವಿಷಯಂಗಳಿಗೊಳಗಾಗದೆ, ಆತ್ಮತ್ರಯಂಗಳ ತಾಳಕೊಯ್ದು, ಪಂಚಬ್ರಹ್ಮವ ಪಂಚೇಂದ್ರಿಯಂಗಳಲ್ಲಿ ಪ್ರತಿಷ್ಠೆಯಂ ಮಾಡಿ, ಕಾಮು ಕತನವ ಕಡೆಗೊತ್ತಿ, ಜ್ಞಾನೇಂದ್ರಿಯಂಗಳ ನೆನಹ ಕೆಡಿಸಿ, ಪ್ರಾಣ ಮೊದ

ಲಾವ ಮೂರೆರಡು ವಾಯುಗಳ ಜರಿದು, ಸೆರೆವಿಡಿದು ಮೂಲ ವಾಯುವಿನ ಸಮಮಾಡಿ ಪಂಚವಾಯುಗಳ ಸಂಚನುಂ ಕೆಡಿಸಿ, ಅಂತಃಕ ರಣಂಗಳೆಂಬ ಮಾನಸಗಳ್ಗರ ಕಳೆದು, ದ್ವಾದಶ ಪತ್ರದ ಹೊಂದಾವ ರೆಯ ಲಿಂಗಕ್ಕೆ ನಿರಂಜನ ಪೂಜೆಯಂ ಮಾಡುವ ಪೂಜಾರಿಗಳಂ ಮಾಡಿ, ಕರಣಂಗಳಂ ಗೆಲಿದು, ಅಂತಃಕರಣಂಗಳಂ ಚಿಂತೆಗೊಳಗು ಮಾಡಿ, ಆತ್ಮಜ್ಞಾನವುಂ ಅಡಗಿಸಿ ಭೋಗವುಂ ನೀಗಿ, ಪಂಚಭೂತಂಗಳೆಂಬ ಭೂಪಾಲರಿಗೆ ಪರಿಚಾರಕರಾದ ಇಪ್ಪತ್ತೈದು ಜೀವರಿಗೆ ನಿರುದ್ಯೋಗವುಂ ಮಾಡಿ, ಫಲಪದಂಗಳನೊದೆದು, ನಿರ್ಭಯಲ ಕೂಟಕ್ಕೆ ಮನವಿಟ್ಟು ಇಷ್ಟಲಿಂಗವುಂ ಕರಸ್ಥಲದಲ್ಲಿ ಪಿಡಿದು ಪೂಜೆಯಂ ಮಾಡಿ, ಆ ಲಿಂಗವುಂ ಅನಿಮಿಷ ದೃಷ್ಟಿಯಿಂದ ನೋಡುವದೀಗ ಅಂಗದನೋಟ, ಅದು ರತ್ನಾ ಕರ ಜಂಬೂದ್ವೀಪದ ಸುನಾದ. ಬ್ರಹ್ಮದ ಕೂಟ ಹೀಗಲ್ಲದೆ, ಪಂಚ ಭೂತಂಗಳ ಕುಟಿಲ ವ್ಯಾಪಾರಂಗಳೆಂಬ ಬಲೆಗೆ ತಾನು ಸಿಲುಕಿ, ಭಕ್ತಿ ಜ್ಞಾನ, ವೈರಾಗ್ಯವುಂ ಸುಟ್ಟುರುಹಿ, ಉಪಾಧಿಕೆಯಲ್ಲಿ ಒಡವೆರೆದು, ಹೊಟ್ಟೆಯಕಿಚ್ಚಿಂಗೆ ಇಷ್ಟಲಿಂಗವುಂ ಕರದಲ್ಲಿ ಪಿಡಿದು, ಪೂಜೆಯುಮಾಡಿ, ಇದಿರ ಮೆಚ್ಚಿಸುವೆನೆಂದು ಆ ಲಿಂಗವ ನೋಡುವ ನೋಟವೆಂತಪ್ಪು ದೆಂದೊಡೆ, ಹೊತ್ತು ಹೋಕನ ಕೋಡಗ ತಿರುಗಾಟಕ್ಕೆ ಬಂದು ಮಾಣಿ ಕವುಂ ಕಂಡು, ಆ ಮಾಣಿಕವಂ ಕರದಲ್ಲಿ ಪಿಡಿದು, ಮೂಸಿ, ನೆಕ್ಕಿ ನೋಡಿ ಹಲ್ಲು ಕಿರಿದು ನೋಡಿ, ನೋಡಿ, ಕಾಲವಂ ಕಳೆವ ತೆರನಂತಾ ಯಿತ್ತಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಮಾಣದೆ= ಬಿಡದೆ; ಸಂದು= ಒಪ್ಪಿ; ಪ್ರತಿಷ್ಠೆ =ಸ್ಥಾಪನ; ಹೊಂದಾವರೆ= ಬಂಗಾರದ ಬಣ್ಣದ ಕಮಲ; ಅನುಮಿಷ =ಏಕಾಗ್ರ; ರತ್ನಾಕರ= ಸಮುದ್ರ;

೪೨. ಮುಚ್ಚಿ ಮೂದಲಿಸಿ ಮೊನೆಗೆಡಿಸುವ ಮಾಯಾ ಪ್ರಪಂಚನ ಬಲೆಗೆ ಸಿಲುಕದೆ, ನಾನು ಧ್ಯಾನ ಮೌನ ಉಪಾವಸ್ಥೆಯಿಂದ ಷಟ್ಕೋಣೆಯ ಸುವರ್ಣ ದ್ವೀಪದ ಅರಸಿನ ಬಲವಿಡಿದು ಪಂಚವಿಂಶತಿ ತತ್ವಂಗಳೆಂಬ ಮಾಯಾಸುಭಟರ ಸುಡಕೊಂದು ಪಂಚಬ್ರಹ್ಮವೇ ಪಂಚಭೂತಂಗಳಾಗಿ, ತನುವಿಡಿದು ಲಿಂಗನೈಷ್ಠೆಯಿಂದ ಓಂಕಾರಸ್ವರೂಪನಾಗಿ ಅಹಂಕರಿಸದೆ, ದಾಸೋಹಂ ಭಾವದಿಂದ ತ್ರಿಕೂಟ ಪರ್ವತಕ್ಕೆ ಪಶ್ಚಿಮ ದಿಕ್ಕಿನಲ್ಲಿ ಅನಂತ ಕಾರ್ಮುಗಿಲ ಮಿಂಚುಗಳಂತೆ ತೋರುತಿಪ್ಪುದೀಗ ಶಾಂಭವ ದ್ವೀಪ. ಆ ಶಾಂಭವ ದ್ವೀಪದಲ್ಲಿ ನೆಲಸಿಪ್ಪ ನಿರವಯಲ ಬೆಳ್ದಿಂಗಳ ಬೀಜವುಂ ನಾನು

ಕಂಡು, ಕಂಬನಿಮಂಬಿ ನಮಸ್ಕಾರಮಂ ಮಾಡಿದ ಫಲದಿಂದ ಬ್ರಹ್ಮ, ವಿಷ್ಣು, ರುದ್ರ ಇಂತೀ ಮೂವರಂ ಕೆಡೆಮೆಟ್ಟಿ ಜನನ ಮರಣಂಗಳಂ ಗೆಲಿದು ನಾನು ಹುಟ್ಟುಗೆಟ್ಟೆನಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿ ಕಾರ್ಜುನಾ.

ಮೂದಲಿಸು = ಸಿಟ್ಟುಮಾಡು; ಪಂಚವಿಂಶತಿ = ಇಪ್ಪತ್ತೈದು; ಕಾಮರ್ಗಿಲ = ಪೂರ್ವದ ಮಳೆಗಾಲದ ಮುಗಿಲು.

೪೩. ಅಯ್ಯಾ ಪಂಚತತ್ವಂಗಳ ಪಡೆವ ತತ್ವ ಪ್ರತ್ಯಕ್ಷವಾಗದ ಮುನ್ನ ಪದ್ಮಜಾಂಡವ ಧರಿಸಿಪ್ಪ ಕಮಠ ದಿಕ್ಕರಿಗಳಿಲ್ಲದಮುನ್ನ ನಿರ್ಮಳಾಕಾರವೇ ಸಾಕಾರವಾಗಿ ನಿರಂಜನನೆಂಬ ಪ್ರಣಮವಾಯಿತ್ತಯ್ಯಾ. ಆ ನಿರಂಜನ ಪ್ರಣಮವೆಂಬ ಮರುಜೀವಣಿಯು ಬೀಜ ಹ್ರಾಂಕಾರ ಮಂಟಪದಲ್ಲಿ ಮೂರ್ತಿಗೊಂಡಿತ್ತಯ್ಯ. ಆ ನಿರಂಜನ ಪ್ರಣಮವೆಂಬ ಮರುಜೀವಣಿಯು ಬೀಜ ತನ್ನ ನಿರಂಜನ ಶಕ್ತಿಯು ನೆನಹಿಂದ ಹಕಾರಚಕ್ರವೆಂಬ ಕುಂಭಿನಿಯಲ್ಲಿ ಶುದ್ಧಪ್ರಸಾದವೆಂಬ ಮೊಳೆ ಸೋರಿತ್ತಯ್ಯಾ. ಆ ಶುದ್ಧ ಪ್ರಸಾದವೆಂಬ ಮೊಳೆ ತನ್ನ ಶೂನ್ಯಶಕ್ತಿಯ ಸಂಜ್ಞೆಯಿಂದ ಕರ್ಣಿಕಾಪ್ರವೇಶ ಪಂಚನಾದವನುಳ್ಳ ಷೋಡಶ ಕಲಾಪುಂಜರಂಜಿಪ ಹನ್ನೊಂದುನೂರು ದಳದ ಪತ್ರದಲ್ಲಿ ಪ್ರಣಮ ಚಿತ್ರ ಒಪ್ಪುತ್ತಿಪ್ಪ ಹ್ರೀಂಕಾರ ಸಿಂಹಾಸನದ ಮೇಲೆ ಸಿದ್ಧ ಪ್ರಸಾದವೆಂಬ ಎಳೆ ತಳಿರಾಯಿತ್ತಯ್ಯಾ. ಆ ಸಿದ್ಧ ಪ್ರಸಾದವೆಂಬ ಎಳೆ ತಳಿರು ತನ್ನ ಶಾಂತಿಶಕ್ತಿಯ ಚಲನೆಯಿಂದ ಮೂರು ಬಟ್ಟೆಯು ಮೇಲಿಪ್ಪ ಎರಡು ಮಂಟಪದ ಮಧ್ಯದಲ್ಲಿರ್ಪ ಪ್ರಸಿದ್ಧಪ್ರಸಾದವೆಂಬ ಮಹಾ ವೃಕ್ಷ ಬೇಗ ಬೆಳೆಯಿತ್ತಯ್ಯಾ. ಆ ಪ್ರಸಿದ್ಧ ಪ್ರಸಾದವೆಂಬ ಮಹಾವೃಕ್ಷ ತನ್ನ ಜಿಚ್ಛಕ್ತಿಯು ಲೀಲಾವಿನೋದದಿಂದ ಪಂಚಶಕ್ತಿಗಳೆಂಬ ನಾಲ್ವೊಂದು ಹೂವಾಯಿತ್ತು. ಆ ಹೂವುಗಳೇ ಮಹಾಕೂಟದಿಂದ ಪಂಚಲಿಂಗಗಳೆಂಬ ಪಂಚಪ್ರಕಾರದ ಮೂರೆರಡು ಹಣ್ಣಾಯಿತ್ತು. ಆ ಹಣ್ಣುಗಳ ಆದ್ಯಂತಮಂ ಪಿಡಿದು ಸದ್ಯನ್ಮುಕ್ತಿಯಾಗಬೇಕೆಂದು ಸದಾಕಾಲವಲ್ಲಿ ಬಯಸುತ್ತಿರ್ಪ ಮಹಾ ಶಿವಶರಣನು ತಿಳಿದುನೋಡಿ, ಮನದಲ್ಲಿ ಕಂಡು, ಆರುನೆಲೆಯು ನಿಚ್ಚಣಿಗೆಯು ಆ ತರುಲತೆಗೆ ಸೇರಿಸಿ ಜ್ಞಾನಕ್ರಿಯೆಗಳೆಂಬ ದೃಢದಿಂದೇರಿ ನಾಲ್ಕೆಲೆಯು ಪೀತವರ್ಣದ ಹಣ್ಣು ಸುಚಿತ್ತವೆಂಬ ಹಸ್ತದಲ್ಲಿ ಪಿಡಿದು, ಆರೆಲೆಯ ನೀಲವರ್ಣದ ಹಣ್ಣು ಸುಬುದ್ಧಿ ಎಂಬ ಹಸ್ತದಲ್ಲಿ ಪಿಡಿದು, ಹತ್ತೆಲೆಯು ಸ್ಫಟಿಕ ವರ್ಣದ ಹಣ್ಣು ನಿರಹಂಕಾರವೆಂಬ ಹಸ್ತದಲ್ಲಿ ಪಿಡಿದು ಹನ್ನೆರಡೆ

ಲೆಯ ಸುವರ್ಣ ವರ್ಣದ ಹಣ್ಣ ಸುಮನವೆಂಬ ಹಸ್ತದಲ್ಲಿ ಪಿಡಿದು, ಹದಿನಾರೆಲೆಯ ಮಿಂಚುವರ್ಣ್ಣದ ಹಣ್ಣ ಸುಜ್ಞಾನವೆಂಬ ಹಸ್ತದಲ್ಲಿ ಪಿಡಿದು ಆಸನಸ್ಥಿರನಾಗಿ, ಕಣ್ಮುಚ್ಚಿ ಜ್ಞಾನಚಕ್ಷುವಿನಿಂ ಸಿಟ್ಟಿಸಿ, ಕಟ್ಟೆಚ್ಚರಿಂ ನೋಡಿ, ರೇಚಕ ಪೂರಕ ಕುಂಭಕಂಗೆಯ್ದು, ಪೆಣ್ದುಂಬಿನಾದ, ವೀಣಾನಾದ, ಘಂಟಾನಾದ, ಭೇರೀನಾದ, ಮೇಘನಾದ, ಪ್ರಣವನಾದ, ದಿವ್ಯನಾದ, ಸಿಂಹನಾದಂಗಳಂ ಕೇಳಿ, ಹರುಷಂಗೊಂಡು ಆ ಫಲಂಗಳಂ ಮನವೆಂಬ ಹಸ್ತದಿಂ, ಮುತ್ತಲಂತುಂಬಿ, ಮಾಯಾ ಕೋಳಾಹಳನಾಗಿ, ಪಂಚಭೂತಂಗಳ ಸಂಚವ ಕೆಡಿಸಿ, ದಶವಾಯುಗಳ ಹಸಗೆಡಿಸಿ, ಅಷ್ಟಮದಂಗಳ ಹಿಟ್ಟುಗುಟ್ಟಿ, ಅಂತಃಕರಣಂಗಳ ಚಿಂತೆಗೊಳಗುಮಾಡಿ, ಮೂಲಾಹಂಕಾರಗಳ ಮುಂದುಗೆಡಿಸಿ, ಸಪ್ತ ವ್ಯಸನಂಗಳ ತೊತ್ತಳ ದುಳಿದು, ಜ್ಞಾನೇಂದ್ರಿಯಂಗಳ ನೆನಹುಗೆಡಿಸಿ, ಕರ್ಮೇಂದ್ರಿಯಂಗಳ ಕಾಲಮುರಿದು, ತನ್ಮಾತ್ರಂಗಳ ತಾಳಕೊಯ್ದು, ಅರಿಷಡ್ವರ್ಗಂಗಳ ಕೊರಳನರಿದು ಸ್ಫಟಿಕದ ಪುತ್ಥಳಿಯಂತೆ ನಿಜಸ್ವರೂಪನಾಗಿ, ಎರಡೆಸಳ ಕಮಲ ಕರ್ಣಿಕಾಗ್ರದೊಳಿಪ್ಪ ಪರಬ್ರಹ್ಮದ ಮಾಣಿಕ್ಯ ವರ್ಣದ ದ್ವಿಪಾದವುಂ ಸುಜ್ಞಾನವೆಂಬ ಹಸ್ತದಿಂ ಪಿಡಿದು, ಓಂಕಾರವೆಂಬ ಮಂತ್ರದಿಂದ ಸಂಸ್ಕೈಸಿ, ನೀರು ನೀರು ಕೂಡಿದಂತೆ ಪರಬ್ರಹ್ಮವನೊಡಗೂಡಿ ಆ ಪರಬ್ರಹ್ಮವು ತಾನಾಗಿ, ಬ್ರಹ್ಮರಂಧ್ರವೆಂಬ ಶಾಂಭವ ಲೋಕದಲ್ಲಿರ್ಪ, ನಿಃಷ್ಕಲ ಪರಬ್ರಹ್ಮದ ನಿರಾಕಾರ ಪಾದವುಂ, ನಿರ್ಭಾವವೆಂಬ ಹಸ್ತದಿಂ ಪಿಡಿದು, ಪಂಚಪ್ರಸಾದವೆಂಬ ಮಂತ್ರದಿಂ ಸಂಸ್ಕೈಸಿ ಕ್ಷೀರ ಕ್ಷೀರ ಬೆರಸಿದಂತೆ ನಿಷ್ಕಲ ಬ್ರಹ್ಮವ ನೊಡಗೂಡಿ, ಆ ನಿಷ್ಕಲ ಬ್ರಹ್ಮವು ತಾನೆಯಾಗಿ, ಮೂರು ಮಂಟಪದ ಮಧ್ಯದಲ್ಲಿ, ಕುಸುಮಪೀಠದೊಳಿಪ್ಪ ಶೂನ್ಯ ಬ್ರಹ್ಮದ ಶೂನ್ಯ ಪಾದವುಂ ನಿಷ್ಕಲ ಹಸ್ತದಿಂ ಪಿಡಿದು, ಕ್ಷಕಾರವೆಂಬ ಮಂತ್ರದಿಂ ಸಂಸ್ಕೈಸಿ ಘೃತ ಘೃತವ ಕೂಡಿದಂತೆ ಶೂನ್ಯ ಬ್ರಹ್ಮವ ನೊಡಗೂಡಿ ಆ ಶೂನ್ಯ ಬ್ರಹ್ಮವು ತಾನೆಯಾಗಿ "ನಿಶ್ಶಬ್ದಬ್ರಹ್ಮ ಮುಚ್ಯತೆ" ಎಂಬ ಒಂಬತ್ತು ನೆಲೆಯ ಮಂಟಪದೊಳಿರ್ಪ ನಿರಂಜನ ಬ್ರಹ್ಮದ ನಿರಂಜನ ಪಾದವುಂ ಶೂನ್ಯವೆಂಬ ಹಸ್ತದಿಂ ಪಿಡಿದು, ಹ್ರಾಂಕಾರ ಮಂತ್ರದಿಂ ಸಂಸ್ಕೈಸಿ ಬಯಲು ಬಯಲು ಬೆರಸಿದಂತೆ ನಿರಂಜನ ಬ್ರಹ್ಮವ ನೊಡಗೂಡಿ ಆ ನಿರಂಜನ ಬ್ರಹ್ಮವು ತಾನೆಯಾಗಿ ಮಹಾಗುರು ಸಿದ್ಧಲಿಂಗ ಪ್ರಭುವಿನ ಗರ್ಭಾಬ್ಧಿಯಲ್ಲಿ ಜನಿಸಿದ ಬಾಲಕಿಯಯ್ಯಾ ನಾನು. ಎನ್ನ ಹೃದಯ ಕಮಲದೆಂಬ ಮಂಟಪದ ಚತುಃಪತ್ರಿಕಾ ಮಧ್ಯದ ಪದ್ಮಪೀಠ

ದಲ್ಲಿ ಎನ್ನ ತಂದೆ ಸ್ವಸ್ಥಿರನಾಗಿ ಎನಗೆ ಷಟ್‌ಸ್ಥಲಮಾರ್ಗ ಪೂರ್ವ ಪುರಾತರ ವಚನಾನುಭಾವ ಭಕ್ತಿಜ್ಞಾನ ವೈರಾಗ್ಯವೆಂಬ ಜೇನು ಸಕ್ಕರೆ ಪರಮಾಮೃತವ ದಣಿಯಲುಣಿಸಿದನಯ್ಯಾ. ಆ ಜೇನುಸಕ್ಕರೆ ಪರಮಾಮೃತವ ದಣಿಯಲುಣಲೊಡನೆ ಎನ್ನ ಬಾಲತ್ವ ಕೆಟ್ಟು, ಯವ್ವನಂ ಬೆಳೆದು, ಬೆಡಗು ಕುಡಿವರಿದು, ಮೊಟುಜವ್ವನೆ ಯಾದೆನಯ್ಯಾ ನಾನು. ಎನಗೆ ನಿಜಮೋಕ್ಷವೆಂಬ ಮನ್ಮಥ ವಿಕಾರ ಎನ್ನ ನಂಡಲೆದು ಆಳ್ದು ನಿಂದಲ್ಲಿ ನಿಲ್ಲಲೀಸದಯ್ಯಾ. ಅನಂತಕೋಟಿ ಸೋಮ ಸೂರ್ಯರ ಪ್ರಕಾಶವನುಳ್ಳ ಪರಂಜ್ಯೋತಿಲಿಂಗವೆ, ನಿಮ್ಮ ಕೃಪೆ ಎಂಬ ಶುಭಲಗ್ನದಲ್ಲಿ ಎನಗೆ ಶಿವಾನಂದ ಭಕ್ತಿಯೆಂಬ ತಾಳಿ ಬಂಧಿಯ ಕಟ್ಟಿ ಮಂತ್ರವಲ್ಲದೆ ಕುಮಂತ್ರವ ನುಡಿಯೆನೆಂಬ ಕಂಠಮಾಲೆಯಧರಿಸಿ, ಅರ್ಪಿತವಲ್ಲದೆ ಅನರ್ಪಿತವ ಪರಿಮಳಿಸೆನೆಂಬ ಮೌಕ್ತಿಕದ ಕಟ್ಟಾಣಿ ಮೂಗುತಿಯನಿಕ್ಕಿ ಸುಶಬ್ದವಲ್ಲದೆ ಅಪಶಬ್ದವ ಕೇಳೆನೆಂಬ ರನ್ನದ ಕರ್ಣಾಭರಣಂಗಳ ತೊಡಿಸಿ, ಶರಣತ್ವವಲ್ಲದೆ ಜೀವತ್ವವನೊಲ್ಲೆನೆಂಬ ತ್ರಿಪುಂಡ್ರಮಂ ಧರಿಸಿ ಕ್ರಿಯೆಯಲ್ಲದೆ ನಿಃಕ್ರಿಯೆಯ ಮಾಡೆನೆಂಬ ಮೌಕ್ತಿಕದ ಬೊಟ್ಟನಿಕ್ಕಿ ನಿಮ್ಮವರಿಗಲ್ಲದೆ ಅನ್ಯರಿಗೆರಗೆನೆಂಬ ಕನಕಲತೆಯ ಬಾಸಿಗಮಂ ಕಟ್ಟಿ, ಸಮ್ಯಜ್ಞಾನವಲ್ಲದೆ ಅಜ್ಞಾನವ ಹೊದ್ದೆನೆಂಬ ನವದುಕೂಲಮನುಡಿಸಿ, ಲಿಂಗಾಣತಿಯಿಂದ ಬಂದುದನಲ್ಲದೆ ಅಂಗ ರತಿಯಿಂದ ಬಂದುದ ಮುಟ್ಟೆನೆಂಬ ರನ್ನಗಂಕಣಮಂ ಕಟ್ಟಿ, ಶರಣ ಸಂಗವಲ್ಲದೆ ಪರಸಂಗವ ಮಾಡೆನೆಂಬ ಪರಿಮಳಮಂ ಲೇಪಿಸಿ, ಶಿವಪದವಲ್ಲದೆ ಚತುರ್ವಿಧ ಪದಂಗಳ ಬಯಸೆನೆಂಬ ಹಾಲು ತುಪ್ಪಂಗಳ ಕುಡಿಸಿ, ಪ್ರಸಾದವಲ್ಲದೆ ಭಿನ್ನರುಚಿಯ ನೆನೆಯೆನೆಂಬ, ತಾಂಬೂಲಮಂ ನಿತ್ತು ಸಿಂಗರಂಗೆಯ್ದು ನಿನ್ನ ಕರುಣ ಪ್ರಸಾದವೆಂಬ ವಸಂತ ಚಪ್ಪರದಲ್ಲಿ ಪ್ರಮಥಗಣಂಗಳ ಮಧ್ಯದಲ್ಲಿ ಎನ್ನ ಮದುವೆಯಾಗಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

೪೪. ಲೋಕದ ನಚ್ಚು ಮಚ್ಚನೇ ನೀಗಿ, ನಿಚ್ಚಟನಾಗಿ ಜ್ಞಾನ ಕ್ರಿಯೆಗಳಿಂದಾಚರಿಸಿ, ಅಂಗ ಲಿಂಗ ಸಂಬಂಧಿಗಳಾದ ಶಿವಲಿಂಗ ಮೋಹಿಗಳು ನೀವು ಕೇಳಿರಯ್ಯ, ಶರಣರು ಮುಕ್ತಿಪುರಕ್ಕೆ ಹೋಗುವ ಬಟ್ಟೆಯ ಬೆಡಗು ಬಿನ್ನಾಣದ ಪರಿಯ. ಆ ಮುಕ್ತಿಪುರಕ್ಕೆ ಹೋಗುವ ಹಾದಿಯಲ್ಲಿ, ಒಂದು ಪಂಚವರ್ಣದ ಕಣ್ಣು ಮನವೆಟ್ಟದ ಮಹಾ ಪಟ್ಟಣವಿದೆ. ಆ ಪಟ್ಟಣವ ಕಟ್ಟಿದ್ದು ಮೊದಲಾಗಿ, ಊರು ಹಾಳಾಗಿರ್ಪುದು. ಆ ಪಟ್ಟಣದ ನಡುವೆ ಹೋಗುತಿರ್ಪ ಹಾದಿಯಲ್ಲಿ ಅಹಂಕಾರ, ಮಮಕಾರಂಗ

ಳೆಂಬ ವೆರಡು ಪಟ್ಟಣಂಗಳು ತುಂಬಿತುಳುಕುತ್ತನೆ. ಆ ಎರಡು ಪಟ್ಟಣಕ್ಕೆ ಹೋಗುವ ಹಾದಿ ಎಲ್ಲ ಹೆಬ್ಬಟ್ಟೆಗಳಾಗಿಪ್ಪವು. ಆ ಎರಡು ಪಟ್ಟಣದ ದಿಕ್ಕಿನಲ್ಲಿ ಒಂದು ಭಕ್ತಿಪುರವಿದೆ ಆ ಭಕ್ತಿಪುರಕ್ಕೆ ಹಾದಿ ಇಲ್ಲ. ಆ ಭಕ್ತಿಪುರಕ್ಕೆ ಹೋದಲ್ಲದೆ ಮುಂದಣ ಮುಕ್ತಿಪುರದ ಬಟ್ಟೆ ಕಾಣಬಾರದು. ಆ ಮುಂದಣ ಪಯಣಗತಿಯು ಸಂಚದೋವರಿಯು ಸಂಚವುಂ ಶರಣ ಮನದಲ್ಲಿ ತಿಳಿದು, ಈ ಹೆಬ್ಬಟ್ಟೆಗಳಲ್ಲಿ ಹೋದರೆ ಎಂಬತ್ತುನಾಲ್ಕು ಲಕ್ಷ ಪ್ರಕಾರದ ಪರಮಂಡಲನಲ್ಲಿ ಸುಳಿವುದು ತಪ್ಪದೆಂದು ಅದಕ್ಕೆ ಹೇಯವಂ ಮಾಡಿ, ತಮ್ಮನರು ಹೋದ ಬೆಂಬಳಿವಿಡಿದು ಹೋಗಿ, ಭಕ್ತಿ ಪುರವುಂ ಕಂಡು, ಆ ಭಕ್ತಿಪುರದ ನಡುವೆ ಹೋಗುತಿಪ್ಪ ಹಾವಿಯಲ್ಲಿ, ಪೇರ್ಬುಲಿ, ಕರಡಿ, ಕಾಳರಕ್ಕಸಿ, ಕರಿಘಟೆ ಇಪ್ಪ ಮಹಾ ಸರೋವರದ ಅರಣ್ಯವಿದೆ. ಆ ಸರೋವರದ ಮಧ್ಯದಲ್ಲಿ ಎಂಟೆಸಳ ಚೌಕವುಂಟಪದ ಸುವರ್ಣ ವರ್ಣವ ದೇಗುಲವಿದೆ. ಆ ದೇಗುಲದಲ್ಲಿ ಮುಕ್ತಿ ರಾಜ್ಯಕ್ಕೆ ಪಟ್ಟಗಟ್ಟುವ ಸಮರ್ಥಿಕೆಯನುಳ್ಳ ಜಂಗಮಲಿಂಗವಿದೆ. ಆ ಜಂಗಮವುಂ ಶರಣ ಕಂಡು ಹರುಷಂಗೊಂಡು, ಭಾವದಲ್ಲಿಯೇ ಷೋಡಶೋಪಚಾರ ಅಷ್ಟವಿಧಾರ್ಚನೆಗಳಿಂದ ಪೂಜೆಯುಂ ಮಾಡಿ, ತನ್ನ ಮನದಲ್ಲಿ ಅಭಿಷ್ಟೆಯುಂ ಮನ ನೆನೆದಂತೆ ಮನದಲ್ಲಿ ಬೇಡಿ, ದೇಹ, ಪ್ರಾಣಕ್ಕುಳ್ಳ ಸಮಸ್ತ ಕರಣಾದಿ ಗುಣಂಗಳನೆಲ್ಲವಂ ಸುಟ್ಟು, ಬೊಟ್ಟಿಕ್ಕಿ ನಿರ್ಮಲ ಸ್ವರೂಪನಾಗಿ, ಅಲ್ಲಿಂದ ಮುಂದೆ ನಡೆವುತಿಪ್ಪಾಗ ಊರ್ಧ್ವ ದಿಕ್ಕಿನ ಆಕಾಶದಲ್ಲಿ ಅನೇಕ ಜ್ಯೋತಿರ್ಮಯವನೊಳಗೊಂಡಿಪ್ಪ ತ್ರಿಪುರವುಂ ಕಂಡು, ಆ ತ್ರಿಪುರದ ಮೇಲೆ ಬ್ರಹ್ಮರಂಧ್ರವೆಂಬ ಕೈಲಾಸದ ಕಡೆಯ ಬಾಗಿಲೊಳಿಪ್ಪ ಐಕ್ಯಸ್ಥಲವೆನಿಸುವ. ಆರು ನೆಲೆಯ ಮಾಣಿಕ್ಯವರ್ಣದ ಉಪ್ಪರಿಗೆಯ ತಳವುಂ ಕಂಡು, ಪತಿಯಿಪ್ಪ ಮನೆಯ ಬಾಗಿಲ ಸತಿಸಾರುವಂತೆ ಶರಣ ಆ ಉಪ್ಪರಿಗೆಯ ಬಾಗಿಲಂ ಸಾರಿ, ಆ ಬಾಗಿಲಲ್ಲಿ, ಡಾಕಿನಿ, ಶಾಕಿನಿ, ರಾಕಿಣಿ, ಲಾಕಿಣಿ ಕಾಕಿಣಿ, ಹಾಕಿಣಿಯರೆಂಬ ಷಡ್ವಿಧ ಶಕ್ತಿಗಳಿಗೆ ಆದಿ ನಾಯಕಿಯಾಗಿಪ್ಪಳು. ಊರ್ಧ್ವ ಕುಂಡಲಿ ಎಂಬ ಜ್ಞಾನ ಶಕ್ತಿ, ಆ ಶಕ್ತಿ ಬಾಗಿಲಿಗೆ ದ್ವಾರಪಾಲಕಿಯಾಗಿಪ್ಪಳು. ಅವಳು ಅಂಗರ ತಡೆವಳು, ನಿರಂಗರಂ ಬಿಡುವಳೆಂಬುದಂ ಶರಣ ತನ್ನ ಮನದಲ್ಲಿ ತಾನೇ ತಿಳಿದು, ಅಲ್ಲಿಪ್ಪ ಮಹಾಲಿಂಗವುಂ ಶರಣ ಮಂತ್ರ ಮಾಲೆಯುಂ ಮಾಡಿ ಮನದಲ್ಲಿ ಧರಿಸಿ, ಸೋಮಸೂರ್ಯ ಕಲಾಸ್ತವುಂ ನಿಲಿಸಿ ಕುಂಭವುಂ

ಇಂಬುಗೊಳಿಸಿ, ಝೋಂ ಝೋಂ ಯೆಂದು ಝೋಂಕರಿಸುತಿಪ್ಪ ಪೆಣ್ದುಂಬಿನಾದವುಂ, ತಿಣಿ ತಿಣಿಯೆಂದು ಸಣ್ಣ ರಾಗದಿಂದ ಮನವ ಸೋಂಕುತಿಪ್ಪ ವೀಣಾನಾದಮುಂ, ಲಿಂಗಾ, ಲಿಂಗಾ ಎಂದು ಕರೆವುತಿಪ್ಪ ಘಂಟಾನಾದವುಂ, ಧಾಂಧಾಂ ಎನುತಿಪ್ಪ ಪೂರಿತವಾದ ಭೇರೀನಾದವುಂ, ಚಿಟಿಪಟಲು, ಧಿಗಿಲುಘುಗಿಲೆನುತಿಪ್ಪ ಮೇಘನಾದವುಂ, ಓಂ ಓಂ ಎಂದು ಎಲ್ಲಿ ಎಡೆವಿಡದೆ ಉಲಿವುತಿಪ್ಪ ಪ್ರಣವನಾದವುಂ, ಜೀಂ ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೌಃ ಎಂದು ಬೆಳಗು ಬೀರುತಿಪ್ಪ ದಿವ್ಯನಾದವುಂ, ಅರಣ್ಯಘೋಳಿಡುವಂತೆ ಹೂಂಕರಿಸುತಿಪ್ಪ ಸಿಂಹನಾದವುಂ ಈ ಪ್ರಕಾರದ ನಾದಂಗಳಂ ಶರಣ ಕೇಳಿ ಮನದಣಿವು ಹರುಷಂ ಮಿಕ್ಕು ಆ ಬಾಗಿಲ ದಾಂಟಿ ಪಶ್ಚಿಮ ದಿಕ್ಕಿಗೆ ಮುಖವಾಗಲೊಡನೆ ಚೌಕ ಮಧ್ಯದಲ್ಲಿ ವಜ್ರ ವೈಢೂರ್ಯ ಪುಷ್ಯರಾಗ ಗೋಮೇಧಿಕ ಇಂತಿವರೊಳಗಾದ ನವರತ್ನದ ರಂಭ, ಬೋದಿಗೆ, ಹಲಿಗೆಗಳಿಂದ ಅನುಗೈಯ್ದು ಕೀರಿಸಿದ ಮಹಾ ಶ್ರೀಗುರುವಿನ ಒಡ್ಡೋಲಗದ ಹಜಾರದ ಪ್ರಭೆಯು ಆಕಾಶವನಲೆವುತಿರ್ಪುದಂ ಕಂಡು, ಬಹಿರಾವರಣವ ಸೇರಿರ್ಪ ಪ್ರಾಕಾರವ ಕೊಂಟೆ ಎರಡು ಹದಿನಾರು ಕೊತ್ತಳಗಳಲ್ಲಿ ಈಶಾನ ಪೃಜನ್ಯ ಜಯಂತರೊಳಗಾದ ಮೂವತ್ತೆರಡು ತಂಡದ ಅನಂತ ವಸ್ತು ದೇವತೆಗಳ ಕಾವಲು ಅತ್ಯುಗ್ರಮುಂ ಕಂಡು ಶರಣರ್ಗೆ ತಡಹಿಲ್ಲವೆಂಬುದಂ ತನ್ನ ಮನಜ್ಞಾನದಿಂದವೇ ಅರಿದು ಕಾವಲಾಗಿಪ್ಪ ಸಮಸ್ತ ದೇವತೆಯರ ಕೃಪಾದೃಷ್ಟಿಯಿಂದ ಸಂತೈಸಿ ಮುಕ್ತಿಪುರಕ್ಕೆ ಮೂಲಸೂತ್ರವಾದ ಬ್ರಹ್ಮರಂಧ್ರದ, ಪೂರ್ವ ದಿಕ್ಕಿನ ಚಂದ್ರ ಮಂಡಲದಲ್ಲಿಪ್ಪ ಬಾಗಿಲ ಬೀಗವುಂ ತೆಗೆದು, ಶರಣ ಒಳಹೊಗಲೊಡನೆ ಬಹಿರಾವರಣದ ವೀಧಿ ಓಲಗದೊಳಿಪ್ಪ ಹರಿಸುರ ಬ್ರಹ್ಮಾದಿ ದೇವತೆಗಳು, ಮನುಮುನಿಗಳು, ಗರುಡ ಗಂಧರ್ವ ಇಂದ್ರ, ಚಂದ್ರರೊಳಗಾದ ಅನಂತರೆಲ್ಲರು ಬೆವರಿ ಕೆಲಸಾರಿ, ಸೋಮ ಬೀದಿಯೊಳಿಪ್ಪ ಅನಂತ ರುದ್ರರೊಳಗಾದ ಇಪ್ಪತ್ತುನಾಲ್ಕು ತಂಡದ ಅನಂತರು ಶಿವನ ಒಡ್ಡೋಲಗದ ವೈಭವವ ನಡಿಸುವ ಪರಿಚಾರಕರು ಅವರು ಬಂದು, ಶರಣಲಿಂಗದ ದೃಷ್ಟಿ ಸಂಧಾನವಾಗಲೆಂದು ಸಮ್ಮುಖವಂ ಮಾಡೆ ಸೂರ್ಯ ಬೀದಿಯೊಳಿಪ್ಪ ಉಮೆಚಂಡೇಶ್ವರ ನಂದಿಕೇಶ್ವರರೊಳಗಾದ ಹದಿನಾರು ತಂಡದ ಅನಂತ ರುದ್ರರು ಬಂದು ಶರಣನ ಸನ್ಮಾನವುಂ ಮಾಡಿ, ಅಗ್ನಿ ಬೀದಿಯೊಳಿಪ್ಪ ವಾಮೆ, ಜ್ಯೇಷ್ಠೆಯರೊಳ

ಗಾದ ಎಂಟು ತಂಡದ ಅನಂತ ಶಕ್ತಿಯರು ಬಂದು ಶರಣನ ಇದಿರುಗೊಳ್ಳೆ, ಕರ್ಣಿಕಾ ಬೀದಿಯೊಳಿಪ್ಪ ಅಂಬಿಕೆ ಗಣಾನಿಯರೊಳಗಾದ ನಾಲ್ಕು ತಂಡದ ಅನಂತ ಶಕ್ತಿಯರು ಬಂದು, ಶರಣನ ಕೈವಿಡಿದು ಕರತಾರ ಈ ಸಿಂಹಾಸನಕ್ಕೆ ಮೇಲುಗದ್ದಿಗೆಯೆನಿಪ್ಪ ಸಿಂಹಾಸನ ಶುಭ್ರವರ್ಣದ ಹತ್ತುನೂರು ದಳದ ಗರ್ಭೀಕರಿಸಿಕೊಂಡು, ಬೆಳಗುತಿಪ್ಪುದೊಂದು ಮಹಾ ಕಮಲ, ಆ ಕಮಲದ ದಳಂಗಳೊಳಗಿಪ್ಪ ಪ್ರಣವು, ಆ ಪ್ರಣವು ಸ್ವರೂಪವಾದ ಬಸವಾದಿ ಅಸಂಖ್ಯಾತ ಪ್ರಮಥ ಗಣಂಗಳು, ಆ ಪ್ರಮಥ ಗಣಂಗಳಿಗೆ ಶರಣಭಾವವಲ್ಲಿಯೇ ಸಾಷ್ಟಾಂಗವೆರಗಿ, ನಮಸ್ಕಾರವಂ ಮಾಡಿ, ಆ ಗಣಂಗಳ ಕೃಪಾದೃಷ್ಟಿಯಿಂದ ಶರಣನ ಪ್ಯೈವಡಹಿ, ಅನಂತಕೋಟಿ ಸೋಮ, ಸೂರ್ಯ, ಕಲಾಗ್ನಿ, ಮಿಂಚು ನಕ್ಷತ್ರಂಗಳು ತಮ್ಮ. ತಮ್ಮ ಪ್ರಕಾಶಮಂ ಒಂದೇ ವೇಳೆ ತೋರಿದ ಬೆಳಗಿನೊಡ್ಡವಣೆ ಪಂಚಪತ್ರಂಗಳಾವರಣವಾಗಿ ತೋರ್ಪ ಹದಿನಾರು ದಳಂಗಳಲ್ಲಿಪ್ಪ ಷೋಡಶಕಲಾ ಪುಂಜವೆನಿಸುವ ಪದ್ಮಿನೀ ಚಂದ್ರಿನಿಯರೊಳಗಾದ ಷೋಡಶಲಾವಣ್ಯ ಶಕ್ತಿಯರ ಬೆಳಗಂ ಕಂಡು, ಆ ಬೆಳಗಿನೊಡ್ಡವಣೆ ಬಯಲಾಯಿತ್ತು. ಕರ್ಣಿಕಾ ಪ್ರದೇಶದ ಪಂಚ ಮಂತ್ರಂಗಳೊಳಗಿಪ್ಪ ಪಂಚಪ್ರಣವಂಗಳ ಬೆಳಗಂ ಕಂಡು, ಆ ಲಾವಣ್ಯ ಶಕ್ತಿಯರ ಬೆಳಗು ತೆಗೆದೋಡಿತ್ತು. ಕರ್ಣಿಕಾಗ್ರದೊಳು ನಿಜನಿವಾಸಿಯಾಗಿ ಮೂರ್ತಿಗೊಂಡಿಪ್ಪ ನಿಃಕ್ಕಲ ಬ್ರಹ್ಮದ ಚರಣದಂಗುಲಿಯ ನಖದ ಬೆಳಗ ಕಂಡು, ಆ ಪ್ರಣವಂಗಳ ಬೆಳಗು ತಲೆವಾಗಿದವು. ಇಂತಪ್ಪ ಘನಕ್ಕೆ ಘನವಾದ ಮಹಾಘನ ಲಿಂಗವಂ ಶರಣ ನಿಟ್ಟಿಸಿ ಕಟ್ಟೆಕ್ಕರಿಂ ನೋಡಿ ಮನ ನಲಿದು, ಆನಂದಾಶ್ರುಜಲಂ ಸುರಿದು, ಪುಳಕಂಗುಳುಣ್ಮೆ ರೋಮಾಂಚನ ಗುಡಿಗಟ್ಟಿ ಪ್ರಣವುದ ನುಡಿ ತಡಂಬಡಿಸಿ ನಡೆವಟ್ಟಣಿಸುವ ಕಾಲದಲ್ಲಿ ಕರ್ಪುರದ ಪುತ್ಥಳಿ ಬಂದು ಉರಿಯ ಪುತ್ಥಳಿಯನಾಲಿಂಗಿಸಿದಂತೆ, ಶರಣ ಬಂದು ಆ ಘನಲಿಂಗವಂ ಅಮರ್ದಪ್ಪಿ ಪುಷ್ಪ ಪರಿಮಳದಂತೆ ಏಕವಾಗಿ ಆ ಘನಲಿಂಗ ತಾನೆಯಾದ ಮಹಾ ಗುರುಸಿದ್ಧಲಿಂಗೇಶ್ವರ ಪ್ರಭುವಿನ ಶ್ರೀಚರಣವಂ ನಾನು ಕರಸ್ಥಲದಲ್ಲಿ ಪಿಡಿದು ಪೂಜೆಯ ಮಾಡಲೊಡನೆ ಎನ್ನ ತನುವೇ ಪಂಚಬ್ರಹ್ಮ, ಪ್ರಣವುವೇ ಪರಬ್ರಹ್ಮವಾಯಿತ್ತು. ಪ್ರವೃತ್ತಿಯ ಬಟ್ಟೆಯ ಹುಲ್ಲು ಸುಟ್ಟಿತ್ತು. ನಿವೃತ್ತಿಯ ಬಟ್ಟೆ ನಿರ್ಮಲವಾಯಿತ್ತು. ಉಯ್ಯಾ

ಲೆಯ ಮಾಣಿಸಲೆಗೆ ನಿಂದಂತೆ ಆದೆನಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಎತ್ತು = ಹತ್ತು; ಹೆಬ್ಬಟ್ಟೆ = ರಾಜಮಾರ್ಗ; ಓವರಿ = ಒಳಮನೆ; ಅಭಿಷ್ಟೆ = ಬಯಕೆ; ಉಲಿ = ಸಪ್ಪಳಮಾಡು; ಪ್ರಾಕಾರ = ಕೋಟೆಯ ಸುತ್ತುಗೋಡೆ; ತಡಹು = ಅಡ್ಡಿ; ಒತ್ತವಣೆ = ಸನ್ನಾಹ; ಉಣ್ಮು = ಹೊರಬೀಳು; ಗುಡಿಗಟ್ಟು = ಎದ್ದು ನಿಲ್ಲು;

೪೫. ಅಯ್ಯ ಬಸವಾದಿ ಪ್ರಮಥರೇ ನಿಮ್ಮ ಕರುಣಪ್ರಸಾದವ ನಾನು ಆದಿ ಅನಾದಿಯಲ್ಲಿ ದಣಿಯಲುಂಡ ದೆಸೆಯಿಂದಲೆನ್ನ ತನು ಷಟ್‌ಸ್ಥಲವನೊಳಕೊಂಡು ಉದಯವಾಯಿತ್ತು. ಎನ್ನ ಪಾದ ಷಟ್‌ಸ್ಥಲಕ್ಕೆ ಒಪ್ಪಿಟ್ಟಲ್ಲದೆ ಅಡಿ ಇಡವು. ಎನ್ನ ಹಸ್ತ ಷಟ್‌ಸ್ಥಲವ ಪತಿಯನಲ್ಲದೆ ಪೂಜೆಯ ಮಾಡವು. ಎನ್ನ ಘ್ರಾಣ ಮೊದಲು ಶ್ರೋತ್ರ ಕಡೆಯಾದ ಪಂಚೇಂದ್ರಿಯಂಗಳ ಷಟ್‌ಸ್ಥಲವನಲ್ಲದೆ ಆಚರಿಸವು. ಎನ್ನ ಮನ ಷಟ್‌ಸ್ಥಲದ ಷಡ್ವಿಧ ಲಿಂಗಂಗಳ ಮೇಲಲ್ಲದೆ ಹರುಷಗೊಂಡು ಹರಿದಾಡದು. ಎನ್ನ ಪ್ರಾಣ ಷಟ್‌ಸ್ಥಲಕ್ಕೆ ಸಲೆಸಂದ ಅಕ್ಕಮಹಾದೇವಿಯರು ಹೋದ ಬಟ್ಟೆಯಲ್ಲಿ ನಡೆವುದಲ್ಲದೆ, ಕಿರುಬಟ್ಟೆಯಲ್ಲಿ ನಡೆಯದು. ಇಂತಿವೆಲ್ಲವು ಷಟ್‌ಸ್ಥಲವನಪ್ಪಿ ಅವಗ್ರಹಿಸಿದ ನೀಲಾಂಬಿಕೆಯಮ್ಮನ ಗರ್ಭದಲ್ಲಿ ಉದಯವಾದ ಮೋಹದ ಕಂದನಾದ ಕಾರಣ ಎನಗೆ ಷಟ್‌ಸ್ಥಲದ ಮಾರ್ಗದ ವಿರತಿ ನೆಲೆಗೊಂಡು ನಿಂದಿತ್ತಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಒಪ್ಪವಿಡು = ಒಲಿ; ಸಂದ = ಒಪ್ಪಿದ;

೪೬. ವಿರತಿ ವಿರತಿ ಎಂದು ವಿರತಿಯ ಹೊಲಬನರಿಯದೆ, ಹಂಬಲಿಸಿ ಹಲುಬುತಿಪ್ಪರಣ್ಣಾ. ಕಠಿಣ ಪದಾರ್ಥವ ಸವಿದಡೆ ವಿರತಿಯೇ? ಕಠಿಣ ಪದಾರ್ಥವನೊಲ್ಲೆನೆಂದು ಕಳೆವರೆ ವಿರತಿಯೇ? ವೃಕ್ಷವಡಿಯ ಫಲಂಗಳ ಎತ್ತಿ ಮೆದ್ದಡೆ ವಿರತಿಯೇ? ವೃಕ್ಷವಡಿಯ ಫಲಂಗಳ ಮುಟ್ಟೆನೆಂದು ಭಾಷೆಯ ಮಾಡಿದರೆ ವಿರತಿಯೇ? ಕ್ರಿಯಲ್ಲಿ ಮುಳುಗಿದರೆ ವಿರತಿಯೇ? ನಿಃಕ್ರಿಯೆಯ ಮಾಡಿದರೆ ವಿರತಿಯೇ? ಮೌನಗೊಂಡರೆ ವಿರತಿಯೇ? ನಿರ್ಮೌನವಾದರೆ ವಿರತಿಯೇ? ಕ್ರಿಯೆಯನಾಚರಿಸಿ, ಅರುವಿನ ಮಾತ ಬಣ್ಣವಿಟ್ಟು ನುಡಿದರೆ ವಿರತಿಯೇ? ಇಂತಿವೆಲ್ಲವು ವಿರತಿಯ ನೆಲೆಯನರಿಯದೆ ತಲೆಬಾಲಗೆಟ್ಟು ಹೋದವು. ಇನ್ನು

ಮುಕ್ತಿ ಪಥವ ತೋರುವ ವಿರತಿಯು ಬಗೆಯಾವುದೆಂದೊಡೆ, ಷಟ್ಸ್ಥಲಕ್ಕೆ ಒಪ್ಪವಿಟ್ಟು ಎತ್ತಿದ ಮಾರ್ಗವಂ ಇಳುಹದೆ ಹಿಡಿದ ವ್ರತ ನೇಮಂಗಳಲ್ಲಿ ನೈಷ್ಠೆಯಾಗಿ, ಈಷಣತ್ರಯಂಗಳ ಗಾಸಿಮಾಡಿ, ಬಹಿರಂಗದ ಮದಂಗಳ ಬಾಯ ಸೀಳಿ ಅಂತರಂಗ ಮದಂಗಳ ಸಂತೋಷವಂ ಕೆಡಿಸಿ, ಅಷ್ಟ ಮೂರ್ತಿ ಮದಂಗಳ ನಷ್ಟವಮಾಡಿ, ಎಂಟೆರಡು ದಿಕ್ಕಿನಲ್ಲಿ ಹರಿವ ದಶವಾಯುಗಳ ಗಂಟಲ ಮುರಿದು, ಸಗುಣ ನಿರ್ಗುಣಂಗಳ ನಗೆಗೊಳಗು ಮಾಡಿ, ನವನಾಳಂಗಳ ಮುಂಬಾಗಿಲಲ್ಲಿ ಲಿಂಗಂಗಳ ಸಿಂಗರಿಸಿ ತನುಮನವ ಸೋಂಕದೆ ಸಾಕಾರ ನಿರಾಕಾರವೆಂಬ ದ್ರವ್ಯ ಪದಾರ್ಥಂಗಳಂ ವಂಚಿಸದೆ ಆವಾವ ಲಿಂಗಂಗಳಿಗೆ ತೃಪ್ತಿಯಂ ಮಾಡಿ, ನಡೆವಲ್ಲಿ ನುಡಿವಲ್ಲಿ ಮಂತ್ರಂಗಳಲ್ಲಿ ಮೈ ಮರೆದಿರದೆ ಆಚಾರಾದಿ ಮಹಾಲಿಂಗಂಗಳ ಷಡ್ವರ್ಣದ ಬೆಳಗ ಧ್ಯಾನ ಮೌನದಲ್ಲಿ ಕಣ್ಣಿಲ್ಲದೆ ಕಂಡು, ಗಂಗೆ ಯಮುನೆ ಸರಸ್ವತಿ ಎಂಬ ಮೂರುಗಂಗೆ ಕೂಡಿದ ಮಧ್ಯವಿನ ಸಂಗಮ ಕ್ಷೇತ್ರ, ಆ ಸಂಗಮ ಕ್ಷೇತ್ರದ ರತ್ನಮಂಟಪದಲ್ಲಿ ನೆಲಸಿರ್ಪ ತೋಂಟದ ಅಲ್ಲಮನೆಂಬ ಪರಬ್ರಹ್ಮದ ದಿವ್ಯ ಶ್ರೀಚರಣವಂ ಭಾವ ಪುಷ್ಪಂಗಳೆಂಬ ಜಾಜಿಮಲ್ಲಿಗೆ ಕೆಂದಾವರೆಯಲ್ಲಿ ಪೂಜೆಯಂ ಮಾಡಿ ಭವಂ ನಾಸ್ತಿಯಾದುದೀಗ ನಿಜ ವಿರತಿ. ಇಂತಪ್ಪ ವಿರತಿಯ ನಳವಡಿಸಿಕೊಳಲರಿಯದೆ ಮಾತಿಂಗೆ ಮಾತ ಕೊಟ್ಟು ಮತಿ ಮರುಳಾಗಿಪ್ಪವರಿಗಂಜಿ ನಾನು ಶರಣೆಂಬೆನಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಮೆಲ್ಲು= ತಿನ್ನು; ಮೊತ್ತ =ಸಮೂಹ;

೪೭ ನಿರ್ವಾಣ ಪದಕ್ಕೆ ಕಾಮಿತನಾಗಿ, ಸಕಲ ಪ್ರಪಂಚಿನ ಗರ್ವವಂ ನೆಗ್ಗಲೊತ್ತಿ, ಏಕನಿಷ್ಠಾಪರನಾಗಿ ಆಚರಿಸುವ ಪರಮ ವಿರಕ್ತರ ಉಪಾಧಿಕೆ ಇಲ್ಲದ ಕ್ರಿಯಂಗಳಾವಾವಯ್ಯಾ ಎಂದೊಡೆ. ತ್ರಿಸಂಧ್ಯಾ ಕಾಲದಲ್ಲಿ ಲಿಂಗ ಪೂಜೆ, ಲಿಂಗೋದಕ ಹಲ್ಲು ಕಡ್ಡಿ ಮೊದಲಾದ ಸಕಲ ಪದಾರ್ಥಂಗಳ ಇಷ್ಟಲಿಂಗಕ್ಕೆ ಕೊಟ್ಟುಕೊಂಬ ಎಚ್ಚರಿಕೆ, ತೀರ್ಥಪ್ರಸಾದದಲ್ಲಿ ಅವಧಾನ, ಅಚ್ಚಲಿಂಗೈಕ್ಯರ ಮನೆಯ ಭಿಕ್ಷೆ, ಕಠಿಣ ಪದಾರ್ಥಂಗಳ ಹಿಡಿದರೆ ಹಿಡಿದಂತೆ, ಬಿಟ್ಟರೆ ಬಿಟ್ಟಂತೆ, ಇಪ್ಪುದು. ತದ್ದಿನವ ಕಳೆದು, ಭವಿಯ ಭಕ್ತಿಯ ನೊಪ್ಪುಗೊಳ್ಳದೆ, ಬಿನ್ದ ಫಲಂಗಳ ಮುಟ್ಟದೆ, ರಾತ್ರಿಯ ಕಾಲದಲ್ಲಿ ಭಿಕ್ಷಬೇಡಾರವೆಂಮ ಭಕ್ತರು ಬಿನ್ನಹವಂ ಮಾಡಿದರೆ ಕೈಕೊಂಬುದು.

ಅಲ್ಲದಿದ್ದೊಡೆ ಹೋಗಲಾಗದು. ಭಕ್ತರು ವಿಭೂತಿ ಮುಂತಾಗಿ ಪದಾರ್ಥಕ್ಕೆ ಹೇಳಿದೊಡೆ ಇಚ್ಛೆಯಾದರೆ ಕೈಕೊಂಬುದು. ಒಲ್ಲದಿರ್ದಡೆ ಬಿಡುವದು. ಒಪ್ಪಿ ಕೈಕೊಂಡಬಳಿಕ ವಿಭೂತಿಯು ಮೀರಲಾಗದು. ವಿಭೂತಿಯು ಕಟ್ಟು ವಿರಕ್ತರಿಗೆ ಇಲ್ಲವೆಂಬುವು ಶರಣಸ್ಥಲಕ್ಕೆ ಸಲ್ಲವು. ಇಂತಿವೆಲ್ಲವು ಗಣಂಗಳು ಒಪ್ಪವಿಟ್ಟ ಆಚರಣೆಯು ಸಮಾಧಿ ಯೋಗ ಪರಿಯಂತರ ನಡಿಸುವಾತನೀಗ ನಿರಂಗ ಶರಣ. ಅವಲ್ಲದೆ ಪುರಾತರ ಗೀತವನೋದಿ ಪುರಾತರ ಮಕ್ಕಳಾದಬಳಿಕ ಕಿರಾತರ ಮಕ್ಕಳಂತೆ ಮನಬಂದ ಪರಿಯಲ್ಲಿ ನಡೆಯಲಾಗದು. ಪುರಾತರಂತೆ ನಡೆವುದು. ಹೀಗಲ್ಲದೆ ಹೊತ್ತಿಗೊಂದು ಬಗೆ, ದಿನಕೊಂದು ಪರಿ ನಡಿಸುವಲ್ಲಿ ಶರಣನೇನು? ಮುಗಿಲ ಬಣ್ಣದ ಬೊಂಬೆಯು? ಶರಣ ಮೊಲನಾಗರೆ? ಶರಣ ಇಂದ್ರ, ಚಾಪನೇ? ಶರಣ ಗೋಸುಂಬೆಯೋ? ನೋಡಿರಯ್ಯ. ಕಡೆದು ಖಂಡಿಸಿ ಒಪ್ಪವಿಟ್ಟ ರತ್ನದ ಪುತ್ಥಳಿಯು ಪ್ರಕಾಶದಂತೆ ನಿಜಗುಂದದಿಪ್ಪುದೀಗ ಶರಣಸ್ಥಲ. ಬಾಲಕ ನಿಲ್ಲದ ಅಂಗನೆಯು ಮೊಲೆಯಲ್ಲಿ ಹಾಲು ತೋರುವದೇ ಅಯ್ಯಾ? ಶಿವಜ್ಞಾನವಿಲ್ಲದವನ ಮನದಲ್ಲಿ ಕ್ರಿಯವಿಟ್ಟ ನಡೆವ ಆಚರಣೆ ಎಲ್ಲಿಯದೋ? ಮುಕ್ತಿಯು ಪಥಕ್ಕೆ ಕ್ರಿಯೆ ಸಾಧನವಲ್ಲದೆ ಅದು ಹೇಗೆಂದೊಡೆ ಕ್ರಿಯೆ ಎಂಬ ಬೀಜದಲ್ಲಿ ಸಮ್ಯಜ್ಞಾನವೆಂಬ ವೃಕ್ಷ ಪಲ್ಲವಿಸಿತ್ತು. ಆ ವೃಕ್ಷ ಭಕ್ತಿ ಎಂಬ ಹುವ್ವಾಯಿತ್ತು. ಆ ಹೂವು ಲಿಂಗನೈಷ್ಠೆಯೆಂಬ ಕಾಯಾಯಿತ್ತು ಆ ಕಾಯಿ ಮುಕ್ತಿ ಎಂಬ ಹಣ್ಣಾಯಿತ್ತು. ಆ ಹಣ್ಣಿನ ಅಮೃತಸಾರಮಂ ನಾನು ದಣಿಯಲುಂಡು ಬಸವಾದಿ ಪ್ರಮಥರ ಪಡುಗ ಪಾದರಕ್ಷೆಯುಂ ಹಿಡಿವುದಕ್ಕೆ ಯೋಗ್ಯನಾದೆನಯ್ಯಾ ಘನಲಿಂಗಿಯ ಮೋಹದ. ಚನ್ನಮಲ್ಲಿಕಾರ್ಜುನಾ.

ನೆಗ್ಗು = ನಾಶವಾಗು; ತದ್ದಿನ = ಮೃತತಿಥಿ; ಕಿರಾತ = ಬೇಡ; ಇಂದ್ರಚಾಪ = ಕಾಮನಬಿಲ್ಲು; ಒಪ್ಪವಿಡು = ಬಣ್ಣಗೊಡು;

ಆಲ ಭಕ್ತಿಯಿಂದ ವಿರಕ್ತರೆಂದು ಬಾಯಿ ತುಂಬ ಕರಿಸಿಕೊಂಬ ವಿರಕ್ತರೆಲ್ಲ ವಿರಕ್ತರೆ ಅಯ್ಯ? ವಿರಕ್ತರೊಂದು ಸಾಮರ್ಥ್ಯ. ಸುಗುಣಸಂಮುದ್ರೆಯ ನೊರೆವುತಿಪ್ಪೆ ಕೇಳಿರಣ್ಣ. ಕಾಯದ ಕಣ್ಣ ಜಾಗ್ರದಲ್ಲಿ ಇಷ್ಟಲಿಂಗಕ್ಕೆ ಸಮರ್ಪಿಸಿ ಕಾಯಗುಣಂಗಳ ಕೆಲಕೆ ತೊಲಗಿಸಿ ತತ್ಪದನಾಗಿ, ಮನದ ಕಣ್ಣ ಸ್ವಪ್ನದಲ್ಲಿ ಪ್ರಾಣಲಿಂಗಕ್ಕೆ ಸಮರ್ಪಿಸಿ ಮನೋವಿಕಾರಮಂ ಹಸಗೆಡಿಸಿ, ತ್ವಂಪದನಾಗಿ, ಭಾವದ ಕಣ್ಣ ಸುಷುಪ್ತಿಯಲ್ಲಿ

ಭಾವಲಿಂಗಕ್ಕೆ ಸಮರ್ಪಿಸಿ, ಭಾವದಿಚ್ಛೆಯಂ ತಪ್ಪಿಸಿ ಅಪಿಸವನಾಗಿ, ಜ್ಞಾತೃ, ಜ್ಞಾನ, ಜ್ಞೇಯವೆಂಬ ತ್ರಿಪುಟಿಯನೊಂದು ಮಾಡಿ, ಪರಬ್ರಹ್ಮ ಸ್ವರೂಪನಾಗಿ, ಜಾಗ್ರತ್ ಸ್ವಪ್ನ ಸುಷುಪ್ತಿ ಎಂಬವರತು, ಹಸಿವು, ತೃಷೆ, ವಿಷಯ ವ್ಯಾಪಾರಂಗಳಂ ಸುಟ್ಟುರುಹಿದ ತೋಂಟದ ಸಿದ್ಧಲಿಂಗ ಅಲ್ಲಮಪ್ರಭು ಅನುಮಿಷ ದೇವರು ಇಂತಿವರು ವಿರಕ್ತರಲ್ಲವೆ ಮತ್ತೆ ವಿರಕ್ತರೆಂಬ ನುಡಿಹುಸಿ, ನಿಮ್ಮ ಹಡಪದಲ್ಲಿರಲಿ. ಅದೇನು ಕಾರಣವೆಂದೊಡೆ ಗ್ರಂಥ ॥ ವಿಕಾರಂ ವಿಷಯ ದೂರಂ । ರಕಾರಂ ರಾಗ ವರ್ಜಿತಂ ॥ ತಕಾರಂ ಗುಣಂನಾಸ್ತಿ । ವಿರಕ್ತಸ್ಯ ಮಹೋಚ್ಯತೆ ॥ ಇಂತೆಂಬುದಾಗಿ, ಹಗಲಾದರೆ ಹಸಿವು ತೃಷೆಗೆ ಹಂಬಲಿಸಿ ಬಾಯಬಿಟ್ಟು, ಇರುಳಾದರೆ ಕನಸ ಕಂಡು ಬೆದರಿ, ಶಿವ ಶಿವಾ ಎಂದು ಎದ್ದು ಕುಳಿತು, ಸುಷುಪ್ತಿಯಲ್ಲಿ ವೈಮರೆದು ಮುಟ್ಟಿದ ತಟ್ಟಿದ ಸಂಜ್ಞೆಯ ನರಿಯದಿಪ್ಪವರೆಲ್ಲ ವಿರಕ್ತರೆ? ಅಲ್ಲಲ್ಲ. ಅವರು ತ್ರಿವಿಧ ಪದಾರ್ಥವ ನತಿಗಳೆದು, ಗುರುಲಿಂಗ ಜಂಗಮವನಂತರಂಗದಲ್ಲಿ ಪೂಜೆಯ ಮಾಡುವ ದಾಸೋಹಿಗಳಯ್ಯ, ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಮುಪ್ಪೆ = ಗುರುತು, ಒರೆ = ತಿಳಿಸು; ಅರತು = ನಾಶವಾಗಿ; ಉರುಹು = ಸುಡು;

೪೯. ಇಕ್ಕಿದ ಹಲಿಗೆಗೆ ತೊಲಗದ ಕಂಭವೆಂದು ಬಿರಿದನಿಕ್ಕಿ ಹುಯ್ಯಲ ಕಂಡು, ಓಡಿ ಬರುವಂಗೆ ಆ ಬಿರಿದೇತಕಯ್ಯ? ಮೂವತ್ತೆರಡು ಆಯುಧದ ಸಾಧನೆಯ ಕಲಿತು, ಕಾಳಗದಲ್ಲಿ ಕೈವರೆದು, ಗಾಯವಡೆವಂಗೆ ಆ ಸಾಧನೆ ಏತಕಯ್ಯ? ಕತ್ತಲೆಗಂಜಿ ಕರದಲ್ಲಿ ಜ್ಯೋತಿಯಂ ಪಿಡಿದು ಹಾಳು ಗುಣಿಯಲ್ಲಿ ಬೀಳುವಂಗೆ ಆ ಜ್ಯೋತಿ ಏತಕಯ್ಯ? ಆದ್ಯರ ವಚನಂಗಳ ಸದಾಕಾಲದಲ್ಲಿ ಓದಿ, ಶಿವತತ್ವ, ಆತ್ಮತತ್ವ, ವಿದ್ಯಾತತ್ವಂಗಳನರಿದು, ಆರಕ್ಕೆ ಆರ ನೆಲೆಮಾಡಿ, ಮೂರಕ್ಕೆ ಮೂರ ಸಂಬಂಧಿಸಿ ಐದಕ್ಕೆ ಇನ್ನು ಪ್ರತಿ ಇಲ್ಲವೆಂದು ಅರಿದ ವಿರಕ್ತರು ಪುರಾತನರಂತೆ ಸಮ್ಯ ಜ್ಞಾನ, ಕ್ರಿಯೆಗಳಿದಂತೆ ಆಚರಿಸುವದು. ಭಕ್ತವಿರಕ್ತರಾಚರಣೆ ಎಲ್ಲ ಒಂದೇ. ಅದು ಹೇಗೆಂದೊಡೆ, ಭಕ್ತಂಗೆ ಬಹಿರಂಗದ ದಾಸೋಹ, ವಿರಕ್ತಂಗೆ ಅಂತರಂಗದ ದಾಸೋಹ ಈ ಆಚರಣೆಯ ನತಿಗಳೆದು ಮನಬಂದ ಪರಿಯಲ್ಲಿ ನಡೆದು ಕೆಡುವಂಗೆ ಆದ್ಯರ ವಚನ ವೇತಕಯ್ಯಾ? ಆದ್ಯರ ವಚನವೆಂಬುದು ಸಂತೆಯ ಮಾತೆ? ಪುಂಡರ ಪುರಾಣವೆ?

ಲೋಕದ ಜನರ ಮೆಚ್ಚಿಸುವ ಬೀದಿವಾತೆ? ಶಿವ ಶಿವ ನೀವು ಶಿವಶರಣರ ಕೂಡಾಡಿ ವಚನಂಗಳ ಕಲಿತು, ಆ ವಚನಂಗಳ ನಿಮ್ಮ ಊಟವೆಚ್ಚಕೆ ಈಡ ಮಾಡಿಕೊಂಡಿರಲ್ಲದೆ ಮುಂದಣ ಮುಕ್ತಿಯ ಪಥವ ಕಾಣದೆ ಹೋದಿರಲ್ಲಾ. ಇದು ಕಾರಣ ಶಿವಜ್ಞಾನ ಉದಯವಾದ ಲಿಂಗಾಂಗಿಗಳಿಗೆ ಎನ್ನ ನುಡಿ ಹಾಲು ಸಕ್ಕರೆಯ ನುಂಡಂತೆ ಸವಿದೋರುತ್ತಿದೆ. ವೇಷಧಾರಿ ವಿಶ್ವಾಸ ಘಾತಕರಿಗೆ ಎನ್ನ ನುಡಿ ಅಲಗಿನ ಮೊನೆಯಂತೆ ಇರಿವುತ್ತಿದೆ ಅಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಗುಣಿ= ತಗ್ಗು; ಪ್ರತಿ = ಎದರು, ಜೋಡು; ಅತಿಗಳೆ = ಮಾರು; ಬೀದಿವಾತು = ಕ್ಷುಲ್ಲಕ ಮಾತು; ಅಲಗು = ಕತ್ತಿ; ಮೊನೆ = ಧಾರೆ.

೫೦. ಶರಣು ಶರಣಾರ್ಥಿ ಲಿಂಗವೇ. ಹೊನ್ನು, ಹೆಣ್ಣು, ಮಣ್ಣು ಬಿಟ್ಟಾತನೇ ವಿರಕ್ತದೇವನೆಂದು ಬಣ್ಣವಿಟ್ಟು ನುಣ್ಣಿಸಿ ಕರೆವರಯ್ಯ. ಅವ ಪರಿವಿರಕ್ತನಾದನಯ್ಯ ಗುರುವೇ. ಹೊನ್ನೆಂಬ ರಿಪು ಚೋರರ ದೆಸೆಯಿಂದ ಶಿರಚ್ಛೇದನವಂ ಮಾಡಿಸಿ, ನೃಪರಿಂ ಕೊಲ್ಲಿಸು ತಿಪ್ಪದು. ಹೆಣ್ಣೆಂಬ ರಕ್ಕಸಿ ಲಲ್ಲೆವಾತಿಂದ ಗಂಡನ ಮನವನೊಳಗು ಮಾಡಿಕೊಂಡು ಸಂಸಾರ ಸುಖಕ್ಕೆ ಸರಿ ಇಲ್ಲವೆನಿಸಿ, ಸಿರಿವಂತರಿಗಾಳು ಮಾಡಿ ಇರುಳು ಹಗಲೆನ್ನದೆ ತಿರಿಗಿಸು ತಿಪ್ಪಳು. ಮಣ್ಣೆಂಬ ಮಾಯೆ ತನ್ನ ಅಸುವ ಹಿಂಡಿಹಿಪ್ಪಿಯ ಮಾಡಿದಲ್ಲದೆ ಮುಂದಳ ಗುಣವ ಕೊಡದು. ಇವ ಬಿಟ್ಟಾತ ವಿರಕ್ತನೇ? ಅಲ್ಲ. ಕಾಯಕಕ್ಕಾರದೆ ಜೀವಗಳ್ಳನಾಗಿ, ಮಂಡೆಯ ಬೋಳಿಸಿಕೊಂಡು, ಕಂಡ, ಕಂಡವರ ಮನೆಯಲ್ಲುಂಡು, ಕುಂಡೆಯ ಬೆಳಿಸಿಕೊಂಡಿಪ್ಪಾತ ಆತ್ಮ ಸುಖಿಯಯ್ಯಾ. ಮಾತಿನ ಮಾಲೆಯನುಳಿದು, ಕಾಯದ ಕಳವಳವಳಿದು, ಲೋಕದ ವ್ಯವಹಾರವ ನೂಂಕಿ ಅಂಬಲಿಯ ಅಮೃತ ಸರಿ ಎಂದು ಕಂಡು, ಏಕಾಂಗಿಯಾಗಿ, ತನುವ ದಂಡಿಸಿ, ಗಿರಿಗಹ್ವರಂಗಳಲ್ಲಿದ್ದರೆ ವಿರಕ್ತನೇ? ಅಲ್ಲ. ಅದೇನು ಕಾರಣವೆಂದೊಡೆ ತಾಯಗರ್ಭದಲ್ಲಿ ಶಿಶು ಇಕ್ಕಿದ ಕುಕ್ಕುಟಾಸನವ ತೆಗೆಯದು, ಸೀತ ಉಷ್ಣವೆಂದೆನ್ನದು, ಉಪಾಧಿಕೆಯ ನುಡಿಯದು, ಮುಚ್ಚಿದ ಕಣ್ಣು ಮುಗಿದ ಕೈಯ್ಯಾಗಿ, ಉಗ್ರ ತಪಸ್ಸಿನಲ್ಲಿಪ್ಪುದು. ಅದಕ್ಕೆ ಮುಕ್ತಿಯಾದರೆ ಇವನಿಗೆ ವಿರಕ್ತಿಯುಂಟು. ಬರಿಯ ವೈರಾಗ್ಯ ಭವಕ್ಕೆ ಬೀಜವಯ್ಯಾ. ಇನ್ನು ನಿಜ ವಿರಕ್ತಿಯ ಪರಿಯಾವುದೆಂದಡೆ, ತ್ರಿವಿಧ ಪದಾರ್ಥದಲ್ಲಿ ಮನವಿಲ್ಲದೆ, ಭಕ್ತರ ಬಣ್ಣದ ನುಡಿಗೆ ಹಣ್ಣಾಗದೆ ಅಂಗಭೋಗವ ನೂಂಕಿ

ಲಿಂಗಭೋಗವ ಕೈಕೊಂಡು, ಆತ್ಮತೇಜನ ನಲಂಕರಿಸದೆ, ಅಸುವಿಂಗೆ ಭಿಕ್ಷದ ನೆಲೆವಾಡಿ, ಸದಾ ಕಾಲವಲ್ಲಿ ಮಂತ್ರ ಮಾಲೆಯಂ ಮನದಲ್ಲಿ ಕೂಡಿ, ಆದಿ ಮಧ್ಯಾವಸಾನವುಂ ತಿಳಿದು, ನಿರ್ಮಲ ಚಿತ್ತನಾಗಿ, ಏಕಾಂತ ವಾಸಿಯಾಗಿ, ನವಚಕ್ರಂಗಳಲ್ಲಿ ನವ ಬ್ರಹ್ಮನ ಮೂರ್ತಗೊಳಿಸಿ, ಕಾಯದ ಕಣ್ಣಿಂದ ಕರತಳಾ ಮಳಕವ ನೋಡುವದೇ ಮನದ ಕಣ್ಣಿಂದ ನವ ಬ್ರಹ್ಮ ಸ್ವರೂಪ ಮನವಣಿವಂತೆ ನೋಡಿ, ಸುಚಿತ್ತವೇ ಮೊದಲು ನಿರ ವಯವೇ ಕಡೆಯಾದ ನವಹಸ್ತಂಗಳಿಂದ ಭಾವ ಪುಷ್ಪಂಗಳಲ್ಲಿ ಪೂಜೆಯಂ ಮಾಡಿ, ಮನವಣಿಯದೆ ಸುಚಿತ್ತ ಗುರುವನಪ್ಪಿ, ಸುಬುದ್ಧಿ ಲಿಂಗವನಪ್ಪಿ, ನಿರಹಂಕಾರ ಜಂಗಮವನಪ್ಪಿ, ಸುಮನ ಪ್ರಸಾದವನಪ್ಪಿ, ಸುಜ್ಞಾನ ಪಾದೋ ದಕವನಪ್ಪಿದ ಲಿಂಗಾಂಗಿಯೋ ಈಗ ವಿರಕ್ತ. ಇಂತಪ್ಪ ವಿರಕ್ತಿ ಎಂಬ ಪ್ರಶಸ್ತಿ ಪ್ರಸಾದವುಂ ಎನಗೆ ಧರ್ಮಕ್ಕೆ ಕರುಣಿಸುದಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ನುಣ್ಣಿಸು = ಮೃದುಗೊಳಿಸು; ಲಲ್ಲೆಮಾತು = ಪ್ರೀತಿಯ ಮಾತು; ಅಸು = ಪ್ರಾಣ; ಅರವೆ = ಸಮರ್ಥನಾಗದೆ; ಉಳಿವು = ಬಿಟ್ಟು; ಕುಕ್ಕುಟ = ಕೋಳಿ; ಹಣ್ಣುಗು = ಮನಸೋಲು; ಅವಸಾನ = ಅಂತ್ಯ;

೫೧. ಬಿಲ್ಲುಕೋಲ ಹಿಡಿದು ಮನಬಂದ ಪರಿಯಲ್ಲಿ ಎಚ್ಚಾಡುವಾತ ಅರ್ಥಿಕಾರನಲ್ಲದೆ ಬಿಲ್ಲುಕಾರನಲ್ಲವಯ್ಯಾ. ಹೊನ್ನು, ಹೆಣ್ಣು, ಮಣ್ಣು, ಬಿಟ್ಟು ಚನ್ನಾಗಿ ಮಂಡೆಯ ಬೋಳಿಸಿಕೊಂಡು, ಹಾಡಿದ ವಚನಂಗಳನೆ ಹಾಡಿ ಕೊಂಡು, ಮುಂದೆ ವಸ್ತುವ ಸಾಧಿಸಿಕೊಳ್ಳದೆ, ಹಸಿದರೆ ತಿರಿದುಂಡು, ಮಾತಿನ ಮಾಲೆಯನು ಕಲಿತಾತ ವಿರಕ್ತನೆಂಬ ನಾಮಕ್ಕರುಹನಲ್ಲದೆ, ಸಂಧಾನಕ್ಕರುಹನಲ್ಲ. ಅದೇನು ಕಾರಣವೆಂದರೆ ಮುಕ್ತಿಯೆಂಬ ಬಿಲ್ಲ ಹಿಡಿದು, ಸಮ್ಯಜ್ಞಾನವೆಂಬ ಹೆದೆಯನೇರಿಸಿ, ಲಿಂಗನೈಷ್ಠೆಯೆಂಬ ಬಾಣವ ತೊಟ್ಟು, ಆಕಾಶದ ಮೇಲಣ ಮುಪ್ಪುರದ ಮಧ್ಯದ ಮಾಣಿಕದ ಕಂಭ ಮುಳುಗಲೆಚ್ಚು, ಮಾಯಾ ಬಲೆಯ ಗೆಲಿದ ಶರಣನೀಗ ಲಿಂಗಸಂಧಾನಿ ಯಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಕೋಲ = ಬಾಣ; ಅರ್ಥಿಕಾರ = ಸ್ವೇಚ್ಛಾಚಾರಿ;

೫೨. ನಿರ್ಗಮನಿಯಾದ ಶರಣಂಗೆ ಸಂಧಾನವಲ್ಲದೆ, ಗಮನವಾದ ಶರಣಂಗೆ ಸಂಧಾನ ಅನುಗೊಳ್ಳದೆಂಬ ಅಣ್ಣಗಳು ನೀವು ಕೇಳಿರೆ? ಸೂರ್ಯ ರಥವನೇರಿ ಪರ್ವತಂಗಳ ಚಬುಕುಮಾಡಿ ಮನೋ ವೇಗದಿಂದ ಪಶ್ಚಿಮ

ಸಮುದ್ರಕ್ಕೆ ದಾಳಿ ಇಡಲು, ರವಿಕಿರಣಂಗಳು ಹಿಂದುಳಿವಿಪ್ಪವೇ? ಅದು ಕಾರಣ ಪುಷ್ಪವಿದ್ದಲ್ಲಿ ಪರಿಮಳವಿಪ್ಪುದು. ಅಂಗವಿದ್ದಲ್ಲಿ ಲಿಂಗವಿಪ್ಪುದು, ಲಿಂಗವಿದ್ದಲ್ಲಿ ಲಿಂಗದ ಮೇಲೆ ಮನವಿಪ್ಪುದು. ಲಿಂಗದ ಮೇಲೆ ಮನವಿಪ್ಪಲ್ಲಿಯೆ ಶರಣ. ಆ ಶರಣ ನಡೆವಲ್ಲಿಯೇ ಉರಿವ ಅಗ್ನಿಯ ಮೇಲೆ ತಂಗಾಳಿ ಬೀಸಿದಂತೆ ತ್ರಿಪುಟಿಯ ಮೇಲೆ ಬೆಳಗು ಒಲಿದಾಡುತ್ತಿದೆ. ಶರಣನುಡಿವಲ್ಲಿಯೇ ಪ್ರಣವದ ಬಳ್ಳಿ ಮನವ ಸುತ್ತುತ್ತಿದೆ. ಶರಣ ನೋಡುವಲ್ಲಿಯೇ ಪಂಚವರ್ಣಂಗಳ ಸ್ವರೂಪು ಲಿಂಗಾರ್ಪಿತವಾಗುತ್ತಿದೆ. ಶರಣ ಕುಂಭಿಸುವಲ್ಲಿಯೇ ಓಂಕಾರ ಒಡಗೂಡುವದಯ್ಯಾ. ಶರಣರೇಚಿಸುವಲ್ಲಿಯೇ ಪಂಚಾಕ್ಷರಂಗಳು ಎಡೆಯಾಡುತ್ತನೆ. ಶರಣ ಸುಳಿವಲ್ಲಿಯೇ ಹಲವು ಪ್ರಕಾರದ ವಸ್ತುಗಳು ತನು ಸೋಂಕು ಲಿಂಗ ಮನವ ತುಂಬುತ್ತಿದೆ ಇದು ಕಾರಣ ತೋಂಟದಾರ್ಯನ ಕರುಣ ಪ್ರಸಾದವಮಂ ಪಡೆದ., ತತ್ಸ್ವರೂಪು ಧ್ಯಾನ ಧಾರಣ ಅರ್ಪಿತಾವಧಾನವನರಿದ ಶರಣಂಗೆ ಗಮನಾಗಮನವೆಂಬ ಉಭಯ ಉಂಟೇ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ?

ಬೆಳಗು = ಪ್ರಕಾಶ; ಕುಂಭಿಸು = ಉಸಿರು ತಡೆ; ರೇಚಿಸು= ಉಸಿರನ್ನು ಹೊರಗೆಡವು.

೫೩ ಭಕ್ತಿಜ್ಞಾನ ವೈರಾಗ್ಯವು ಅಲ್ಲಮ ಪ್ರಭುವಿನ ವರ್ಗಕಲ್ಲದೆ ಅಳವಡದೆಂದು ಉತ್ತರ ಜ್ಞಾನಿಗಳು ನಡಿವುತಿಪ್ಪರು. ಪಂಚೇಂದ್ರಿಯಂಗಳ ರತಿ ವಿರತಿಯಾದ ಪರಮ ವಿರಕ್ತರೇ ನೀವಾಚರಿಸುವ ಭಕ್ತಿ ಜ್ಞಾನ ವೈರಾಗ್ಯದ ಬಗೆಯ ಬಣ್ಣಿಸಯ್ಯಾ. ಗುರುಲಿಂಗಜಂಗಮ ತೀರ್ಥಪ್ರಸಾದ ಇಂತೀ ಪಂಚಾಚಾರವೇ ಪಂಚಬ್ರಹ್ಮವೆಂದು ಭಯಭಕ್ತಿಯಿಂದ ನಮಿಸಿ ಅಂಗೀಕರಿಸುವದೆ ಎನ್ನ ಭಕ್ತಿ. ಪೂರ್ವಾಶ್ರಯ ಬಂಧು ಭ್ರಮೆ, ಆತ್ಮತೇಜ, ಲೋಕದನಚ್ಚು ಮಚ್ಚು ಇಂತಿವ ಸುಟ್ಟು ಮಲತ್ರಯಂಗಳ ಹಿಟ್ಟುಗುಟ್ಟಿ ತೂರಿ ಬಿಡುವುದೇ ಎನ್ನ ಜ್ಞಾನ ಕ್ಷುತ್ತು ವೈದೋರಿ ಭಿಕ್ಷಕ್ಕೆ ಹೋದಲ್ಲಿ ಭಾಂಡದ ತೊಳೆದ ದ್ರವ್ಯ ಪದಾರ್ಥವಮಂ ತರಲೊಡನೆ ಹರುಷದಿಂದ ಲಿಂಗಾರ್ಪಿತವ ಮಾಡಿ ಸಾಕೆಂದ ಬಳಿಕ ಮತ್ತೊಂದು ಗೃಹವನಾಶಿಮಾಡಿ ಹೋದೆನಾದರೆ ಎನ್ನ ವೈರಾಗ್ಯಕ್ಕದೇ ಕುಂದು ನೋಡಾ. ಅದೇನು ಕಾರಣವೆಂದೊಡೆ ಗಂಡನಿಕ್ಕಿದ ಪಡಿಯುವನುಂಡು ಮನೆಯ ಗಂಡನೆಂದಿಪ್ಪವಳು ಪತಿವ್ರತೆಯಲ್ಲದೆ, ಗಂಡನಿಕ್ಕಿದ ಪಡಿಯನೊಲ್ಲದೆ ಒಳ್ಳೆ ಕೂಳಿಗಾಸೆ ಮಾಡಿ ನೆರೆಮನೆಗೆ ಹೋಗುವ ಜಲ್ಲಾಳಗಿತ್ತಿಗೆ ಪತಿಭಕ್ತಿಯುಳವಡವುದೆ ಅಯ್ಯಾ?

ಲಿಂಗಾಣತಿಯಿಂ ಬಂದ ಪದಾರ್ಥವ ಸಟಿಗೆ ಉಂಡುಕೊಂಡಂತೆವಾಡಿ ಸಾಕೆಂದು ನೂಂಕಿ ಅಂಗದಿಚ್ಛೆಗೆ ಹರಿದು ಪುತ್ತ್ರೊಂದು ಮನೆಯ ಆಸೆ ಮಾಡಿ ಹೋಗುವ ಜೀವಗಳ್ಗರಿಗೆ ಶರಣಸತಿ ಲಿಂಗಪತಿ ಭಾವ ಅಳವಡು ವುದೆ ಅಯ್ಯ? ಭಕ್ತಿ, ಜ್ಞಾನ, ವೈರಾಗ್ಯ ವಿರಹಿತನಾಗಿ ನಿಜಮುಕ್ತಿಯ ನರ ಸುವ ಅಣ್ಣಗಳ ಇರವು ಬಂಜೆ ಮಕ್ಕಳ ಬಯಸಿ ಬಟ್ಟೆಯ ಬೊಮ್ಮಂಗೆ ಹರಿಸಿಕೊಂಡ ತೆರನಾಯಿತಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾ ರ್ಜುನಾ.

೫೪ ಸದಮಲ ಭಕ್ತಿಯಿಂದ ಭಕ್ತ ನಮಸ್ಕರಿಸಿ, ಎನ್ನ ಕೈವಿಡಿದು ತನ್ನ ಮಠಕ್ಕೆ ಕರೆದೊಯ್ದು, ತಾನು ಪಟ್ಟ ಗದ್ದುಗೆಯ ಮೇಲೆ ಕುಳಿತು ಚಿನ್ನದ ಪರಿಯಾಣದಲ್ಲಿ ಪಂಚಾಮೃತವ ನುಣುತ ಎನ್ನ ಕದವಿನ ಮೂಲೆಯಲ್ಲಿ ಕುಳ್ಳಿರಿಸಿ, ಒಡದೋಡಿನಲ್ಲಿ ಅಂಬಲಿಯ ನೆರೆಯಲು, ಎಲೆದೇವ ಎನ್ನ ಮನದಲ್ಲಿ ನೊಂದೆನಾದರೆ ನಾನು ಕರ ಪಾತ್ರನಲ್ಲ, ಅಪಾತ್ರನು. ಅದೇನು ಕಾರಣವೆಂದೊಡೆ, ನಾನು ಮೂರಾರು ತಿಂಗಳು ಜನ ನಿಯ ಜಠರವೆಂಬ ಸೆರೆಮನೆಯಲ್ಲಿ ಸಿಕ್ಕಿರುವಾಗ ಎನಗೆ ಸದಾ ಉಣಲಿಟ್ಟು ಸಲಹಿದವ ನೀನೋ ಅವನೋ? ಆ ಸೆರೆಮನೆಯಿಂದ ಎನ್ನ ಕೈವಿಡಿದು ಕರತಂದು ಶಿವಲಾಂಛನವುಂ ಕರುಣದಿಂದಿತ್ತು, ಮರ್ತ್ಯಲೋಕದಲ್ಲಿ ಎನ್ನ ಪೂಜ್ಯನ ಮಾಡಿದಾತ ನೀನೋ ಅವನೋ? ಇದು ಕಾರಣ ಇಕ್ಕ ವಾತ ಆವನೆಂಬುದು ನನ್ನಲ್ಲಿಲ್ಲ. ಎಚದವನಿದ್ದಂತೆ ಅಂಬಿಗೆ ಮುನಿ ವರೆ ಅಯ್ಯ? ನಾನು ಉಂಡುಟ್ಟು ಸುಖಿಯಾದರೆ ನಿನ್ನ ಹಾಡುವೆನು. ನಾನು ಹಸಿದು ನೊಂದೆನಾದರೆ ನಿನ್ನ ಬಯ್ದೆನಲ್ಲದೆ ಮಾನವರ ಹಂಗು ಎನಗೇತಕಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಪರಿಯಾಣ= ಬಟ್ಟಲು; ಓಡು = ಮಣ್ಣಿನ ಮುಚ್ಚಳ; ಕರ = ಹೆಚ್ಚು ಪಾತ್ರ = ಯೋಗ್ಯ; ಜಠರ = ಗರ್ಭ;

೫೫. ಕರಣ ಹಸಿಗೆಯ ನೋಡುವಣ್ಣಗಳ ಕಾಲ ಹಿಡಿದೆಳೆಯಿತ್ತು ಮಾಯೆ. ಮಿಶ್ರಾರ್ಪಣವ ನೋಡುವಣ್ಣಗಳ ಮೀಸೆಯ ಹಿಡಿದುಯ್ಯಾ ಲೆಯ ನಾಡಿಸಿತ್ತು ಮಾಯೆ. ಆತ್ಮಸ್ವರೂಪವ ನರಿವಣ್ಣಗಳ ತನಗಾಳು ಮಾಡಿಕೊಂಡು, ಶಿವಜ್ಞಾನಕ್ಕೆ ಕೀಳು ಮಾಡಿತ್ತು ಮಾಯೆ. ಶಿವಜ್ಞಾ ನವ ಮಾಡಿಹೆನೆಂಬಣ್ಣಗಳ ಕೀಳು ಮಾಡಿತ್ತು ಮಾಯೆ. ತತ್ವಸ್ವರೂ

ಪವ ನರಿವಣ್ಣಗಳ ತನಗೆ ಮುದ್ದು ಮಾಡಿಸಿ, ಮೋಹಿಸಿ ಬತ್ತಲೆ ನಿಲಿಸಿತ್ತು ಮಾಯೆ. ಮಂತ್ರ ಗೋಪ್ಯವ ನೋಡುವಣ್ಣಗಳ ಕುಟಿಲವೆಣ್ಣಗಳ ಕುಮಂತ್ರಕ್ಕೆ ಸಿಲ್ಕಿಸಿ ಕಾಡಿತ್ತು ಮಾಯೆ. ಜಪಧ್ಯಾನ ಮಾಡುವಣ್ಣಗಳ ಬಕಧ್ಯಾನವ ಮಾಡಿಸಿತ್ತು ಮಾಯೆ. ವಚನವ ನೋಡುವಣ್ಣಗಳ ರಚನೆಗೆ ನಿಲಿಸಿತ್ತು ಮಾಯೆ ಇದು ಕಾರಣ ಇಚ್ಛೆಯು ನುಡಿದು ಕುಚಿತ್ತನಾಗಿ ಬರುವ ವಿರಕ್ತನಂತೆ ಹೊಟ್ಟೆಯು ಹೊರೆವು, ಹೊನ್ನು, ಹೆಣ್ಣು, ಮಣ್ಣು ದೊರೆದಲ್ಲಿ ಹಿಡಿದಿಹ ಕರ್ಮಿ ಎಂಬ ಕಾಳ ಮೂಳರಿಗೆಲ್ಲಿಯದೋ ವಿರಕ್ತಿ ಕೆ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

೫೬. ಮಾಯೆಯು ಕಾಲು ಬಾಯಿಗೆ ಸಿಕ್ಕಿ, ತೊತ್ತಳ ದುಳಿಯಿಸಿಕೊಂಬ ಮರುಳ ಮಾನವರ ಬಗೆಯ ನೋಡಯ್ಯ ಮನವೇ. ಗಂಡು ದೊತ್ತಿನಂತೆ ಮಂಡೆಯ ಬೋಳಿಸಿಕೊಂಡು, ತೆಂಗು ಪೊಟ್ಟಾಡುವಂತೆ, ಕರಸ್ಥಲದಲ್ಲಿ ಲಿಂಗವ ಹಿಡಿದುಕೊಂಡು, ಠವಳಿಕಾರನಂತೆ ಮನವ ಕದ್ದು ಮಾತನಾಡುತ್ತ, ಮನೆ ಮನೆಗೆ ಹೋಗಿ ಹೊಟ್ಟೆಯ ಕಿಚ್ಚಿಗೆ ಸಟೆಯ ಶಾಸ್ತ್ರವ ಹೇಳುವ ಡೊಂಬರಂತೆ, ಪುಸ್ತಕವ ಹಿಡಿದುಕೊಂಡು, ಪುರಜನವ ಮೆಚ್ಚಿಸುವ ಖೋಡಿಗರಂತೆ, ವೇಷವಂ ಹಲ್ಲಣಿಸಿಕೊಂಡು, ವಿರಕ್ತನಂತೆ ದೇಶ ಮಧ್ಯದಲ್ಲಿ ಸುಳಿದು, ವಿರಕ್ತರ ಕಂಡಲ್ಲಿ ಸಟೆಯ ಭಕ್ತಿಯ ಹೊಕ್ಕು ಹೊಸಕದ ಉಪಚಾರವಂ ನುಡಿದು, ಮಾಡಿ ನೀಡುವ ಭಕ್ತರ ಮನೆಗೆ ಭಿಕ್ಷ ಮುಖದಿಂದ ಹೋಗಿ, ನಚ್ಚು ಮಚ್ಚು ನುಡಿದು ಉಂಡು ಕೊಂಡು, ಕಾಲವಂ ನೂಂಕಿ, ಮನೋವಿಕಾರದಿಂದ ಪರಧನ, ಪರಸ್ತ್ರೀಯರಿಗಳುಪಿ, ಭವಿಭಕ್ತರೆನ್ನದೆ ಉಂಡುಟ್ಟಾಡಿ, ತೀರ್ಥ ಪ್ರಸಾದವೆಂಬ ಅಳುಕಿಲ್ಲದೆ ಚಲ್ಲಾಡಿ, ನಡೆಯಲ್ಲದ ನಡೆಯ ನಡೆದು, ನುಡಿಯಲ್ಲದ ನುಡಿಯ ನುಡಿದು, ತನ್ನ ಕಪಟವೇಷವಂ ಅರಿಯದೆ ಶಿವಶರಣ ಮೇಲೆ ಮಿಥ್ಯೆಯಂ ಮಾಡಿ, ಭೇದ ಹಗೆಗಳಂ ಸಾಧಿಸಿ, ಹಸಿಯ ಮಾದಿಗರಂತೆ ಹುಸಿಯ ನುಡಿದು, ಆ ಶರಣರ ಮೇಲೆ ಒಂದೊಂದ ನುಡಿದುಗಳಹುತಿಪ್ಪ ನರಕಿ ಜೀವಿಗಳಿಗೆ ಮಾಡಿದ ಪರಿಭವದ ರಾಟಳ ಗಿಕ್ಕುಗಿರಿ ಕೆಂದು ತಿರುಗುತ್ತಿದೆ ಅಯ್ಯಾ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಪೊಟ್ಟು = ಪೊಳ್ಳು; ಠವಳಿ = ಚೇಷ್ಟೆ; ಖೋಡಿಗ = ಮೂರ್ಖ; ಹಲ್ಲಣಿಸು = ಹೊತ್ತುಕೊಳ್ಳು; ಹೊಕ್ಕು = ನೇಯ್ಗೆಯ ಅಡ್ಡದಾರ; ಹೊಸಕ = ಎರಡು

ಎಳೆಗಳನ್ನು ಕೂಡಿಸುವದು; ಅಳುಕು = ಅಂಜಿಕೆ; ಗಳಹು = ಮಾತಾಡು; ಪರಿಭವ = ಅಪಮಾನ; ರಾಟಳ = ಚಕ್ರ;

೫೭. ಕಾಮಧೇನುವಿನಲ್ಲಿ ಕಲ್ಪಿಸಿದ ಸವಿ ಇಪ್ಪದಲ್ಲದೆ, ಮರ್ತ್ಯದ ಪಶುವಿನಲ್ಲಿ ಉಂಟೆ ಅಯ್ಯ? ಮಹಾಶೇಷನಲ್ಲಿ ಮಾಣಿಕ್ಯ ಪ್ರಭಾವಿಸುತಿಪ್ಪದಲ್ಲದೆ, ಕೆರೆಯೊಳಗಣ ಒಳ್ಳೆಯಲ್ಲಿ ಉಂಟೆ ಅಯ್ಯ? ವಾರಣದ ಕುಂಭಸ್ಥಳದಲ್ಲಿ ಮೌಕ್ತಿಕ ಬೆಳಗುತಿಪ್ಪುದಲ್ಲದೆ, ಊರ ಹಂದಿಯಲ್ಲಿ ಉಂಟೆ ಅಯ್ಯ? ಶರಣರ ಮನೋಮಧ್ಯದಲ್ಲಿ ಶಿವನು ಮೂರ್ತಿಗೊಂಡು, ಆ ಶರಣರ ಜಿಹ್ವೆಯ ಕೊನೆಯ ಮೊನೆಯ ಮೇಲೆ ವಚನವೆಂಬ ಪರಮಾಮೃತವ ಕರೆದು ಕೆಲ ಬಲದ ಗಣಂಗಳಿಗೆ ಸವಿದೋರಿ, ಆ ಶರಣರಲ್ಲಿ ಪರಿಪೂರ್ಣವಾಗಿಪ್ಪನಲ್ಲದೆ, ದ್ವೈತಾದ್ವೈತಿಗಳೆಂಬ ಶುನಕ, ಸೂಕರರಲ್ಲಿ ಉಂಟೆ ಅಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ.

ಪ್ರಭಾವಿಸು = ಹೊಳೆಯು ; ಒಳ್ಳೆ = ಕೆರೆಹಾವು; ವಾರಣ = ಆನೆ;

೫೮. ಕೋಗಿಲೆ ಸ್ವರಗೆಯ್ಯುತೆಂದು ಕಾಗೆ ಆ ದಿಕ್ಕಿಗಿದಿರಾಗಿ ಕುಳಿತು, ಕರ್ರೆಂದು ಕಟಿಕಿಯನಾಡಿದರೆ, ಆ ಕೋಗಿಲೆಗಾದ ಕೊರತೆ ಏನಯ್ಯ? ಪ್ರಕಾಶವುಳ್ಳವನಲ್ಲಿ ಕತ್ತಲೆ ಮೆಯ್ಯಪನೆಂದು, ಹಗಲು ಕಣ್ಣುಕಾಣದ ಗೂಗೆ ಕೆಟ್ಟ ನುಡಿದರೆ ಆ ಸೂರ್ಯನಿಗಾದ ಕೊರತೆ ಏನಯ್ಯ? ಕನ್ನಡಿಗೆ ಮೂಗಿಲ್ಲವೆಂದು ಮೂಕೊರೆಯ ಹಳಿದರೆ, ಆ ಕನ್ನಡಿಗಾದ ಕೊರತೆ ಏನಯ್ಯ? ದ್ವೈತಾದ್ವೈತವ ನೂಂಕಿ, ಅಂಗಲಿಂಗದ ಹೊಲಬನರಿದು ಸ್ವಯಲಿಂಗಿಯಾದ ಶರಣನ ಅಂಗವಿಕಾರದ ಪಂಗುಳಮಾನವರು ಜರಿದು ಝುಂಕಿಸಿ ನುಡಿದರೆ ಅಂಗಲಿಂಗಾನುಭಾವಿಗಾದ ಕೊರತೆ ಏನಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ?

ಕಟಕಿ = ಕೆಟ್ಟಶಬ್ದ; ಮೂಕೊರೆಯ = ಮೂಗು ಹೋದವ; ಪಂಗುಳ = ಹೆಳವ; ಝುಂಕಿಸು = ಸಿಟ್ಟುಮಾಡು;

೫೯. ಶಿವಶರಣಂಗೆ ನಿಜೈಕ್ಯ ಪದಂಗಳು ದೊರೆಕೊಂಬ ತೆರನ, ಶ್ರೀಗುರು ಸ್ವಾನುಭಾವದಿಂದ ನುಡಿವುತಿರ್ಪ ಕೇಳಿರಯ್ಯ. ಜನನ ಮರಣಕ್ಕಂಜಿ ತಾನಾರೆಂಬುದಂ ಸ್ವಾನುಭಾವದಿಂದ ನೋಡಿ, ಎಲ್ಲಿಂದೊಗೆದೆನೆಂಬುದಂ ಬಗೆಗೊಂಡು, ಅರುಹು ತಲೆದೋರಿ, ಪುಣ್ಯಪಾಪಕ್ಕೆ ಬೀಜಾಂಕುರಮಪ್ಪ ಮಲತ್ರಯಂಗಳಿಗೆ ತಲೆಕೊಡಹಿ, ಭೋಗಮಂ ನೀಗಿ, ಭಕ್ತಿಯ ಕಳೆದುಳಿದು, ಬಂಧುವರ್ಗಮಂ ಭಂಗಿಸಿ, ಉಪಾಧಿಕೆಯಂ

ಉರುಹಿ, ಒಡಲಾಸೆಯಂ ತಲೆಯೊಡೆಯನಿಕ್ಕಿ, ಅಹಂಕಾರಂಗಳಳಿದು, ಮಮಕಾರಂಗಳಂ ಮುಂದುಗೆಡಿಸಿ ಲೋಕದ ನಚ್ಚು ಮಚ್ಚು ಕಿಚ್ಚು ಗುತ್ತಿ, ಜ್ಞಾನಕ್ರಿಯಂಗಳಲ್ಲಿ ದೃಢವ್ರತನಾಗಿ, ಕರಿಗೊಂಡು, ಆಸನದಲ್ಲಿ ಮರಹು ಮುಗ್ಗಿ ಮನತನುವನಪ್ಪಿದ ಸರ್ವ ಕರಣಂಗಳಂ ಚರಲಿಂಗ ಮುಖವ ಮಾಡಿ, ಆತ್ಮ ವಿದ್ಯೆ ಲಿಂಗದಲ್ಲಿ ಮನಸಂದು ಪಂಚಪ್ರಸಾದಾತ್ಮಕವಾದ ಘನಲಿಂಗದ ಬೆಳಗ ಪಿಂಡಾಂಡದಲ್ಲಿ ಜ್ಞಾನ ದೃಕ್ಕಿನಿಂದ ಪರಿಪೂರ್ಣವಾಗಿ ಕಂಡು, ಪೆಣ್ದುಂಬಿನಾದವೇ ಮೊದಲು ಸಿಂಹನಾದವೇ ಕಡೆಯಾದ ಆರೆರಡು ಪ್ರಕಾರದ ನಾದಂಗಳಂ ಕೇಳಿ, ಹರುಷಂ ಹರಿವರಿಗೊಂಡು, ಎನಗೆ ಶಿವತತ್ವ ಸಾಧ್ಯವಾಯಿತ್ತು. ಪರಶಿವನಲ್ಲಿ ಒಡಗೂಡಿ ಪರಬ್ರಹ್ಮವಾದೆನೆಂದು ಅಹಂಕರಿಸಿ ಕ್ರಿಯೆಯ ಬಿಟ್ಟ ಗಂಭೀರ ಧ್ಯಾನದೊಳಿಪ್ಪ ಶರಣಂಗೆ ಮೂರೊಂದು ವಿಧದ ಪದಂಗಳು ಒಪ್ಪವಲ್ಲದೆ ಶಿವನಲ್ಲಿ ನಿಜೈಕ್ಯವಿಲ್ಲ. ಅದೇನು ಕಾರಣವೆಂದೊಡೆ ಷಟ್‌ಸ್ಥಲ ಬ್ರಹ್ಮಿ ಎನಿಸಿಕೊಂಡು, ಆರು ಸ್ಥಲದ ವಿಚಾರವಿಡಿದು, ಮೂರುಸ್ಥಲದಲ್ಲಿ ಅವಧಾನಿಯಾಗಿ ಎರಡೊಂದು ಸ್ಥಲ ಒಂದಾದ ಸ್ಥಲದಲ್ಲಿ ಶರಣಲಿಂಗನೆಂಬುಭಯವಳಿದು, ನೂರೊಂದು ಸ್ಥಲದೊಳಗೆ ಪ್ರಭಾವಿಸಿ ಪರಿಪೂರ್ಣವಾಗಿ, ಸಿದ್ಧ ಪ್ರಸಾದವೆಂಬ ನಿಷ್ಕಲ ಬ್ರಹ್ಮದಲ್ಲಿ ಉರಿ ಕರ್ಪೂರದಂತೆ ಬೆಳಗುದೋರಿ, ಶುದ್ಧ ಪ್ರಸಾದವ ನುಂಗಂಗೊಂಡು ನಿರಂಜನ ಪ್ರಸಾದವ ನೊಡಗೂಡಿದ ಬಸವರಾಜ ದೇವರು ಉತ್ತುಂಗ ಲಿಂಗದಲ್ಲಿ ಐಕ್ಯವಾಗುವನ್ನಬರ ಶಿವಲಿಂಗ ಪೂಜೆಯಂ ಬಿಟ್ಟನೆ? ಜಪತಪ ನಿತ್ಯ ನೇಮಂಗಳಂ ಬಿಟ್ಟನೆ? ಲಿಂಗಕ್ಕೆ ಕೊಟ್ಟು ಕೊಂಬ ಅರ್ಪಿತ ಅವಧಾನಂಗಳಂ ಬಿಟ್ಟನೇ? ತೀರ್ಥ ಪ್ರಸಾದದಲ್ಲಿ ಒಯ್ಯಾರವಂ ಬಿಟ್ಟನೆ? ಮಾಡಿ ನೀಡುವ ದಾಸೋಹಮಂ ಬಿಟ್ಟನೆ? ಗುರುಲಿಂಗ ಜಂಗಮವ ಕಂಡು ಹೊಡೆಗೆಡುವುದಂ ಬಿಟ್ಟನೆ? ಬಿಜ್ಜಳನ ಓಲಗದ ಸಭಾ ಮಧ್ಯಕ್ಕೆ ಹೋಗಿ ತನ್ನ ದಿವ್ಯ ಶ್ರೀಪಾದ ಪದ್ಮಂಗಳಂ ಬಿಜ್ಜಳಂಗೆ ತೋರಿ ಅವನ ಕರ್ಮಂಗಳಂ ಸುಟ್ಟು, ಅವನ ರಕ್ಷಿಸುದಂ ಬಿಟ್ಟನೆ? ಇಂತಿವೆಲ್ಲವು ಕ್ರಿಯೆಯೊಳಗು- ||ಗ್ರಂಥಸಾಕ್ಷಿ|| ಕ್ರಿಯಾದ್ವೈತ ನ ಕರ್ತವ್ಯಂ । ಭಾವಾದ್ವೈತ ಸಮಾಚರೇತ್ ॥ ಕ್ರಿಯಾ ನಿರ್ವಹತೆಯಸ್ತು । ಭಾವ ಶುದ್ಧಂತು ಶಾಂಕರಿ ॥ ಇಂತೆಂದುದಾಗಿ, ಇದು ಕಾರಣ ಐಕ್ಯವಾಗುವನ್ನಬರ ಕ್ರಿಯೊಳಕೊಂಡ ಶರಣಂಗೆ ನಿಜ ಮುಕ್ತಿಯಲ್ಲದೆ ಐಕ್ಯವಾಗುವದಕ್ಕೆ ಮುನ್ನವೇ ಕ್ರಿಯಳಿದ ಶರಣಂಗೇನು ಸಾಯುಜ್ಯ ಪದಸ್ತ

ನಷ್ಟನಷ್ಟವೆ, ಪರನಲ್ಲಿ ಸಮರಸವಿಲ್ಲವೆಂದೆನಯ್ಯಾ ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನಾ.

ಕೊಡಹು = ಚೆದುರಿಸು, ಅಲ್ಲಾಡಿಸು; ಕರಿಗೊಳ್ಳು = ಸುಡು; ಮುಗ್ಗು = ಕಳೆಗುಂದು, ನಾಶವಾಗು; ಹರವರಿಗೊಳ್ಳು = ಪಸರಿಸು; ಉತ್ತುಂಗ = ಎತ್ತರವಾದ ಮಹತ್ತಾದ; ಹೊಡೆಗೆಡು = ನಮಸ್ಕಾರ ಮಾಡು.

೬೦. ಆಕಾಶದಿಂದಲಾಯಿತ್ತು ನಿರಾಕಾರ. ಆ ನಿರಾಕಾರ ಚಿದಾಕಾಶದ ಮೇಲೆ ನಿಂದಿತ್ತು. ಆ ನಿರಾಕಾರದಿಂದಲಾಯಿತ್ತು ಭಾವ. ಆ ಭಾವ ಕರಣದ ಮೇಲೆ ನಿಂದಿತ್ತು. ಆ ಭಾವದಿಂದಲಾಯಿತ್ತು ಮನ. ಆ ಮನ ಸೂಕ್ಷ್ಮದ ಮೇಲೆ ನಿಂದಿತ್ತು. ಆ ಮನದಿಂದಲಾಯಿತ್ತು ತನು ಆ ತನು ಸ್ಥೂಲದ ಮೇಲೆ ನಿಂದಿತ್ತು. ಆ ತನು ಮನವ ಕೂಡಿದಲ್ಲಿಯೆ ತನು ನಷ್ಟವಾಯಿತ್ತು. ಮನ ಭಾವವ ಕೂಡಿದಲ್ಲಿಯೇ ಮನ ನಷ್ಟವಾಯಿತ್ತು. ಭಾವ ನಿರಾಕಾರವ ಕೂಡಿದಲ್ಲಿಯೇ ಭಾವ ನಷ್ಟವಾಯಿತ್ತು. ಇಂತೀ ತ್ರಿವಿಧ ನಷ್ಟವಾದಲ್ಲಿಯೇ ಶರಣನ ಹುಟ್ಟು ನಷ್ಟವಾಯಿತ್ತಯ್ಯಾ ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನಾ.

ಕರಣ = ಇಂದ್ರಿಯ;



ಕೆಡೆಕೆಡೆಯೊ ಕಾಲ್ಬೊಡರನಿಕ್ಕಿ ತೊಡೆ ತೋಳ್ಗಳನು ।
ಕಡಿಕಡಿಯೊ ಕಡಿ ಖಂಡವಡೆವಂತೆ ಮೆದೆಗೆಡಹಿ ।
ಹೆಡೆತಲೆಯ ಕುಟ್ಟಿ ಜಡಿ [ಜಡಿ] ದು ಖಡ್ಗವ ಪಿಡಿದು ಪಡ ಪೊಯ್ದು
ಭಟ ಕೋಟಿಯ ॥೨೧॥

ಕುತ್ತಿಕುತ್ತಿವನ ನೆಣ ನೆತ್ತ ನೆತ್ತರು ಸುರಿಯೆ ।
ಸುತ್ತಿ ಸುತ್ತಿದು [ದು] ಜೆಂಜೊತ್ತು ಬತ್ತರಿಗೆಲನ ।
ಮುತ್ತು ಮುತ್ತು [ತ್ತಿ] ತು [ರ] ಗಗಳ ತತಿಯೊಳರಿ ಶಿರವ ಕತ್ತಿಕತ್ತಿಗ
ಳೊಳಿರಿದು ॥

ಒತ್ತೊತ್ತಿ ಮೆಳೆಯ [ ನ್ಯು ] ಮುರಿಮುರಿದು ಧರೆಗೆಲನ ।
ನತ್ತಿತ್ತ ಚಲಿಸದಿರು ಕವಲಿ ಕಾಲ್ಗೆಡೆವಂತೆ ।
ಕೆತ್ತೆತ್ತು ಜೋನವನು ಮಿಳ್ತುವಿಗೆ ಮನದಣಿಯೆ ಮುತ್ತಿ ಮುಸುಕಿದ
ಬಲವನು ॥೨೨॥

ಕಂದ॥

ಕಡಿ ತರಿ ಯಿರಿ ಯುಗಿ ಬಿಗಿ ।
ತೊಡೆ ಕೊರೆ ಕರೆ ಮುರಿ [ ದು ] ಗೋಣ ನಡೆತೊಡೆತೋಳಂ ॥
ಕಡಿ ತೆಗೆ ನೆಗೆ ಪಡಪೊಯ್ದೊಡ ।
ನೊಡರಿಸು ಕಣೆಗೊಂಡು ಪೊಡೆಯುಗರಿಗೊಳಿಸೊಲವಿಂ ॥೨೩॥
ಕಡೆಗಾಲದ ಕೀನಾಶನ ।
ಗಡಣವ ಕೈಕೊಂಡು ಸಿಡಿಲು ಬಂದೆರಗಿದವೊಲ್ ॥
ಪೊಡವಿ ಬರಿದಾಗುವಂತಿರೆ ।
ಪಡಪೊಯ್ದರ್ ವೀರಭಟರ ನೆರವಿಯುನೆಲ್ಲಂ ॥೨೪॥
ಎರಡು ಕೈಗಳೊಳು ಪಟ್ಟಿಗ ।
ಳೆರಡುಂ ಪಿಡಿದೆತ್ತಿ ಮುತ್ತಿದರಿಗಳ ಬಲಮುಂ ॥
ತರಿತರಿದೊಟ್ಟಿ ವಜೀರರ ।
ಶಿರಗಳ ಮೆದೆಯೊಟ್ಟಿ ಬಿಡದೆ ಘಂಟಿನೃಪಾಲಂ ॥೨೫॥

ಚಂಪಕ॥

ನಿಜಭುಜ ಪುಷ್ಪಮಾಲಿ ನೆರೆನೀಡಿದ ಜಿಹ್ವೆಯೊಳಿರ್ದ ಪಟ್ಟಿಗಳ್ ।
ಗಜ ಹಯ ಸೈನ್ಯ ಸಂಕುಲ ಪದಾತಿಯ ಧೂಳಿಕೇತುವಂ ।

ಸ್ಫಜಠ [ರ] ಮುರ್ಕಿ ಸೊಕ್ಕುನಿರ ದೀಂಟಿ ಕಬಂಧಕ ಪಾತ್ರ ನೃತ್ಯಮಂ ।
ಸೃಜಿಸಿದುವಂದು ನಾಟ್ಯವಿಪರಂತಿರೆ ಇಮ್ಮಡಿ ಘಂಟೆ ಭೂಪನಾ ॥೭೬॥
ಖಣಿಖಣಿಲೆಂದು ತಾಗುತಿರೆ ಕತ್ತಿಗಳಾರವದುಬ್ಬರಂಗಳಂ ।
ಛಿಣಿಛಿಣಿಲೆಂದು ಪೇಲ್ಮೆಗೆಪ ಧಳ್ಳುರಿ ಕರ್ಬೊಗೆ ಪರ್ಬುತಿರ್ತ್ತಲುಂ ।
ಝಣಝಣರೆಂಬ ಕಂಕಣದ ನಾದವ ನೊಂದಿದ ಪೃಂದ್ಯ ನಿಸ್ವನಂ ।
ರಣರಣರೆಂಬ ಚಾಪ ಗುಣ ಠಂಕೃತಿಯಿಂ ನೆರೆದುರ್ಬಿ ಪರ್ಬುತಂ ॥೭೭॥

ಕಂದ॥

ಆದಿರಿಪರಳ್ಕುತ ಬೆಪರ್ದರ್ ।
ಕದಲಿ[ದ]ರೆದೆಗೆಟ್ಟು ರಣಕೆ ತಪ್ಪಿದರೆಲ್ಲರ್ ॥
ಪದಗೆಟ್ಟು ಪಾಣಿಗೆಟ್ಟರ್ ।
ಕದನಕ್ಕಿದಿರಾವ ವೈರಿ ನೃಪತಿ ವಜೀರರ್ ॥೭೮॥
ಆ ದೊರೆಯಿದೊರೆಗಳ ಬಲ ।
ದಾ ಧೋರಣ ರಣೆದು ಕಡಿದರಾ ಧೋರಣರಂ ।
ಭೂಧರಗಳುಡಿದು ಕೆಡೆದಂ ।
ತಾ ಧೀರರೆ ಹರಿಸಿ ಕೆಡಪಿದರ್ ಗಜ ಘಟೆಯುಂ ॥೭೯॥
ಘೋಳಾಯ್ಲರ್ ಘೋಳಾಯ್ಲರ ।
ನೇಳಿಸಿ ಗದೆಯಿಂದ ಪೊಯ್ಯೆ ತು[ರ]ಗದ ಚಯುಮಂ ॥
ಘೋಳಿಡುತ ಪೊಕ್ಕು ಶರಧಿಯೊ ।
ಳಾಳಿದುದುರುಜಲಚರಂಗಳೊಳ್ ತದ್ರೂಪಂ ॥೮೦॥

ಮತ್ತೇಭ॥

ಕರದಿಂದಾಂತ ಕಪಾಲದಿಂ ರುಧಿರಮಂ ಪೀರ್ದಾರ್ದರ್ಪ ಪೆಣ್ ರಕ್ಕಸರ್ ।
ಚಿರಕಾಲಕ್ಕೆ ಮಗೀಗಳಿಂತು ದೊರೆಕೊಂಡಿತ್ತೆಂದು ಸಂಪ್ರೀತಿಯಿಂ ॥
ಕಿರುಗೂಸಂ ನೆರೆಮಜ್ಜನಂಬುಗಿಸಿ ರಕ್ತಂ ಠೀಯೆ ಪೀಯೂಷಮಂ ।
ದೆರೆವುತ್ತಂ ನೆರೆನೆತ್ತರಂ ಕುಡಿಸಿ ಜೋ ಜೋ ಬಾಳ ಬಾಳೆಂದಪರ್ ॥೮೧॥

ಕಂದ॥

ರಕ್ಕಸರುಂ ಜೋಗಿಣಿಯರ್ ।
ಪೊಕ್ಕಳಮನೆ ನೆರೆದು ಭೂತ ವೇತಾಳರ ಪೆ ॥

ಣ್ಮಕ್ಕಳ ಬಯಕೆಯ ತೀರ್ಚಿದ ।
ರಕ್ಕರು ಮಿಗೆ ಪಲವು ಕಲಸು ಮಾಂಸಗಳಿಂದಂ ||೭೨||
ಬಸುರಿ ಬಾಣಾತಿಯರೆಂಬೀ ।
ಪೊಸ ರಕ್ಕಸ ವೆಣ್ಗಳ್ಗಿದೆ ತಲೆಬುರುಡೆಗಳಂ ||
ಬಿಸಿ ಬಿಸಿ ರಕ್ತವ ಮೊಗೆಮೊಗೆ ।
ದೊಸೆದೊಂದಕ್ಕೊಂದು ಮೊಯಲೆರೆವುವು ಮುದದಿಂ ||೭೩||
ಅರೆಜೀವವಡೆದ ಪೆಣನಂ ।
ಕೊರಳಂ ಕೊಯ್ದೊಯ್ದು ಶಿರವ ನೊಟ್ಟುತ್ತದರಿಂ ||
ಸುರಿಯುಕ್ಕಿ ಲಗ್ಗೆಚೆಂಡಂ ।
ತರುಣ ಮರುಳ್ತಂಡ ವಾಡುತಿರ್ದುವ ನೆತ್ತಂ ||೭೪||

**ಉತ್ಪಲ॥**

ಎನ್ನ ಪಿತಾಮಹ ಪ್ರಭೃತಿ ರಕ್ಕಸ ಜಾತಿಗೆ ಪೈತೃಕಂಗಳಂ ।
ಗನ್ನಮನೆ ಬೆರ್ಚು ಬಾರೆಲಗೆ ದುಂಡ ಗರುಳ್ಗಳನಟ್ಟ ಬೇಗದಿಂ ।
ಬೊಮ್ಮ ಪಿಶಾಚ ಕೌತಣವ ಮಾಡಗೆ ಶೋಣಿತ ಶುಕ್ಲ ಮಜ್ಜೆಯಿಂ ।
ಹೆಮ್ಮದ ಮಪ್ಪಿನಂ ಸುರೆಯಿದೆಂಪೆರೆ ಕೈಗಳವಟ್ಟ ಚಿಪ್ಪಿನಿಂ ||೭೫||

**ಚಂಪಕ॥**

ಸುರಪ ಸಮಾನ ಭೋಗ ಸಮದಂಚಿತ ವಿಕ್ರಮ ಸಂಗರಾಂಗಣ ।
ಸ್ಫುರಿತ ವಿಭಾವ ಸುಪ್ರಮಿತ ಕೋಪ ವಿಭಾಸುರ ತಾಪದಾವವಿ ।
ಸ್ತರ ಪರಿದಗ್ಧ ವೈರಿಜನ ಕಾಯುತ ಕಾನನ ನಿನ್ನ ನಾಮಗಂ ।
ಸ್ಮರಿಯಿಪೆವೆಮ್ಮ ನೀಂ ಬಿಡದೆ ರಕ್ಷಿಸು ಇಮ್ಮಡಿ ಘಂಟಿಭೂವರಾ ||೭೬||

**ಕಂದ॥**

ವೀರನಿಧಿ ನಿನಗೆ ಯೆಮ್ಮೊ ।
ಳ್ಕಾರುಣ್ಯಂ ನೆಲಸಿ ಭೂತ ಭೇತಾಳ ಗಣ ||
ಕ್ಕೋರಂತೆ ಪಲವು ಜಾಂಗಲ ।
ವಾರಿ [ತ್ರರ್] ಘಂಟಿನೃಪತಿ ನಿನ್ನಯ ತೆರದಿಂ ||೭೭||

**ಚಂಪಕ॥**

ಹರಿ ಗಿರಿಜಾಧವಂ ಸುರಪ ರಾವಣ ಕೀಚಕ ಭಟ್ಟ ವಿಕ್ರಮರ್
ಪರವನಿತಾ ಜನಕ್ಕೆಳಸಿ ನಿಲ್ಲದೆ ಮಂಗಳ ದೇವಿ ನಿನ್ನ ಪೇ ।

ರ್ರವನೆ ಸಾರ್ದಳಾ ವಿಜಯಲಕ್ಷ್ಮಿಯು ನಿನ್ನ ಭುಜ ಪ್ರದೇಶವುಂ।
ಚಿರವಿಡಿದಿರ್ದಳೆಂದೆನಲು ಘಂಟೆ ನೃಪಾಲನ ಪೋಲ್ವನಾವವಂ ॥೮೮॥

**ಮ॥ ಸ್ರ॥**

ಘುರ್ಧೀರಂ ಘಂಟೆ ಭೂಪಂ ಪಿಡಿದು ಜಡಿವ ನಿಸ್ತ್ರಿಂಶ ವೊಪ್ಪಿರ್ದುದಾಗಳ್।
ಕರಿಯಂ ಸೀಳ್ವಿಕ್ಕಿ ತನ್ಮಸ್ತಕ ಗಳಿತ ಮಹಾ ಮೌಕ್ತಿಕಂ ಬೀಜವಾಗಲ್।
ನೆರೆವನ್ನಂ ಬಿತ್ತಿ ತೇಜಃಪ್ರಕರಮನೊಲವಿಂ ವಾಜಿಯುಂ ನುಂಗಿ ಮತ್ತಂ।
ನರರಂ ತಿಂದಳ್ಕಿಸಲ್ ಮೃತ್ಯುವುರಿವ ಪರಿಯಿದೆಂಬಂತೆ ತೋರುತ ಮಿಕ್ಕುರ್ಗಂ ॥೮೯॥

**ಕಂದ॥**

ಹದಿನೆಂಟು ಯೋಜನಾಂತರಂ।
ಬೆದರುತ್ತಂ ಪೋಗೆ ಪಾದುಶಾಹನ ಬಲಮುಂ॥
ಮುದದಿಂದಂ ಜಯ ಭೇರಿಯು।
ನೊದವಿಸಿ ಗಡಿ ಮೇರೆ ಮಾಡೆ ಘಂಟೆನೃಪಾಲಂ ॥೯೦॥

ಜಯಕರ ಶಾಸನಗಳಿಗಾ।
ಲಯ ಮೆನಿಸಿದ ಶಿಲೆಯದೊಂದು ಸಂಸ್ತಂಭಮನಾ॥
ವಿನಯನಿಧಿ ನಿಲಿಸಿ ರಣವಿ।
ಸ್ಮಯಕರ ಗಡಿಯಂತ ಭೀಮನೆನೆ ಪೆಸರ್ವೆತ್ತಂ ॥೯೧॥

ಅಂತು ಪೆಸರ್ವೆತ್ತು ಜಗದೊಳ್।
ಸಂತಸದಿಂ ತನ್ನ ಚಾತುರಂಗದ ಬಲಮಂ॥
ಸಂತೈಸಿ ಬಿರುದುಗಳ ನೀ।
ತಂ ತಡೆಯದೆ ವೀರಭಟರ ಸಂತತಿಗೆಲ್ಲಂ ॥೯೨॥

ಕಾಡದ ಬೇಡದ ಮುನ್ನಂ।
ನೀಡಿದ ಕೈಗಿತ್ತು ಭೂರಿದಾನವ ನೊಲವಿಂ॥
ಷೋಡಶ ದಾನಂಗಳ ನೀ।
ಡಾಡಿದ ಕೈಮಂದ ಕಲ್ಪವೃಕ್ಷದ ತೆರದಿಂ ॥೯೩॥

ಮತ್ತಂ ದೊರೆ ದೊರೆಗಳ ನೊ।
ಡುತ್ತಂ ತಾಂ ಕೂಡಿಕೊಂಡು ಬರ್ಪ ಪಥದೊಳ್॥

ವೊತ್ತದ ವಂದಿಜನಂಗಳ ।
ಬಿತ್ತರದಿಂ ಪೊಗಳ್ದರೆಂತೆನ ಲ್ಚಿತ್ತರಿಪೆಂ ॥೯೪॥

**ವಾರ್ಧಿಕ॥**

ಎತ್ತಿ ಬಹ ಸತ್ತಿಗೆಯ ವೊತ್ತದೊಳು ಚಿತ್ತಜನ ।
ಪತ್ನಿಯಸು ಜರೆವ ಲಾವಣ್ಯದತಿಶಯದ ರುಚಿ ।
ವೆತ್ತ ನವರತ್ನಕಂಕಣ ದುಲುಹಿನೊಡಗೂಡಿ ವೃತ್ತಕಂಠಿಯರು ನೆರೆದು ॥
ಇತ್ತರದಿ ನಿಂತು ಕೈಯೆತ್ತಿ ಚಮರವನಿಕ್ಕೆ ।
ಬತ್ತಿಸಾಯುಧದ [ಭಟಸೇನೆ] ಮುಂದಕೆ ನಡೆದು ।
ಇತ್ತೊತ್ತದಿರಿಯೆನುತ ವೇತ್ರ ಧಾರಿಗಳುಲಿಯೆ ವೊತ್ತಗೆಡದೈದಿ ಬರಲು॥೯೫॥

**ಮತ್ತೇಭ॥**

ನಿಜವೇತಂಡ ಕಪಾಲ ಯುಗ್ಮವಿಲಸದ್ದಾನಾಂಬುಧಾರಾ ನದೀ॥
ವ್ರಜವುಂ ವೃದ್ಧಿಯ ನೈದಿಸುತ್ತು ಬಿಡದಾ ವಾರಾಶಿಯಂ ಪೂರದಿಂ ।
ಋಜು ವಕ್ರಂ ಚತುರಂಗ ಸೈನ್ಯ ಗಮನ ಪ್ರಸ್ತಾವ ಪಾದಪ್ರಹಾ ।
ರಜ ಪಾಂಸುಪ್ರಕಟೀಕೃತಾಂಬರ ಸರಿತ್ಪಂಕಾಂಕ ಮಾಯ್ತೆತ್ತಲುಂ ॥೯೬॥

ಮಲ್ಲಿಕಾಮಾಲೆ ।

ಮೂರು ಯೋಜನ ನೀಳಮಂ ನಿಜ ಸೇನೆ ಬೆಂಬಿಡದೈತರಲ್ ।
ಭೂರಿ ಭಾಗ್ಯ ನಿದಾನ ಘಂಟಿನೃಪಾಲ ಬಂದಪನೆಂಬುದಂ ।
ವೀರ ವೆಂಕಟರಾಯರಂತದ ಕೇಳಿ ಸಂಭ್ರಮದಿಂದ ವಿ ।
ಸ್ತಾರ ಸೌಧಮನೇರಿ ನೋಡಿದರೆಲ್ಲರಂದತಿ ಬೇಗದಿಂ ॥೯೭॥

**ಚಂಪಕ॥**

ಅದೆಯಿದೆ ಬಂದನೆಂದಿದಿರನೈದಿ ಸಮಸ್ತ ನೃಪಾಲ ಸಂಕುಲಂ ।
ಒದವಿದ ನೇಹದಿಂ ಬಿಡದೆ ಬಂದ ಮದರ್ಪಿ ಮನೋನು ರಾಗದಿಂ ।
ಸುದತಿಯರಿಕ್ಕೆ ಚಾಮರವನಾಗಲೆ ವೆಂಕಟರಾಯ ಕಾಣುತಂ ।
ಕದನ ವಿಲೋಲ ಘಂಟಿಯ ನರೇಂದ್ರನ ಕೈವಿಡಿದೊಯ್ದು ಬೇಗದಿಂ ॥೯೮॥

**ಕಂದ॥**

ವಿಲಸಿತ ವೆಂಕಟರಾಯರ್ ।
ಬಲಗೆಲದೊಳ್ಕುಳ್ಳಿರೆಂದು ಪೇಳ್ದೊಲವಿಂದಂ ॥
ಗೆಲವಾಂತು ಬಂದೆಯೆನುತಂ ।

ಭಳಿರೇ ನಿನಗಹುದು ವೈರಿಮಸ್ತಕಶೂಲಾ ॥೯೯॥
ಪರಥಟ್ಟ ಸಾಳ್ವ ಪಂಥದ ।
ಪರಬಲ ಜಲನಿಧಿಗೆ ಬಡಬ ನೀನಲ್ಲದೆ ಪೇಳ್ ॥
ಪೆರರುಂಟೆ ಧರೆಯೊಳಿನುತಂ ।
ಧುರಂಕಿದಿರಾಂತವರ ಗಂಡ ಬಿರಿದೋದ್ದಂಡಾ ॥೧೦೦॥
ನೆರೆದಿರ್ದ ರಾಜಕುಲದೊಳು ।
ಶರಜನು ನೀನಹುದು ವೈರಿ ಗಂಟಲ ಗಾಣಾ ॥
ಅರಿ ಶಿರಗಳ ಚೆಂಡಾಡಿದ ।
ಸರಿಯುಹ ನಿನ್ನಾರು ನಿನಗೆ ಘಂಟೆವಜೀರಾ ॥೧೦೧॥

**ಮತ್ತೇಭ॥**

ಎಮಗಂ ಕೀರ್ತಿಯನುಂಟುಮಾಡಿದೆ ಮಹಾ ಸಂಗ್ರಾಮಮಂ ಮಾಡಿ ನೀಂ ।
ಸಮರಕ್ಕಿನ್ನೆಣೆಯಿಲ್ಲ ವೆಂದೆಣಿಸಿದೈ ಪ್ರೋತ್ಸಾಹನಂ ಗೆಲ್ದೆಯಂ ।
ದಮರರ್ನಿನ್ನಯ ಸಾಹಸಕ್ಕೆ ಮನವೊಲ್ದಾಶ್ಚರ್ಯಮಂ ಮಾಡೆ ವಿ ।
ಕ್ರಮ ಕಂಠೀರವ ನಿನ್ನೊಳಾವ ನಿಲವಂ ಘಂಟೇಂದ್ರ ಭೂಪಾಲಕಾ ॥೧೦೨॥

**ಕಂದ॥**

ನಿನಗಿಲ್ಲದ ಬಿರುದುಗಳೀ ।
ಜನನಾಥರ್ಗುಂಟೆ ಯೆಂದು ರಾಯಮರ್ಯಾದದಿಂ ॥
ಮನವೊಲ್ದು ಕೊಟ್ಟರಾಗಳ್ ।
ಮಿನುಗುವ ನರಮುಖದ.........ತೋಪುಗಳಂ ॥೧೦೩॥
ಅನು [ಪ] ಮ ತೇಜೋನಿಧಿಯೆಂ ।
ದೆನಿಸಿದ ವರ ಪಂಚ ದೀವಟಿಗೆ ನಿನಗಿರಲೆಂ ॥
ದನಿತರೊಳ್ ತರಿಸಿಕೊಟ್ಟರ್ ।
ಘನ ಮಹಿಮಾಸ್ಪದಗೆ ಘಂಟೆನೃಪವರ ಗಾಗಳ್ ॥೧೦೪॥
ಕನದಮಲ ಕಾಂತಿ ಸಂಯುತ ।
ಘನತರ ಮೆನಿಸಿರ್ದ್ದ ಕನಕ ಚಮರೀರುಹಮಂ ॥
ವಿನಯನಿಧಿ ನಿಮ್ಮೊಳಿರಲಿದು ।
ಮನಸಿಜರೂಪಂಗೆ ಘಂಟೆನೃಪವರ ಗೆಂದರ್ ॥೧೦೫॥

ಬಾಹತ್ತರ ವಿನಿಯೋಗಂ ।
ಸಾಹಸಪರ ನಿನಗೆ ಸಲ್ವುದೆನುತಂ ಮುದದಿಂ ॥
ದಾಹವಲಂಪಟ ಗಿರಲಿದು ।
ವಾಹಕೆ ಸಮುಕಟ್ಟು ಝಲ್ಲಿ ಪರ್ಜನನಿತ್ತರ್ ॥೧೧೬॥

ಕವಣೆ ಮಿಡಿ ಬಿಲ್ಲು ಹುವ್ವಿನ ।
ಪವಣಿನ ಗರಿಯಿಟ್ಟ ಪಚ್ಚೆ ಕಡಗಮುನೊಲವಿಂ ॥
ಸವುಳು ಜಾಗಟೆ [ಯು] ಸಹಿತಂ ।
ಭುವನೇಶ್ವರ ಘಂಟೆನೃಪತಿಗಂ ದೊಲಿದಿತ್ತರ್ ॥೧೧೭॥

ಹಗಲು ದೀವಟಿಯು ಪಂಜೆಯು ।
ಬಗೆಗತಿಶಯಮಾದ ಸಿಂಹ ಲಕ್ಷ್ಮಪತಾಕಂ ॥
ಮೃಗಧರ ವಂಕಿ [ಯು] ಪೆಂಡೆಯು ।
ಬಗೆಯುದೆ ಮುಂಗೈ ಮುರಾರಿ ಯೆಂಬುದ ನಿತ್ತಂ ॥೧೧೮॥

ನವಲಕ್ಷ ಪ್ರಮಿತಿಯುದೊಂ ।
ದವನಿಯ ಪೆನುಗೊಂಡೆ ಗುತ್ತಿ ಗಡಿ ಪರಿಯಂತಂ ॥
ಸವಿನಯ ಪೂರ್ವಕದಿಂದಂ ।
ನವನಿಧಿ ಭಂಡಾರ ಸಹಿತ ವುಡುಗೊರೆ ಯಿತ್ತಂ ॥೧೧೯॥

ಎಸೆದೊಪ್ಪವೆತ್ತ ಸಿಂಹನ ।
ಮಿಸುನಿಯ ಚೂಡಾಲ ಹಾಸೆಯುಂ ಪಾ [ವುಡ]ಮುಂ ॥
ಹಸುರು ನಿಶಾನಿಯ ಮತ್ತಂ ।
ಪೊಸರನ್ನ[ದ] ಸಿಂಹ ವಿಷ್ಟರಂಗಳ ನಿತ್ತರ್ ॥೧೨೦॥

**ವಚನ॥**

ಇಂತು ನಾನಾ ಪ್ರಕಾರವಾದ ಬಿರುದಂಗಳಿಂ ನವರತ್ನಾಭರಣ ವಸ್ತ್ರಂಗಳಮಾದುಡುಗೊರೆಯಿತ್ತು ಮನ್ನಿಸಿ ಘಂಟೇಂದ್ರ ಭೂಪಾಲನಂ ಅನೇಕ ವಿಭವದಿಂ ಬೀಡಾರಕ್ಕೆ ಕಳುಹಿ ಕೊಟ್ಟು, ಸಕಲ ನೃಪಾಲರಂ ಚತುರಂಗ ಸೇನೆಯುಂ ವಿವಿಧ ವಸ್ತ್ರಾಭರಣಂಗಳಿಂ ಮನ್ನಿಸಿ ಕಳುಹಿ ಕೊಟ್ಟು, ಶ್ರೀಮದ್ವೇಂಕಟರಾಯರು ಪಟ್ಟದ ಮಹಾದೇವಿಯುಂ ಕರೆಸಿ, ಅಂತಃಪುರದೊಳೊಡ್ಡೋಲಗಂ ಗೊಟ್ಟು, ಸ್ವಕೀಯ ಬಂಧುವರ್ಗಮುಂ ಮಂತ್ರಿ ಮಾಂಡಲಿಕ ಸಾಮಂತ ಸಕಲ ತಂತ್ರಾಧ್ಯಕ್ಷರಂ ಕರೆಸಿ ಸ್ವಪು ತ್ರಿಯ ರೆನಿಸಿದ ರಾಮಾದೇವಿಯುಮರಿಗೆ ರೂಪು ಲಾವಣ್ಯಕ್ಕೆ ತಕ್ಕ

ಸೌಂದರ್ಯಮುಳ್ಳವರನಂ ನೋಳ್ಪುದೆಂದು ಬೆಸಗೊಳ್ಳಲ್, ಮಂತ್ರಿ ಮುಖ್ಯರ್ ಬಿನ್ನಪಂಗೈದ ರದೆಂತೆನೆ ॥೧೧೧॥

**ಕಂದ॥**

ಸಕಲ ಕಲಾಸಂಪನ್ನಂ ।
ಮಕರಾಂಕ ಸಮಾನ ರೂಪ ಸೌಂದರ್ಯಯುತಂ ॥
ಅಕಳಂಕಚರಿತ ನೆನಿಸಿದ ।
ಸುಕವಿ ಸ್ತುತ ಘಂಟೆ ಭೂಮಿಪಾಲನೆ ಚಮರಂ ॥೧೧೨॥

ಮಕರಾಕರ ಗಂಭೀರಂ ।
ಪ್ರಕಟಿತ ದಿನ ನಾಥ [ವಂಶ್ಯ] ಕೌಶಿಕಗೋತ್ರಂ ॥
ಅಕಳಂಕ ಚರಿತ ನೆನಿಸಿದ ।
ಸುಕೃತಿಯು ತಾನಹುದು ವೀರ ಘಂಟೆನೃಪಾಲಂ ॥೧೧೩॥

ಇಂತೆಂದು ಸರ್ವ ಜನರ ।
ತ್ಯಂತ ಪ್ರೀತಿಯುಲಿ ಪೇಳೆ ವೇಂಕಟರಾಯಂ ॥
ಸಂತಸ ಮಿಗೆ ವಿದ್ವಾಂಸರ ।
ಸಂತತಿಯಂ ಕರೆಸಿ ತಿಳಿದ ಲಗ್ನದ ಬಲಮಂ ॥೧೧೪॥

**ಮತ್ತೇಭ॥**

ಪರಮೋತ್ಸಾಹದಿ ಮಂಗಳಪ್ರದ ಲಸದ್ವಸ್ತ್ರಾದಿ ವಿಸ್ತಾರದಿಂ ।
ವರಸದ್ರತ್ನ ವಿರಾಜಿತಂ ಕನಕ ಭೃನ್ಮಾಂಗಲ್ಯ ಸನ್ಮಂಟಪಂ ।
ನೆರೆ ತೂರ್ಯತ್ರಯ ದುಂದುಭಿ ಪ್ರಕರ ಭೇರೀರಾವ ಮತ್ತೈತ್ತಲಂ ।
ಬರಮಂ ಚುಂಬಿಸೆ ವಿಪ್ರ ಮಂತ್ರ ನಿನದಂ ತತ್ಪೌರ ಸಂರಾಜಿತಂ ॥೧೧೫॥

**ವಚನ॥**

ಇಂತನಂತ ವೈಭವದಿಂ ಪುರಮುಮನಂತಃಪುರಮಂ ರಚನೆಗೈದು ನಿಜ ಕುಮಾರಿಯಪ್ಪ ರಾಮಾದೇವಿಯಂ ಸುಮುಹೂರ್ತದೋಳ್ ವಿಧಿಪೂರ್ವಕದಿಂ ಧಾರೆಯ ನೆರೆದು ಕೊಟ್ಟನನಂತರಂ ॥೧೧೬॥

**ಮತ್ತೇಭ॥**

ಚತುರಂಭೋನಿಧಿವೇಷ್ಟಿತ ಕ್ಷಿತಿಪರೆಲ್ಲನೋರ್ಗಡಿ ಕೊಂಡಾಡಿಸಂ ॥
ಮ್ಮತವೀ ಘಂಟೆನರೇಂದ್ರಗಂ ತರುಣಿ ರಾಮಾದೇವಿಗಂ ರೂಪಿನು ॥
ನ್ನತಿಯಂ ಬಣ್ಣಿಸ ಬಲ್ಲ ಸ್ಥಾವನೆನುತುಂ ಸಂತೋಷದಿಂ ದೊಂದಿಸಲ್ ॥
ವಿತತಂ ವೇಂಕಟರಾಯ ಮನ್ನಿಸಿದನಾ ಭೂಪಾಲ ಸಂದೋಹಮಂ ॥೧೧೭॥

ಕಂದ॥

ಕಿಕ್ಕಿರಿದು ನೆರೆದ ವಿಪ್ರರಿ।
ಗಕ್ಕರದಿಂ ಕನಕ ವಸ್ತು ಮಣಿಗಣ ಧನಮಂ॥
ಚಕ್ಕನೆ ಸುರಕುಜ ದಂದದಿ।
ಮೊಕ್ಕಳಮೆನಲಿತ್ತ ನಖಿಳ ವೈಭವದಿಂದಂ ॥೧೧೮॥

ಚಂಪಕ॥

ಕರಿಘಟೆಯಂ ತುರಂಗ ಚಯಮಂ ರಥ ಸಂಕುಲಮಂ ಸುರತ್ನಮಂ॥
ವಿರಚಿತ ಭೂಷಣಂಗಳನುದಗ್ರ ಸಮಗ್ರ ವಿಶಾಲವಸ್ತು ವಿ।
ಸ್ಫುರಿತ ವಿಚಿತ್ರ ಚಿತ್ರಿತ ವಿನೂತನ ದಿವ್ಯ ದುಕೂಲ ವಸ್ತ್ರಮಂ।
ಧರಣಿಪ ಘಂಟಿ ಭೂಪತಿಗೆ ರಾಯ [ರ] ದಿತ್ತುದನೇನ ಬಣ್ಣಿಪೇಂ ॥೧೧೯॥

ಮತ್ತೇಭ॥

ನಲವಿಂದಂ ಪದಿನೆಂಟು ಕಂಪಣ ಕಧೀಶಂ ನೀನೆಯಾಗೆಂದು ಮ।
ತ್ತೊಲಿವುತ್ತಂ ಬಿರುದಂಗಳಂ ಸಲುವ ಧಾತ್ರೀ ಚಕ್ರಮಂ ಛತ್ರಮಂ॥
[ಬ] ಲದಿಂದೊಪ್ಪುವ ನಾಮಮಂ ಸಕಲ ಭೂಸಭ್ಯಾಪೆನಲ್ಕೊಟ್ಟು [ನಿ]
ಶ್ಚಲ ಚಿತ್ತಂ ಸುಖಮಿರ್ಪುದೆಂದು ಪರಸುತ್ತಂ ಘಂಟಿ ಭೂಪಾಲನಂ ॥೧೨೦॥

ಕಂದ॥

ಮಂಗಳಿಗೆ ಬಳುವಳಿ ಪಾಲ್ಗೆ।
ಣ್ಣಿಗೆ ತಹನಿಧಿ ಸೀಮೆಯನ್ನು ವೇಂಕಟರಾಯಂ॥
ಬಗೆಗೆ ಬರ್ಪಂತೆ ರತ್ನಗ।
ಳ ಗಣಿತವ [ಂ] ಕೊಟ್ಟು ಮನ್ನಿಸಿದ ಸಂಭ್ರಮದಿಂ ॥೧೨೧॥

ಅತಿ ಮಂಗಳಮಯ ಮಾಗಲು।
ಚತುರ್ಥ ದಿನ ಸಾಂಗಮಾಗಿ ಬಹು ಭೋಜನದಿಂ॥
ವಿತತವಹ ನಾಗವಲ್ಲಿಯು।
ಮತಿವಂತಂ ರಚಿಸಿ ಕೆಲವು ದಿವಸಂ ಪೋಗಲ್ ॥೧೨೨॥

ಸಕಲ ನೃಪಾಲರ ಮನ್ನಿಸಿ।
ವಿಕಸಿತ ಮುಖ ಘಂಟಿ ಭೂಪಗಪ್ಪಣೆಯಿತ್ತರ್॥
ಪ್ರಕಟಿತವಹ ಬಿರುದುಗಳಂ।
ಸುಕರ ಭಟರ್ಗಿತ್ತು ಕಳುಪಿದರ್ನಲವಿಂದಂ ॥೧೨೩॥

ವಾರ್ಧಿಕ||

ರಾಯುರಪ್ಪಣೆಗೊಟ್ಟು ಕಳುಹುತಿರೆ ಕರಿತುರಗ ।
ಪಾಯುದಳವುುಂ ಧರಣಿ ಬೆಸಲಾದುದೆಂಬಂತೆ ।
ಸ್ತ್ರೀಯುದಿಂ ಬರುಬರುತೆ ಮಾರ್ಗದೊಳಗಿರುವ ದುರ್ಗಂಗಳನು ಭದ್ರ ಮಾಡಿ ॥
ಜೀಯು ಮುಝು ಭಾಪು [ಭಲೆ] ಧೀರು ಧೀರು [ರೆ] ಪೂತು ।
ರಾಯು ರಾವುತ ಘಂಟೆಣೇಂದ್ರಯೆನ್ನುತ ನುತಿಸ ।
ಲಾಯುತವಿ ಶ್ವೇತಪುರಕಂ ಬಂದು ಸುಖವಿರ್ದನಂದು ಕಾರುಣ್ಯಸಿಂಧು ॥೧೨೪॥

ಇಂತಿರಲ್ಕಾ ಪೋದೆಯುರಸಪ್ಪ ನಾಯುಕರು ।
ಧರಣಿಪತಿ ಘಂಟೇಂದ್ರನುರು ಸಾಹಸಕೆ ಮೆಚ್ಚಿ ।
ವರಕುವರಿ ವೀರವಾಂಬೆಯು ಮದುವೆಯುಂ ಮಾಡುತ್ತೈದೂರ ಸಹಿತ ವಿತ್ತು ॥
ಪರವು ವೈಭವದಿಂದ ಕಳುಪುತಿರೆ ನಿಜಪುರಕೆ ।
ತೆರ[ಳಿ] ಬಂದತಿಶಯುದಿ ಕೆಲವು ದಿನ ವಿುರಲವರ ।
ವರ ತನುಜ ತಮ್ಮರಸವೊಡೆಯು ತತ್ಪತ್ನಿ ರಾಮಾಂಬಾಜಿಯುುದರವಲ್ಲಿ ॥೧೨೫॥

ನೂತನ ಸುಪುತ್ರ ಮುುಮ್ಮಡಿಯು ಘಂಟೇಂದ್ರನೆಂ ।
ಬಾತ ಕಲಿ ಭೀಮು ಸಾಹ[ಸ] ಮಲ್ಲ ನೆರೆ ಕೆಳದಿ ।
ಭೂತಳಾಧಿಪನ ಗೆಲ್ದಿಕ್ಕೇರಿ ಬಾಗಿಲಂ ಹಾಕಿಸುತ ದಿನದಿನದೊಳು ॥
ಖ್ಯಾತಿವಡೆದಿರುತಿರಲ್ಕನಿತರೊಳ್ಪ್ರತಾಪ ಹ ।
ನ್ನೈತಂದು ರಾಯುರಂ ಮುರಿದವನಿಯುಂ ಸೆಳೆಯು ।
ಲಾ ತತುಕ್ಷಣಕೆ ಪೋಗುತ್ತವರ ಮೆಚ್ಚಿಸುತ ಸಲುವ ರಾಜ್ಯವನು ಪಡೆದು ॥೧೨೬॥

ಮತ್ತೇಭ।

ಸುಖದಿಂದಂ ಶಿರಿವಂತೆಯುಲ್ಲಿರುತಿರಲ್ಕಿಕ್ಕೇರಿ ವೀರೇಂದ್ರನು ।
ತ್ಸುಕದಿಂ ಭೇಟಿಗೆ ಬರ್ಪುದೆಂದು ಕರೆಸುತ್ತಂ ವೈಪರೀತ್ಯಂಗಳಂ ।
ದು ಕರಂ ಮಾಡಲು ಕಂಡು ತಪ್ಪಲವ ಸೀಳ್ದಲ್ಲಿರ್ಪ ಮತ್ತೇಭದಾ ।

ಮುಖಮಂ ಖಂಡಿಸಿ ದ್ವಾರದಿಂದ ಪೊರಟಂ ಘಂಟೇಂದ್ರ ಭೂಪಾ
ಲಕಂ ||೧೨೭ ||

**ಕಂದ||**

ಇನಿರಾಂತ ರಾಮರಾಜನ ।
ಸದೆಬಡಿವುತೆ ಸಕಲ ಸೈನ್ಯಮಂ ಖಂಡಿಸುತಂ ॥
ಅಧಿಕ ಬಲ ಘಂಟಣೇಂದ್ರಂ ।
ಮುದವೆತ್ತು [ಬ] ಲಕ್ಷ್ಮಪುರದೊಳಿರುತಿರ ಲಾಗಳ್ ॥೧೨೮॥

**ವಾರ್ಧಿಕ||**

ವೀರತ್ರಯಾನ್ವಿತಂ ಘಂಟೇಂದ್ರ ಭೂಪಾಲ ।
ನೋರಂತೆ ರಾಜ್ಯಮಂ ಪಾಲಿಸುತ್ತಿರೆ ಸೋದೆ ।
ಧಾರುಣಿಪ ರಘುನಾಥ ರಾಜ ಕರೆಸಲ್ಪೋಗಿ ಬನವಸೆಯ ಮಧುಕೇಶನ ||
ತೇರಿನುತ್ಸವದ ಲೋಕುಳಿಯಾಡುತಿರೆ ಕೂಡ ।
ದಾರಾಜ ಘಂಟೇಂದ್ರನೃಪಗೆ ತರಿಕೆರೆ ಹನುಮ ।
ಮಾಗಿದುತ್ತರವ ಕೊಡಲವನಂ ಪಚಾರಿಸುತ ಭೂರಿ ಬಿರುದನು ಪೊಗ
ಳಿಸಿ ॥೧೨೯॥

**ಕಂದ||**

ಭಲರೇ ಬೇಡರ ಗಂಡ ।
ಕಲಿಯುಗ ಕದನ ಪ್ರಚಂಡ ನೃಪ ಭೇರುಂಡ ॥
[ಭಲದಂಕ] ನೆಂದು ಪಾಠಕ ।
ರುಲಿವುತ್ತಂ ಪೊಗಳೆ ಘಂಟಣೇಂದ್ರಂ ಬಂದಂ ॥೧೩೦॥
ಬಂದಾನಂದ ದೊಳೊಂದುತ ।
ಬಂಧುರ ಸಿತಪುರದೊಳಂದು ಸಂತಸದಿಂದಂ ॥
ಇಂದಿರೆಯರಸನ ವೈಭವ ।
ದಿಂದಂ ಮುಮ್ಮಡಿಯ ಘಂಟಣೇಂದ್ರಂ ಚಂದ್ರಂ ॥೧೩೧॥
ಕೆಲವು ದಿನವಿದ್ದು ಭ್ರಮಣಂ ।
ತಲೆಗೇರಲ್ ಮೃತಿಯ ನೈದಲಾ ಘಂಟೇಂದ್ರಂ ॥
ಕೆಳದಿಯ [ ವ ]ರಾಗ ರಾಜ್ಯವ ।
ಸೆಳೆದರ್ಕ್ಯೋಂಟಿಗಳ ಕೆಡಹಿದರ್ಭರದಿಂದಂ ॥೧೩೨॥

**ವಾರ್ಧಿಕ॥**

ಮಾನನಿಧಿ ಮುಮ್ಮಡಿಯ ಘಂಟೇಂದ್ರ ಸುತರುಗಳ್ ।
ಪೌನ ಘಂಟಿಯುವೊಡೆಯ ಸಿದ್ದಪ್ಪವೊಡೆಯರಿವ ।
ಕೇನೆಂದು ಯೋಚಿಸುತ ಮಂತ್ರಿಗಳು ಸಹ ವಿಜಾಪುರ ಕೈದಿ ಪಾದುಶ ಹನ ॥
ಸಾನುರಾಗದಿ ಕಂಡು ಬಿಳಿಯಾನೆ ಮಣಿಖಚಿತ ।
ನಾನಾ ಸುವಸ್ತುವಂ ಕೊಟ್ಟು ಯಿವರಿಂಗೆ ಫರ ।
ಮಾನ ತಂದಿತ್ತರಾಕ್ಷಣ ನೋಡಿ ಸಂತಸಂವಳೆದ ಕೆಳದಿಯ ನೃಪಾಲ ॥೧೩೩॥

ಬಿಳಗಿ ಮನೆತನವ ಕೆಡಿಸುವುದಿಲ್ಲವೆಂದಾಗ ।
ಕೆಳದೀಶ್ವರಂ ಭಾಷೆಯಂ ಕೊಟ್ಟು ಬೀಡಾರ ।
ದೊಳಗಿಟ್ಟುಕೊಂಡಿರಲ್ಕನಿತರೊಳು ಪೆರ್ಬುಲಿಯು ಬಂದ ವಾರ್ತೆಯನು ಕೇಳಿ ॥
ಸೆಳೆದು ಖಡ್ಗವ ಸಿದ್ಧಭೂಪಾಲ ನಾಕ್ಷಣಂ ।
ಚಳಕದಿಂದಂ ಪೊಯ್ಯು ಕೆಡಪುತಿರೆ ಪುರಜನಂ ।
ಕಳ [ಲ] ಕನ್ನಡಿ ತಳಿರ್ದೋರಣ ಗಳಿಂದಿದಿರ್ಗೊಂಡ ರತಿಯುತ್ಸವ ದೊಳು ॥೧೩೪॥

**ಕಂದ॥**

ಹೇಜೀಬರ ಮುಖ ವಚನವ ।
ಸೋಜಿಗ ವಾರ್ತೆಯನು ಕೇಳಿ ಕೆಳದಿಯ ಭೂಪಂ ॥
ವ್ಯಾಜದಿಂ ನಕ್ಕು ದೋಷಾಂ ॥
ಭೋಜದ ಪೋಲ್ವೀರಭದ್ರ ನಾಯಕನಾಗಳ್ ॥೧೩೫॥

**ಮತ್ತೇಭ॥**

ಪುಲಿಯಂ ಕೊಂದುದ ಕೇಳ್ದು ತಾಳ್ದು ಮನದೊಳ್ಮಾತ್ಸರ್ಯ ಮಂ ಕೋಪದಿಂ ॥
ಕೊಲಬೇಕೆಂದುರೆ ಕೃತ್ರಿಮಾಂಬರಗಳಂ ತಾಂ ಕೊಟ್ಟು ತಾತ್ಪರ್ಯದಿಂ ॥
ಕಳುಪಲ್ಪೋದ ತತುಕ್ಷಣಕ್ಕೆ ಸುರಲೋಕಕ್ಕೈದಿದಂ ಸಿದ್ಧಭೂ ।
ವಲಯಾಧೀಶ ಚತುರ್ದಶಾಬ್ದ ತರುಣಪ್ರಾಯಂ ಸಮಂ ತೊಪಿರಲ್ ॥೧೩೬॥

**ಕಂದ||**

ಸಿದ್ದಪ್ಪ ನಾಯಕರ ಸತಿ ।
ಸಿದ್ಧಾಪುರವೆಂಬ ಪಟ್ಟಣವ ಕಟ್ಟಿಸುತಂ ॥
ಸಿದ್ಧಿ ವಿನಾಯಕನನ್ನು ಪ್ರ ।
ಸಿದ್ಧಿಯ ಸಂಸ್ಥಾಪಿಸಿದರು ಬುಧ ಸನ್ಮತದಿಂ ॥೧೩೭॥

**ಮಲ್ಲಿಕಾಮಾಲೆ॥**

ಆತನಗ್ರಜ ಮೌನ ಘಂಟೆಯ ಭೂಪ ಸಾಹಸ ಪಾರ್ಥ ಸಂ ।
ಪ್ರೀತಿಯಿಂದಲಿ ಬಾಳುಗೋಡನು ಕಟ್ಟಿಸುತ್ತೆ ತ್ರಿಲೋಕವಿ ।
ಖ್ಯಾತ ಚೆನ್ನಮ ದೇವಿಯಂ ವೈವಾಹವಾಗುತೆ ಸಂತತಂ ।
ಭೂತಳಾಧಿಪರನ್ನು ನಂಬದೆ ತಾನಿರಲ್ಕತಕ್ಕಾಲದೊಳ್ ।೧೩೮॥

**ಚಂಪಕ॥**

ತುರುಕರ ದಂಡು ಬಂದು ಕೆಳದೀಶನ ರಾಜ್ಯವ ಕಟ್ಟಿಕೊಂಡು ಸಂ ।
ಗರಕಿದಿರಾಂತರಂ ಮುರಿದು ಕೋಂಟೆಗಳಂ ಬಲಿಸುತ್ತೆ ಪಾದಶಾ ।
ಹರು ಬರಲಾಕ್ಷಣಕ್ಕವರ ದರ್ಶನದಿಂದ ಸಲಾಹವಾಗುತೀ ।
ಧರೆಯನು ಪಾಲಿಸುತ್ತೆ ಸುಖಮಿರ್ದನು ಮೌನಸು ಘಂಟಿಭೂವರಂ॥೧೩೯॥

**ಕಂದ ॥**

ಈ ವಿಧದಿಂದಂ ಘಂಟಿಯ ।
ಭೂವರ ಬಹುಕಾಲ ಮಿರ್ದು ಮೇಣಲ್ಲಿಂದಂ ॥
ದೈವಾಧೀನ ಮದಾಗ ।
ಲ್ಕಾ ವೇಣುಪುರೀಶಗಾಯ್ತು ಸಕಲೋರ್ವರೆಯುಂ ॥೧೪೦॥

**ವಾರ್ಧಿಕ॥**

ಕೆಳದಿಯ ಶಿವಪ್ಪ ನಾಯಕರಾಗ ಶುಭ್ರಪುರ ।
ದಿಳೆಗಧಿಕರಿಲ್ಲೆನೆ ಕುಮಾರೆತಿಯು ಘಂಟಿಮ್ಮ ।
ಸಲುವುದೆಮಗೀ ರಾಜ್ಯಮೆಂದು ಬಾಳ್ಗೋಡಿಂಗೆ ಬಂದು ವಿಧಿದೇವಿಯಂತೆ ॥
ಪ್ರಳಯಕಾಲದ ದುರ್ಗೆಯಂತೆ ಬಾಧಿಸುತಿರಲ್ ।
ಚಳಕದಿಂ ಸಾಮಾಜಿಕಗೊಡಿ ಕ್ಯಾದಗೆಯ ।
ನಿಳಯದಿಂ ಕುವರನಂ ತಂದು ಪಟ್ಟವಗಟ್ಟಿ ನೈಯಿಕ್ಕಿ ಕಾಣ್ಕೆಯಿತ್ತು ॥೧೪೧॥

**ಚಂಪಕ॥**

ಸಲು [ವ] ಶಿವಪ್ಪ ನಾಯಕರುಮೆಂಬಭಿಧಾನವನಿಟ್ಟು ಚಾರು ಮಂ।
ಗಳಮಯ ವಾದ್ಯಘೋಷ ಮೆಸೆಯಲ್ಬಹು ಶೌರ್ಯಮುದಗ್ರ ಧೈರ್ಯದಿಂ॥
ಸುಲಲಿತ ಶಸ್ತ್ರ ಶಾಸ್ತ್ರ ವರಗಾನ ಚಮತ್ಕೃತಿ ವಿದ್ಯದೇಳ್ಗೆಯಿಂ।
ವಲಿ ಧರೆಯೊಳ್ಪ್ರಸಿದ್ಧಿ ವಡೆದಂ ಪರಮೇಶ್ವರ ಪಾದಸೇವಕಂ॥೧೪೨॥

**ಕಂದ॥**

ಈ ನರನಾಥನ ಸತಿಯು।
ಭೂರ್ನುತ ಶಾಂತಮ್ಮ ದೇವಿ ಗೌರಮ್ಮಾಜಿಗ॥
ಳೀನೆಂಬೆ ನಮುವು ಚೆಲುವಿನ।
ಸೋನೆಗಳೆನೆ ಸೊಗಯಿಸಿರ್ದರತಿ ಮುದದಿಂದಂ॥೧೪೩॥

**ಶಾರ್ದೂಲ॥**

ಒಂದಾನೊಂದು ದಿನಂ ಶಿವಾಖ್ಯಧರಣೀ ಕಾಂತಂ ಹಯಾರೂಢದಿಂ॥
ಇಂದ್ರಾವಾಸದೊಳ್ಬೈದಲುಂ ಮಿಗಿಲು ಶಾಂತಮ್ಮಾಜಿ ಜಂಬೂರ ಸಂ।
ಬಂಧ [ಂ] ದೋರುವ ಪುತ್ರನಂ ಬಗೆವುತಂ ಸ್ವೀಕಾರಮಂ ಮಾಡು[ತಂ]।
ತಂದುಂ ಪಟ್ಟವ ಕಟ್ಟುತಿಮ್ಮಡಿ ಶಿವಪ್ಪಾಖ್ಯಾನ ತಾಂ ರಂಜಿಕುಂ॥೧೪೪॥

**ಕಂದ॥**

ಈ ಭೂಪಾಲನ ಸತಿಯರ್।
ಸೌಭಾಗ್ಯದ ಮೂರ್ತಿಗಳ್ಸದಾ ಪತಿಭಕ್ತಿ ಯು॥
ಶೋಭರಿತರ್ ಶೃಂಗಾರರ।
ಸಾಭರಣರ್ ಸೊಗಯಿಸಿರ್ದ ರತಿಸಂಭ್ರಮದಿಂ॥೧೪೫॥

**ವಾರ್ಧಿಕ॥**

ಧರಣೀಶ ನಿಮ್ಮಡಿ ಶಿವಪ್ಪ ನಾಯಕರು ಸಿತ।
ಪುರವ ಕಟ್ಟಿಸಿ ರಾಜಮಂದಿರವ ರಚನೆಯಿಂ।
ವಿರಚಿಸುತ ಸುಖಮಿರಲು ಪಲ ಕೆಲವು ಕಾಲಾಂತರ [ಂ] ಪೋಗುತಿರಲು ಮುದದಿ॥
ಚರಿಸುತಿರೆ ಗೋಪಾಲಪುರದೊ ಳೈಕ್ಯಮದಾಗೆ।
ವರಪತ್ನಿಯುಸಹಿತ ವೀರಸ್ವರ್ಗವನೈದು।
ತಿರಲು ಶಾಂತಮ್ಮಾಜಿಯುವರು ಜಂಬೂರ ಶಾಂತಯ್ಯನ ಕಿರಿಯ ಪುತ್ರನ॥೧೪೬॥

ಸ್ವೀಕಾ [ರ] ವಂ ಮಾಡಿ ಪಟ್ಟಮಂ ವಿರಚಿಸುತ।
ಲೋಕೈಕ ಸೋಮಶೇಖರನೆಂಬ ನಾಮದಲಿ।
ಭೂಕಾಂತ ಕುಲತಿಲಕ ಸುಂದರ ತಿರಸ್ಕೃತ್ಯ ಕಂದರ್ಪ ಲಾವಣ್ಯನು।
ಸಾಗಾರದಿಂ ಚೆನ್ನಮಲ್ಲಾಂಬೆ ಮದುವೆಯನ।
ನೇಕ ಸ್ವೈಭ [ವ] ದಿಂದ ಕೈಕೊಂಡು ಸಕಲ ವಿ।
ದ್ಯಾಕಲಾ ಪ್ರೌಢರೆಂದೆನಿಸಿ ಸೊಗಸುತ್ತಿರಲು ವಂಶ ಪಟ್ಟಣಕೆ
ಹೋಗಿ ॥೧೪೭॥

ಮ॥ಸ್ರ॥
ವಿಲಸತ್ಸೌಧಾಂತರಾಳಸ್ಥಿತ ಮಣಿ ಖಚಿತಾಸೀನ ದೊಳ್ಕಂಡಿ
ಸುತ್ತಾ ॥
ಗಲು ಚೆನ್ನಮ್ಮಾಜಿ ಸೇನಾಪತಿ ಸಚಿವ ಜನಾನೀಕದಿಂ ದಾನದಂತಾ।
ವಲನಂ ನೋಡುತ್ತಿರಲ್ತತ್ಸಮಯದೊಳೆ ಹಯಾರೂಢನಾಗುತ್ತೆ ಪೋದಂ।
ಕಲಿಯೆಂತೋ ತದ್ಗಜೇಂದ್ರಾನನದ ಸರಿಸಕಂ ಲೋಕಕಾಶ್ಚರ್ಯ
ಮಾಗಲ್ ॥೧೪೮॥

ಪಂಚಚಾಮರಂ॥
ತುರಂಗ ವೇಗದಿಂದ ಮಿಂತುರಂಗ ಸರ್ಜಪಾರ್ಕೆಯಿಂ।
ತರಂಗದಂತೆ ನಿಲ್ಲಲಾ ಕರೀಂದ್ರ ಪೊದ್ದ ವಸ್ತ್ರದಾ।
ಸೆರಂಗನೌಕೆ ರಾವೃತ ರ್ಕರಂಗಳೆತ್ತಿ ಭಾಪೆನಲ್।
ವರಾಂಗ ನಾಕ್ಷಣಕ್ಕೆ ಪಿಂತಿರುಂಗಿಸಿರ್ದ ನಶ್ವಮಂ ॥೧೪೯॥

ಕಂದ॥
ಪನ್ನೆರಡು ಮೆಟ್ಟಿನಗಳವ।
ಸನ್ನುತದಿಂ ಪಾರಿ ಬಂದು ನಿಲ್ಲಲ್ಕೆಳದೀ॥
ಚೆನ್ನಮ್ಮಾಜಿಗಳಾಗಳ್।
ಮನ್ನಿಸಿ ವೈದಡವಿ ಮೆಚ್ಚುತುಡುಗೊರೆಯಿತ್ತರ್ ॥೧೫೦॥

ವಾರ್ಧಿಕ॥
ಈ ಪ್ರಕಾರದ ಭುಜಬಲ ಪ್ರತಾಪಗಳಿಂದ।
ಲಪ್ರತಿಮನೆಂದೆನಿಸಿ ಕ್ಷಿಪ್ರದಿಂ ಸಿತಪುರವ।
ಸುಪ್ರೇಮದಿಂದ ಮಂತ್ರಿ ಪ್ರಮುಖ ಸಕಲ ಸೈನ್ಯ ಪ್ರಜಾಪಾಲನೆಗಳ॥

ಸುಪ್ರಯೋಜನನಗಳಿಂ ಸ್ವಪ್ರಕಾಶದೊಳಾಳು ।
ತ ಪ್ರಚುರ ಸರ್ವ ಲೋಕ ಪ್ರಸಿದ್ಧನು ಸತ್ಕ।
ವಿ ಪ್ರಕರ ಚಿಂತಾಮಣಿ ಪ್ರೋಲ್ಲಸತ್ಸೋಮಶೇಖರಂರಾಜಿಸಿದನು ॥ ೧೫೧ ॥

**ಕಂದ॥**

ವೀರವ್ಯಾಜಿಯ ಮದುವೆಯ ।
ಧೀರಂ ತಾನಾಗಿ ಸರ್ವ ಭೋಗದೊಳಿರ್ದಂ ॥
ನಾರೀಮಣಿ ಯಿರ್ವರ ಶೃಂ ।
ಗಾರ-ಸರೋವರ ವಿಲಾಸ ರಾಜಮರಾಳಂ ॥೧೫೨॥

**ವಚನ॥**

ಇಂತು ಸೋಮಶೇಖರ ನರೇಂದ್ರ ಚಂದ್ರಂ ಇರುತ್ತ ಮಿರೆ, ಪೂರ್ವ ಸಂಬಂಧದ ಜಂಬೂರ ಶಿವಪ್ಪವೊಡೆ [ಯ] ರ ಕುವರನಂ ತಂದು ವೀರ ವ್ಯಾಜಿಯುವರಣಾಗನೆಂದೆನಿಸಿ ಸಲಹುತ್ತ ಮಿರ್ದರದೆಂತೆನೆ ॥ ೧೫೩ ॥

**ಉತ್ಪಲ॥**

ದುರ್ಘಟವಾಗಿ ಶತ್ರುಗಳು ಸೊಕ್ಕಿರಲಾರಿಗೆ ತೀರದೆಂದು ನೀ।
ನುಗ್ರತೆಯನ್ನು ಕಂಡು ಕರೆದಪ್ಪಣೆ ಗೊಟ್ಟು ತತುಕ್ಷಣಕ್ಕೆ ನೀಂ।
ವ್ಯಾಘ್ರನ ಪೋಲ್ವಚಾರಿಸುತ ಸೈವಶವಾಡಿದ ಸಾಹಸಕ್ಕೆ ರಾ।
ಜಾಗ್ರಣಿ ಮೆಚ್ಚಿ ಗೊಟ್ಟ ಭಲರೇ ಭಲ ಘಂಟಿ ಸುರಾಜ ವಿಕ್ರಮಾ॥೧೫೪।

**ಚಂಪಕ॥**

ಬಲು ಭುಜ ಸಾಹಸತ್ವದ ಸಮರ್ಥತೆ ವೆಂಕಟರಾಯ ಮೆಚ್ಚುತಂ।
ಚೆಲುವ ಕುಮಾರಿಯಂ ಕನಕ ಭೂಷಣ ಹೀರ ಕಿರೀಟ ಕರ್ಣಕುಂ।
ಡಲ ಭುಜ ಕೀರ್ತಿ ಬಾಸುರಿ ತೊಡರ್ ಝಣರೆಂಬುವ ಕಂಕಣಂಗಳಂ॥
ಒಲಿವೊಲಿದಿತ್ತನೈ ನಿನಗೆ ಘಂಟಿ ಸು ಭೂವರ ಶತ್ರುಸಂಹರಾ ॥೧೫೫॥

ಬಲುಮೆಯ ಕಾಲ ಪೆಂಡೆವುಹು ಮಾನ್ಗರಿ ಭಾರಿ ನಗಾರಿ ಮೇಕುವಂ।
ಗುಲಿಪ ಸುರಾಂತ ಸತ್ತಿಗೆ ನಿಶಾನೆಯು ಮಾಯ್ಮರು ತಾಪು ಸಿಂಹನಿಂ।
ದುಲಿವ ಸುಡಿಕ್ಕೆ ವೀರ್ಜಡೆಯು ಶಂಖ ಸುಚಕ್ರವು ರಾಜ ರಾಜನಿಂ।
ದಲಿ ಪಡೆದಾತ ಘಂಟಿಯು ನರೇಶ್ವರ ಭೀಕರ ಶತ್ರು ಸಂಹರಾ ॥೧೫೬॥

**ಶಾರ್ದೂಲ॥**

ಶ್ರೀಸಾಮ್ರಾಜ್ಯದ ಭೋಗದಿಂ ವಿಭವದಿಂದಾನಂದದಿಂ ಚಂದದಿಂ।
ದೈಸೂರೊಳ್ಸು ಖಮಿರ್ದ ರಾಯರೆಡೆಗಂ ಬಂದಾಕ್ಷಣಂ ಸೊಕ್ಕಿದಾ।

ದೇಶಾಧೀಶರ ಗೆಲ್ದು ಕೈವಶವ ಮಾಳ್ದು ಕಾರ್ಯದಿಂಪೆನ್ನಗುಂ।
ಡೀ ಸಿಂಹಾಸನ ರಾಜ್ಯವನ್ನು ಪಡೆದೈ ಘಂಟೇಂದ್ರ ಭೂಪಾಲಕಾ ||೧೫೭||

**ಮತ್ತೇಭ||**

ಭಲರೇ ಬೇಡರ ಗಂಡ! ಮೂರ್ಮಡಿನೃಪಾ! ಕಸ್ತೂರಿ ಕೋಲಾಹಲಾ!।
ಮಲೆವಾ ಮನ್ನರ ಶೂಲ! ರಾವುತ ಮಹಾ ದುರ್ಗಾಟವೀ ಭಂಜನಾ!।
ಛಲದಂಕಾ! ರಿಪುನಾಗಸಿಂಹ! ಧಣಿರೇ ನಿನ್ನಂತೆ ಭೂಭಾಗದೊಳ್।
ಬಲು ಧೀರ [ರ್] ಬಿರುದಾಂತರೇ ಪರಿಕಿಸಲ್, ಘಂಟೇಂದ್ರ ಭೂಪಾಲಕಾ ||೧೫೮||

---

## ಎರಡನೆಯ ಆಶ್ವಾಸ.

**ಕಂದ||**

ವೀರಸಿದ್ಧಿ ಸೋಮಶೇಖರ।
ಭೂರಮಣನ ಪತ್ನಿ ವೀರಮಾಂಬಿಕೆಯೆಂಬಳ್ ||
ಸಾರತರ ಗರ್ಭಜನಿತನು।
ನಾರಯಶಂ ದ್ವಿಗುಣ ಸೋಮಶೇಖರನಾದಂ ||೧||

**ಮತ್ತೇಭ||**

ನವರಾಜ್ಯಾದಿ ವಿಶೇಷಭೋಗ ಸುಖಸಾಮ್ರಾಜ್ಯಂಗಳಂ ಮಂಗಳೋ।
ತ್ಸವ ಸತ್ಪುತ್ರ ಕಳತ್ರ ಭಾಗ್ಯದೊದವಂ ಶೌರ್ಯಾರ್ಥ ಸಂಪ್ರಾಪ್ತಿಯುಂ।
ರವಿಯುಂ ಶೋಚ್ಚದೊಳಿರ್ದ ಚಂದ್ರಗುರುಸೌಮ್ಯರ್ [ಶುಕ್ರ] ಲಗ್ನಾಧಿಪರ್।
ಭುವನಾಧೀಶ್ವರನಪ್ಪನೆಂದಿನಿತುಮಂ ಪ್ರಾಕಟ್ಯದಿಂ ಸೂಚಿಸರ್ ||೨||

**ಕಂದ||**

ಅನಿತರೊಳಾ ದೈವಜ್ಞರ್।
ಜನನದ ಬಲದೇಳ್ಗೆ ಯೋಗದತಿಶಯ ದಿರವಂ।
ಇನಿತುಳಿಯದಂತೆ ಪೇಳ್ದರ್।
ಜನತಾಧಿಪ ಸೋಮಶೇಖರೇಂದ್ರಂ ಗಾಗಳ್ ||೩||

ಪ್ರೀತಿ ಕೈವಿಃಕ್ಕು ನೃಪನಿಂ ।
ಜಾತೋತ್ಸವ ವೆಸಗಿ ಮಾನಸನ್ಮಾನಗಳಂ ।
ಖ್ಯಾತಿಗೆ ನೆಲೆಯುಪ್ಪಂತಿರೆ ।
ಭೂತಳವೊಳ್ಕೀರ್ತಿಕಾಂತೆ ಗಧಿಪತಿಯಾದಂ ॥೪॥

ರೂಪದೊಳು ಸ್ಮರಗೆ ದ್ವಿಗುಣಂ ।
ಚಾಪದ ವಿದ್ಯದೊಳು ಪಾರ್ಥನಿಂ [ದಂ] ದ್ವಿಗುಣಂ ॥
ಸ್ವಾಪತೇಯು [ದೊ] ಳ್ಧನದಗೆ ।
ಭೂಪರೊಳಂ ಸಾಹಸಕ್ಕವಿಾತನೆ ದ್ವಿಗುಣಂ ॥೫॥

ಎವ್ಮನ್ವಯುದೊಳ ವಿುವನತಿ ।
ಪೆರ್ಮೆಯು ಸಾಮ್ರಾಜ್ಯ ಸೌಖ್ಯ ಶೌರ್ಯದೊಳೀತಂ ॥
[ಇ] ಮ್ಮಡಿಯೈಸಿರಿ [ಯು] ದರಿಂ ।
ದಿಮ್ಮಡಿಯಿಂ ಸೋಮಶೇಖರಂ ಪೆಸರಿಂದಂ ॥೬॥

ಬಾಲ್ಯೋಚಿತ ಭೂಷಣ ನ್ಕೈ ।
ಮಾಲ್ಯದ ದೇವಾಂಗ ವಸ್ತ್ರಮಂ ಧರಿಸಿದ ಕೈ ॥
ವಲ್ಯ ಪತಿಯುಂತಿರೀ ಸಾ ।
ಶೀಲ್ಯದ ಶೈಶವದೊಳೊಪ್ಪಿದಂ ನೃಪತನಯಂ ॥೭॥

ಶೈಶವ ಕಾಲದೊಳಂ ತಾ ।
ನಾಶಿವನಂ ಸ್ಮರಿಸಿ ಪೂಜಿಸಂ ಮುದದಿಂದಂ ॥
ಆಶಾವಿರಹಿತ ಮನದಿಂ ।
ಶ್ರೀಶಂ ವರ ಸೋಮಶೇಖರಂ ಪುಷ್ಪಗಳಿಂ ॥೮॥

ವಿಕ್ರಮದಿಂ ದರಿನೃಪರ ಪ ॥
ರಾಕ್ರಮವಂ ಕೆಡಿಸುತಿದೆಯು ಮೆಟ್ಟುವ ತೆರದಿಂ ॥
ಶಕ್ರಸಮ ಭೋಗಲೀಲೆಯೊ ।
ಳಾಕ್ರಮದಿಂದೊಂದುಯೆರಡೆನು ತ್ರಡಿಯಿಟ್ಟಂ ॥೯॥

ಬಾಲನಭೋಮಣಿ ನಭಮಂ ।
ಸ್ವಾಲಂಬಿತ ಕರಗಳಿಂದೆ ಬೆಳಗುವ ತೆರದಿಂ ॥
ಪಾಲಿಸಿ ಬೆಳಗಿದ ಧರೆಯಂ ।
ಲಾಲಿತ ಮೃದು ಕರಗಳಿಂದವಿಾ ನೃಪತನಯಂ ॥೧೦॥

ವಾಸವ ವೈಭವ ನೀನಿರೆ।
ಭೂಸುಪತಿಯು ಭಾರವೇತಕೆನಗೆಂ ದಾಗಳ್ ॥
ಕೇಸರಿ ಪೀಠಾರೂಢಂ।
ಗೋಸರಿಸದೆ ಪಟ್ಟಗಟ್ಟಿದಂ ನಿಜ ಜನಕಂ ।೧೧॥

**ಮತ್ತೇಭ॥**

ಭುವನಾಧೀಶ್ವರರೈದೆ ಬಂದು ಮುದದಿಂ ನೈರ್ಮಲ್ಯರತ್ನಂಗಳಿಂ।
ಸ್ತವನೀಯೋಚಿತ ವಸ್ತುವಾಹನಗಳಂ ತಂದಿತ್ತು ಸಂಪ್ರೀತಿಯಿಂ।
ರವಿಯಿಂದತ್ಯಧಿಕ ಪ್ರತಾಪ ದೊದವಿಂದೀ ರಾಜ್ಯಮಂ ಪಾಲಿಸೆಂ।
ದವರೆಲ್ಲ ರ್ಪಿರಿದಾದುಪಾಯನಗಳಂ ಪ್ರತ್ಯೇಕದಿಂ ಮಾಡಿದರ್ ॥೧೨॥

**ಕಂದ॥**

ದಾನ ಸನ್ಮಾನ ವಿಧಿಯಿಂ।
ಭೂನಾಥರ ವಂದಿಜನಗಳಂ ಮಂತ್ರಿಗಳಂ ॥
ಮಾನನಿಧಿ ಸೋಮಶೇಖರ।
ತಾನುಡುಗೊರೆಯಿತ್ತು ಮನ್ನಿಸಿದ ನಾಕ್ಷಣದೊಳ್ ।೧೩॥

**ವಚನ॥**

ಇಂತಿರುತ್ತಿರಲನಂತರಂ—

**ಕಂದ॥**

ಶಿವಶರಣನಾದ ಕಾರಣ।
ಶಿವಲಿಂಗದೊಳೈಕ್ಯವಾಗೆ ನಿಜಪಿತೃಗಳ್ [ತಾಂ] ॥
ಭುವನನುತೆ ವೀರಮಾಂಬಿಕೆ।
ಸುವಿನಯದಿಂ ಸುತನ ತೊಡೆಯೊಳಿಟ್ಟಿಂತೆಂದಳ್ ।೧೪॥
ಪಿಂತಣ ಶಾಪ ವಿಮೋಚನ।
ಮೆಂತುಂ ನಿಮಗಾಗಲೆಂದು ನೆರೆನುಡಿವೃತ್ತಂ ॥
ಮುಂತೆ ಸತ್ಪುತ್ರ ಪೌತ್ರರ।
ಸಂತತಿಗಭಿವೃದ್ಧಿಯಾಗ ಲೆಂದಿಂತೆಂದಳ್ ॥೧೫॥

**ಸ್ರಗ್ಧರಾ॥**

ಸದ್ಧರ್ಮ ಶ್ರೀ ಬಲಾಯುರ್ಧನ ಕನಕ ಸಮಾರೋಗ್ಯ ಸೌಭಾಗ
ಭಾಗ್ಯ ಭಾಗ್ಯಂ।

ಬುದ್ಧಿಶ್ರೀಯೋ ಯಶೋಮಂಗಲ ಸುಖ ಶುಭ ತಾರುಣ್ಯ ನೈಪುಣ್ಯ ಪುಣ್ಯಂ ।
ಬನ್ಧಂ ಗೋತ್ರಂ ಕಳತ್ರಂ ವಿಮಲ ಗುಣಗಣಂ ಪ್ರಾಜ್ಯ ಸಾಮ್ರಾಜ್ಯ ವರ್ಗಂ ।
ವೃದ್ಧಿಸ್ಸ್ವಸ್ತಿ ಪ್ರಮೋದಂ ಫಲಿಸುಗೆ ನಿಮಗಿಂತೆಲ್ಲಮುಂ ನಿಚ್ಚ ಮೆಂದಳ್ ॥೧೬॥

**ಕಂದ॥**

ಪರಕೆಯ ನಿತ್ತು ಕುವರನ ।
ಸರಸಿಜದಳನೇತ್ರೆ ವದನಮಂ ಚುಂಬಿಸುತಂ ॥
ನೆರೆದಂಬುಲ ವಿತ್ತಾಗಳ್ ।
ಭರದಿಂದಮುರ್ದಪ್ಪಿ ಮುದ್ದಿಸುತ್ತಿಂತೆಂದಳ್ ॥೧೭॥
ಹರನೊಡನೈಕ್ಯವನೈದಿದ ।
ಸ್ಮರರೂಪಂ ಪ್ರಾಣಕಾಂತನೆಂದೆನುತಂ ತಾ ॥
ಸಿರವೆ ಸಹಗಮನದಿಂದಾ ।
ತರುಣೀ [ಮಣಿ] ವೀರ ಮಾಂಬೆಯೈಕ್ಯಂ ಬಡೆದಳ್ ॥೧೮॥
ವಲ್ಲವಮ್ಮಾಜಿಯು ತನ್ನಯ ।
ವಲ್ಲಭನೊಡನೈಕ್ಯವಿಧಿಯ ನೆಸಗುವೆನೆನಲಂ ॥
ದೆಲ್ಲರ್ ಬೇಡೆಂದಾಗಳ್ ।
ಮೆಲ್ಲನೆ ಬಾಲಕನ ಕಯ್ಯೊಳಿತ್ತರ್ಮ್ಮುದದಿಂ ॥೧೯॥

**ಕಂದ॥**

ವಾಣಿಯ ಪೂಜಿಸಿ ಮುನ್ನಂ ।
ಜಾಣಶಿರೋಮಣಿಗೆ ವಿದ್ಯೆಮಂ ಪೇಳಲೊಡಂ ॥
ಮಾಣದೆ ಕಲಿತೆಲ್ಲಮುಮಂ ।
ಕ್ಷೋಣೀಶ್ವರ ಸೋಮಶೇಖರಂ ತಾನೆಸೆವಂ ॥೨೦॥

**ಚಂಪಕ॥**

ಕರಿತುರಗಾದಿ ವಾಹನಮನೇರುವ ಕೃತ್ಯದ ಕೌಶಲಂಗಳೊಳ್ ॥
ಪಿರಿದೆನಿಸಿರ್ದ ಕಾವ್ಯವರ ನಾಟಕ ಕರ್ಕಶ ತರ್ಕದೇಳ್ಗೆಯೊಳ್ ॥
ಸ್ಮರನ ರಹಸ್ಯ ತಂತ್ರಗಳೊಳಂ ಲಿಪಿಶಾಸ್ತ್ರದ ಭೇದ ಕೃತ್ಯದೊಳ್ ॥
ಪರಿಣತನಾಗಿ ಪಾಸಟಿಯು ಮಿಲ್ಲೆನಲೊಪ್ಪಿದ ಸೋಮಶೇಖರಂ ॥೨೧॥

**ಕಂದ**॥

ಭರತನೊಳಂ ಗಣಿತದೊಳಂ ।
ಗುರುತರ ಛಂದೋವಿಶೇಷ ಕೃತಿರಚನೆಯೊಳಂ ॥
ವರಚಾಪದ ವಿದ್ಯೆಯೊಳಂ ।
ಧುರಧೀರಂ ಸೋಮಶೇಖರಂ ನೆರೆನಿಪುಣಂ ॥೨೨॥

ಭೋರ್ಗನೆ ಮುಂದಕೆ ನೆಗೆಯಲ್ ।
ಬಗ್ಗಿಸಿ ಪಿಡಿದೆತ್ತಿ ವಾಜಿಯಂ ಸನ್ನೆಗಳಿಂ ॥
ಮುಗ್ಗಲನೆ ಮುಟ್ಟಲಾಕ್ಷಣ ।
ಸಗ್ಗವ ನೆರೆಮುಟ್ಟುವಂತೆ ಲಂಘಿಸಿ ತಾಗಳ್ ॥೨೩॥

ದಕ್ಷಿಣ ವಾಮದ ಗೋಲಿಂ ।
ಕಕ್ಷದ ಮಡಸನ್ನಿಯಿಂದೆ ದೂವಾಳಿಯುಮಂ ॥
ಪಕ್ಷಿರೇಚಿತದಿ ಪೋದುದು ।
ಲಕ್ಷ್ಮೀಧರನಂತೆ ತೋರಿದಂ ನೃಪತಿಳಕಂ ॥೨೪॥

**ಶಾರ್ದೂಲ**॥

ಲಾವಣ್ಯಂ ತಲೆದೋರಿ ನೇತ್ರಯುಗದೊಳ್ ಚಾಂಚಲ್ಯಮುಂ ಕಾಯ್ದೊ ॥
ಳ್ಹಾವಳ್ಯಂ ಕಿರಿದಾಗಿ ಶೋಣದಿರವಂ ಕೈಕೊಂಡು ತಾಂ ವ್ಯಾಪಿಸು ॥
ತ್ತೀವರ್ಣಂ ಚಿರವಾಗೆ ಶಾಣವಿಧಿಯಿಂ ನೋಹಿಸ್ತ ಕಿತ್ತಂತುವಿೂ ।
ಭಾವಂ ಸೂಚಿಸೆ ಸೋಮಶೇಖರ ನೊಳಂ ಚೆಲ್ವಾದುದಾ ಯವ್ವನಂ ।೨೫॥

**ಕಂದ**॥

ಕಪ್ಪೇರುವ ಕೆನ್ನೆಗಳಿಂ ॥
ತುಪ್ಪಳು ವಿೂಸೆಗಳ ಚೆಲ್ವಿನಿಂ ಬಗೆಯೊಳು ಬಂ ॥
ದೊಪ್ಪುವ ವಿಲಾಸದೊದವಿಂ ।
ಮುಪ್ಪುರಿ ವಡೆದತ್ತು ಮೋಹವೆರಕಂ ನಿಜದಿಂ ॥೨೬॥

**ಮತ್ತೇಭ**॥

ದಿವಸಾಧೀಶ್ವರಗೆಂತು ಸಾಸಿರಕರಂ ಪ್ರದ್ಯುಮ್ನಗಂ ಚೈತ್ರಮುಂ ।
ಪವನಂಗಂ ವರಶೈತ್ಯ ಸೌರಭ ಮು [ಮಾ] ಮಂದತ್ವಮುಂ ಚಂದ್ರಗಂ ।
ಭುವನಸ್ತುತ್ಯ ಮೆನಿಪ್ಪ ಸತ್ಕಲೆಗಳೆಲ್ಲಂ ಪೂರ್ಣ ಮಾದಂದದಿಂ ।

ಸ್ತವನೀಯೋಚಿತ ಸೋಮಶೇಖರ ನೃಪಂಗಂತಾಯ್ತು ಸೌಂದ
ರ್ಯಪರ್ವಮುಂ ॥೨೭॥

**ಚಂಪಕ॥**

ನಸುನಗೆ ಸೊಕ್ಕೆ ಕುಂದರದನದ್ಯುತಿಯಿಂ ದ್ವಿಗುಣತ್ವ ವೈದಿ ವ್ಯಾ।
ಪಿಸುತೆ ಮುಖೇಂದು ಗಂದು ನವಕೌಮುದಿಯೋಳ್ಗಿಯು ನುಂಟುಮಾಡುತಂ।
ಮಿಸುಕದೆ ನೋಳ್ಪ ನೋಟಕರ ನೇತ್ರ ಚಕೋರಗಳ್ಗೆ ತೃಪ್ತಿಯುಂ।
ಪಸರಿಸೆ ಸೋಮಶೇಖರನ ಯವ್ವನ ದೇಳ್ಗೆಯು ನೆಂತುಬಣ್ಣಿಪೆಂ ॥೨೮॥

ಸೊಗಸಿನ ನೋಟ ಬೇಟ ಕಡು ಗಾಡಿಯು ಮೆಲ್ಲುಲಿ ಲಲ್ಲೆ ಕೌತುಕಂ।
ಮಿಗುವತಿ ನೇಹ ಸೊಂಪಡರುತೊಪ್ಪುವ ಕಂಪಿನ ಕಾಮ ಕೈತವಂ।
ಬಗೆಯದ ಜಾಣ್ಮೆ ಭಾವದೆರಕಂ ಪರಿಘಟ್ಟಿಯು ನೈದಿದೌತ್ಸುಕಂ॥
ಜಗತಿಯೊಳೀತಗಲ್ಲದೆಣೆ ಯುಂಟೆನಲೊಪ್ಪಿದ ಸೋಮಶೇಖರಂ ॥೨೯॥

ಅತಿ ಮಧುರೋಕ್ತಿಯುಕ್ತಿ ಸರಸಾರ್ಥ ವಿವೇಚನ ಶಕ್ತಿ ಸಾಹಸಂ।
ವಿತತ ವಿನೋದಗೋಷ್ಠಿ ವರಗಾನ ವಿತಾನದ ಸೃಷ್ಟಿಯೇಳ್ಗೆಯುಂ।
ಕುತುಕ ಸಮಾಶ್ರಿತ ಪ್ರಚುರಲಾಸ್ಯ ವಿಲೋಕನ ಜಾತ ಸೌಖ್ಯಮುಂ।
ಕ್ಷಿತಿಪತಿ ಸೋಮಶೇಖರ ನೊಳಲ್ಲದೆ ಪೇಳ್ಪಿರಗ್ಗಂಟೆ ಲೋಕದೊಳ್?॥೩೦॥

**ಕಂದ॥**

ಮಂತ್ರಿಗಳಾಮಾಂಡಲಿಕರ್
ತಂತ್ರಾಧ್ಯಕ್ಷರ್ನಿಯೋಗಿ ಬಾಂಧವರೆಲ್ಲರ್॥
ಮಂತ್ರಾಲೋಚನೆ ಗಿದು ಸ್ವಾ
ತಂತ್ರ್ಯಮೆ ಕಲ್ಯಾಣಸಮಯ ನೃಪಗಾಯ್ತೆಂದರ್ ॥೩೧॥

ಆ ಸಮಯದೊಳಾ ನೃಪನದ
ಕೋಸರಿಸದೆ ನುಡಿಯದಿರ್ದೊಡ ಪ್ರತಿ ಸಿದ್ಧಂ॥
ಸೂಸುತಿದೆ ಸಮಂತ ಮುದಂ
ಭೂಸುದತೀಶ್ವರನೊಳೆಂದು ತಿಳಿದವರೆಲ್ಲರ್ ॥೩೨॥

ಉನ್ನತ ಕುಲಜೆಯರೆನಿಸಿದ
ಕನ್ನಿಕೆಯರ ನೋಳ್ಪುದೆಂದು ಸಚಿವರೊಳುಸುರಲ್॥
ಚೆನ್ನಮಲ್ಲಮ್ಮ ದೇವಿಯು
ಸನ್ನುತರವನೈದಿ ನೋಡಿದ ರ್ಮುದದಿಂದಂ ॥೩೩॥

ಶುಭಲಕ್ಷಣ ಲಕ್ಷಿತೆಯರ
ನುಭಯ ಕುಲೋನ್ನತಿಯರಾದ ಕನ್ಯಾದ್ವಯಮಂ ॥
ಪ್ರಭುತೆಯೊಳು ನೀಲವಾಂಬಿಕೆ
ಯಿಭಗಮನದ ಚೆನ್ನವಾಂಬೆಯೆಂಬಳ್ತಿಸರಿಂ ॥೩೪॥

ಸತ್ಯದೊಳಂ ಶೀಲದೊಳಂ ।
ಸ್ತುತ್ಯದ ಪತಿಭಕ್ತಿ ಯುಕ್ತಿ ಚಾತುರ್ಯದೊಳಂ ॥
ಅತ್ಯಂತ ಗುಣದೊಳಂ ಕೃತ ।
ಕೃತ್ಯತೆಯೊಳಗಿವರೆ ಯೋಗ್ಯವೆನುತಂ ತಿಳಿಯುಲ್ ॥೩೫॥

ಕಲಧೌತದ ಭೂಷಣಮಂ ।
ಸುಲಲಿತ ನವ ವಸ್ತ್ರ ನಿಕರಮಂ ಸತ್ಫಲಮಂ ॥
ಮಲಯಜದ ಪುಷ್ಪ ಪ್ರಚಯವ ।
ಲಲಿತಾಂಗಿಯರ್ಗಿತ್ತು ನುಡಿದರಿಂತೆಂದಾಗಳ್ ॥೩೬॥

ಸೋಮಶೇಖರ ನೃಪಾಲನ ।
ವಾಮಾಂಕಸ್ಥಿತಿಗೆ ಯೋಗ್ಯರಪ್ಪತಿಶಯಮಂ ॥
ಸ್ವಾಮಿ ನಿಮಗಿತ್ತನದರಿಂ ।
ಈ ಮಾತಿದೆ ಸತ್ಯ ರಾಣಿಯರ್ಪ್ಪಿಸರುಂ [ರತುಂ?] ಟೀ? ॥೩೭॥

ವಚನಕೆ ವಾಣಿಯು ಪಾಸಟಿ ।
ಸುಚರಿತ್ರಕೆ ಸತ್ಯಭಾಮೆ ರೂಪಿಗೆ ರತಿಯುಂ ॥
ರುಚಿವೆತ್ತ ಸಿರಿಗೆ ಲಕ್ಷ್ಮಿಯೆ ।
ಶುಚಿಕರ ಪತಿ ಭಕ್ತಿಯಂದರುಂಧತಿ [ಯುಪ್ಪಳ್] ॥೩೮॥

ವೀಣೆಯಿಂಚರದ ವಾಣಿಯ ।
[ಪ್ರೀ] ಣಿತ ಕನಕಾಬ್ಜ ಸದೃಶ ಪಲ್ಲವ ಪಾಣಿಯ ॥
ಏಣಲೋಚನೆಯ ಪನ್ನಗ ।
ವೇಣಿಯ ನೀಲವ್ಮ ದೇವಿಗಿಂತೆಣೆಯುಂಟೀ? ॥೩೯॥

ಉನ್ನತ ಗುಣಮಣಿ ಭೂಷಿತೆ ।
ಕನ್ಯಾಕುಲತಿಲಕೆ ಕಮನ ಶೀಲೋನ್ನತಿ ಸಂ ॥
ಪನ್ನೆ ಚನ್ನಮ್ಮ ದೇವಿಗೆ ।
ರನ್ನದ ಪುತ್ರಿಕೆಯು ಪಡಿಯಿಡಲ್ಬಂದಪುದೇ? ॥೪೦॥

ಇಂತತಿಶಯ ಪೆತ್ತಿರ್ದ ।
ಕಾಂತೆಗೆ ಶುಭ ಮುಹೂರ್ತದೊಳ್ ಸಂತಸದಿಂ ॥
ಮಂತ್ರಿಗಳಾಂ ದೋಲಿಕೆಗಳ ।
ನಂತರಿಸದೆ ಯೇರಲಿತ್ತು ಕರೆತಂದಾಗಳ್ ॥೪೧॥

ಕನಕ ಮಣಿ ಮಯದ ಗೃಹಮಂ ।
ವನಿತಾಮಣಿಯರ್ಗೆ ಯೋಗ್ಯ ನಿಮಗೆಂದೆನುತಂ ॥
ವಿನಯದೊಳ್ಪಿದಿಸಿ ಫಲವಂ ।
ಘನತರ ದುಲುಪೆಗಳ ಗಣನೆಯಿಲ್ಲೆನಲಿತ್ತರ್ ॥೪೨॥

ಮಾನಿತ ಸಾಮುದ್ರಿಕೆಯೊಳ್ ।
ನೀನೇ ಕಡು ಜಾಣೆ ಪೋಗಿ ನೋಡೆಂದೆನುತಂ ॥
ಭೂನಾಥಂ ಕಳುಪಲೊಡಂ ।
ಮೀನಾಕ್ಷಿಯೆನಿಪ್ಪಳೋರ್ವಳ್ ಬಂದೈತಂದವಳ್ ॥೪೩॥

ನಿಮ್ಮಯ ಲಕ್ಷಣ ದಿರವಂ ।
ಸಮ್ಮಂದಿಸಿ ನೋಡಲೆಂದು ಕಳುಪಿದನೆನ್ನಂ ॥
ಇಮ್ಮಡಿಯ ಸೋಮಶೇಖರ ।
ಕಮ್ಮಂಗಣೆಯಂಗೆ ಸದೃಶ ನಿರವಂ ಪೇಳ್ವೆಂ ॥೪೪॥

ಶ್ರೀರಮಣಂ ಸದ್ಗುಣಗಣ ।
[ಕಾ] ರಮಣಂ ನಾಡೆ ವಿಜಯ ಕಾಂತಾರಮಣಂ ॥
ವೀರಸಿಧಿ ಸೋಮಶೇಖರ ।
ಭೂರಮಣಂ ಚಾರು ಕೀರ್ತಿದಾರಾರಮಣಂ ॥೪೫॥

ಮನಸಿಜ ಮೋಹನ ಪಾಶವ ।
ನನುಕರಿಸುವ ಕೇಶಪಾಶಗಳ್ಕನದೊಲವಂ ॥
ಇನಿಸುಳಿಯದಂತೆ ಸೂಚಿಪ ।
ಪೆನೆ ಮೃದುತರ ಸೂಕ್ಷ್ಮಸ್ನಿಗ್ಧಮಂ ಭೂವರನಾ ॥೪೬॥

ಕರಿಗೊರಲನ ಮೌಳಿಯೊಳಿ ।
ರ್ದರೆಪ್ಪೈವಡೆದಿರ್ದ ಚಂದ್ರನಿರವಂ ಕಳೆದೀ ॥
ಪುರಧೀರನ ಫಾಲಂ ಕ ।
ತ್ತುರಿ ಪೊಟ್ಟಂ ದೆಸೆಮ ಚೆಲ್ವಿಗಾಯ್ತಾಗರಮುಂ ॥೪೭॥

# ಶಿವಾನುಭವ

(ತ್ರೈಮಾಸಿಕವು)



ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ.

ಬಿ. ಏ. ಎಲ್ ಎಲ್ ಬಿ.



ವಿಜಾಪುರ.

೮ನೇ ಸಂಚಿಕೆ

ಡಿಸೆಂಬರ ೧೯೩೭.

# ವಿಷಯಾನುಕ್ರಮಣಿಕೆ


| ವಿಷಯಗಳು. | ಲೇಖಕರ ಹೆಸರು | ಪುಟ |
| --- | --- | --- |
| ೧. ವೇದವಾಙ್ಮಯ | ಶ್ರೀ ಶಂಭುಲಿಂಗ ಸ್ವಾಮಿಗಳು ಹಿರೇಮಠ ವಿಜಾಪುರ | ೧-೯ |
| ೨. ಕಾವ್ಯ ದೋಹದವು | ಶ್ರೀ ಆರ್. ಬಿ. ಆಲಬಾಳ ಬಿ. ಎ. ವಿಜಾಪುರ | ೧೦-೧೬ |
| ೩. ರೇಣುಕಾಚಾರ್ಯಾಷ್ಟಕ | ಶ್ರೀ ಬಸವರಾಜ ಶಾಸ್ತ್ರಿ ಕೋಡಿಕೊಪ್ಪ | ೧೭-೧೮ |
| ೪. ಬೆಳಗಿಯ ರಾಜರು | ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ ತುಮಕೂರ | ೧೯-೨೮ |
| ೫. ಬಿಜ್ಜಣರಾಯ ಪುರಾಣವೂ ಚಂದ್ರಸಾಗರ ವರ್ಣಿಯೂ | ಶ್ರೀ ವಿರಭದ್ರಪ್ಪ ರುದ್ರಪ್ಪ ಕೊಪ್ಪಳ ಸೀನಿಯರ. ಬಿ. ಎ. ಕ್ಲಾಸ ಧಾರವಾಡ | ೨೯-೪೪ |
| ೬. ದೇವರ ದಾಸಿಮಯ್ಯ | ಶ್ರೀ ಸಿದ್ಧಲಿಂಗಪ್ಪ ಮಂಡಾಂತಣ್ಣವರ | ೪೫-೫೨ |
| ೭. ದುರ್ಗಾದೇವಿ | ಶ್ರೀ ಮಡಿವಾಳಪ್ಪ ಮಿಂಚನಗಿ | ೫೩-೫೫ |
| ೮. ವೀರಶೈವ ಮತದ ಕಾಲ | ಶ್ರೀ ಜೀರಗೆ ಬಸಲಿಂಗಪ್ಪ ಚೀಫಕೋರ್ಟ ಟ್ರಾನ್ಸ ಲೇಟರ ಬೆಂಗಳೂರ ಸಿಟಿ | ೫೬-೬೦ |
| ೯. ಪಂಚಾಕ್ಷರ ರಗಳೆ | ಹರಿಹರಚಾರ್ಯ ಕೃತ | ೬೧-೬೮ |
| ೧೦. ಶಿವಾನುಭವದ ಕಾರ್ಯಗಳು | ಸಂಪಾದಕ | ೬೫-೭೨ |
| ೧೧. ಹಿತಚಿಂತಕ ಪ್ರೆಸ್ಸಿನವರದಿ | ಡಾಯರೇಕ್ಟರ | ೧-೯ |
| ೧೨. ಬೆಳಗಿ ಅರಸುಗಳ ವಂಶಾವಳಿ (ಅಪೂರ್ಣ) | ಶ್ರೀ ಬಿ. ರಾಮರಾವ. ಎಮ್. ಎ. ಎಲ್. ಎಲ್. ಬಿ. ಮದ್ರಾಸ | ೪೭-೫೬ |
| ೧೩. ಏಕೋತ್ತರ ಶತಸ್ಥಲ | (ಅಪೂರ್ಣ) | ೪೧-೭೨ |


# ಸೂಚನೆ.

ಈ ಸಂಚಿಕೆಗೆ ಯಾರದು ಒಂದು ವರ್ಷ ಪೂರ್ತಿ ಯಾಗುವದೋ ಅವರು ಮುಂದಿನ ವರ್ಷದ ಚಂದಾ ಹಣದ ಬಾಬತ ೩—೮—೦ ಯನ್ನು ಮನಿ ಆರ್ಡರದಿಂದ ಕಳಿಸಿ ಕೊಡಬೇಕು. ಒಂದುವೇಳೆ ಸಕಾಲಕ್ಕೆ ಅವರಿಂದ ಹಣ ಬಾರದಿದ್ದಲ್ಲಿ ಮುಂದಿನ ವರ್ಷದ ಮೊದಲನೇ ಸಂಚಿಕೆಯನ್ನು ವ್ಹಿ. ಪಿ. ಯಿಂದ ಕಳಿಸಿ ಕೊಡುವೆವು. ಅದನ್ನು ಸ್ವೀಕರಿಸಿ ಹಿಂದಿನಂತೆ ಮುಂದಾದರೂ ಈ ಧಾರ್ಮಿಕ ಪತ್ರಿಕೆಗೆ ಸಹಾಯ ಮಾಡಬೇಕಾಗಿ ವಿನಂತಿಯು.

ಸಂಪಾದಕ



ದುರ್ಗಾದೇವಿ.

(೫೩ ನೇ ಪುಟ ನೋಡಬೇಕು.)

# ಶಿವಾನುಭವ.

ವರ್ಷ ೨ ಡಿಶೆಂಬರ ೧೯೨೭ ಸಂಚಿಕೆ ೮

## ವೇದವಾಙ್ಮಯ.

ಲೇಖಕ:—ಶ್ರೀ ಶಂಭುಲಿಂಗ ಸ್ವಾಮಿಗಳು ಹಿರೇಮಠ ವಿಜಾಪುರ.



(೭ನೆಯ ಸಂಚಿಕೆಯಿಂದ ಮುಂದುವರಿದುದು)

ಜಗತ್ತಿನ ಉತ್ಪತ್ತಿಯೊಡನೆ ವೇದದ ಉತ್ಪತ್ತಿಯೂ ಆಯಿತೆಂಬ ಬಗ್ಗೆ ಅಥರ್ವ ವೇದದಲ್ಲಿ ಹೇಳಲ್ಪಟ್ಟಿದೆ. ಹೇಗೆಂದರೆ—'ಯತ್ರ ಋಷಯ: ಪ್ರಥಮಜಾ ಋಚಃ ಸಾಮಯಜುರ್ಮಹೀ ಏಕರ್ಷಿ ಯಸ್ಮಿನ್ನಾಪಿತಃ ಸ್ಕಂಭಂ ತಂಬ್ರೂಹಿ ಕತಮಃ ಸ್ವಿದೇವಸಃ' ಮೊದಲು ಜನಿಸಿದವರಾದ ಋಷಿಗಳೂ ಋಚೆಗಳೂ ಯಜುಃಸಾಮಗಳೂ ಯಾವುದರಲ್ಲಿ ಹುಟ್ಟುತ್ತಿಹವೋ ವಿಸ್ತೀರ್ಣವಾದ ಪೃಥ್ವಿಯು ಯಾವುದನ್ನು ಆಶ್ರಯಿಸಿರುವದೋ ಒಬ್ಬಾನೊಬ್ಬ ಋಷಿಯು ಯಾವುದಕ್ಕೆ ಸರ್ವಸ್ವವನ್ನು ಅರ್ಪಿಸಿರುವನೋ ಆ (ಆಶ್ರಯಭೂತ) ಕಂಬವನ್ನು ಸ್ತುತಿಸು; ಆ ಕಂಬರೂಪ ದೇವರು ಯಾವನಿರಬಹುದು? (ಅಥ- ೧೦, ೭, ೧೪). ಎಂಬ ಈ ವಾಕ್ಯದಲ್ಲಿರುವ 'ಕಂಬ' ಶಬ್ದದ ವಾಚ್ಯನಾದ ದೇವರ ಮಹಿಮೆಯನ್ನು ಪುಷ್ಪದಂತಾಚಾರ್ಯನು—

ತವಾತ್ಮಾನಂ ಯತ್ನಾದ್ಯದುಪರಿ ವಿರಿಂಚೋ ಹರಿರಧಃ
ಪರಿಚ್ಛೇತ್ತುಂ ಯಾತಾವನಲಮನಲ ಸ್ತಂಭ ವಪುಷಃ।

ಎಂದು ಕೊಂಡಾಡಿದ್ದಾನೆ. ನಿಷ್ಕಲ ಪರಮಾತ್ಮನೇ ನೀರುಗಟ್ಟಿಗೊಂಡು ಆಣೆಕಲ್ಲಾದಂತೆ ಸ್ತಂಭ (ಕಂಬ) ರೂಪದಿಂದ ತೋರಿದುದು ಅವನ ಅಗಾಧವಾದ ಮಹಿಮೆಗೆ (ಶಕ್ತಿಗೆ) ಅಸದಳವಲ್ಲ. ಈ ದೇವರನ್ನೇ ಬೇರೆಬೇರೆ ಜನರು ಪರಬ್ರಹ್ಮ, ಶಿವ, ಲಿಂಗ, ಜ್ಯೋತಿ, ಪಶುಪತಿ ಮುಂತಾದ ಬಗೆಬಗೆಯ ಅನ್ವರ್ಥ ನಾಮಗಳಿಂದ ಬಣ್ಣಿಸುತ್ತಾರೆ. ಇದಿರಲಿ.

ಬ್ರಹ್ಮ ಸೂತ್ರವು— 'ಶಾಸ್ತ್ರಯೋನಿತ್ವಾತ್'– ದೇವರು ಶಾಸ್ತ್ರಕ್ಕೆ (ವೇದಕ್ಕೆ) ಕಾರಣನಾಗಿದ್ದಾನೆ, ಎಂದು ಪ್ರತಿಪಾದಿಸುತ್ತದೆ. ಸರ್ವಜ್ಞ ಗುಣಗಳಿಂದ ಕೂಡಿದುದಾದ ವೇದವು ಸರ್ವಜ್ಞ ನಿಂದಲೇ ನಿರ್ಮಿಸಲ್ಪಟ್ಟಿರಬೇಕಲ್ಲವೆ? 'ಸರ್ವಜ್ಞತಾ ನಾಸ್ತಿ ಶಿವಂ ವಿನಾ ಕ್ವಚಿತ್' ಎಂಬಂತೆ ಋಗ್ವೇದಾದಿ ಲಕ್ಷಣಗಳಿಂದ ಕೂಡಿದುದೂ ಸರ್ವಜ್ಞಗುಣ ಸಂಪನ್ನವೂ ಆದ ವೇದರೂಪ ಶಾಸ್ತ್ರದ ಉತ್ಪತ್ತಿಯು ಪರಮೇಶ್ವರನಿಂದಲೇ ಆಗಿರುವದೆಂಬ ಅರ್ಥವು ಈ ಮೇಲಿನ ಸೂತ್ರದಲ್ಲಿ ಗ್ರಥಿತವಾಗಿದೆ. ಆಶ್ವಲಾಯನ ಪ್ರಣೀತ ಧರ್ಮ ಶಾಸ್ತ್ರದ ಏಳನೆಯ ಅಧ್ಯಾಯದಲ್ಲಿ—

ಸಿಸೃಕ್ಷುರೇಕ ಏವಾಗ್ರೆ ಸಮಾಸೀನಃ ಶಿವಃ ಸ್ವಯಂ।
ದೃಷ್ಟ್ವಾ ತ್ರಿಗುಣಮಯೀಂ ಮಾಯಾಂ ಸೂಕ್ಷ್ಮರೂಪಾಮುಪಾಕರೋತ್॥
ತಯಾ ತದಾತ್ಮಕಂ ವಿಷ್ಣುಂ ಸೃಷ್ಟ್ವಾ ಪಾಲಂ ದಿವೌಕಸಾಮ್।

ಎಂದು, ಶಿವನಿಂದ ವಿಷ್ಣುವು ಸೃಜಿಸಲ್ಪಟ್ಟನೆಂಬದನ್ನು ಹೇಳಿದ ಬಳಿಕ ಯಜ್ಞೋಪವೀತವು ಹುಟ್ಟಿದ ಬಗೆಯನ್ನು ನಿರೂಪಿಸಿ, ತದ್ಭಾಗ ವಿಶೇಷಾಶ್ರಿತ ದೇವತಾ ವಿಭಾಗ ಸಮಯದಲ್ಲಿ—'ತಾವಲ್ಲೋಕಾಸ್ತ್ರಯೊ ವೇದಾಸ್ತ್ರಯೊ ದೇವಾಸ್ತ್ರಯೋಽಗ್ನಯಃ। ಶಿವಃ ಸೃಷ್ಟಾಃ' ಎಂದು ಹೇಳಲ್ಪಟ್ಟ ವಾಕ್ಯದಲ್ಲಿ 'ಶಿವನಿಂದ ವೇದಗಳು ಹುಟ್ಟಿದವುಗಳಾಗಿವೆ' ಎಂಬ ಅಭಿಪ್ರಾಯವು ಸ್ಪಷ್ಟವಿರುವದು.

ಪತಂಜಲಿಯಾದರೂ—'ಸ ಪೂರ್ವೆಷಾಮಪಿ ಗುರುಃ ಕಾಲೇನಾನವಚ್ಛೇದಾತ್ (ಯೊ. ಸೂ. ೧. ೨೬).—ಆ ಈಶ್ವರನು ಕಾಲದಿಂದ ಅವಚ್ಛೇದ ಶೂನ್ಯನು; (ಏಕೆಂದರೆ, ಅನಾದಿಯಾಗಿದ್ದಾನೆ) ಆದ್ದರಿಂದ ಮೊದಲಿಗರಿಗಾದರೂ ಗುರುವಾಗಿದ್ದಾನೆ ಎಂದು ಸೂತ್ರಿಸಿದ್ದಾನೆ. ಅದರ ತಾತ್ಪರ್ಯವನ್ನು ವೃತ್ತಿಕಾರನಾದ ಭೋಜನು—'ಅದ್ಯಾನಾಂ ಸೃಷ್ಟ್ವಣಾಂ

ಬ್ರಹ್ಮಾದೀನಾಮಪಿ ಸಗುರು ರುಪದೇಷ್ಟಾ। ಯತಃ ಸಕಾಲೇನ ನಾವಚ್ಛಿದ್ಯತೆ ಅನಾದಿತ್ವಾತ್। ತೇಷಾಂ ಪುನರಾದಿಮತ್ವಾ ದಸ್ತಿ ಕಾಲೇನಾವಚ್ಛೇದಃ।' ಎಂಬುದಾಗಿ ವ್ಯಕ್ತಪಡಿಸಿದ್ದಾನೆ. ಇದೇ ಅಭಿಪ್ರಾಯವೇ ವಾಯವೀಯ ಸಂಹಿತೆಯ ಉತ್ತರ ಭಾಗದಲ್ಲಿ—

ಪ್ರತಿಸರ್ಗಂ ಪ್ರಸೂತಾನಾಂ ಬ್ರಹ್ಮಣಾಂ ಶಾಸ್ತ್ರ ವಿಸ್ತರಮ್।
ಉಪದೇಷ್ಟಾ ಸಏವಾದೌ ಕಾಲಾವಚ್ಛೇದ ವರ್ಜಿನಾಮ್ ॥೧೪॥
ಕಾಲಾವಚ್ಛೇದ ಯುಕ್ತಾನಾಂ ಗುರೂಣಾಮಪ್ಯಸೌ ಗುರುಃ।
ಸರ್ವೇಷಾ ಮೇವ ಸರ್ವೇಶಃ ಕಾಲಾವಚ್ಛೇದ ವರ್ಜಿತಃ ॥೧೫॥

(ಅಧ್ಯಾ. ೭) ಎಂದು ಹೇಳಲ್ಪಟ್ಟಿದೆ. ಅಪ್ಪಯ್ಯ ದೀಕ್ಷಿತರಾದರೂ ಶಿಖರಿಣೀಮಾಲೆಯಲ್ಲಿ.

ಶ್ರೀ ಕಾನ್ತ ದ್ರುಹಿಣೋಪಮನ್ಯು ತಪನಸ್ಕನ್ದೇನ್ದ್ರನನ್ದ್ಯಾದಯಃ
ಪ್ರಾಚೀನಾ ಗುರವೋಽಪಿ ಯಸ್ಯ ಕರುಣಾ ಲೇಶಾದ್ಗತಾ ಗೌರವಮ್।
ತಂ ಸರ್ವಾದಿಗುರುಂ ಮನೋಜ್ಞವಪುಷಂ ಮನ್ದಸ್ಮಿತಾಲಂಕೃತಂ
ಚಿನ್ಮುದ್ರಾಕೃತ ಮುದ್ರಪಾಣಿನಲಿನಂ ಚಿತ್ತೇ ಶಿವಂ ಕುರ್ಮಹೆ ॥

ಎಂಬ ಮೊದಲನೆಯ ಪದ್ಯದಿಂದ ವಿಷ್ಣು—ಬ್ರಹ್ಮ—ಉಪಮನ್ಯು—ಸೂರ್ಯ—ಸ್ಕಂದ—ಇಂದ್ರ—ನಂದಿ ಮೊದಲಾದ ಪ್ರಾಚೀನ ಗುರುಗಳಿಗಾದರೂ ಶಿವನು ಗುರುವಾಗಿದ್ದಾನೆಂಬ ಭಾವವನ್ನು ತೋರಿಸಿದ್ದಾರೆ.

ಆದ್ದರಿಂದ, ಸರ್ವಜ್ಞನಾದ ದೇವರೇ ವೇದವೆಂಬ ಪ್ರವಾಹದ ಉಗಮಸ್ಥಾನನಾಗಿದ್ದಾನೆಂಬುದು, ಈ ಮೇಲೆ ಉದಾಹರಿಸಲ್ಪಟ್ಟ ಶ್ರುತಿ, ಸೂತ್ರ, ಸ್ಮೃತ್ಯಾದಿ ಪ್ರಮಾಣ ವಚನಗಳಿಂದ ಸಿದ್ಧಿಸುವದು. ಜಗತ್ತಿನಲ್ಲಿ ಸ್ವರ್ಗಾಪವರ್ಗಾದಿ ಪಾರತ್ರಿಕ ಧ್ಯೇಯವುಳ್ಳ ಜೀವಿಗಳ ಯೋಗ್ಯತೆಯ ತಾರತಮ್ಯಾನುಗುಣವಾಗಿ ಉಪಯುಕ್ತಗಳೆನಿಸುವ ಸಕಲಶಾಸ್ತ್ರಗಳ ಬೀಜಭೂತಗಳಾದ ವಾಕ್ಯಗಳ ವೇದದಲ್ಲಿಯೇ ಕಂಡುಬರುವವು. ಮಂತ್ರ ಬ್ರಾಹ್ಮಣಭಾಗಗಳನ್ನಷ್ಟೇ ವೇದವೆಂದು ನಾವು ಹೇಳುವದಿಲ್ಲ. ಆರಣ್ಯಕ, ಉಪನಿಷದ್ಭಾಗಗಳಾದರೂ ವೇದವಾಙ್ಮಯಗಳೇ ಎಂಬುದು ನಮ್ಮ ನಿಶ್ಚಿತಾಭಿಪ್ರಾಯವು.

ಈಶ್ವರ ಕೃಪೆಗೆ ಪಾತ್ರರಾದ ಆಯಾಶಾಸ್ತ್ರ ಪ್ರವರ್ತಕರು ಸ್ವತಂತ್ರವಾದ ಒಂದೊಂದುಶಾಸ್ತ್ರವನ್ನು ರಚಿಸಿದವರೆಂತಲೂ ಸರ್ವಜ್ಞರೆಂತಲೂ

ಸುಪ್ರಸಿದ್ಧರಾದುದು ಸೋಜಿಗವಲ್ಲ. ಪಾಣಿನಿ ಮೊದಲಾದವರಿಂದ ವ್ಯಾಕರಣ ಮುಂತಾದ ಶಾಸ್ತ್ರಗಳು ರಚಿಸಲ್ಪಟ್ಟಿರುವವೆಂದು ಹೇಳುವರಲ್ಲವೆ? ಆಯಾಶಾಸ್ತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟ ಜ್ಞಾನಕ್ಕಿಂತಲೂ ಅವರಲ್ಲಿ ಜ್ಞಾನವು ಅಧಿಕವಾಗಿತ್ತೆಂಬುದು ನಿರ್ವಿವಾದ ಸಂಗತಿಯು. ಹೀಗಿರುತ್ತಿರಲಾಗಿ, ಶಾಕಲ— ಬಾಷ್ಕಲ — ತೈತ್ತಿರೀಯ—ವಾಜಸನೇಯ ಇತ್ಯಾದಿ ಅನೇಕ ಶಾಖಾ ಭೇದಗಳಿಂದ ವಿಭಕ್ತವೂ, ದೇವ — ತಿರ್ಯಕ್ — ಮನುಷ್ಯ —ವರ್ಣ — ಆಶ್ರಮ —ಮುಂತಾದ ವಿಭಾಗಗಳಿಗೆ ಕಾರಣವೂ, ಎಲ್ಲಬಗೆಯ ಜ್ಞಾನಗಳಿಗೆ ತವರುಮನೆಯಾಗಿಯೂ ಇರುವ ಋಗಾದಿ ವೇದ ಸಂಜ್ಞಕ ಶಾಸ್ತ್ರವು,—'ಅಸ್ಯ ಮಹತೋ ಭೂತಸ್ಯ ನಿಶ್ವಸಿತ ಮೇತದ್ಯ ದೃಗ್ವೇದೊ ಯಜುರ್ವೇದಃ ಸಾಮವೇದೋऽ ಥರ್ವಾಂಗಿರಸಃ। — (ಬೃ. ದಾ. ೨. ೪. ೧೦) ಎಂಬಂತೆ ಮಹದ್ಭೂತವೆಂಬ ಈಶ್ವರನಿಂದ ನಿಶ್ವಾಸದಹಾಗೇ (ಉಸಿರಾಡಿಸುವಿಕೆಯಂತೆ) ಅಪ್ರಯತ್ನವಾಗಿ ಆವಿರ್ಭವಿಸಿರುವದರಿಂದ, ಆಮಹದ್ಭೂತದಲ್ಲಿ ನಿರತಿಶಯ ಸರ್ವಜ್ಞತ್ವ ಸರ್ವಶಕ್ತಿಮತ್ವವೆಂಬುದುಂಟೆನ್ನುವ ಬಗ್ಗೆ ಮತ್ತೆ ಹೇಳತಕ್ಕದ್ದೇನಿದೆ?

ಇನ್ನು ದೇವರು ತನ್ನಲ್ಲಿ ನಿತ್ಯ ಸಿದ್ಧವಾದ ವೇದವನ್ನು ತಾನೇ ಹೊರಗೆಡಹಿದನು. ಎನ್ನುವದಕ್ಕಿಂತಲೂ ಹಿಂದಿನ ಕಾಲದಲ್ಲಿದ್ದ ಕೆಲವು ಮನುಷ್ಯರೇ ವೇದವನ್ನು ರಚಿಸಿದರು ಎಂದು ಹೇಳಲು ದೋಷವೇನು? ಎಂದರೆ- ಆ ಮನುಷ್ಯರು ನಮ್ಮ ಹಾಗೆಯೇ (ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಾದಿ ಅಂಗ ಗುಣವಿಶಿಷ್ಟರು) ಇದ್ದರೂ ಅವರಲ್ಲಿ ನಮಗಿಂತ ಏನಾದರೂ ಹೆಚ್ಚುಗಾರಿಕೆ ಇತ್ತೊ ಎಂಬುದನ್ನು ಸಮಾಧಾನ ಚಿತ್ತದಿಂದ ವಿಚಾರಿಸಬೇಕು. ಮಾಯಿಕ ಗುಣಗಳಿಂದ ಆವೃತವಾದ (ಅಶುದ್ಧ) ಚಿತ್ತವುಳ್ಳ ನಮ್ಮಂಥ ಮನುಷ್ಯರು ಅಂತಹ (ದಿವ್ಯ ಜ್ಞಾನರೂಪ) ವೇದವನ್ನು ರಚಿಸಲು ಶಕ್ಯರಲ್ಲ. 'ಪ್ರತ್ಯಕ್ಷದಿಂದಾಗಲಿ ಅನುಮಿತಿಯಿಂದಾಗಲಿ ಯಾವ ಉಪಾಯವು ತಿಳಿಯುವದಿಲ್ಲವೊ ಆ ಉಪಾಯವನ್ನು ವೇದದಿಂದ ತಿಳಿದುಕೊಳ್ಳುತ್ತಾರೆ; ಅದುಕಾರಣವೇ ವೇದಕ್ಕೆ ವೇದವೆಂಬ ಹೆಸರು ಉಂಟಾಗಿದೆ. ಅಂತಹ ವೇದವು ಹಾಕಿಕೊಟ್ಟ ಕಿತ್ತಿಯು ಒಂದೊಂದು ಪಂಕ್ತಿಯನ್ನು ಸರಿಯಾಗಿ ತೀಡಲಿಕ್ಕಾದರೂ ಯೋಗ್ಯತೆಯಿಲ್ಲದಷ್ಟು ಬಹಿರ್ಮುಖ ವೃತ್ತಿಯುಳ್ಳ

ನಮ್ಮಂಥ ಜೀವಿಗಳು ಸರ್ವಜ್ಞಾನ ಮಯವಾದ ವೇದಕರ್ತಗಳೆನಿಸು ವರೇ? ಸರ್ವಜ್ಞಾನಮಯ ವೇದವನ್ನು ರಚಿಸಿದ ಆ ಹಳಬರು ನಮ ಹಾಗೆ ಸಾಮಾನ್ಯ ಜನರಲ್ಲ. ಅವರಿಗೆ ಸರ್ವಜ್ಞತ್ವವಿತ್ತು ಎನ್ನುವದಾ ದರೆ, ಅದು ಅವರಲ್ಲಿ ಸಹಜಿಕವಾಗಿದ್ದಿತೊ ಈಶ್ವರ ಪ್ರಸನ್ನತೆಯಿಂದ ಲಬ್ಧವಾದುದೊ ? ಈಶ್ವರ ಪ್ರಸಾದೈಕ ಲಬ್ಧವೆಂದರೆ, ಈಶ್ವರನಿಂದ ಅನುಗೃಹೀತರಾದವರಲ್ಲಿ ಇತರ ಮನುಷ್ಯರಿಗಿಂತಲೂ ಒಂದು ಬಗೆಯ ಅಲೌಕಿಕ ಹೆಚ್ಚುಗಾರಿಕೆಯುಂಟೆಂದು ಒಪ್ಪಿದಂತಾಯಿತು.

' ಯಾವ ಆದೇಶ ಶ್ರವಣದಿಂದ ಅಶ್ರುತವಾದುದು ಶ್ರುತವಾದುದೂ ಅತರ್ಕಿತವು ತರ್ಕಿತವಾದುದೂ ಅವಿಜ್ಞಾತವು ವಿಜ್ಞಾತವಾದುದೂ ಆಗು ವದೋ ಆಜ್ಞಾನವೇ ಸರ್ವಜ್ಞ ಗುಣಾನ್ವಿತವು, ಎಂಬ ಛಾಂದೋಗ್ಯ ವಾಕ್ಯಾನುಸಾರವಾಗಿ, ಈಶ್ವರನ ಅನನ್ಯಾನುಸಂಧಾನ ಮೂಲಕ ಕೀಟ ಭ್ರಮರ ನ್ಯಾಯದಿಂದ 'ಬ್ರಹ್ಮ ವಿದ್ಬ್ರಹ್ಮೈವ ಭವತಿ' --'ಬ್ರಹ್ಮವಿತ್ತ ಆಹಿ ಬ್ರಹ್ಮಬದ ತಾಕೀಬಾನೀಬೇದ' ಎಂಬಂತೆ ತತ್ಸ್ವರೂಪವೇ ತಾ ವಾದ ದಿವ್ಯಜ್ಞಾನಿಗಳು ಈಶ್ವರನಿಗನ್ಯವೆ? ಸ್ವರೂಪ ದೃಷ್ಟಿಯಿಂದ ಅವರು ಸಾಕ್ಷಾತ್ ದೇವರೇ ಅಹುದು. ದಿವ್ಯ ಜ್ಞಾನಿಗಳ ವೃತ್ತಿಯು ಅಂತ ರ್ಮುಖ ವಾಗಿರುವದರಿಂದ ಅದು ಶಿವಾಕಾರದ ಹೊರತು ಅನ್ಯಾಕಾರ ವನ್ನು ಸಹಿಸದು. ಭೌತಿಕ ವಿದ್ಯೆಗಳಲ್ಲಿ ನಿಷ್ಣಾತರಾದವರೆಲ್ಲಾ ಆ ದಿವ್ಯ ಜ್ಞಾನಿಗಳನ್ನು ಹೋಲುವರೆ? ಈಗಣ ಭೌತಿಕ ವಿದ್ಯೆಯು ಸ್ವೇಚ್ಛಾ ವಿಹಾರವೇ ಧ್ಯೇಯವಾಗುಳ್ಳದಾದುದರಿಂದ, ವೈಷಯಿಕ ಸುಖ( ? )ದ ವಾಸನೆಯೆಂಬ ಬಾಯಾರಿಕೆಯನ್ನು ಹೆಚ್ಚಿಸುವದಾಗಿದೆ. ಅಧ್ಯಾತ್ಮ ವಿದ್ಯೆ ಯಾದರೋ ಅದನ್ನು ಪರಿಹರಿಸಲು ಮುಖ್ಯೋಪಾಯವಾಗಿದೆ. ಭೌತಿಕ ಜ್ಞಾನವು ಕೇವಲ ನಿರುಪಯೋಗವಾದುದೇ ಎಂದು ನಮ್ಮ ಅಭಿ ಪ್ರಾಯವಲ್ಲ. ಆದರೆ ಅದರಿಂದ ವ್ಯಾವಹಾರಿಕ ಪ್ರಯೋಜನಮಾತ್ರವೇ ಉಂಟು. ಭೌತಿಕ ವಸ್ತುಗಳು ಪ್ರಕೃತಿಯ ಪರಿಣಾಮರೂಪಗಳಾದುದ ರಿಂದ ಅನಿಯತತ್ವ ಧರ್ಮವೇ ಅವುಗಳ ಹುಟ್ಟುಗುಣವು. ಇಂತಹವು ಗಳ ಜ್ಞಾನವಾದರೂ ಇಂದಿಲ್ಲ ಮುಂದೆ ಪೂರ್ಣಾವಸ್ಥೆಯನ್ನು ಹೊಂದಿ ತನ್ಮೂಲಕ ನಮಗೆ ಶಾಶ್ವತವಾದ ಆನಂದವು ದೊರಕೀತೆಂಬ ಭರ ವಸೆಯಾದರೂ, ಬಾಯಾರಿ ಬಸವಳಿದ ಪಸುಳನು ಬಿಸಿಲುದೊರೆಯನ್ನು

ನೆಚ್ಚಿದಪರಿಯೇಸರಿ. ಅಧ್ಯಾತ್ಮ ವಿದ್ಯೆಯುಮಾತು ಹಾಗಲ್ಲ. —'ನಹಿ ಸ್ವಾತ್ಮಾರಾಮಂ ವಿಷಯ ಮೃಗತೃಷ್ಣಾ ಭ್ರಮಯತಿ' —ಎಂಬಂತಿರುವದು. ದೇಹವೊದಲಾಗಿ ಅಹಂಕಾರವೇ ಕಡೆಯಾದ ಎಲ್ಲ ಅನಾತ್ಮ ವರ್ಗವನ್ನು ನೇತಿಗಳೆದು' ಅಥವಾ ಅಂಗ—ಕರಣ — ಇಂದ್ರಿಯ — ವಿಷಯ (ಪ್ರಮಾತೃ ಪ್ರಮಾಣ ಪ್ರಮೇಯ)ವನ್ನೆಲ್ಲ ಉರಿಕಪ್ಪುರದಂತೆ ಲಿಂಗವುಯುಗಳನ್ನು ಮಾಡಿ ಲಿಂಗ [ಬ್ರಹ್ಮ]ವೇ ಉಳಿಸುಯಾಗಿ ಮೆರೆವ ಮುಕ್ತಾತ್ಮರುಗಳನ್ನು, ವಿಷಯಾರಣ್ಯದಲ್ಲಿ ವಿಹರಿಸುವ ನಮ್ಮಂಥ ಪಶು(ಜೀವಿ)ಗಳಂತೆ ಭಾವಿಸಿ ಅವರಾದರೂ ನಮ್ಮಹಾಗೆ ಮನುಷರೇ ಅಲ್ಲವೋ ಎಂದು ಗಳಹುವವರ ಅಂಗವೆಲ್ಲವೂ ಬಲವಾಗಿ ಬೀಸುವ ಪಡವಣಗಾಳಿಯುಸೊಂಕಿನಿಂದ ಮರಗಟ್ಟಿದೆ ಎಂದು ಹೇಳಬಹುದು.

ಯಾವುದಕ್ಕೆ ಸಂಬಂಧಿಸಿದ ವಿಷಯುವಾಗಲಿ ಮನೋಗತವಾದುದೇ ಪರಿಪಿಡಿಯಿಂದ ವ್ಯಕ್ತಿದ್ವಾರಾ ಇಂದ್ರಿಯುಗಳ ಮೂಲಕ ಹೊರಹೊಮ್ಮುವದು. ಒಳಮುಖರಾಗಿ ಒಳಗಿರುವ ಅಂತರ್ಯಾಮಿಯನ್ನು ಕಂಡವರ ಚಿತ್ತದಲ್ಲಿ ಅಂತರ್ಯಾಮಿಯ ಗುಣಗಳು ಸ್ಫುರಿಸುವದು ಸಹಜಿಕವು. ಅಚ್ಚಬಣ್ಣದಲ್ಲಿ ಅದ್ದಿದ ಹಸನಾದ ಬಟ್ಟೆಯಂತೆ ಅಂತರ್ಯಾಮಿಯಲ್ಲಿ ಮುಳಿಗೆದ್ದ ಶುದ್ಧಾಂತಃಕರಣದಲ್ಲಿ ಆ ಅಂತರ್ಯಾಮಿಧರ್ಮವು ವೈದೋರಿ ಲೋಕಾನುಗ್ರಹಾರ್ಥವಾಗಿ ಹೊರ ಹೊಮ್ಮುವದು. ಚಂದ್ರ ಚಂದ್ರಿಕಾ ನ್ಯಾಯದಂತೆ ಪರಮಾತ್ಮನಲ್ಲಿ ಅವಿನಾಭೂತವಾಗಿರುವ ಜ್ಞಾನಶಕ್ತಿಯಾದರೂ ಅನಾದಿ ಸಂಸಿದ್ಧವಾದುದು; ಪರಮಾತ್ಮನೆಂಬ ಸೂರ್ಯನ ಜ್ಞಾನಶಕ್ತಿಯ ವಿಕಾಸರೂಪ ಕಿರಣಗಳು ಪ್ರಾಚೀನರ ನಿರ್ಮಲಾಂತಃಕರಣವೆಂಬ ಕನ್ನಡಿಯಲ್ಲಿ ಮಾರ್ಪೊಳೆದುದೇ ಜಗತ್ತೆಂಬ ಭಿತ್ತಿಯಮೇಲೆ ಪಸರಿಸಿತು. ಒಳಮನೆಯೊಳು ಹರಡಿದಬೆಳಕು ಕನ್ನಡಿಯಿಂದಲೇ ಒದಗಿತೆಂದು ಔಪಚಾರಿಕವಾಗಿ ನುಡಿಯುವ ಪರಿಯಂತೆ, ದೇವರನ್ನು ವಾಜಿ ಹಳಬರೇ ಪಳೆವಾತಿನ ಕಬ್ಬಿಗರೆಂದು ಕೆಲವರು ಹೇಳುತ್ತಿಹುದೊಂದಚ್ಚರಿಯಲ್ಲ.

೧ ಇನ್ನು, ಕಾಠಕ—ಕೌಥುಮ—ತೈತ್ತಿರೀಯಕ—ಕಾಲಪಾಕ—ಪೈಪ್ಪಲಾದಕ—ಮೌಹುಲ ಮುಂತಾದ ಹೆಸರುಗಳು ವೇದದ ಕೆಲವು ಭಾಗಗಳಿಗಿರುವವಷ್ಟೆ. ಆ ಹೆಸರುಗಳು ಆಯಾ ಪುರುಷರ ಹೆಸರುಗಳ ಸಂಬಂಧ ಮೂಲಕವಾಗಿಯೇ ಕೊಡಲ್ಪಟ್ಟಿರಬೇಕೆಂಬುದು ಸ್ಪಷ್ಟವಿದೆ. ಏಕೆಂ

ದರೆ, ಕಾಠಕಾದಿ ನಾಮಗಳಲ್ಲಿ ಯಾವ ತದ್ಧಿತ ಪ್ರತ್ಯಯ ಜೋಡಣೆಯಿದೆಯೊ ಅದು ಪಾಣಿನಿಯ 'ತೇನ ಪ್ರೋಕ್ತಮ್' (೪-೩-೧೦೧) ಎಂಬೀ ಸೂತ್ರದಿಂದಾಗಿರುವದು. ಇದರಿಂದ 'ಪಾಣಿನಿನಾ ಪ್ರೋಕ್ತಂ ಪಾಣಿನೀಯಮ್',—'ವ್ಯಾಸೇನ ಪ್ರೋಕ್ತಂ ವೈಯಾಸಿಕಂ ಭಾರತಮ್' ಎಂಬ ಮೊದಲಾದ ಸ್ಥಳಗಳಲ್ಲಿ ಹೇಗೆ ಪೌರುಷೇಯತ್ವವು ಪ್ರತೀತಿಯಾಗುವದೋ ಅದೇ ಮೇರೆಗೆ ಕಾಠಕ—ಕೌಥುಮ ಮೊದಲಾದ ಎಡೆಗಳಲ್ಲಿಯೂ 'ತೇನಪ್ರೋಕ್ತಮ್' ಎಂಬ ಸೂತ್ರಾನುಸಾರವಾಗಿ ಉಂಟಾದ ತದ್ಧಿತ ಪ್ರತ್ಯಯಮೂಲಕ ಕಾಠಕ-ಕೌಥುಮ ಮೊದಲಾದ ವೇದಶಾಖೆಗಳಾದರೂ ಪೌರುಷೇಯ (ಪುರುಷಕೃತ)ಗಳೇ ಇರಬಹುದೆಂದು ಹೇಳಲು ಅಡ್ಡಿಯಿಲ್ಲ.

೨ ಇದಲ್ಲದೆ, ವೇದದಲ್ಲಿಯ ವಾಕ್ಯಗಳಾದರೂ ಕಾಳಿದಾಸ ಮೊದಲಾದವರ ವಾಕ್ಯಗಳಂತೆಯೇ ಇವೆ. ಕಾಳಿದಾಸಾದಿಗಳ ವಾಕ್ಯಗಳು ಪೌರುಷೇಯಗಳಾಗಿರುವಂತೆ ವೇದ ವಾಕ್ಯಗಳಾದರೂ ಪೌರುಷೇಯಗಳೆನಿಕೊಳ್ಳಲ್ಪಡುವವಲ್ಲವೆ?

೩ ಮತ್ತು, ಕೆಲವು ಪೌರುಷವಾಕ್ಯಗಳಲ್ಲಿ ಅನಿತ್ಯತ್ವವು ತೋರಿಬರುತ್ತಿರುವಂತೆ ಕೆಲವು ವೈದಿಕ ವಾಕ್ಯಗಳಲ್ಲಿಯೂ ಅನಿತ್ಯತ್ವವು ಗೋಚರವಾಗುವದು. ಹೇಗೆಂದರೆ—'ಬವರಃ ಪ್ರಾವಾಹಣಿರಕಾಮಯತ'—'ಕುಸುರುವಿನ್ದ ಔದ್ದಾಲಕಿರಕಾಮಯತ' ಎಂಬೀ ಬಗೆಯ ವಾಕ್ಯಗಳು ವೇದದಲ್ಲಿ ಕಾಣಬರುತ್ತವೆ. ಇಲ್ಲಿ ಔದ್ದಾಲಕಿ ಎಂಬುದರ ಅರ್ಥವೇನು? ಉದ್ದಾಲಕನ ಮಗನು ಔದ್ದಾಲಿಕಿಯು. ಹಾಗಾದರೆ, ಯಾವ ವೇದದಲ್ಲಿ 'ಔದ್ದಾಲಕಿಯು ಬಯಸಿದನು ಎಂಬ ವಾಕ್ಯವು ಬಂದಿರುವದೋ ಆ ವೇದಗ್ರಂಥವು ಉದ್ದಾಲಕನ ಮಗನಾದ ಈ ಔದ್ದಾಲಕಿಯು ಹುಟ್ಟುವದಕ್ಕಿಂತ ಮೊದಲೇ ಅಸ್ತಿತ್ವದಲ್ಲಿ ಇರಲಿಲ್ಲವೆಂದಂತಾಯಿತು; ಅಂದರ ಔದ್ದಾಲಕಿಯು ಹುಟ್ಟಿದ ತರುವಾಯ ಆ ವೇದ ಗ್ರಂಥವು ಅಸ್ತಿತ್ವದಲ್ಲಿ ಬಂದಿತೆಂದು ಹೇಳಬೇಕಾಗುವದು; ಅಂದಮೇಲೆ ಆ ಅನಿತ್ಯ ವೇದಗ್ರಂಥವು ಯಾವನೊಬ್ಬ ಪುರುಷನಿಂದಲೇ ಬರೆಯಲ್ಪಟ್ಟದ್ದಾಗಿರುವದೆಂದು ನಿಶ್ಚಿತವಾಗುವದಾದ್ದರಿಂದ ವೇದವು ಪೌರುಷೇಯವೇ ಆಗಿದೆಯೆಂದು ಹೇಳುವಮಾತು ಸರಿಯಾಗಿದೆ ಎಂದು ಪೂರ್ವಪಕ್ಷಿಯು ನುಡಿಯುತ್ತಾನೆ.

ಈ ಮೇಲಿನ ಆಕ್ಷೇಪಗಳಿಗೆ ಸಮಾಧಾನವು ಹೇಗಂದರೆ:—

೧ ವೇದದ ಬೇರೆಬೇರೆ ಶಾಖೆಗಳಿರುವ ಕಾಠಕ, ಕೌಥುಮ ಮೊದಲಾದ ಹೆಸರುಗಳಿಂದ ಆಯಾ ಶಾಖೆಗಳ ಕರ್ತೃಗಳ ಬೋಧವಾಗುವದಿಲ್ಲ; ಮತ್ತೇನಂದರೆ ಆಯಾ ಶಾಖೆಯ ಅಧ್ಯಯನದ ಸಂಪ್ರದಾಯವನ್ನು ಆಯಾ ಋಷಿಯು ವಿಶೇಷ ರೀತಿಯಿಂದ ಪ್ರವರ್ತನೆಗೊಳಿಸಿದುದರಿಂದ ಅವರವರ ಹೆಸರುಗಳು ಆಯಾ ಶಾಖೆಗಳಿಗೆ ಕೊಡಲ್ಪಟ್ಟಿವೆ. ಆದ್ದರಿಂದ, ಕಾಠಕ ಮೊದಲಾದ ಶಾಖೆಗಳನ್ನು ಕಠಮೊದಲಾದವರು ಹೊಸದಾಗಿ ರಚಿಸಿ ಆಯಾ ವೇದ ಭಾಗಗಳನ್ನೇ ನಿರ್ಮಾಣ ಮಾಡಿದರೆಂದು ಹೇಳುವದು ಸಮಂಜಸವಾದುದಲ್ಲ. ಕೆಲ ವಿಶಿಷ್ಟ ಋಷಿಗಳಿಂದ ಅಧ್ಯಯನದ ಕೆಲವಿಶಿಷ್ಟ ಸಂಪ್ರದಾಯಗಳು ಪ್ರಚಾರದಲ್ಲಿದ್ದುದರ ಬಗ್ಗೆ ಉಲ್ಲೇಖಗಳಾದರೂ ಕಾಣಬರುತ್ತಿವೆ. ಹೇಗೆಂದರೆ—'ವೈಶಂಪಾಯನಃ ಸರ್ವಶಾಖಾಧ್ಯಾಯೀ' ಕಠಃ ಪುನರಿಮಾಂ ಕೇವಲಾಂ ಶಾಖಾಮಧ್ಯಾಪಯಾಂ ಬಭೂವೇತಿ, ಎಂಬ ಈ ಸ್ಮೃತಿವಚನದಲ್ಲಿ ಹೇಳಲ್ಪಟ್ಟಿರುವ ಮೇರೆಗೆ ಕಠನು ಈ ಶಾಖೆಯ ಅಧ್ಯಯನವನ್ನು ವಿಶೇಷ ರೀತಿಯಿಂದ ಮಾಡಿದುದರ ಮೂಲಕವಾಗಿ ಇದಕ್ಕೆ 'ಕಾಠಕ' ಎಂಬ ಈ ಸಾಧಾರಣ ವಿಶೇಷಣವನ್ನು ಹಚ್ಚುವದು ವಾಡಿಕೆಯಾಗಿದೆ.

೨ ಇನ್ನು ಹೇಗೆ ಕಾಳಿದಾಸಾದಿಗಳ ವಾಕ್ಯಗಳು ಪೌರುಷೇಯಗಳಾಗಿರುವವೋ ವೇದ ವಾಕ್ಯಗಳಾದರೂ ಹಾಗೆಯೇ ಇರುವವಾದ್ದರಿಂದ ಅವುಗಳಾದರೂ ಪೌರುಷೇಯಗಳೇ ಆಗಿವೆಯೆಂದು ಹೇಳಬಾರದು. ಏಕೆಂದರೆ—ಕಾಳಿದಾಸಾದಿಗಳ ಗ್ರಂಥಗಳಲ್ಲಿಯಾದರೂ ಬೇರೆಬೇರೆ ಸರ್ಗಗಳಕೊನೆಯಲ್ಲಿ ಕರ್ತೃಗಳ ಹೆಸರುಗಳು ದೊರೆಯುತ್ತಿವೆ. ಅದೇ ಮೇರೆಗೆ ಈ ವೇದವಾದರೂ ಪೌರುಷೇಯವಾಗಿದ್ದಲ್ಲಿ ಇದನ್ನು ರಚಿಸಿದವನು ಇಂಥವನೊಬ್ಬ ಪುರುಷನು ಎಂದು ಅವನ ನಾಮ ಧಾಮಾದಿಕದ ಬಗ್ಗೆ ಆವೆಡೆಯಲ್ಲಿಯಾದರೂ ಉಲ್ಲೇಖವು ಇರಬಹುದಾಗಿತ್ತು. ಆದರೆ ಹಾಗೆ ಇದುವರೆಗೆ ಉಪಲಬ್ಧ ವಿಲ್ಲದುದರಿಂದ ವೇದವು ಅಪೌರುಷೇಯವೇ ಇರಲಿಕ್ಕೆಬೇಕೆಂದು ಒಪ್ಪದಹೊರತು ಗತ್ಯಂತರವಿಲ್ಲ.

೩ ಮತ್ತು, 'ಬವರಃ ಪ್ರಾವಾಹಣಿರಕಾಮಯತ' ಇತ್ಯಾದಿವಚನಗಳ ಮೇಲಿಂದ ಅನಿತ್ಯತ್ವ ವಿಷಯಕವಾದ ಆಕ್ಷೇಪದ ಸಮಾಧಿಯು

ಹೇಗೆಂದರೆ—'ಯಥಾಕಲ್ಪಃ ಸಃಕಲ್ಪಪೂರ್ವಃ' ಎಂಬವಾಕ್ಯದಲ್ಲಿಯ ತಾತ್ಪ ರ್ಯಾನುಸಾರವಾಗಿ, ಹಿಂದಣಕಲ್ಪದಲ್ಲಿ ಹೇಗಿದ್ದಿತೊ ಹಾಗೆಯೇ ಮುಂ ದಣಕಲ್ಪದಲ್ಲಿ ನಿರ್ಮಾಣಮಾಡಲ್ಪಡುವದಾದ್ದರಿಂದ ಪ್ರತಿಯೊಂದು ಯುಗ ದಲ್ಲಿಯೂ ಹಿಂದಣಿಂದ ಬಂದ ಪ್ರವಾಹವೇ ನಿತ್ಯತ್ವದಿಂದ ಹಾಗೆಯೇ ಮುಂದೆ ನಡೆಯುವದಾದ ಕಾರಣ, ಪ್ರತಿಯುಗದಲ್ಲಿಯೂ ತೋರಿ ಬರುವ ಯಾವ ಈ ಬವರಾದಿಗಳ ಉಲ್ಲೇಖಗಳು ವೇದದ ಅನಿತ್ಯತ್ವ ವನ್ನು ಸ್ಥಾಪಿಸಲು ಸಮರ್ಥಗಳಾಗುವದಿಲ್ಲ.

ಶಾರದಾತಿಲಕದೊಳು ಒಂದನೆಯ ಪಟಲದ ವ್ಯಾಖ್ಯಾನದಲ್ಲಿ ಉದಾ ಹೃತವಾದ—'ಮಹೇಶ್ವರ ಮುಖಾದ್ ಜ್ಞಾತ್ವಾ ಗುರುರ್ಯಸ್ತ ಪಸಾಮನ್ತ್ರಂ ಸಂಸಾಧಯತಿ ಶುದ್ಧಾತ್ಮಾ ಪೂರ್ವಂ ಸಋಷಿಃ' ಎಂಬ ಗೌತಮ ವಚ ನಾನುಸಾರವಾಗಿಯೂ ಋಷಿಗಳೆಂದರೆ ಮಂತ್ರ ದೃಷ್ಟ್ರಗಳು' ಅಂದರೆ ಮಂತ್ರಗಳನ್ನು ಕಂಡುಹಿಡಿದವರೆಂದರ್ಥವಲ್ಲದೆ ಅವುಗಳ ನಿರ್ಮಾಣ ಕರ್ತೃಗಳಲ್ಲ; ಕಂಡುಹಿಡಿಯುವದಕ್ಕಿಂತ ಮುಂಚೆ ಅವುಗಳು ಇರಲೇ ಬೇಕಲ್ಲವೆ? ವಾಮದೇವ ಋಷಿಯು ಕಂಡು ಹಿಡಿಯುವದಕ್ಕೆ ಮುಂಚೆ ಪಂಚಾಕ್ಷರ ಮಂತ್ರವಿದ್ದೇ ಇತ್ತು. ಕೋಲಂಬಸನು ಅಮೇರಿಕಾ ಖಂಡ ವನ್ನು ಹೊಸದಾಗಿ ನಿರ್ಮಿಸಿದನೆ? ಇಲ್ಲ. ಮೊದಲಿದ್ದುದನ್ನೇ ಕಂಡು ಹಿಡಿದನು.

ಇವೇ ಮೊದಲಾದ ಪ್ರಮಾಣ ಯುಕ್ತಿ ದೃಷ್ಟಾಂತಗಳಿಂದ ಪರಿಶೀ ಲಿಸಿದರೆ ಋಷಿಗಳು ವೇದ ನಿರ್ಮಾಣಕರ್ತರಲ್ಲ. ಶುದ್ಧ ವಿದ್ಯಾತತ್ವ ರೂಪ ವಾದ ವೇದವಾಙ್ಮಯವು ಶಿವನ ಸ್ವರೂಪಭೂತವಾದ ಜ್ಞಾನಶಕ್ತಿಯ ವಿಕಾಸವೆಂದರಿವುದೇ ಸಮುಚಿತವಾದುದು.

(ಮುಂದೆಸಾಗುವದು.)



# ಕಾವ್ಯದೋಹದವು

ಲೇಖಕ—ಆರ್ ಬಿ. ಅಲಬಾಳ ಬಿ. ಎ. ಸಿದ್ಧೇಶ್ವರ ಹೈಸ್ಕೂಲ ಬಿಜಾಪುರ.

---

೧ ಕಾವ್ಯವೆಂದರೇನು? ಎಂಬ ಪ್ರಶ್ನಕ್ಕೆ ಸಕೃದ್ದರ್ಶನದಲ್ಲಿ ಛಂದಸ್ಸು ಎಂದು ಹೇಳಬಹುದು. "ಛಂದಯತಿ=ಆನಂದ ಮಾತೀತಿ ಛಂದಃ" ಎಂಬ ಇದರ ತಟಸ್ಥ ಲಕ್ಷಣದ ಮೇಲಿಂದ, ಕವಿಯ ಸ್ವಚ್ಛಂದ ವೃತ್ತಿಯನ್ನು ಒಂದು ವಿಶೇಷ ವೃತ್ತಿಯಲ್ಲಿ ಕಾವ್ಯವು ಸಿಕ್ಕಿಸುವದು. ಇದರ ಮೇಲಿಂದ ಸಂಸ್ಕೃತ ವಾಙ್ಮಯದ ಕಡೆಗೆ ನಮ್ಮ ದೃಷ್ಟಿಯನ್ನು ಚಲ್ಲಿದರೆ, ಧರ್ಮಶಾಸ್ತ್ರ, ವೈದ್ಯಶಾಸ್ತ್ರ ಮುಂತಾದವುಗಳು ಸಹ ಛಂದೋಬದ್ಧವಾಗಿರುವದರಿಂದ ಎಲ್ಲವೂ ಕಾವ್ಯವೆನ್ನುವ ಅನವಸ್ಥಾ ಪ್ರಸಂಗವು ಬಂದೊದಗುತ್ತದೆ. ಸಂಸ್ಕೃತವು ಪದ್ಯವಾಙ್ಮಯವಿದ್ದರೂ ಗದ್ಯಭಾಗವು ಇದ್ದೇಇರುತ್ತದೆ ಈಪ್ರಕಾರ ಛಂದಸ್ಸು ಗದ್ಯಪದ್ಯಗಳಿಗೆ ವ್ಯಾವರ್ತಕವಾಗಿರುತ್ತದೆ. ಬಾಣನಂಥಾ ಜಾಣನು ತನ್ನ ಕಾದಂಬರಿ ಕಥೆಯನ್ನು ಗದ್ಯದಲ್ಲಿಯೇ ಗ್ರಥಿಸಿದ್ದಾನೆ; ಆದರೂ ಲೋಕದಲ್ಲಿ ಬಾಣನಿಗೆ ಕವಿಯೆಂಬ ನಾಮವು ನೇಮವಾಗಿರುತ್ತದೆ. ಆದಕಾರಣ ಕಾವ್ಯವು ದ್ವೈತಭಾವದಿಂದ ತನ್ನ ಕಾಯಿಕ ವೃತ್ತಿಯಲ್ಲಿರುವದಲ್ಲದೆ, ಅದ್ವೈತವಾದಿ ಶಂಕರಾಚಾರ್ಯರಂತೆ, ಪರಕಾಯ ಪ್ರವೇಶವನ್ನಾದರೂ ಮಾಡಬಹುದಾಗಿದೆ.

೨ ಹೀಗೆ ಕಾವ್ಯವು ಛಂದಸ್ಸನ್ನು ಚಪರಿಸಿ, ಕಾದಂಬರಿ ಮುಂತಾದ ಗದ್ಯಗ್ರಂಥಗಳಲ್ಲಿ ಗಮನಿಸಿದಂತಾಯಿತು. ಕಾರ್ಲಾಯಿಲ್ ಎಂಬ ಇಂಗ್ಲಿಷ ಗ್ರಂಥಕಾರನು, (Poetry is musical thought: "ರಮಣೀಯಾರ್ಥ ಪ್ರತಿಪಾದನಂಕಾವ್ಯಂ" ಎಂದು ನಮ್ಮ ಜಗನ್ನಾಥ ಪಂಡಿತನಂತೆ, ವ್ಯಾಖ್ಯೆ ಮಾಡಿರುವನು. ಈ ರಮಣೀಯಾರ್ಥ ಪ್ರತಿಪಾದನವು ಕಾವ್ಯಗಳಲ್ಲಿದ್ದಂತೆ, ಕಾದಂಬರಿ ಮುಂತಾದ ಕಟ್ಟುಕಥೆಗಳಲ್ಲಿ ಸಹ ಕಂಡುಬರುವದು. ಅನೇಕ ಕಾವ್ಯಗಳು ಕಟ್ಟು ಕಥೆಗಳಾಗಿರುವವು; ಮತ್ತು ಇಂಥ ಕಟ್ಟುಕಥೆಗಳಲ್ಲಿ ಕವಿತ್ವವು ಅಚ್ಚುಕಟ್ಟಾಗಿ ಪ್ರಕಟವಾಗುತ್ತದೆ. ವಾಙ್ಮಯ ಪ್ರಪಂಚದಲ್ಲಿ ಗದ್ಯಪದ್ಯಗಳು, ಗಂಡಹೆಂಡರ ಭಾವದಿಂದ ವರ್ತಿಸುತ್ತವೆಯೆಂದರೆ ದೋಷವಾಗಲಿಕ್ಕಿಲ್ಲ. ಗುಣಾಲಂಕಾರ

ಗಳಿಂದ ಕೂಡಿ, ದೋಷದಿಂದ ದೂರಾಗಿ, ಛಂದಸ್ಸೆಂಬ ಛತ್ರದಲ್ಲಿ, ಕಾಮಿನಿಯರಂತೆ, ಕಾವ್ಯವು ತನ್ನ ವಿಷಯದಲ್ಲಿರುವದು.

ಆದರೆ ಗದ್ಯವು ಗಂತಸರಂತೆ, ಈ ನಿಯಮಗಳಿಗೆ ನಿಲುಕದೆ, ಛತ್ರಬಿಟ್ಟು ಅನೇಕ ವಿಷಯಗಳಲ್ಲಿ ವಾಸಮಾಡಿರುವದು. ಈ ವಿಷಯ ವ್ಯತ್ಯಾಸವು ರಮಣೀಯಾರ್ಥ ಪ್ರತಿಪಾದನದಲ್ಲಿ ಅಂತರವನ್ನುಂಟುಮಾಡುತ್ತದೆ. ರಮಣೀಯತೆಯು ಸಮಾನವಾದಲ್ಲಿ ಗದ್ಯಪದ್ಯಗಳು ಸಮರಸ ಹೊಂದುವವು. ಆದರೆ ಛಂದಸ್ಸನ್ನು ಬಿಟ್ಟು ಸ್ವಚ್ಛಂದ ವೃತ್ತಿಯಿಂದ ತಿರುಗಾಡಲಾರದೆ, ಮರ್ಯಾದೆಯಿಂದ ಇದ್ದುಕೊಂಡು, ಕಾವ್ಯವು ಇಷ್ಟ ಮನ್ನಣೆಗೆ ಪಾತ್ರವಾಗಿರಬೇಕು. ಕೊಟ್ಟಮರ್ಯಾದೆಕ್ಕಿಂತ ಇಟ್ಟಮರ್ಯಾದೆಯಿಂದಲೂ ಕಾವ್ಯವು ಹೆಚ್ಚು ಕಂಗೊಳಿಸುತ್ತದೆಂದು ವರ್ಡ್ಸ್‌ವರ್ಥನು, (Poetry implies most but supplies least) "ಅಲ್ಪಾಕ್ಷರಾ ಬಹು ಅರ್ಥಾ" ಎಂದು ಅದರಲ್ಲಿದ್ದ ವ್ಯಂಗ್ಯಾರ್ಥವನ್ನು ವ್ಯಕ್ತ ಮಾಡುತ್ತಾನೆ. ಈ ವಸ್ತುಕ (Subjective) ಭಾವಕ್ಕೆ ಕಾವ್ಯದ ಅಂತರಂಗವೆಂತಲೂ ಮತ್ತು ಉಳಿದ ವರ್ಣಕ (Objective) ಭಾವಕ್ಕೆ ಬಹಿರಂಗವೆಂತಲೂ ಕೆಲವರು ಅನ್ನುತ್ತಾರೆ.

೩ ಕಾವ್ಯವು ಲಲಿತ ಕಲೆಗಳಲ್ಲಿ (Fine Arts) ಒಂದಾಗಿರುವದು. ಆ ಲಲಿತ ಕಲೆಗಳು—ಕಾವ್ಯ, ನಾಟಕ, ಸಂಗೀತ, ಚಿತ್ರ, ಮೂರ್ತಿ, ಶಿಲ್ಪ ಕಲೆಗಳೆಂಬದಾಗಿ ಆರು ಇರುವವು. ಸಾಮಾನ್ಯವಾಗಿ ಕಡೆಯ ಮೂರು ಕಲೆಗಳು ದೃಶ್ಯಗಳೆಂದೂ ಮೊದಲಿನ ಮೂರು ಶ್ರಾವ್ಯಗಳೆಂದೂ, ಮುಖ್ಯ ಎರಡು ಭೇದಗಳನ್ನು ನಾವು ಮಾಡಬಹುದು. ಆದರೆ ನಾಟಕವು ಸಮಾನಾಧಿ ಕರಣದಿಂದ ದೃಶ್ಯ ಶ್ರಾವ್ಯವೆಂದು ಎರಡೂ ಆಗುವದು.

೪ ಇನ್ನು ಸಂಗೀತವೆಂದರೆ ಕಾವ್ಯದ ಕಂಠ ವೆಂದೆನ್ನಬಹುದು. ವ್ಯವಹಾರಬಿಟ್ಟು ವಿಚಾರವಿಲ್ಲ, ಪದಬಿಟ್ಟು ಪದಾರ್ಥವಿಲ್ಲ, ಅದರಂತೆ ಸಂಗೀತಬಿಟ್ಟು ಗೀತೆಯಿಲ್ಲ, ಅಂದರೆ ಕಾವ್ಯವಿಲ್ಲ. ಆದರೆ ಕೊರಳು ಬೆರಳು ಸಂಚುಗೂಡಿ ಹೊರಟ ಪಂಚಮದಿಂಚರವು ಕಾವ್ಯವನ್ನು ಮುಟ್ಟಿದರೂ ಮುಟ್ಟಲಾರದು. ಈ ಭೇದಭಾವವು ಅವಿನಾಭಾವದಿಂದ ಕೂಡಿಕೊಂಡರೂ, ಭೇದವಿದ್ದಲ್ಲಿ ಭೇದಭಾವವು ಹುಟ್ಟಲಿಕ್ಕೆಬೇಕು.

ರಜ್ಜುವಿನಲ್ಲಿ ಸರ್ಪಜ್ಞಾನವಾದಂತೆ ಆ ಭಾಸವಾದರೆ, ಕಾರ್ಯಕಾರಣದಿಂದ ಆ ಮಿಥ್ಯಾಜ್ಞಾನಕ್ಕೂ, ಸತ್ಯಜ್ಞಾನವೆನ್ನಬೇಕಾಗುವದು. ಅಳಿಗಿಳಿಗಳು ಸುಳಿದಾಡಿದರೆ ಅರಮನಸ್ಸು ಅರಳಲಿಕ್ಕಿಲ್ಲ!

೫ ನಾಟಕವೆಂದರೆ "ವೃಷ್ಟಿಃ ಕರ್ಣಾವಲಂಬಿನೀ" ಎಂಬಂತೆ, ಇದರಲ್ಲಿ ಸರ್ವ ಕಲೆಗಳು ಕಲೆತು ಹೋಗುವವು. ಶಿವಶಕ್ತಿ ಸಮೇತವಾದ ಸರ್ವ ಪ್ರಪಂಚವು ಪ್ರತಿಬಿಂಬ ರೂಪದಿಂದ ಪ್ರಕಟವಾಗುವದರಿಂದ, ತಪೋಧನನಾದ ವಿಶ್ವಾಮಿತ್ರನ ಪ್ರತಿ ಸೃಷ್ಟಿಯೇ ಇಲ್ಲಿ ಪರಿಣಮಿಸುತ್ತದೆ. ವರ್ಣಕವೂ ವಸ್ತುಕವೂ ಸರಿಯಾಗಿ ಸಂಕೀರ್ಣವಾಗಿದ್ದು, ಸಂವಿಧಾನವು ಸರಿಯಾಗಿ ಸಾಧಿಸಿದರೆ ಉತ್ಕೃಷ್ಟ ನಾಟಕವೆನಿಸುವದು. ಈ ಪ್ರಮಾಣಗಳು ಹೆಚ್ಚು ಕಡಿಮೆಯಾಗುತ್ತ ಹೋದ ಹಾಗೆ, ನಾಟಕದಿಂದ ತ್ರೋಟಕದ ವರೆಗೆ ಈ ಸೋಪಾನ ಪಂಕ್ತಿಯು ಕೆಳಗಿಳಿಯುತ್ತ ಹೋಗುವದು. ಶೇಕ್ಸಪಿಯರ, ಕಾಲಿದಾಸಾದಿ ಕವಿಗಳು ಈ ತ್ರಿವೇಣಿ ಸಂಗಮದಲ್ಲಿ ಸ್ನಾನ ಮಾಡಿದ್ದರಿಂದ ಇಷ್ಟು ಪುಣ್ಯಶ್ಲೋಕರು ಆಗಿದ್ದಾರೆ. ಆದರೆ ನಾಟಕದ ನಾಮಮಾತ್ರದಿಂದ ಸಹಜವಾಗಿ ಕರ್ನಾಟಕದ ನೆನಪಾಗುವದು ಸಂಸ್ಕೃತವೆಂದರೆ ಹಿಂದೂ ಜನರ ಸಂಸ್ಕೃತಿಯ ಸಾರವೆಂದು ಹೇಳಬಹುದು. ಸಂಸ್ಕೃತ ಕೋಶವು ಛಪ್ಪನ್ನ ದೇಶಗಳಲ್ಲಿ ಪ್ರಚ್ಛನ್ನವಾಗಿರುವದರಿಂದ ದೇಶೀ ಭಾಷೆಗಳು ಬೆಳವಣಿಗೆ ಹೊಂದಿರುತ್ತವೆ. ಕನ್ನಡವು ಸಂಸ್ಕೃತದಿಂದ ಹುಟ್ಟದಿದ್ದರೂ ಅದರ ಸೇವೆಯಿಂದ ಬಹಳ ಶೋಭಿಸುತ್ತಲಿದೆ. ಇಂಥಾ ಸರ್ವಾಂಗ ಸುಂದರ ಸಂಸ್ಕೃತದಲ್ಲಿ ಮಹಾಕಾವ್ಯಗಳೆಂದರೆ, ಕೇವಲ ಪಂಚಮಹಾ ಕಾವ್ಯಗಳು, ಆದರೆ ಕನ್ನಡದಲ್ಲಿ ನೋಡಿದರೆ, ಅನೇಕ ಮಹಾಕಾವ್ಯಗಳು ಕಂಗೊಳಿಸುತ್ತವೆ. ಚಂಪೂ ಗ್ರಂಥಗಳ ಸಂಪಿಗೆಯ ವನದಲ್ಲಿ ನಮ್ಮ ಕಾವ್ಯ ಕೋಟೀಶ್ವರರು ಮನದಣಿ ವಿಹಾರ ಮಾಡಿದರು. "ಕಾವ್ಯೇಷು ನಾಟಕಂ ರಮ್ಯಂ" ಎಂದು ಯಾಕೆ ನಾಟಕಗಳನ್ನು ಬರೆಯಲಿಲ್ಲೆಂಬದರ ಕಾರಣವು ಅಚಿಂತ್ಯವಾಗಿರುತ್ತದೆ. ಕರ್ನಾಟಕದ ಮುಖದಲ್ಲಿಯೇ ನಾಟಕವು ಮೂಡಿರುವದೆಂಬ ಮಾತು ಮನಸ್ಸಿಗೆ ವಿಷಾದವನ್ನುಂಟು ಮಾಡುವದು! ಕರ—ನಾಟಕವೆಂದು ನಿನ್ನೆ ಮೊನ್ನಿನ ಮರಾಟಿಗರು ಮಾತನಾಡಿದರೆ ದೋಷವೇನು?

೬ ಇನ್ನು ಚಿತ್ರ, ಮೂರ್ತಿ, ಶಿಲ್ಪ ಕಲೆಗಳಲ್ಲಿ ದೃಶ್ಯಭಾವದಿಂದ ಸಾದೃಶ್ಯವು ಸ್ಪಷ್ಟವಾಗುತ್ತದೆ. ಇವುಗಳಿಗೆ ಮೂಕ ಕಾವ್ಯಗಳೆಂದರೂ ಸಲ್ಲುವದು ಶಿಲ್ಪಿಗನ ಅಥವಾ ಚಿತ್ರಗಾರನ ಮನೋಭಾವವು ಮೂರ್ತಿಯಲ್ಲಾಗಲಿ ಚಿತ್ರದಲ್ಲಾಗಲಿ ಚನ್ನಾಗಿ ಮೂಡಿದರೆ ಸಂಕಲ್ಪವು ಸಾಧಿಸಿ

ದಂತೆಯಾಯಿತು. ಸುಖದಲ್ಲಿದ್ದರೆ ಮುಖದಲ್ಲಿ ನಗೆಯಾಡಿರಬೇಕು; ದುಃಖ
ದಲ್ಲಿದ್ದರೆ ಮುಖವು ಬಾಡಿರಬೇಕು; ಕಂಪನೆಯಿದ್ದರೆ ಮೂರ್ತಿಯಲ್ಲಿ
ನಡುಗಿರಬೇಕು; ಕಾರುಣ್ಯವಿದ್ದರೆ ಅದರಲ್ಲಿ ಕೂಡಿರಬೇಕು; ಇವೇ ಮುಂ
ತಾದ ಭಾವನೆಗಳು ಚನ್ನಾಗಿ ಪ್ರಕಟವಾಗಬೇಕು. ಕಲ್ಲು, ಕಟ್ಟಿಗೆ ಮುಂ
ತಾದ ಪದಾರ್ಥಗಳಲ್ಲಿ ಕೆತ್ತಿ ಕಟಿದು ಕೆಲಸ ಮಾಡುವದು ಕಠಿಣವೆನಿ
ಸಿದರೂ ಅಷ್ಟು ಕಠಿಣವಲ್ಲ. ಇವುಗಳಕಿಂತಲೂ ಮೃದುವಾದ ಬೆಳ್ಳಿ ಬಂ
ಗಾರಗಳಲ್ಲಿ ಕೆಲಸ ಮಾಡುವದು ಹೆಚ್ಚು ಸುಲಭಾದರೂ ಸೂಕ್ಷ್ಮತೆ
ಯಿಂದ ಹೆಚ್ಚು ಕಠಿಣವೆನಿಸುತ್ತದೆ. ಯಾಕಂದರೆ ದ್ರವ್ಯವು ಮೃದುವಿ
ದ್ದಂತೆ ತಿರುವು ಮುರುವುಗಳು ಸಂದಣಿಗೊಂಡು, ನುಣ್ಣಗೆ ನಾಟಬೇಕಾ
ದರೆ ಪ್ರಯಾಸವು ಹೆಚ್ಚಾಗುತ್ತದೆ. ಅದರಂತೆ ಶಬ್ದವೆಂಬ ಸೂಕ್ಷ್ಮದ್ರವ್ಯ
ದಲ್ಲಿ ದುಡಿಯುವದು ಎಷ್ಟು ಸುಲಭವಾಗಿ ಕಾಣುತ್ತದೆಯೋ ಅಷ್ಟೇ
ಕಠಿಣವಿರುತ್ತದೆ. ಯಾಕಂದರೆ ಮಾತಿನ ಮುದ್ದೆಯು ಮೊದ್ದಿನಂತೆ ಮಿದು
ವಾಗುತ್ತ ಹೋಗುವದು. ಆದ್ದರಿಂದ ಮೊದಲಿನ ಮೂರು ಕಲೆಗಳು,
ಉಳಿದ ಮೂರು ಕಲೆಗಳಿಗಿಂತ ಮೇಲೆಂದು ಹೇಳಬಹುದು.

೭ ರಮಣೀಯಾರ್ಥ ಪ್ರತಿಪಾದನವು ಸರ್ವ ಕಲೆಗಳಲ್ಲಿ ಅಡಕವಾ
ಗಿರುವದರಿಂದ ಅದರ ಉತ್ಕರ್ಷವೇ ಕಾವ್ಯದ ಬೀಜವೆನಿಸುತ್ತದೆ. ಶಬ್ದ
ಶಾಸ್ತ್ರವೆಂದರೆ ಈ ಸ್ಥೂಲ ಸೃಷ್ಟಿಯಲ್ಲಿಟ್ಟ ಕವಿಯ ಸೂಕ್ಷ್ಮದೃಷ್ಟಿಯಂ
ತಲೇ ಅನ್ನಬೇಕು. ಹುಲಿಯನ್ನು ಕಂಡರೆ ಪ್ರಾಣಿಶಾಸ್ತ್ರಜ್ಞನು ಅದರ
ರೂಪರೇಷೆಯನ್ನು ಈಪ್ರಕಾರ ಹೇಳುತ್ತಾನೆ; ಇದು ಚತುಷ್ಪಾದ ಪ್ರಾಣಿ
ಯು, ಬೆಕ್ಕಿನ ವರ್ಗಕ್ಕೆ ಸೇರಿದ್ದು, ಇದರ ಬಣ್ಣವು ಹೀಗೆ, ಆಕಾರವು
ಹೀಗೆಯೆಂದು ವರ್ಣಿಸುತ್ತಾನೆ. ಈ ಸತ್ಯ ಸರಣಿಯು ಕಾವ್ಯ ಸರಣಿ
ಯಾಗುವದು. ಆದರೆ ಇದನ್ನು ಕವಿಯು ವರ್ಣಿಸಬೇಕಾದರೆ, ಇದರಲ್ಲಿ
ರುವ ಉಗ್ರ, ಶೀಘ್ರ, ಕ್ರೂರ, ಭಾವಗಳನ್ನು, ತನ್ನ ಪ್ರತಿಭಾಪ್ರಭಾವ
ದಿಂದ, ಅಂಜಿಕೆಯೂ ಆನಂದವೂ ಒಮ್ಮೆಲೆ ಆಗುವಂತೆ ಸರಸವಾಗಿ
ವರ್ಣಿಸುತ್ತಾನೆ. ಗೋಳಗುಮ್ಮಟವೆಂದರೆ ಚೌಕಾಕೃತಿಯ ಮೇಲೆ ವರ್ತು
ಳದ ವಿನ್ಯಾಸವೆಂದರೆ ಸಾಕಾಗದು; ಅದರ ಉದ್ದಗಲಳತೆಗಳನ್ನು ಅಳೆ
ದರೆ ತೀರದು; ಅದರ ಕಮಾನ ಕಂಬಗಳನ್ನು ಎಣಿಸಿದರೆ ಮುಗಿಯದು;
ಆದರೆ ಆ ಮಹಾ ಮಂದಿರದ ಮುಂದೆ ನಿಂತರೆ, ಅದರ ಭದ್ರತೆಗೂ
ಭವ್ಯತೆಗೂ, ಅಣುಮಾತ್ರ ಮನವು ಮಹತ್ಪರಿಮಾಣವನ್ನು ಹೊಂದು

ವಾಗ, ಆನಂದಾಶ್ಚರ್ಯಗಳು ತುಂಬಿ ತುಳುಕುವಾಗ, ಕವಿಯು ತನ್ನ ವಾಣಿಯಲ್ಲಿ ಕುಣಿದಾಡುತ್ತಾನೆ. ಈ ಪ್ರಕಾರ ಅಂತರಂಗದಲ್ಲಿ ಆಲೆದಾಡುವ ವಿಚಾರತರಂಗಗಳನ್ನು ಬಹಿರಂಗವಾಗಿ ರಂಜಿಸುವದು ಕವಿಯ ಕರ್ಮವು. ಇದರಂತೆ ಅನೇಕ ಭಾವಾನುಬಂಧನಗಳ (Associations) ಪರಂಪರೆಯು ಸಾಗುವದು. ಇದುವೇ ಕಾವ್ಯದ ಸ್ವರೂಪ ಲಕ್ಷಣವು. ಇತಿಹಾಸವು ಇದ್ದದ್ದನ್ನು ಹೇಳುವದು. ಕಾವ್ಯವು ಕಂಡದ್ದನ್ನು ಹೇಳುವದು. ಒಂದು ಸತ್ಯವನ್ನು ಅನುಸರಿಸಿದರೆ, ಇನ್ನೊಂದು ಸೌಂದರ್ಯವನ್ನು ಅನುಸರಿಸುತ್ತದೆ. ಈ ವಕ್ರೋಕ್ತಿ ಸ್ವಭಾವೋಕ್ತಿಗಳ ಭೇದಗಳು. ಕಾವ್ಯೇತಿಹಾಸಗಳ ಭೇದಗಳು.

೮ ಕಾವ್ಯಸೃಷ್ಟಿಯು ಬ್ರಹ್ಮಸೃಷ್ಟಿಗಿಂತ ಬೇರೆಯಾಗಿ ತೋರುತ್ತದೆ. ಷಡ್ರಸಗಳಿಂದ ಬ್ರಹ್ಮಸೃಷ್ಟಿಯು ಕೂಡಿದರೆ, ನವರಸಗಳಿಂದ ಕಾವ್ಯಸೃಷ್ಟಿಯು ಕೂಡಿದೆ. ಷಡ್ರಸಗಳು ಸುಖ ದುಃಖ ಮಯವಾದರೆ ನವರಸಗಳು ಸುಖವನ್ನೇ ಸುರಿಸುತ್ತವೆ. ಸಂಸಾರದಲ್ಲಿ ದುಃಖದ ಸಂಗತಿಯು ಶೋಕವನ್ನು ಬೀರುವದು; ಆದರೆ ಅದೇ ಸಂಗತಿಯು ಸಾಹಿತ್ಯನಲ್ಲಿ ಸೇರಿದರೆ ಸಂತೋಷಗೊಳಿಸುವದು. ಬ್ರಹ್ಮನು ಕಾರ್ಯಕಾರಣಗಳಿಂದ ಕಟ್ಟಲ್ಪಟ್ಟರೆ, ಕವಿಯು ತನ್ನ ಸ್ವಚ್ಛಂದವೃತ್ತಿಯಿಂದ, ಆ ಕಾರ್ಯಕಾರಣಗಳನ್ನು ಕಡಿದು ಬಿಡುವನು. ಈ ಪ್ರಕಾರ ಕರ್ತಾರನ ಕಮ್ಮಟಗಿಂತ ಕವಿಯ ಕಮ್ಮಟದಲ್ಲಿರುವ ವ್ಯತಿರೇಕವನ್ನು ಮಮ್ಮಟನು ಬಹು ಮಾರ್ಮಿಕರೀತಿಯಲ್ಲಿ ಅಲಂಕರಿಸಿದ್ದಾನೆ.

೯ ಪ್ರತಿಭಾಪ್ರಕಾಶವು ರಸರೂಪ ತಾಳಿದರೆ, ವರ್ಣಸಂಕರದಿಂದ ಚಿತ್ರವು ವೈಚಿತ್ರ್ಯವನ್ನು ಹೊಂದುವಂತೆ, ಅದು ಅನೇಕ ವರ್ಣವಾಗಿ ಹರಿಯುವದು. ಮೂಲಝರಿಯು, ಕೆರೆಕಾಲುವೆ, ಹೊಳೆಹಳ್ಳಗಳೆಂಬ ಬೇರೆ ಬೇರೆ ರೂಪಗಳಲ್ಲಿ ಹರಿದರೂ, ಝರಿಯೆಂಬುದು ಪ್ರತ್ಯೇಕವಾಗಿ ಒಂದು ರೂಪದಲ್ಲಿ ಇದ್ದೇ ಇರುತ್ತದೆ. ಅದರಂತೆ ಕಾವ್ಯವು ಲಲಿತಕಲೆಗಳಲ್ಲಿ ಲೀನವಾಗಿ, ಪಂಚೇಂದ್ರಿಯಗಳಲ್ಲಿ ಸಂಚಾರಮಾಡುತ್ತಿರುವ ಅಂತರಿಂದ್ರಿಯದಂತೆ ತಾನೊಂದಾಗಿರುತ್ತದೆ. ಈ ಕಲ್ಪತೆಗೆ ಕಾವ್ಯವೆಂದು ವರ್ಡ್ಸ್‌ವರ್ಥನು ಹೀಗೆ ಅದರ ವ್ಯಾಖ್ಯೆ ಮಾಡುತ್ತಾನೆ, (The light that was never on the land or the sea). ಇದನ್ನೇ ಬಾಣ

ನು "ಕವಿರಿವನ ಕಿಂಚಿತ್ ನ ಉತ್ಪ್ರೇಕ್ಷತೇ" ಎಂದು ತನ್ನ ಕಾದಂಬರಿಯಲ್ಲಿ ಉಲ್ಲೇಖಿಸಿದ್ದಾನೆ. ಈ ಕಲ್ಪತೆಯು ಅನೇಕರೀತಿಯಿಂದ ಹೊರಬೀಳುವದು. ಒಮ್ಮೊಮ್ಮೆ ಸಾವ್ಯ ವೈಷಮ್ಯಗಳಿಂದಲೂ ವಿರೋಧ ವ್ಯತಿರೇಕಗಳಿಂದಲೂ, ಒಮ್ಮೊಮ್ಮೆ ಕಾರ್ಯಕಾರಣಗಳಿಂದಲೂ ಬಿಂಬ ಪ್ರತಿಬಿಂಬ ರೂಪದಿಂದಲೂ, ಹೀಗೆ ಈ ವೈಚಿತ್ರ್ಯವು ಅನೇಕ ಅಲಂಕಾರಗಳಿಗೆ ಅವಕಾಶವನ್ನು ಕೊಟ್ಟಿರುವದು.

೧೦ ಈಪ್ರಕಾರ ಭಾವನಾಪ್ರಧಾನವಾದ ಕಾವ್ಯದ ನಿಧಾನವು ಯಾವದೆಂದು ಕೇಳಿದರೆ, ಶೆಲೆ (ವಾಡ್ಸ್‌ವರ್ಥ ಶೆಲೆ)ಯೆಂಬ ಕವಿಯು (Disembodied Joy) ಮೋಕ್ಷಾಪೇಕ್ಷೆಯೆಂದು, ಚಂಡೋಲ ಪಕ್ಷಿಯಂತೆ ನಭೋಮಂಡಲವಲ್ಲಿ ನಲಿದಾಡುತ್ತಾನೆ. ನೋಡಿದರೆ, ತತ್ವಕ್ಕೂ ಕವಿತ್ವಕ್ಕೂ ಮಹದಂತರವು ತೋರುತ್ತದೆ. ತತ್ವದರಸವು ವಿರಾಗವು; ಕವಿತ್ವದ ರಸವು ಅನುರಾಗವು ಕವಿಯು ಸದ್ಯದ ಸುಖದಲ್ಲಿ ಮಗ್ನನಾದರೆ, ತಾತ್ವಿಕನು ಅತ್ಯಂತ ಸುಖಕ್ಕೆ ಎಳೆಸುವನು. ಹೀಗೆ ಪರಸ್ಪರ ವಿರೋಧ ಕಂಡು ಬಂದರೂ ವಸ್ತುತಃ ಅವು ಒಂದೇ ಇರುವವು. ಯಾಕಂದರೆ, ಮೋಕ್ಷವೆಂದರೇನು? ಸತ್-ಚಿತ್-ಆನಂದವು. ಸತ್–ಅಂದರೆ ಶಿವ (ಕವಿ) ಸೃಷ್ಟಿ. ಚಿತ್—ಅಂದರೆ ಅದರಲ್ಲಿರುವ ದಿವ್ಯ (ಕಾವ್ಯ) ಗೃಷ್ಟಿ ಮತ್ತು ಆನಂದವೆಂದರೆ ಅದರಿಂದಾಗುವ ತುಷ್ಟಿಯೆಂದು ಹೇಳಬಹುದು. ಹೀಗೆ ಒಂದಕ್ಕೆ ಸವಿಕಲ್ಪಕ ಸಮಾಧಿಯೆಂದು ಮತ್ತೊಂದಕ್ಕೆ ನಿರ್ವಿಕಲ್ಪಕ ಸಮಾಧಿಯೆಂದು ಅಂದರೂ ಸಲ್ಲುವದು. ಮತ್ತು ಎರಡು ಧ್ಯೇಹವು ಆನಂದದಲ್ಲಿ ಪರ್ಯವಸಾನವಾಗುವದು. ಅದರಂತೆ ಕೀಟ್ಸ್ ಕವಿಯಾದರೂ (Beauty is truth, truth is beauty)ಸೌಂದರ್ಯವೆಂದರೆ ಸತ್ಯ, ಸತ್ಯವೆಂದರೆ ಸೌಂದರ್ಯವೆಂದು ಪ್ರತಿಪಾದಿಸಿದ್ದಾನೆ.

೧೧ ಇನ್ನು ಶಾಸ್ತ್ರವೆಂದರೆ ಆಧ್ಯಾತ್ಮಿಕ ವಿಚಾರ (philosophy) ವೆಂದು ಹಿಂದೂ ಜನರಿಗೆ ಹೊಳೆಯುವದು; ಆದರೆ ಸದ್ಯಃ ಪಾಶ್ಚಿಮಾತ್ಯರ ಪ್ರಕಾಶದಲ್ಲಿ ಶಾಸ್ತ್ರ (Science) ವೆಂದರೆ ಆದಿಭೌತಿಕ ವಿಚಾರವೆಂದು ಹೇಳಬಹುದು. ಆಂಗ್ಲ ಸಂಸ್ಕೃತಿಸಾರಭೂತ ಈ ಸಾಯನ್ಸ ಭೂತವು ಅನೇಕ ಅದ್ಭುತಗಳನ್ನು ಹೂಡಿ, ಲೋಕದಲ್ಲಿ ಮನ್ವಂತರ ಮಾಡಿ

ಬಿಟ್ಟಿರುವದು. “ಕಂಚಿನಾಬಂಡಿ ಮಿಂಚುತ್ತ ಬರುವಾಗ” ಮನನೆಂಬ ನೋಡದಲ್ಲಿ, ಕಾವ್ಯದ ಕೋಲುಮಿಂಚು ಯಾರಲ್ಲಿ ಹೊಳೆದಿರಲಿಕ್ಕಿಲ್ಲ, ಅಥವಾ ಇನ್ನೂ ಹೊಳೆಯುತ್ತಿರುವದಿಲ್ಲ! ವಾಯುವೇಗಕ್ಕಿಂತ ವಿದ್ಯುತ್ ವೇಗವು ಮೇಲಾಗಿದೆ. ಆದ್ದರಿಂದ ವಿದ್ಯುತ್ ವೇಗದಿಂದ ಅಳಕಾವತಿಗೆ ಹೋಗಿ, ಕಾಂತೆಯ ಕುಶಲವನ್ನು ಕೇಳಿಕೊಂಡು ಬಾ ಎಂದು, ಚಿಂತಾ ತಪ್ತನಾದ ಯಕ್ಷನು ಮೇಘನಿಗೆ ಇನ್ನೊಮ್ಮೆ ಮಾತನಾಡಬಹುದು. ಈ ಪ್ರಕಾರ ಸಾಯನ್ನದ ಶೋಧಗಳು ಬಳಿಕೆಯಲ್ಲಿ ಬಂದಂತೆ, ನಮ್ಮ ಬಯಕೆಗಳು ಬೆಳೆದಂತೆ. ಗರ್ಭಿಣಿಯತೆರದಿ, ಕವಿತಾ ಕಾಮಿನಿಯ ದೋಹದವು ಹೆಚ್ಚುತ್ತ, ಕಾವ್ಯಫಲವು ಪರಿಣಮಿಸುತ್ತ ಹೋಗುವದು.



ಶ್ರೀ ಮಜ್ಜಗದ್ಗುರು

# ರೇಣುಕಾಚಾರ್ಯಾಷ್ಟಕಂ

ಲೇಖಕರು— ಪಂ-ಶ್ರೀ.ಬಸವರಾಜ ಶಾಸ್ತ್ರಿ. ಕೋಡಿಕೊಪ್ಪ

---

ಶ್ರೀಮಜ್ಜಗದ್ಗುರು ರೇಣುಕಾಚಾರ್ಯರು ಕೊಲ್ಲೀಪಾಕಿ ಲಿಂಗದಲ್ಲಿ ಅವತರಿಸಿ ಪರಮತವ ಖಂಡಿಸುತ್ತಾ ಸ್ವಮತವ ಸ್ಥಾಪಿಸುತ್ತಾ ಬಂದು ಶ್ರೀಮದ್ರಂಭಾಪುರೀ (ಬಾಳೆಹಳ್ಳಿ) ಯಲ್ಲಿ ವೀರಸಿಂಹಾಸನವನ್ನೇರಿ ವಿರಾಜಮಾನರಾಗಿರುವ ವಿಷಯವು ಈ ಅಷ್ಟಕದಲ್ಲಿ ಅಡಕವಾಗಿರುವದು. ಶಿವಭಕ್ತರಿಗೆ ಪ್ರತಿದಿನ ಪಾರಾಯಣ ಮಾಡಲು ಯೋಗ್ಯವಾಗಿರುವದು.

ಶಂಭುಂ ಶ್ರೀಲನಿಜೇಷ್ಟಲಿಂಗ ಸಹಿತ ಶ್ರೀಸೋಮಲಿಂಗೋದ್ಭವಂ ।
ಕುಂಭೋತ್ಪನ್ನ ಯಮೀಂದ್ರವಂದ್ಯಮಭವಂ ದಿವ್ಯಾಂಗಸಂಗಂ ಶಿವಂ॥
ಗಂಭೀರಾಕೃತಿಮಂಗಜಾಂಗದಹನಂ ಪ್ರಾರಬ್ಧ ಶಂಭೂತ್ಸವಂ ।
ರಂಭಾಪಲ್ಲಿ ಜಗದ್ಗುರುಂ ಚರವರಂ ಶ್ರೀರೇಣುಕಾರ್ಯಂ ಭಜೇ ॥೧॥

ಯೋ ವೇದಾಗಮ. ಯೋಗ ಶಾಸ್ತ್ರ ಜಲಧೀನುನ್ಮಥ್ಯಪೃಥ್ವೀತಲೇ ।
ದೇವಸ್ವೀಕೃತ ವೀರಶೈವ ಸಮಯೋದ್ಧಾರಂ ಸದಾ ಚಕ್ರಿರೇತ್ ॥
ಸ್ವೈವಾಸ್ಯಾಂ ಪುರಿ ವರ್ತತೇಹಿ ವಿಮಲಶ್ಚಿಂತಾಮಣಿಃ ಸಂತತಂ ।
ತಂರಂಭಾನಗರೀಶ್ವರಂ ಗುರುವರಂ ಶ್ರೀರೇಣುಕಾರ್ಯಂ ಭಜೇ ॥೨॥

ಯೋಗತ್ಯಾಗ ವಿರಾಗ ಭೋಗ ರಸಿಕಂ ಯೋಗೀಶ ಸದ್ಬೋಧಕಂ ।
ಭೂಗೋತ್ರೀ ಭವರೋಗ ಪೀಡಿತಜನ ಪ್ರತ್ಯಕ್ಷ ಸದ್ವೈದ್ಯಜಂ ॥
ವಾಗಾಡಂಬರಶೌಂಡ ದಂಡಿಯಮಿನಾಂ ಸಿದ್ಧಾಂತ ಮುದ್ಘಾಟಕಂ ।
ಸದ್ಯೋಜಾತ ಮುಖೋದ್ಗತಂಸುರಗುರುಂ ಶ್ರೀರೇಣುಕಾರ್ಯಂಭಜೇ।೩।

ಧರ್ಮಗ್ಲಾನಿತಮಃಪತಂಗ ಮಮಲಂ ಸರ್ವಾರ್ಥಸಿದ್ಧಿ ಪ್ರದಂ ।
ಧರ್ಮಸ್ಥಾಪನ ಕಾರ್ಯಭಾರನಿರತಂ ಚಾರ್ವಾಕ ಗರ್ವಾಪಹಂ ॥
ಕರ್ಮಜ್ಞಾನ ವಿಪಾಕ ಪೂತ ಮತಿ ಮತ್ಸ್ವರ್ಗಾಪವರ್ಗಪ್ರದಂ ।
ಶರ್ಮಾಂಭೋಧಿ ನಿಮಜ್ಜನೋಜ್ವಲತನುಂ ಶ್ರೀರೇಣುಕಾರ್ಯಂಭಜೇ।೪।

ಶುದ್ಧಾದ್ವೈತ ಮತಂ ವಿಭೇದ್ಯ ಸುಧಿಯೋ ಮಾಧ್ವಸ್ಯ ಬುದ್ಧಸ್ಯಚ।
ಸಿದ್ಧಾಂತಾ ಕರಮಾಶು ಖಾದ್ಯ ಸುಭಗಂ ಸದ್ವೀರ ಸಿಂಹಾಸನಂ॥
ಅಧ್ಯಾಸ್ಯಾಮಲ ಶಕ್ತಿಯುಕ್ತ ಸುಮತಂ ಸಂಸ್ಥಾಪ್ಯ ವಿದ್ವನ್ಮಣೀಃ।
ಸದ್ಯೋಭಾತಿ ಸದಾಸುಧೀಷು ಬುಧರಾಟ್ತಂ ರೇಣುಕಾರ್ಯಂಭಜೇ॥೫॥
ಭೂನಾಥೈರ್ನತಪಾದಪದ್ಮಯುಗಲಃ ಶಾಸ್ತ್ರಂ ಸ್ವಕಂ ಷಟ್ಸ್ಥಲಂ।
ಮಾನ್ಯಾಗಸ್ತ್ಯ ಮುನಿಂ ಜಗಾದ ಸಕಲಂ ಶ್ರೀಷ್ಟೇಷ್ಟಲಿಂಗಂಚತತ್॥
ಧನ್ಯಾಯಾಥ ವಿಭೀಷಣಾಯ ಗತಿಕೃತ್ ಸಂಧಾರ್ಯರೇಜೇ ಪುರಾ।
ತಂ ರಂಭಾನಗರೀಶ್ವರಂ ಸ್ಮರಹರಂ ಶ್ರೀರೇಣುಕಾರ್ಯಂ ಭಜೇ॥೬॥
ಕೊಲ್ಲೀಪಾಕಿ ವಿನಿರ್ಗತಃ ಶಿವನುತಂ ವಿಸ್ತಾರ್ಯ ಭೂಮಂಡಲೇ।
ವಲ್ಲೀ ಗೇಹನಿವಾಸಿನಾರ್ಚಿತಪದಃ ಸಲ್ಲಾಪ ಸಂದರ್ಶನೈಃ॥
ಪಲ್ಲೀ ಪತ್ತನ ಪುಣ್ಯತೀರ್ಥನಿಚಯಂ ಪೂತೀಕೃತೋ ಭೂನುತ।
ಸ್ತಲ್ಲಿಂಗೈಕ್ಯ ಮಗಾದ್ಯಏವ ಮಹಿಮಾಂಸ್ತಂ ರೇಣುಕಾರ್ಯಂ ಭಜೇ॥೭॥
ಧರ್ಮೋದ್ಧಾರಕ ಸರ್ವ ಕರ್ಮ ಕರಣೇ ದಕ್ಷಂಸದಾ ರಕ್ಷಕಂ।
ಪೂರ್ವೋಪಾರ್ಜಿತ ಪುಣ್ಯಪುಂಜ ಪುರುಷೈಃ ಸಸ್ತೂಯಮಾನಂ ಶಿವಂ॥
ಶರ್ವಧ್ಯಾನ ನಿಮಗ್ನ ಸಜ್ಜನ ಪರಿತ್ರಾಣಕ್ಷಮಂ ಯೋಗಿನಂ।
ಸರ್ವಾಧಾರ ಜಗದ್ಗುರುಂ ಮಮಗುರುಂ ಶ್ರೀರೇಣುಕಾರ್ಯಂ ಭಜೇ॥೮॥
ಸುರಮುನಿಜನ ಸೇವ್ಯಂ ರೇಣುಕಾರ್ಯಾಷ್ಟಕಂ ಯಃ
ಪಠತಿ ಝಟಿತಿ ಮರ್ತ್ಯಃ ಪ್ರಾತರುತ್ಥಾಯ ನಿತ್ಯಂ॥
ವ್ರಜತಿ ಶಿವಸಮೀಪಂ ಸೌಖ್ಯಮಾಯುಃ ಸುತಂ ಚ
ಶಿವಪುರ ವೃಷರಾಜೇನಾರ್ಪಿತಂ ಶ್ರದ್ಧಯೇದಮ್ ॥೯॥



# ಬಿಳಗಿಯ ರಾಜರು

ಲೇಖಕರು— ಬಿ. ಶಿವಮೂರ್ತಿಶಾಸ್ತ್ರಿ ಕೀರ್ತನಕಾರ ತುಮಕೂರು.

---

'ಶಿವಾನುಭವದ' ಹನೆಯ ಸಂಚಿಕೆಯಲ್ಲಿ "ಬಿಳಗಿಯ ರಾಜ್ಯಚರಿತ್ರೆ" ಎಂಬ ಲೇಖನವೊಂದನ್ನು ವಾಚಕರ ಓದಿರುವರಷ್ಟೇ? ಆದರಲ್ಲಿ ಬಿಳಗಿಯ ರಾಜರು ಮೊದಲು ಜೈನರಾಗಿದ್ದು ಯಾವುದೋ ಒಂದು ಮಧ್ಯಕಾಲದಲ್ಲಿ ವೀರಶೈವ ಮತವನ್ನು ಅವಲಂಬಿಸಿರಬಹುದೆಂದು ನಾನು ಮಾಡಿದ್ದ ಊಹೆಯನ್ನು ಓದುಗರು ಮರೆದಿರಲಾರರು.

ಆಗ ನಾನು ಮಾಡಿದ್ದ ಊಹೆಯೇ ನಿಜವಾಗುವ ಸಂಭವವು ಇತ್ತೀಚಿನ ಪರೀಕ್ಷೆಯಿಂದ ಸಿಗುತ್ತಿರುವುದು. ಈ ವಿಷಯುವನ್ನು ವಾಚಕರಿಗೆ ತಿಳಿಸುವ ಸಲುವಾಗಿ ಈ ಬರಹವನ್ನು ಬರೆಯುಲಾಯಿತು.

ಅಖಂಡ ಭರತಖಂಡದ ಪೂರ್ವೇತಿಹಾಸವನ್ನು ತಿಳಿಯಲಿಕ್ಕೆ ಇರುವ ತೊಂದರೆಗಳೇ ನಮಗೂ ಇವೆ. ಈಗ ಉಪಲಬ್ಧವಾಗಿರುವ ಪುರಾತನ ಗ್ರಂಥಗಳು ಶಾಸನಗಳು ನಾಣ್ಯಗಳು ನಮ್ಮ ದೇಶವಿಷಯದಲ್ಲಿ ಪರದೇಶೀಯರು ಬರೆದಿರುವ ಬರಹಗಳು ಇವುಗಳನ್ನು ಬಿಟ್ಟರೆ ನಮಗೆ ಅಷ್ಟು ಉತ್ತಮ ಸಾಧನಗಳು ಸಿಕ್ಕುವುದಿಲ್ಲ.

ಕರ್ಣಾಟಕ ಸಾಹಿತ್ಯ ಪ್ರಪಂಚದಲ್ಲಿ ಮಹಾಕಾವ್ಯಗಳನ್ನೂ ಪುರಾಣಗಳನ್ನೂ ಬರೆದ ಕವಿಗಳು ವಿಪುಲವಾಗಿರುವರು. ಪಂಪ, ರತ್ನ, ನೇಮಿಚಂದ್ರ, ನಾಗಚಂದ್ರ, ಹರಿಹರ, ರಾಘವಾಂಕ, ಷಡಕ್ಷರದೇವ, ಮೊದಲಾದ ಮಹಾತ್ಮರು ಮಹಾಕವಿಗಳಲ್ಲಿ ಹೆಸರಾದವರು. ಅದರೆ ಇವರು ಕಾವ್ಯಗಳಲ್ಲಿ ಐತಿಹಾಸಿಕ ವಿಷಯುಗಳಿಗಿಂತ ಸಾಹಿತ್ಯಸಂಬಂಧ ವಿಷಯುಗಳಿಗೆ ಪ್ರಾಮುಖ್ಯತೆ ಕೊಟ್ಟಿರುವರು.

ಕನ್ನಡ ಕಬ್ಬಿಗರಲ್ಲಿ ಹೆಸರಾದವರಾಗಿಯೂ ಸಾಹಿತ್ಯದ ಜೊತೆಗೆ ಐತಿಹಾಸಿಕ ವಿಷಯುಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟು ಗ್ರಂಥಗಳನ್ನು ಬರೆದ ಇನ್ನೊಂದು ವರ್ಗದ ಕವಿಗಳಿರುವರು. ಇವರುಗಳಲ್ಲಿ ವಿರೂಪಾಕ್ಷಪಂಡಿತ, ತಿರುಮಲಾರ್ಯ, ಲಿಂಗಣ್ಣಕವಿ ಇವರು ಮುಖ್ಯರು. ಇವರಲ್ಲಿಯೂ ಲಿಂಗಣ್ಣನು ಇತಿಹಾಸ ಪ್ರಧಾನವಾಗಿ ಕಾವ್ಯವನ್ನು ಬರೆದವ

ರಲ್ಲಿ ಅಗ್ರಗಣ್ಯನು. ಈ ವಿಷಯುವನ್ನು ಏತತ್ಕವಿಕೃತ "ಕೆಳದೀನೃಪವಿಜ" ಯುವನ್ನು ಓದಿದ ಪಂಡಿತಕರೆಲ್ಲರೂ ಬಲ್ಲರು.

ಈ ಲೇಖನಕ್ಕೆ ಕೆಳದೀನೃಪವಿಜಯುವು ಆಧಾರ ಗ್ರಂಥವು. ಇದು ಕೆಳದಿಯರಸರ ವಿಷಯುವನ್ನು ಹೇಳುವ ಗ್ರಂಥವಾದರೂ ಒಂದೆರಡೆಡೆ ಗಳಲ್ಲಿ ಬಿಳಗಿಯ ವಿಷಯುವನ್ನೂ ತಿಳಿಸುತ್ತದೆ. ಅಲ್ಲದೆ ಬಿಳಗಿಯ ಜೈನರಾಜರು ವೀರಶೈವರಾಗಿರಬಹುದೆಂಬ ಊಹೆಯನ್ನು ಸಾಧಿಸಲು ಕೆಲವು ಅವಕಾಶ ಸೂಚಕಪದ್ಯಗದ್ಯಗಳಿವೆ. ಈ ವಿಷಯುವನ್ನು ಇನ್ನು ಮುಂದೆ ಯಥಾಮತಿ ಚರ್ಚಿಸಲಾಗುವುದು.

ಬಿಳಗಿಯ ರಾಜ್ಯವನ್ನು ಶಾ. ಶ. ೧೫೨೫ ನೇ ನಂದನ ಸಂವತ್ಸರದಲ್ಲಿ ಮಹಾ ಧಾರ್ಮಿಕನೂ ವಿದ್ಯಾಭಿಮಾನಿಯೂ ಆದ ಘಂಟೇಂದ್ರ ನೆಂಬ ರಾಜನು ಪಾಲಿಸುತ್ತಿದ್ದನು. ಇವನಿಗೆ ಕರ್ಣಾಟಕ ವ್ಯಾಕರಣ ದಿಂದ ಶಬ್ದಾನು ಶಾಸನವನ್ನ ಸಂಸ್ಕೃತದಲ್ಲಿ ಬರೆದ ಮಹಾಕವಿ ಭಟ್ಟಾ ಕಳಂಕನು ಗುರುವಾಗಿದ್ದನು. ಭಟ್ಟಾಕಲಂಕನು ಅಕಲಂಕದೇವಮುನಿಯ ಶಿಷ್ಯನು. ಭಟ್ಟಾಕಲಂಕನು ಶಾ. ಶ. ೧೫೨೬ ರಲ್ಲಿ ಶಬ್ದಾನುಶಾಸನ ವನ್ನು ಬರೆದಂತೆ ತನ್ನ ಗ್ರಂಥದಲ್ಲಿಯೇ ಹೇಳಿರುವನು. ಅಲ್ಲದೆ ಈತನು ತನ್ನ ಶಿಷ್ಯನಾದ ಘಟೇಂದ್ರ ರಾಜನಿಂದ ಬಿಳಗಿಯ ರತ್ನತ್ರಯ ಬಸದಿಯ ಮುಂದಿನ ಚಂದ್ರಶಾಲೆ ಮುನಿವಾಸಗಳನ್ನು ಕಟ್ಟಿ ಸಿದಂತೆ ಈತನಿಂದಲೇ ಬರೆಸಲ್ಪಟ್ಟ ಬಿಳಗಿಯ ಶಾಸನಗಳು ಹೇಳು ವುವು.

ವರ ಸಂಸ್ಕೃತ ಕರ್ಣಾಟಕ ।
ವೆರಡರೊಳಂ ಗದ್ಯ ಪದ್ಯ ವಾಙ್ಮಯ ಮಾಲಾ ॥
ವಿರಚಿತೆಯಿಂದೀ ಶಾಸನ ।
ವೆರಡಂ ಭಟ್ಟಾಕಲಂಕಯತಿ ಬರೆಯಿಸಿದಂ ॥ ॥೧॥

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರುಷ ೧೫೨೫ನೆ ನಂದನ ಸಂವತ್ಸರದ ಮಾಘ ಶುದ್ಧ ೫ಲ್ಲು ಶ್ರೀ ಭಟ್ಟಾಕಲಂಕ ದೇವರು ಗಳು ಬರೆಸಿಸಂಪೂರ್ಣಂ ಮಾಡಿಸಿದ ಜಿನಶಾಸನಕ್ಕೆ ಮಂಗಲಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ,, ಈ ಮೇಲೆ ಉದಾಹರಿಸಿರುವುದು ಶಾಸನ ಭಾಗವು ಇದರಿಂದ ಭಟ್ಟಾಕಲಂಕ ಇವನ ಶಿಷ್ಯ ಬಿಳಗಿಯ ರಾಜನಾದ ಘಂಟೇಂದ್ರರಾಜ ಇವರ ಕಾಲವು ನಿಃಸಂದೇಹವಾಗಿ ಗೊತ್ತಾಗು ವುದು.

ಈ ಕಾಲದಲ್ಲಿ ಕೆಳದಿಯಲ್ಲಿ ಆಳುತ್ತಿದ್ದ ರಾಜನಾರೆಂಬುದು ಮುಂದಿನ ಪ್ರಶ್ನೆ? ಈ ಪ್ರಶ್ನೆಗೆ ಕೆಳದೀನೃಪ ವಿಜಯದ ಷಷ್ಠಾಶ್ವಾಸ ದಲ್ಲಿ ಉತ್ತರವು ಸಿಗುತ್ತದೆ. "ಆ ಹಿರಿಯ ವೆಂಕಟಪ್ಪ ನಾಯಕರ ತರುವಾಯ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷ ೧೫೩೦ನೇ ಶುಕ್ಲ ಸಂವತ್ಸರದ ಮಾರ್ಗಶಿರ ಶುದ್ಧ ಪಾಡ್ಯದಲ್ಲಿ ವೆಂಕ ಟಪ್ಪ ನಾಯಕರ ಪೌತ್ರರಾದ ವೀರಭದ್ರ ನಾಯಕರ್ಗೆ ಇಕ್ಕೇರಿಯ ಅರಮನೆಯಲ್ಲಿ ರಾಜಪಟ್ಟಂ'' ಎಂಬೀ ವಚನದಿಂದ ವೆಂಕಟಪ್ಪ ನಾ ಯಕನ ಮೊಮ್ಮಗ ವೀರಭದ್ರ ನಾಯಕನು ಕೆಳದಿಯ ರಾಜ್ಯಕ್ಕೆ ಪಟ್ಟಕ್ಕೆ ಬಂದ ಕಾಲವು ನಿರ್ಧರವಾಗುವುದು.

ಕೆಳದಿ, ಇಕ್ಕೇರಿಗಳು ಶಿವಮೊಗ್ಗಾ ಜಿಲ್ಹೆಯ ಸಾಗರ ತಾಲ್ಲೂ ಕಿಗೆ ಸೇರಿವೆ. ಬಿಳಗಿ ಮತ್ತು ಸ್ವಾದಿ (ಸುಧಾಪುರ) ಕಾರವಾರ ಜಿಲ್ಹೆ ಯ ಸಿದ್ದಾಪುರ ಶಿರಸಿ ತಾಲೂಕಿನಲ್ಲಿವೆ. ಕೆಳದಿಗೂ ಬಿಳಗಿಗೂ ೨೫ ಮೈಲಿ ದೂರಾಗಬಹುದು. ಆ ಕಾಲದಲ್ಲಿ ಕೆಳದಿ ಬಿಳಗಿ ಸ್ವಾದಿ ಇವು ಮೂರೂ ಅಕ್ಕಪಕ್ಕದಲ್ಲಿ ರಾಜ್ಯಭಾರ ಮಾಡುತ್ತಿದ್ದ ನಾಡುಗಳು. ಇವು ಗಳಲ್ಲಿ ಕೆಳದಿಯ ರಾಜರು ಪ್ರಬಲರು. ಕೆಳದಿ ಸ್ವಾದಿ ಇವೆರಡು ರಾಜ್ಯ ಗಳಲ್ಲಿ ಆಳುತ್ತಿದ್ದ ರಾಜರು ಮೊದಲಿನಿಂದಲೂ ವೀರಶೈವರು. ಬಿಳಗಿ ಯವರು ಮೊದಲು ಜೈನರು, ಆ ಮೇಲೆ ವೀರಶೈವರು.

ಪ್ರತಾಪಶಾಲಿಗಳಾದ ಕೆಳದಿಯ ರಾಜರು ಸಾಮಾನ್ಯವಾಗಿ ರಾಜ್ಯ ವಿಸ್ತಾರ ಮಾಡುವುದರಲ್ಲಿ ಆಸಕ್ತರು. ಇವರಿಗೂ ಸ್ವಾದಿ ಬಿಳಗಿ ಒಡೆ ಯರಿಗೂ ಯುದ್ಧವಾದ ದಾಖಲೆಗಳು ಕೆಳದಿ ನೃಪವಿಜಯದಲ್ಲಿ ಸಿಕ್ಕು ತ್ತವೆ.

ಎಷ್ಟೋ ಸಮಯಗಳಲ್ಲಿ ಸ್ವಾದಿ, ಬಿಳಗಿ ಇವೆರಡು ರಾಜ್ಯದ ಅಧಿಪತಿಗಳೂ ಒಟ್ಟಾಗಿ ಸೇರಿ ಕೆಳದಿಯರಸರಿಗೆ ಹಿಮ್ಮೆಟ್ಟಿಸಿರುವರು. 'ಸರಿ ಯೇ ಸೂರ್ಯಗೆ ಕೋಟಿ ಮಿಂಜುವುಳುಗಳ್''

ಕೆಳದಿಯ ವೀರಭದ್ರ ನಾಯಕನು ರಾಜ್ಯವಾಳುತ್ತಿದ್ದಾಗ ಕಾರ ಣಾಂತರಗಳಿಂದ ಇಕ್ಕೇರಿಯಲ್ಲಿ ಒಡಕು ಹುಟ್ಟಿತು. ಮೈದುನ ಸದಾ ಶಿವಯ್ಯನೆಂಬುವ ರಾಜಬಂಧುವು ತಾನು ರಾಜ್ಯವನ್ನು ಅಪಹರಿಸಬೇ ಕೆಂದು ಒಳಸಂಚು ಮಾಡುತ್ತಿದ್ದನು. ಈ ವಿಷಯವನ್ನು ಮಹಾ ರಣ

ಧೀರನಾದ ವೀರಭದ್ರ ನಾಯಕನು ತಿಳಿನು ವೈದುನ ಸದಾಶಿವಯ್ಯ ನನ್ನು ಹಿಡಿಯಲು ಯತ್ನಿಸಿದನು. ವೈದುನ ಸದಾಶಿವಯ್ಯನು ಹೆವಂ ಸೋದೆಯ ರಾಜರನ್ನು ಪ್ರಾಣಭಯದಿಂದ ಮರೆಹೊಕ್ಕನು. ಕೆಳದಿಯ ರಸರಿಗೆ ಹಗೆಗಳಾದ ಸೋದೆಯ ರಾಜರು ಅವನಿಗೆ ಆಶ್ರಯ ಕೊಟ್ಟರು. ಆಗ ವೀರಭದ್ರ ನಾಯಕನು ಅತ್ಯಂತ ಕೋಪಾ ಟೋಪದಿಂದ ಸೈನ್ಯ ಸಮೇತನಾಗಿ ಸೋದೆಯವರ ಮೇಲೆ ಯುದ್ಧಕ್ಕೆ ಹೊರಟನು. ಸೋದೆ ಯವರೂ ಇವರ ಸ್ನೇಹಿತರಾದ ಬಿಳಗಿಯವರೂ ಒಂದಾಗಿ ವೀರಭದ್ರ ನಾಯಕನನ್ನು ಎದುರಿಸಲು ಅನುವಾದರು. ಆದರೇನು? ಈ ಸಮಯ ದಲ್ಲಿ ಸದಾಶಿವಯ್ಯನು ವಿಧಿವಶನಾದನು. (ಯುದ್ಧದಿಂದಲ್ಲಿ ರೋಗಾ ದಿಗಳಿಂದಿರಬಹುದು) ಸೋದೆ ಮತ್ತು ಬಿಳಗಿಯವರೀರ್ವರೂ ವೀರಭದ್ರ ನಾಯಕನಿಗೆ ಕ್ಷಣಾರ್ಧದಲ್ಲಿ ಸೋತುಹೋದರು,

ಮೇಲ್ಕಂಡ ವಿಷಯವು ಷಷ್ಠಾಶ್ವಾಸದ ೨ಂನೆಯ ಪದ್ಯದ ಮುಂ ದಿನ ವಚನದಲ್ಲಿದೆ. ಆದನ್ನೆಲ್ಲಾ ಇಲ್ಲಿ ಎತ್ತಿ ಬರೆದರೆ ಲೇಖನವು ಬಹು ದೊಡ್ಡದಾಗುವುದೆಂದು ಹೆದರಿ ಆದರ ತಾತ್ಪರ್ಯವನ್ನು ಮಾತ್ರ ಬರೆ ದೆನು.

ಆ ಮೇಲೆ ವೀರಭದ್ರನಾಯಕನುಃ—

ಸೋದೆ ಬಿಳಿಗಿಯ ನೃಪಾಲರ ।
ಮೇದಿನಿಯಂಕೊಂಡು ತತ್ಪರಿಸ್ತರನಾಗಳಂ ॥
ಸ್ವಾಧೀನಂಗೈದು ಬಳಿ ।
ಕ್ಕಾ ದೊರೆಗಳ ನಾಜಿ ರಂಗದೊಳ್ಕೆರೆ ಮುರಿದಂ ॥೨॥

ಕೆ. ವಿ. (ಅ. ೬. ಪ. ೨೨)

ಈ ಪ್ರಕಾರವಾಗಿ ವೀರಭದ್ರ ನಾಯಕನು ತನಗೆ ಪರಾಜಿತರಾದ ಸೋದೆ ಬಿಳಗಿಯ ನೃಪಾಲರ ಮೇದಿನಿಯನ್ನೆಲ್ಲಾ ಆಕ್ರಮಿಸಿದುದರಿಂದ ಆ ರಾಜ ರೀರ್ವರೂ ಆಗ ಬಹಳ ಪ್ರಬಲಶಾಲಿಯಾಗಿದ್ದ ವಿಜಾಪುರದ ಪಾದುಷಾ ಹನ ಬಳಿಗೆ ಚಾಡಿಯನ್ನು ಹೇಳಲಿಕ್ಕಾಗಿಯೂ ಸಹಾಯಾರ್ಥಿಗಳಾ ಗಿಯೂ ಹೋದರು. ಈ ವಿಷಯವು ಮುಂದೆ ಹೇಳುವ

ವರವೀರ ಭದ್ರ ನೃಪಭಾ।
ಸ್ಕರ ನತಿಶಯ ಶೌರ್ಯಪಾದ ಮೊದೆದೊದೆದು ವಿಜಾ ॥

ಪುರ ಕೆಟ್ಟ್ಟದುದು ಸುಧಾ।
ಪುರ ಬಿಳಗಿಯ ದೊರೆಗಳೆಂಬ ತಿಮಿರೋತ್ಕರಮುಂ ॥೪॥
(ಶ. ೬. ಪ. ೨೩)

ಎಂಬೀ ಪದ್ಯದಿಂದ ತಿಳಿದು ಬರುತ್ತದೆ.

ಸೋದೆಯ ಬಿಳಿಗಿಯ ರಾಜರು ವೀರಭದ್ರನಿಂದ ಪರಾಜಿತರಾಗಿ ವಿಜಾಪುರಕ್ಕೆ ಹೋಗಿ ಪಾದುಷಾಹನ ಮುಂದೆ ಬಹುವಾಗಿದೂರು ಹೇಳಿದರು. ಅಲ್ಲದೆ ತಮ್ಮ ತಮ್ಮ ರಾಜ್ಯಗಳನ್ನು ಕೊಡಿಸಬೇಕೆಂದು ಬೇಡಿಕೊಂಡರು. ಮೊದಲೇ ಉರಸಿಂಗಿಯಿಂತಹ ತುರುಷ್ಕ ಪಾದುಶಹನು ಇವರ ಮಾತಿನಂತೆ ಕೆಳದಿಯ ಮೇಲೆ ಯುದ್ಧಮಾಡಲು ತನ್ನ ಸೈನ್ಯವನ್ನು ಕಳುಹಿಸಲು ಅನುವಾದನು.

ಈ ವೃತ್ತಾಂತವನ್ನು ಕೇಳಿದ ವೀರಭದ್ರ ನಾಯಕನು ರಾಜಮಂತ್ರ ಪ್ರವೀಣನಾದುದರಿಂದ ತನ್ನ ರಾಯಭಾರಿಯನ್ನೂ ವಿಜಾಪುರಕ್ಕೆ ಕಳುಹಿಸಿ ಪಾದುಷಾಹನಲ್ಲಿ ಸ್ನೇಹ ಬೆಳೆಯಿಸಿದನು. ಈ ವಿಷಯವನ್ನೆಲ್ಲಾ ಮುಂದಿನ ವಚನವು ತಿಳಿಸುವದು "ಇಂತು ಸೋದೆ ಬಿಳಿಗಿಯುವ ಪಾತುಶಾಹನಂ ಕಿಮಿಗೆಡಿಸಿ ಹೇರಳವಾದ ತುರುಷ್ಕ ಸೈನ್ಯವನೊಡಗೊಂಡು ಬರಲು ದ್ಯುಕ್ತರಾಗಿರ್ಪರೆಂಬ ವಾರ್ತೆಯಂ ವೀರಭದ್ರ ನಾಯಕಂ ಕೇಳ್ದು ರಾಯಸದ ಶಂಕರನಾರಣಯ್ಯನೆಂಬ ನಿಯೋಗಿಯಂ ವಿಜಾಪುರಕ್ಕೆ ಕಳುಹಿ ಮುರಾರಿಪಂತನೆಂಬ ಮಂತ್ರಿಯ ಮುಖದಿಂ ಪಾತುಶಾಹಂಗೆ ತಮ್ಮ ಸಂಸ್ಥಾನದ ಸಕಲ ಪೂರ್ವೋತ್ತರ ವೃತ್ತಾಂತಂಗಳಂ ತೀಳುಪಲ್ಕೇಳ್ದು ಪರಮ ಪರಿತೋಷಂಬಟ್ಟು ಸೈನ್ಯವಂ ತೆರಳ್ಚುವ ಬುದ್ಧಿಯಂ ಮಾಣ್ದು ಸೋದೆ ಬೀಳಗಿಯವರ್ ಕುಹಕಿಗಳ್ತಮ್ಮ ಪರಿಸ್ತರಣಂಗಳ್ ಪೋದ ಸಂಕಟಕ್ಕೋಸ್ಕರಂ ದುರ್ಬೋಧೆಯಂ ಬೋಧಿಸುತ್ತಿರ್ಪರಿಕ್ಕೇರಿಯ ದೊರೆತನಕ್ಕೆ ವೀರಭದ್ರ ನಾಯಕನೆ ಸಲ್ವನೆಂಬುದಂ ದೃಢವಾಗಿ ನಿರ್ಧರಿಸಿ ರಾಯಸದ ಶಂಕರ ನಾಯ್ಕಂಗೆ ಶರಜಾರಾಯನೆಂದು ಪೆಸರಿತ್ತು ತನ್ನೆಡೆಗೈದಿ ಬಹುಪ್ರಕಾರ ದೈನ್ಯೋಕ್ತಿಗಳಿಂ ಪೇಳಿಕೊಂಡರೆಂಬುದಕ್ಕೋಸುಗಂ ಸೋದೆ ಬೀಳಿಗಿಯವರ ಪರಿಸ್ತರಣಂಗಳ ನವರ್ಗೆ ಕೊಡಿಸುವುದೆಂದು ನಿಯಾಮಿಸಿ ವೀರಭದ್ರ ನಾಯಕನ ಪ್ರಾಮಾಣಿಕತ್ವಕ್ಕಂ ಭುಜಬಲ ಪ್ರತಾಪಾತಿ ಶಯಂಗಳ್ಗಂ

ಮೆಚ್ಚಿ ಹಸರು ಸತ್ತಿಗೆ ನಿಶಾನಿ ವಹಿಲೆವಾಯು, ಪಾತುರ್ಗಿ, ಪಾಂ ತಾದ ಬಿರುದುಗಳುಮಂ ಮತ್ತಮನೇಕವಾದಂಗೋಚಿತಾ ಭರಣಾಂ ಬರಂ ಮೊದಲಾದುಡುಗೊರೆಗಳುಮನಿತ್ತು ಕಳುಪಲ್"

ಈ ವಚನದ ಸಾರಾಂಶವು ಸುಲಭ ಗ್ರಾಹ್ಯವು. ಇದರಲ್ಲಿ ರಾಯ ಭಾರಿಗೆ ಮಾನ್ಯತೆ ಬಂದುದು ಪಾದುಶಾಹನು ಪ್ರಸನ್ನನಾದುದು ವೀರ ಭದ್ರ ನಾಯಕನು ಪಾದುಶಹನ ಇಚ್ಛೆಯಂತೆ ಸೋದೆ ಬೀಳಿಗಿಯ ರಾಜ್ಯಗಳನ್ನು ಆಯಾ ರಾಜರಿಗೆ ಹಿಂದಕ್ಕೆ ಕೊಟ್ಟುದು ಮುಖ್ಯ ವಿಷ ಯವು. ಇದುವರೆಗೂ ಹೇಳಿದ ವಚನಕ್ಕಿಂತಲೂ ಇದರ ಮುಂದಕ್ಕಿ ರುವ ವಚನವು ಬಹು ಮುಖ್ಯವು. ನಮ್ಮ ಊಹೆಗೆ ಈ ವಚನವೇ ಪ್ರಾಣಾಧಾರವು. ಆ ವಚನ ಯಾವುದೆಂಬದನ್ನು ಹೇಳಿ ಮುಂದಕ್ಕೆ ನಮ್ಮ ತರ್ಕವನ್ನು ಪ್ರಾರಂಭಿಸುವ:—"ವೀರಭದ್ರ ನಾಯಕನತ್ಯಂತ ಸಂತೋ ಷದಿಂದಾ ಬಿರುದುಗಳನಂಗೀಕರಿಸಿ ಸೋದೆ ಬಿಳಿಗಿಯವರ ರಾಜ್ಯ ಪರಿ ಸ್ತರ ಣಂಗಳ ನವರ್ಗಿತ್ತು **ಬಳಿಕಂ ಬಿಳಿಗಿಯ ಘಂಟೆವೊಡೆಯರ ಪುತ್ರಿಘಂಟೆಯಮ್ಮನಂ ಸದಾಶಿವಯ್ಯನ ಪುತ್ರನಾದಳಿಯ ಭದ್ರ ಯ್ಯಂಗತ್ಯಂತ ಸಂಭ್ರಮದಿಂ ವಿವಾಹಮಂ ರಚಯಿಸಿ ಸುಖದಿಂ ರಾಜ್ಯಂಗೆಯ್ಯುತ್ತು** ಮಿರಲ್ಕೆ" ಈ ವಚನದಲ್ಲಿ ವೀರಭದ್ರ ನಾಯಕನು ಸದಾಶಿವಯ್ಯನ ಪುತ್ರನಾದ ಅಳಿಯ ಭದ್ರಯ್ಯಂಗೆ ಅತ್ಯಂತ ಸಂಭ್ರಮ ದಿಂದಬಿಳಿಗಿಯ ಘಂಟೆವೊಡೆಯರ ಪುತ್ರಿಘಂಟೆಯಮ್ಮ ನೆಂಬ ವಧುವನ್ನು ಮದುವೆ ಮಾಡಿದುದು ಪ್ರಾಮುಖ್ಯ ವಿಷಯವಾಗಿ ತಿಳಿದುಬರುತ್ತದೆ.

ಕೆಳದಿಯ ರಾಜ್ಯವನ್ನು ಶಾ. ಶ. ೧೫೫೦ನೇ ಶುಕ್ಲಸಂವತ್ಸರದಲ್ಲಿ ವೆಂಕಟಪ್ಪ ನಾಯಕನ ಮೊಮ್ಮಗನಾದ ವೀರಭದ್ರ ನಾಯಕನು ಪಟ್ಟಾಭಿಷಿಕ್ತನಾಗಿ ಆಳಲು ಮೊದಲು ಮಾಡಿದುದನ್ನು ಹಿಂದೆಯೇ ತಿಳಿ ಸಿದೆ. ಈಕಾಲದಲ್ಲಿ ಬಿಳಿಗಿಯಲ್ಲಿ ಆಳುತ್ತಿದ್ದವನು ಘಂಟೆವೊಡೆಯನೆಂದು ಮೇಲಿನ ವಚನವೇ ಹೇಳುವದು.

ಬಿಳಿಗಿಯಲ್ಲಿ ಭಟ್ಟಾಕಲಂಕನು ಬರೆಯಿಸಿದ ಶಾಸನಗಳಲ್ಲಿ ಘಂ ಟೇಂದ್ರನು ಈಕಾಲದಲ್ಲಿಯೇ ಆಳುತ್ತಿದ್ದನೆಂದು ತಿಳಿದುಬರುತ್ತದೆ. ಈ ಶಾಸನಗಳನ್ನು ಬರೆಸಿದ ೧೧ ವರ್ಷದ ಮೇಲೆ ಶಬ್ದಾನು ಶಾಸನವನ್ನು (ಶಾ. ಶ. ೧೫೨೬ರಲ್ಲಿ) ಬರೆದಿರುವನು.

ಬಿಳಗಿಯ ಘಂಟೇಂದ್ರನು ಬಹುಕಾಲ ರಾಜ್ಯಭಾರ ಮಾಡಿದಂತೆ ಕಾಣುತ್ತದೆ. ಇವನ ಮಗಳನ್ನು ವೀರಭದ್ರ ನಾಯಕನ ಬಂಧು ಭದ್ರಪ್ಪಯ್ಯನಿಗೆ ಕೊಟ್ಟು ಮದುವೆ ಮಾಡಿದುದು ವಿಚಾರಣೀಯವು.

ವಿಜಾಪುರದ ಪಾದುಶಾಹನ ಮುಖದಿಂದ ಬಿಳಗಿಯ ಮತ್ತು ಕೆಳದಿಯ ಅರಸರುಗಳಿಗೆ ಗೆಳೆತನವೂ ಭಾಂಧವ್ಯವೂ ಬೆಳೆದ ಸಂಗತಿಯು ಮೇಲಿನ ವಚನಗಳಿಂದ ತಿಳಿದು ಬಂದಿತು. ಈಗ ಜೈನರಾಜನಾದ ಘಂಟೇಂದ್ರನ ಮಗಳನ್ನು ವೀರಶೈವನಾದ ರಾಜಬಂಧುವಿಗೆ ವೀರಭದ್ರ ನಾಯಕನು ಹೇಗೆ ಮದುವೆ ಮಾಡಿದನು? ಇದು ಅಂದರೆ ಅನ್ಯ ಜಾತಿಯ ಹೆಣ್ಣನ್ನು ಮದುವೆ ಮಾಡಿಕೊಳ್ಳುವದು ವೀರಶೈವ ಮತಕ್ಕೆ ವಿರೋಧವಲ್ಲವೇ? ಇದರ ರಹಸ್ಯವೇನು? ಇತ್ಯಾದಿ ಪ್ರಶ್ನೆಗಳು ಮುಂದೆ ನಿಲ್ಲುವವು.

ಕೆಳದಿಯ ಅರಸರು ಉಜ್ವಲಮತಾಭಿಮಾನಿಗಳು ಮತ್ತೊಬ್ಬರಿಗೆ ನೋವನ್ನುಂಟುಮಾಡದೆ ಅವರ ಸಮ್ಮತಿವಿಡಿದು ಉತ್ತಮ ವರ್ಣದವರನ್ನು ವೀರಶೈವ ದೀಕ್ಷೆಯಿಂದಸಂಸ್ಕರಿಸಿ ಲಿಂಗಧಾರಣೆ ಮಾಡಿಸುತ್ತಿದ್ದರು. ಇದಕ್ಕೆ ಬಹಳ ಸಾಕ್ಷಿಗಳು ಬೇಕಿಲ್ಲ. ಕೆಳದಿಯ ಬಸವಪ್ಪ ನಾಯಕನ ಆಸ್ಥಾನ ವಿದ್ವಾಂಸರೂ ಮಂತ್ರಿಗಳೂ ಆಗಿದ್ದ ಪಂಚಾಕ್ಷರ ಮಂತ್ರಿ, ಷಡಕ್ಷರ ಮಂತ್ರಿ ಎಂಬ ಇವರಿಬ್ಬರೇ ಸಾಕು. ಇವರು ಗೋಕರ್ಣ ಪ್ರಾಂತದಲ್ಲಿದ್ದ ಅನಾಥರಾದ ಬ್ರಾಹ್ಮಣ ಬಾಲಕರು. ಬಸವಪ್ಪ ನಾಯಕನು ಆ ಪ್ರಾಂತ್ಯಕ್ಕೆ ಹೋಗಿದ್ದಾಗ ತನ್ನ ಕಣ್ಣಿಗೆ ಬಿದ್ದ ಈ ಬಡ ಹುಡುಗರನ್ನು ತನ್ನ ರಾಜಧಾನಿಗೆ ಕರೆದುಕೊಂಡು ಬಂದು ಲಿಂಗಧಾರಣೆ ಮಾಡಿಸಿ ಚೆನ್ನಾಗಿ ವಿದ್ಯಾಭ್ಯಾಸ ಮಾಡಿಸಿ ಉನ್ನತ ಪದವಿಗೆ ತಂದನು. ಇವರಲ್ಲಿ ಷಡಕ್ಷರಮಂತ್ರಿಯು 'ವೀರಶೈವ ಧರ್ಮ ಶಿರೋಮಣಿ'' ಎಂಬ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿರುವನು.

ಈ ರೀತಿ ಅನ್ಯರನ್ನು ವೀರಶೈವ ಧರ್ಮಕ್ಕೆ ತೆಗೆದುಕೊಳ್ಳುವದು ನ್ಯಾಯವೇ? ಎಂದು ಕೆಲವರು ಕೇಳಬಹುದು. ಇದು ನಮ್ಮ ಶಾಸ್ತ್ರಕ್ಕೆ ಸಮ್ಮತವು. ವೀರಶೈವ ಮತವು ಸಂಕುಚಿತವಲ್ಲ ಉದಾರವು. ಶ್ರೀ ಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯನಂತಹ ಬ್ರಾಹ್ಮಣ ಋಷಿಗೆ ಲಿಂಗಧಾರಣ ಮಾಡಿರುವದು ಲೋಕವಿಖ್ಯಾತವಾಗಿದೆ. ಇದ

ರಂತೆಯೇ ಶ್ರೀಬಸವಾದಿ ಪ್ರಮಥರೂ ಎಷ್ಟೋ ಮಂದಿಗಳನ್ನು ಈ ಮ ತಕ್ಕೆ ತೆಗೆದುಕೊಂಡಿದ್ದಾರೆ. ಅಷ್ಟೇಕೆ? ಬಸವೇಶ್ವರನೇ ಬ್ರಾಹ್ಮಣ ಮತ ದಿಂದ ವೀರಶೈವ ಮತಕ್ಕೆ ಬಂದವನು. ಸರ್ವೋತ್ಕೃಷ್ಟವಾದ ಮೋಕ್ಷ ಮಾರ್ಗವನ್ನು ಯಾವ ಜ್ಞಾನಿಯಾದ ಮುಮುಕ್ಷುವು ತಾನೇ ಬೇಡವೆ ನ್ನುವನು?

ಬಿಳಗಿಯ ಜೈನ ರಾಜನಲ್ಲಿ ಸಂಬಂಧವನ್ನೂ ಮಾಡುವಾಗ ಕೆಳ ದಿಯ ವೀರಭದ್ರ ನಾಯಕನು ಸುಮ್ಮನೆ ಮಾಡಿಲ್ಲ. ಜೈನರಾಜನನ್ನು ವೀರಶೈವರನ್ನಾಗಿ ಮಾರ್ಪಡಿಸಿಯೇ ಲಗ್ನಸಂಬಂಧವನ್ನು ಬೆಳೆಯಿಸಿರು ವನು. ಎಂದು ಊಹಿಸುವುದು ಸಾಹಸವಲ್ಲ.

ಘಂಟೇಂದ್ರನು ಜೈನ ಮತವನ್ನು ಬಿಟ್ಟು ವೀರಶೈವನಾದನೆಂಬು ದನ್ನು ಲಿಂಗಣ್ಣ ಕವಿಯು ಸ್ಪಷ್ಟವಾಗಿ ಬರೆಯದಿದ್ದರೂ ನಾವು ಅದನ್ನು ಆಗಿನ ಸಮಯ ಸನ್ನಿವೇಶಗಳಿಂದ ಧೈರ್ಯವಾಗಿ ಊಹಿಸಬಹುದು. ಇದಕ್ಕೆ ಮುಂದೆ ಹೇಳುವ ಕಾರಣಗಳು ಸಹಾಯ ಕೊಡುತ್ತವೆ.

೧ ಕೆಳದಿಯ ವೀರಭದ್ರ ನಾಯಕನು ತನ್ನ ಬಂಧುವಿಗೆ ಘಂಟೇಂದ್ರ ನು ವೀರಶೈವ ಮತವನ್ನು ಅನುಸರಿಸದಿದ್ದರೆ ಹೆಣ್ಣು ತರಲು ಒಪ್ಪು ವದು ಹೇಗೆ?

೨ ಬಿಳಗಿಯ ರಾಜರಿಗೆ ಪರಮ ಸ್ನೇಹಿತರಾದ ಸೋದೆಯ ಅರ ಸರು ವೀರಶೈವರಾದುದರಿಂದ ತಮ್ಮ ಸ್ನೇಹಿತರನ್ನು ವೀರಶೈವ ಮತ ಪ್ರವಿಷ್ಟರಾಗುನಂತೆ ಪ್ರೋತ್ಸಾಹಿಸಿರಬಾರದೇಕೆ?

೩ ಕೆಳದಿಯ ಮತ್ತು ಬಿಳಗಿಯ ಅರಸರಿಗೆ ಇಷ್ಟೊಂದು ನಿಕ ಟ ಸಂಬಂಧವು ಮತ ಮತ್ತು ದೇಹವಿಷಯಗಳಲ್ಲಾಗದಿದ್ದರೆ ವೀರಭದ್ರ ನಾಯಕನು ತನ್ನ ಪಟ್ಟವಾದ ೮ ವರ್ಷಗಳ ಮೇಲೆ ಇಕ್ಕೇರಿಯ ಭವ್ಯ ವಾದ ಅರಮನೆಯನ್ನು ಬಿಟ್ಟು ಬಿಳಗಿಗೆ ಪಕ್ಕದಲ್ಲಿರುವ ಭುವನಗಿರಿ ದುರ್ಗದಲ್ಲಿ ೧ ವರ್ಷ ಕಾಲ ರಾಜ್ಯಭಾರ ಮಾಡಲು ಮನದಂದುದು ಏನು ಕಾರಣ?

೪ ಕೆಳದಿಯ ಮತ್ತು ಸ್ವಾದಿಯ ವೀರಶೈವ ರಾಜರುಗಳ. ಸಹಾ ಯ ಸಹಾನುಭೂತಿಗಳಿಲ್ಲದೆ ರಾಜ್ಯವಾಳುವುದು ಕಷ್ಟವಾಗಿದ್ದ ಘಂಟೇಂ

ದ್ರನು ತನ್ನ ಮಗಳನ್ನು ಕೆಳದಿಯ ರಾಜಬಂಧುವಿಗೆ ಕೊಡುವ ಭರದಲ್ಲಿ ವೀರಶೈವ ದೀಕ್ಷೆಯನ್ನು ಹೊಂದಿರಬಾರದೇಕೆ?

೫ ಜೈನ ಮತಕ್ಕೂ ವೀರಶೈವ ಮತಕ್ಕೂ ಪ್ರಾಣಿದಯೆ ಮೊದಲಾದ ವಿಷಯಗಳಲ್ಲಿ ನಿಕಟ ಸಂಬಂಧವಿರುವದರಿಂದ ಘಂಟೇಂದ್ರನು ವೀರಶೈವನಾದುದರಲ್ಲಿ ಅತಿಶಯವೇನು?

೬ ಬಿಳಗಿಯಲ್ಲಿ ವೀರಮ್ಮನು ತನ್ನ ಗಂಡನಾದ ವೀರಪ್ಪೊಡೆಯನ ಸ್ಮಾರಕಾರ್ಥವಾಗಿ ಕಟ್ಟಿಸಿರುವ ವಿರೂಪಾಕ್ಷ ದೇವಾಲಯದ ಶಾಸನದಲ್ಲಿ ವೀರಪ್ಪೊಡೆಯನ ಪೂರ್ವಿಕರ ಹೆಸರನ್ನು ಹೇಳುವಾಗ ನರಸಿಂಹ ಭೂಪ ಮೊದಲಾದ ಜೈನರಾಜರ ಹೆಸರುಗಳನ್ನು ಹೇಳಲು ಕಾರಣವೇನು?

ಇತ್ಯಾದಿ ಕಾರಣಗಳಿಂದ ಜೈನರಾದ ಬಿಳಗಿಯ ರಾಜರು ವೀರಭದ್ರನ ಆಳ್ವಿಕೆಯಲ್ಲಿ ವೀರಶೈವರಾದರೆಂದು ಊಹಿಸಲು ಹಲವು ನಿದರ್ಶನಗಳಿವೆ.

ಕೆಳದಿಯ ವೀರಭದ್ರನಾಯಕನು "ಶಾ. ಶ. ೧೫೫೩ ನೇ ಶುಕ್ಲ ಸಂವತ್ಸರದ ಮಾರ್ಗಶಿರ ಶುದ್ಧ ೧ ಯಾರಭ್ಯ ಪಾರ್ಥಿವ ಸಂವತ್ಸರದ ಮಾರ್ಗಶಿರ ಶುದ್ಧ ೧೧ ಯ ವರೆಗೆ **ವರ್ಷ ೧೬ ದಿವಸ ೧೧ ಪರ್‍ಯಂತಂ** ಸುಖದಿಂ ರಾಜ್ಯಪರಿಪಾಲನಂಗೈದು" ಎಂಬ ವಾಕ್ಯದಿಂದ ತಿಳಿದು ಬರುವಷ್ಟು ದಿವಸ ರಾಜ್ಯವಾಳಿದನು.

ವೀರಭದ್ರ ನಾಯಕನು "ಶಾ. ಶ. ೧೫೬೦ ನೇ ಈಶ್ವರ ಸಂವತ್ಸರದ ಪುಷ್ಯ ಬಹುಳ ೧೧ ರಿಂದ ೧೫೬೧ ನೆಯ ಬಹುಧಾನ್ಯ ಸಂವತ್ಸರದ ವೈಶಾಖ ಶುದ್ಧದ ವರೆಗೆ" ಭುವನಗಿರಿಯಲ್ಲಿ ರಾಜ್ಯವಾಳಿದನೆಂದು ಕೆಳದೀನೃಪವಿಜಯದಲ್ಲಿ ಬರೆದಿರುವುದರಿಂದ ಘಂಟೇಂದ್ರನು ಈಕಾಲಕ್ಕಿಂತ ಸ್ವಲ್ಪ ಕಾಲದ ಹಿಂದೆ ವೀರಶೈವ ಮತವನ್ನು ಸೇರಿರಬಹುದು.

ಕ್ರಿ. ಶ. ೧೭೯೯ ರಲ್ಲಿ ಬಿಳಗಿಯು ಟೀಪುವಿನಿಂದ ಹಾಳಾಯಿತೆಂದು ತಿಳಿದುಬಂದಿರುವುದರಿಂದ ಜೈನರು ವೀರಶೈವ ಮತ ಪ್ರವಿಷ್ಯರಾದ ಮೇಲೆ ೧೬೧ ವರ್ಷ ಬಿಳಗಿಯ ರಾಜ್ಯಕ್ಕೆ ವೀರಶೈವ ರಾಜರು ಕರಾವಲಂಬನವನ್ನು ಕೊಟ್ಟಿದ್ದರೆಂದು ಲೆಕ್ಕದಿಂದ ತಿಳಿದು ಬರುವುದು.

ಕೆಳದಿಯ ಮತ್ತು ಬಿಳಗಿಯ ಅರಸರಿಗೆ ದೇಹ ಸಂಬಂಧವಾದ ಮೇಲೆ ಬಿಳಗಿಯ ಹಲವು ಮಂದಿ ಪ್ರಮುಖರು ಕೆಳದಿಯ ಅರಸರಲ್ಲಿ

ಕೆಲಸಗಳನ್ನು ಮಾಡಿ ಹೆಸರಾಗಿರುವರು. ಇವರುಗಳಲ್ಲಿ ಕರಣಿಕ ಬಿಳಿಗಿ ಕೋನಪ್ಪಯ್ಯ ಬಿಳಿಗಿ ಗಂಗಪ್ಪಯ್ಯ ಕರಣಿಕ ಬಿಳಿಗಿ ಸುಬ್ಬಯ್ಯ ಮುಂತಾದವರು ಮುಖ್ಯರು.

ಬಿಳಗಿಯ ಅರಸರ ಬಾಂಧವ್ಯವಾದ ಮೇಲೆ ಕೆಳದಿಯ ಅರಸರು ಬಿಳಗಿಗೆ ಸಮೀಪದಲ್ಲಿರುವ ಭುವನಗಿರಿಯನ್ನು ತಮ್ಮ ಮುಖ್ಯಸ್ಥಳವನ್ನಾಗಿ ಮಾಡಿಕೊಂಡು ಕೆಲವು ಕಾಲ ಇಲ್ಲಿಯೇ ರಾಜ್ಯಾಭಾರ ಮಾಡುತ್ತಿದ್ದರು. ಮತ್ತೆ ಕೆಲವು ಅರಸ ಅರಸಿಯರು ಕಷ್ಟಕಾಲ ಬಂದಾಗ ಈ ಗಿರಿಯಲ್ಲಿ ಪ್ರಬಲವಾದ ಕೋಟೆಯಿರುವುದರಿಂದ ಇಲ್ಲಿ ಅಡಗಿಕೊಂಡು ತಮ್ಮನ್ನು ಕಾಪಾಡಿಕೊಳ್ಳುತ್ತಿದ್ದರು.

ಈ ರೀತಿಯಲ್ಲಿ ಬಿಳಿಗಿಯ ಜೈನರಾಜರು ಲಿಂಗಸಂತ ಮತವನ್ನು ಅನುಸರಿಸಿದ ಮೇಲೆಯೇ ವೀರಮ್ಮನು ವಿರೂಪಾಕ್ಷ ದೇವಾಲಯವನ್ನು ಕಟ್ಟಿಸಿದುದು. ಮತ್ತು ಹಿರೇಮಠ ಕಲ್ಯಾಣ ದೇವರ ಮಠ ವಿರಕ್ತ ಮಠ ಮೊದಲಾದವುಗಳನ್ನು ಕಟ್ಟಿಸಿರುವುದು.

ಸಹೃದಯರೇ? ನಾವು ಈ ಲೇಖನದಲ್ಲಿ ತರ್ಕಿಸುವ ವಿಷಯಗಳನ್ನು ಮನಃ ಪೂರ್ವಕ ಓದಿದ ವಾಚಕರಿಗೆ ನಮ್ಮ ತರ್ಕವು ಅಸಮಂಜಸವೆನಿಸಲಾರದು. ಈ ಬಗ್ಗೆ ನಾವು 'ಬಿಳಿಗಿಯ ರಾಜ್ಯ ಚರಿತ್ರೆ; ಬಿಳಗಿಯ ರಾಜರು, 'ಬಿಳಿಗಿಯ ಮಹಾ ಕವಿಗಳು, ಎಂಬ ಮೂರು ಲೇಖನಗಳನ್ನು ಬರೆದು ಪ್ರಕಟಿಸಿರುವೆವು. ಇನ್ನು ಮುಂದೆ ಈ ರಾಜ್ಯದ ಹಾಗೂ ಕೆಳದಿ ಸ್ವಾದಿರಾಜ್ಯಗಳ ಬಗ್ಗೆ ಲೇಖನಗಳನ್ನು ಬರೆಯಲು ಸಂಕಲ್ಪ ಮಾಡಿರುವೆವು.



# ಬಿಜ್ಜಣರಾಯ ಪುರಾಣವೂ, ಚಂದ್ರಸಾಗರ ವರ್ಣಿಯೂ

ಲೇಖಕ:— ವೀರಭದ್ರಪ್ಪ ರುದ್ರಪ್ಪ ಕೊಪ್ಪಳ. ಸೀನಿಯರ ಬಿ. ಎ.
ಗುರುಕುಲ ಧಾರವಾಡ.

ಟೀಪು:— ಲೇಖವು ವಿಸ್ತರಿಸಿದ್ದೇನೋ ನಿಜ. ಸಂಕ್ಷಿಪ್ತವಾಗಿ ಕೊಡಬೇಕೆಂದರೆ ಚರ್ಚಿಸುವ ವಿಷಯಗಳು ಹಾಗೇ ಉಳಿದು ಲೇಖದ ಮುಖ್ಯೋದ್ದೇಶವು ಸಫಲವಾಗುತ್ತಿದ್ದಿಲ್ಲ. ಉದ್ದವಾಗಿದ್ದರೂ, ಮರ್ಮ ಪೂರಿತವಾಗಿಯೂ, ವಿಚಾರಾರ್ಹವಾಗಿಯೂ ಇರುವದರಿಂದ ಬೇಸರಗೊಳ್ಳದೆ ಒಂದುಸಾರೆಯಾದರೂ ಓದಬೇಕೆಂದು ಲೇಖಕನ ವಿಜ್ಞಪ್ತಿಯು:—

ಪರಧರ್ಮ ಸಹಿಷ್ಣುತೆಯು ಮಾನವನಲ್ಲಿರತಕ್ಕ ಉತ್ತಮೋತ್ತಮ ಗುಣಗಳಲ್ಲಿ ಒಂದಾಗಿದೆ. ಯಾವಾತನು ಪರಧರ್ಮ ಸಹಿಷ್ಣುವಲ್ಲವೋ ಆತನಲ್ಲಿ ದಯಾದಾಕ್ಷಿಣ್ಯಗಳು ಎಳ್ಳಷ್ಟಾದರೂ ಕಂಡುಬರುವದಿಲ್ಲ. ಇದಲ್ಲದೆ ಆತನು ಹಿಂಸಾಸತ್ಯಗಳಿಗೆ ತವರೂರಾಗಿರುತ್ತಾನೆ. ಈ ಪರಧರ್ಮ ಸಹಿಷ್ಣುತೆಯು ಕವಿಗಳಲ್ಲಿಯೂ, ಗ್ರಂಥಕರ್ತರಾದವರಲ್ಲಿಯೂ ಪ್ರಾಮುಖ್ಯವಾಗಿ ಇರಲೇಬೇಕು. ಯಾಕಂದರೆ ಗ್ರಂಥಕಾರನು ತನ್ನ ವಿಚಾರಗಳಿಂದ ಅನೇಕರ ಮನಸ್ಸಿನ ಮೇಲೆ ಪರಿಣಾಮವನ್ನು ಹುಟ್ಟಿಸುತ್ತಾನೆ. ಇಂಥ ಪ್ರಸಂಗದಲ್ಲಿ ಅವನು ತನ್ನ ಕಾವ್ಯಕಥೆಗಳಲ್ಲಿ ವೃಥಾಸಂಗತಿಗಳನ್ನು ಬರೆದರೆ ಅಜ್ಞರಾದವರ ಮನಸ್ಸಿನಲ್ಲಿ ಇವರೂರಿದ ಅಸತ್ಯದ ಬೀಜವು ನಾಟಿ, ಮೊಳಕೆಯೊಡೆದು ಮರವಾಗಿ ವಿಷದಹಣ್ಣನ್ನು ಬಿಡುವದು. ಈ ವಿಷದ ಹಣ್ಣನ್ನು ತಿಂದವರು ಸ್ವಾಭಾವಿಕವಾಗಿ ಯಾವಗತಿಯನ್ನು ಹೊಂದುವರೆಂಬದನ್ನು ಬೇರೆ ಹೇಳಬೇಕಾಗಿಲ್ಲ. ವಿಚಾರಗಳನ್ನು ಗುಪ್ತವಾಗಿ ತಮ್ಮಲ್ಲಿ ಇಟ್ಟುಕೊಳ್ಳುವವರಿಗೂ, ಅವುಗಳನ್ನು ಪ್ರಕಟೀಕರಿಸುವವರಿಗೂ ಇಷ್ಟು ಅಂತರವು. ಗುಪ್ತವಿಚಾರಗಳು ಸತ್ಸಂಗತಿಗಳಿಂದ ಕೂಡಿದವುಗಳಾಗಲಿ ಅಸತ್ಸಂಗತಿಗಳಿಂದ ಕೂಡಿದವುಗಳಾಗಲಿ ಅವು ವಿಚಾರಿಕನಿಗಷ್ಟೇ ಪರಿಣಮಿಸುತ್ತವೆ. ಆದರೆ ಅವುಗಳನ್ನು ಬೈಲಿಗೆ ಇಡುವವನು ತನ್ನ ವಿಚಾರಗಳಿಗೆ ಅನೇಕರನ್ನು ಎಳೆದುಕೊಳ್ಳುವನು. ಇಂಥ

ಪ್ರಸಂಗದಲ್ಲಿ ನಿಜಸಂಗತಿಗಳನ್ನಷ್ಟೇ ಕೊಟ್ಟು ಜನರನ್ನು ತನ್ನ ಕಡೆಗೆ ಒಲಿಸಿಕೊಳ್ಳುವದು ಕವಿಯ ಅಥವಾ ಗ್ರಂಥಕಾರನ ಮುಖ್ಯಲಕ್ಷಣವಾಗಿದೆ. ಇದು ಐತಿಹಾಸಿಕ ಸಂಗತಿಗಳನ್ನು ಕೊಡುವಾಗಷ್ಟೇ ಅನ್ವಯಿಸುತ್ತದೆ. ಆದರೆ ಮನೋಕಲ್ಪನೆಯಿಂದ (Imagination) ಕಲ್ಪಿಸುವ ಗ್ರಂಥಗಳಿಗೆ ಸಂಬಂಧಿಸುವದಿಲ್ಲ.

ಇರಲಿ ಮೇಲೆ ಹೇಳಿದಂತೆ ಪರಧರ್ಮ ಸಹಿಷ್ಣುತೆಯು ಕಾವ್ಯಗ್ರಂಥಕಾರರಲ್ಲಿ ಅವಶ್ಯವಾಗಿ ಬೇಕೇಬೇಕು. ಈ ಗುಣವೊಂದು ಇಲ್ಲದ್ದರಿಂದ ೧೭ನೇ ಶತಮಾನದಲ್ಲಿದ್ದ **ಧರಣೀಪಂಡಿತನೂ** (ಸುಮಾರು ೧೬೫೦) ಬಿಜ್ಜಣರಾಯ ಪುರಾಣಕರ್ತೃವಾದ **ಚಂದ್ರಸಾಗರ ವರ್ಣಿಯೂ**, ತಮ್ಮ ಜೈನಧರ್ಮಿಗಳ ಮೇಲಲ್ಲದೆ, ಮಿಕ್ಕಾಳಿದವರ ಮೇಲೆಯೂ ಎಂಥ ಕೆಟ್ಟಪರಿಣಾಮವನ್ನುಂಟುಮಾಡಿರುವರೆಂಬದು ಅವರ ಗ್ರಂಥಗಳ ಅವಲೋಕನದಿಂದ ಕಂಡುಬರುತ್ತದೆ. ಈ ಪಂಡಿತದ್ವಯರು ತಮ್ಮ ಅಸತ್ಯಸಂಗತಿಗಳಿಂದ ತಮ್ಮ ಗ್ರಂಥಗಳಲ್ಲಿ ಲಿಂಗವಂತರನ್ನು ಹೀಯಾಳಿಸಿ ಅವರ ಧರ್ಮದ ಬಗ್ಗೆ ಕುಕಲ್ಪನೆಗಳನ್ನು ಬೀರಿ ಅವರ ಮನಸ್ಸನ್ನು ವಿಶೇಷವಾಗಿ ನೋಯಿಸಿರುವರು. ನಿಜಸಂಗತಿಯನ್ನು ಅವರು ತಮ್ಮ ಗ್ರಂಥಗಳಲ್ಲಿ ಬರೆದುಕೊಂಡಂತೆ ಇರುವದಿಲ್ಲ. **ಚಂದ್ರಸಾಗರ ವರ್ಣಿಯು** ಜೈನ ಮತೋತ್ಕರ್ಷಕ್ಕಾಗಿಯೂ, ಸ್ವಬಾಂಧವರ ಗುಣಕೀರ್ತನಕ್ಕಾಗಿಯೂ, ತನ್ನ ಗ್ರಂಥವನ್ನು ಬರೆದಿದ್ದರೆ ಒಳ್ಳೇದಾಗುತ್ತಿತ್ತು. ಆದರೆ ನಿಜಸ್ಥಿತಿಯು ಹೀಗಿಲ್ಲ. ಆತನು ಲಿಂಗವಂತ ಮತದ ಅವಹೇಳನಕ್ಕಾಗಿಯೂ, **ಶ್ರೀಮದ್ಬಸವನನ್ನು** ಕುತ್ಸಿತ ಪುರುಷರ ಗಣನೆಯಲ್ಲಿ ಎಳೆಯುವದಕ್ಕಾಗಿಯೂ ಪ್ರಯತ್ನಿಸಿರುವನು. **ಶ್ರೀಮದ್ಬಸವನು** ಎಂಥ ಮಹಿಮನಿದ್ದನೆಂಬದು ಆತನು ಲೋಕೋಪಕಾರಕ್ಕಾಗಿಯೂ. ಲೋಕಾನುಕರಣೆಗಾಗಿಯೂ, ಹಾಡಿದ ವಚನಗಳ ಮೇಲಿಂದ ಕಂಡುಬರುತ್ತದೆ. **ಚಂದ್ರಸಾಗರವರ್ಣಿಯು** ಲಿಂಗವಂತ ಮತದ ವಿಷಯವಾಗಿ ಯಾವಲ್ಲಿ ತಪ್ಪುತಿಳಿದುಕೊಂಡು ಬರೆದಿರುವನೆಂಬದನ್ನೂ, ಆತನು ವರ್ಣಿಸುವಂತೆ **ಶ್ರೀಮದ್ಬಸವನು** ಇದ್ದಿಲ್ಲವೆಂಬದನ್ನೂ, ಆ ಪ್ರಮಥವರ್ಯನ ಉಕ್ತಿಗಳಿಂದಲೇ ನಿಷೇಧಿಸುವದು ಪ್ರಸ್ತುತ ಲೇಖದ ಉದ್ದೇಶವಾಗಿದೆ.

ಬಿಜ್ಜಣರಾಯ ಪುರಾಣವು ಶೃಂಗಾರ ಕಾವ್ಯವೆಂದು ಉಲ್ಲೇಖಿಸಲ್ಪಟ್ಟಿದೆ. ಈ ಪುರಾಣವು ಕಾವ್ಯವೆಂದು ಕರೆಯಲ್ಪಟ್ಟರೂ ಕಾವ್ಯದ

ಲಕ್ಷಣಗಳು ಹೇಳಿಕೊಳ್ಳುವಂತೆ ಕಂಡುಬರುವದಿಲ್ಲ. ಕಾವ್ಯವು ಶೃಂಗಾರ ಕಾವ್ಯವೆಂದು ಹೆಸರುಗೊಂಡರೂ, ಶೃಂಗಾರ ರಸವು ಅತ್ಯಲ್ಪವಾಗಿ ಕಂಡುಬರುತ್ತದೆ. ಕಾವ್ಯಬದ್ಧತೆಯೂ, ಪದಲಾಲಿತ್ಯವೂ, ಶಬ್ದಜೋಡಣೆಯೂ, ಹೊಗಳತಕ್ಕವಿರುವದಿಲ್ಲ. ೧೭ನೇ ಶತಮಾನದ ಅಂತ್ಯದ ವರೆಗೆ ದೊರೆತ ಕವಿಗಳ ಸಂಖ್ಯೆಯಲ್ಲಿ **ಚಂದ್ರಸಾಗರ ವರ್ಣಿಯ** ಹೆಸರು ಕಂಡುಬರುವದಿಲ್ಲ. ಈತನ ಗ್ರಂಥದ ಮೇಲಿಂದ ಈತನು ಆಧುನಿಕ ಮಧ್ಯಮ ಕವಿಗಳಲ್ಲೊಬ್ಬನೆಂದು ಕಂಡುಬರುತ್ತದೆ. ಪದ್ಯಗಳು ಓದರಿಕ್ಕೆ ಮನೋಹರವಾಗಿಲ್ಲ. ಅಲ್ಲಲ್ಲಿ ಗ್ರಾಮ್ಯಶಬ್ದಗಳೂ, ರೂಢಿಯಲ್ಲಿರದ ಶಬ್ದಗಳು ಸೇರಿಸಲ್ಪಟ್ಟವೆ. ಕವಿಯ ಪದಜೋಡಣಿಯ ಅನುಕೂಲತೆಗಾಗಿ ವ್ಯಂಜನಾಂತ ಶಬ್ದಗಳನ್ನು ಹೇರಳವಾಗಿ ಉಪಯೋಗಿಸಿರುವನು. ಈತನ ಗ್ರಂಥದಲ್ಲಿ ೧೨ನೇ ಶತಮಾನದ ಪರಿಸ್ಥಿತಿಗಿಂತಲೂ ತನ್ನಕಾಲದ ಸ್ಥಿತಿಯು ಹೆಚ್ಚು ಕಂಡುಬರುತ್ತದೆ. ಪದ್ಯಗಳು ಭಾಮಿನೀ ಷಟ್ಪದಿಯಲ್ಲಿ ರಚಿಸಲ್ಪಟ್ಟಿವೆ; ಇದರಲ್ಲಿ **ಪೀಠಿಕಾವರ್ಣನೆ, ದೇಶವರ್ಣನೆ, ಬಸವಣ್ಣನಿಗೆ ಪ್ರಧಾನಿ ಪಟ್ಟವಾದದ್ದು, ಶೈವಶಾಸ್ತ್ರ ನಿರ್ಮಾಣ, ಸುಬುದ್ಧಿಮಂತ್ರಿಯ ನೀತಿ, ರಾಜನೀತಿ, ರಾಯನ ದೀಕ್ಷಾಗ್ರಹಣ, ಬಸವನ ಜಯಿಸಿದ್ದು** ಹೀಗೆ ಎಂಟು ಆಶ್ವಾಸಗಳಿರುತ್ತವೆ. ಗ್ರಂಥದಲ್ಲಿಯ ಒಟ್ಟು ಪದಸಂಖ್ಯೆಯು ೪೯೮ ಇರುತ್ತದೆ. ಪೀಠಿಕಾ ವರ್ಣನೆಯಲ್ಲಿ ಆರಂಭಕ್ಕೆ ಜೈನ ಪೂರ್ವಾಚಾರ್ಯರ ಸ್ತುತಿಯೂ ನಂತರ ಪುರಾಣ ಗ್ರಂಥಗಳ ಪದ್ಧತಿಗನುಸರಿಸಿ ಏಳು ನರಕಗಳೂ, ಭವನವಾಸಿಗರ ಲೋಕವೂ, ಮಧ್ಯಮ ಲೋಕವೂ, ವರ್ಣಿಸಲ್ಪಟ್ಟದೆ. ಆಮೇಲೆ ಮಧ್ಯಮ ಲೋಕದಲ್ಲಿಯ ದ್ವೀಪಗಳನ್ನೂ ಸಮುದ್ರಗಳನ್ನೂ ವರ್ಣಿಸಿ ನಡುವೆ ಜಂಬೂ ದ್ವೀಪವನ್ನು ವರ್ಣಿಸಿದ್ದಾನೆ. ಜೈದಧರ್ಮ ಕಲ್ಪನೆಗಳಿಗನುಸರಿಸಿ ಸ್ವರ್ಗನರಕಗಳೂ, ಚೈತ್ಯಾಲಯಗಳೂ, ೨೪ ತೀರ್ಥಂಕರರೂ, ಉದಾಹರಿಸಲ್ಪಟ್ಟಿದ್ದಾರೆ.

ಪುರಾಣ ಪುರುಷರನ್ನು ಹೇಳಿದ ನಂತರ ಭರತ ಕ್ಷೇತ್ರವನ್ನೂ, ಮಹಾರಾಷ್ಟ್ರ ದೇಶವನ್ನೂ, ಕಲ್ಯಾಣ ಪಟ್ಟಣವನ್ನೂ, ಮಧ್ಯಮಧ್ಯದಲ್ಲಿ ವನಗಳನ್ನೂ, ಸರಸಿಗಳನ್ನೂ, ತಟಾಕಗಳನ್ನೂ, ವೃಕ್ಷಲತೆಗಳೇ ಮೊದಲಾದವುಗಳನ್ನು ವರ್ಣಿಸಿದ್ದಾನೆ. ಕಲ್ಯಾಣ ನಗರವನ್ನು **ಪದ್ಮ ಬಿಜ್ಜಳ**

ನೆಂಬ ಅರಸನು ಆಳುತ್ತಿದ್ದನೆಂದೂ, ಆತನಿಗೆ **ಸುರಬಿಜ್ಜಣನೆಂಬ** ಮಗ ನಿದ್ದನೆಂದೂ ಹೇಳಿದೆ. **ಈ ಸುರಬಿಜ್ಜಣನೇ** ನಮ್ಮ ಕಥಾನಾಯಕನು. **ಈ**ತನು ಶಾಲಿವಾಹನ ಶಕೆ ೧೦೩೮ ಧಾತುನಾಮ ಸಂವತ್ಸರದಲ್ಲಿ ಅಂದರೆ ಕ್ರಿಸ್ತೀಶಕದ ೧೧೧೬ರಲ್ಲಿ ಪಟ್ಟಕ್ಕೆ ಕುಳಿತನೆಂದು ಹೇಳಿದೆ. **ಈ** ಸುರಬಿ ಜ್ಜಣನಿಗೆ ಸುಪ್ರಭೆಎಂಬ ಪತ್ನಿಯೂ, **ಬುದ್ಧಿಸಾಗರ, ಸುಮತಿ, ಸುಪ್ರಭ, ಅರಿಂಜಯ** ರೆಂಬ ನಾಲ್ವರು ಮಂತ್ರಿಗಳೂ, ಇದ್ದರೆಂದು ಬರೆದಿರು ತ್ತದೆ. ಇಲ್ಲಿ ಲಿಂಗವಂತ ಗ್ರಂಥಗಳಿಗೂ, ಈ ಗ್ರಂಥಕ್ಕೂ ವ್ಯತ್ಯಾಸ ಬರು ತ್ತದೆ. ಬಸವಣ್ಣನವರ ಮಾವಂದಿರಾದ, **ಬಲದೇವ, ಸಿದ್ಧಣ್ಣ** ರೆಂಬ ವರು ಮಂತ್ರಿಗಳಿದ್ದರೆಂದೂ **ಬಿಜ್ಜಣನಿಗೆ ಬಲದೇವನೇ** ಮುಖ್ಯ ಮಂ ತ್ರಿಯಾಗಿದ್ದನೆಂದೂ ಬಸವ ಪುರಾಣದಲ್ಲಿ ಹೇಳಿದೆ. **ಬಲದೇವನು ಬಿಜ್ಜ ಳ**ನ ಮಂತ್ರಿಗಳಲ್ಲೊಬ್ಬನಾಗಿದ್ದನೆಂದು ಶಿಲಾಲೇಖಗಳಿಂದಲೂ ತಿಳಿದುಬರು ತ್ತದೆ. ಇಲ್ಲಿಂದ ಮುಂದೆ ಲಿಂಗವಂತ ಮತದ ಮೇಲೆ ಆಘಾತವು ಕೊಡ ಲ್ಪಟ್ಟಿದೆ. ಗ್ರಂಥಾಂತ್ಯದಲ್ಲಿ ಮಂಗಲವಿರುತ್ತದೆ. 'ಮಂಗಲಕೆ ನೆರೆಸಂದುದಂ' ಎಂಬ ಶಬ್ದಗಳು ಗ್ರಂಥವು ಮಂಗಲವಾರ ಮುಗಿಸಲ್ಪಟ್ಟಿತೆಂದು ಊಹಿಸಿಕೊ ಳ್ಳಲು ಸಹಾಯಕಾರಿಯಾಗಿವೆ.

**ಚಂದ್ರಸಾಗರ ವರ್ಣಿಯು ಮಾದಿರಾಜ**ನೆಂಬ ಭೂಸುರನ ಪತ್ನಿಯಾದ **ವೇದವತಿ** ಎಂಬವಳಲ್ಲಿ **ಬಸವಣ್ಣ**ನವರು ಜನಿಸಿದ ರೆಂದೂ (ಆಶ್ವಾಸ ೩ ಪದ ೧೭), ಈತನ ಮೋರೆಯು ಸ್ವಲ್ಪ ಮುಂದೆ ಯಾದದ್ದರಿಂದ ಈ ಹೆಸರು ಬಂದಿತೆಂದೂ, ಮೊದಲು ಇವರಿಗೆ **ವೃಷಭ** ಎಂಬ ನಾಮವು ಇದ್ದಿತೆಂದೂ, ಒಳ್ಳೇ ಹಾಸ್ಯಪೂರ್ವಕವಾಗಿ ಬರೆದಿರು ವನು. (ಆ. ೩ ಪದ ೨೮-೨೯) **ಚಂದ್ರಸಾಗರ** ವರ್ಣನಿಗೆ ವೃಷಭ ಇದರ ತತ್ಭವವು **ಬಸವ**ನೆಂದೂ, ಆತನು ನಂದಿಯ ವ್ರತದಿಂದ ಜನಿ ಸಿದರೆಂಬದೂ, ಗೊತ್ತಿಲ್ಲೆಂದು ತೋರುತ್ತದೆ. ಇದಲ್ಲದೆ **ಮಾದಿರಾಜ ವೇದವತಿ**ಯರಿಗೆ **ಗುಣವತಿ** ಎಂಬ ಒಬ್ಬ ಮಗಳೂ ಇದ್ದಳೆಂದು ಬರೆದದೆ. ಜೈನಕವಿಗಳ ಹಾಗು ಲಿಂಗವಂತ ಕವಿಗಳ ವೃಂತ್ತಾಂತಗಳ ಲ್ಲಿದ್ದ ವ್ಯತ್ಯಾಸವು ಇಲ್ಲಿ ಪುನಃ ಕಂಡುಬರುತ್ತವೆ. **ಧರಣಿ ಪಂಡಿತನು ಮಾದಿರಾಜನು ಬಿಜ್ಜಳನ** ಜೋಯಿಸನಾಗಿದ್ದನೆಂದೂ, ಆತನಿಗೆ **ಬಸವ** ನೆಂಬ ಮಗನೂ, **ಪದ್ಮಿನಿ**ಎಂಬ ಮಗಳೂ, ಇದ್ದರೆಂದು ಹೇಳುತ್ತಾರೆ. ಲಿಂಗವಂತ ಕವಿಗಳ ವೃತ್ತಾಂತದಲ್ಲಿ ಜೈನಕವಿಗಳಂತೆ ಭಿನ್ನಾಭಿಪ್ರಾಯ

ವಿಲ್ಲ. ಇದಲ್ಲದೆ ಬಿಜ್ಜಳರಾಯ ಪುರಾಣದ ನಾಲ್ಕನೇಯ ಆಶ್ವಾಸದ ೪೫ನೇ ಪ– ದಲ್ಲಿ ಅಕ್ಕನಾಗಮ್ಮನು ಶರಣೆಯಲ್ಲಿ ಒಬ್ಬಳಾಗಿದ್ದಳೆಂದು ಹೇಳಿದೆ. ಜೈನ ಕವಿಗಳ ಈ ಭಿನ್ನಾಭಿಪ್ರಾಯದ ಮೂಲಕ ಇವರು ನಿಜಸಂಗತಿಯನ್ನು ಕೊಡುವವರ ಬದಲು ಕೇವಲ ಬಸವಣ್ಣನವರ ಬಗ್ಗೆ ಕುಕಲ್ಪನೆಯನ್ನು ಹುಟ್ಟಿಸುವದಕ್ಕಾಗಿ ಹೊಟ್ಟೇಕಿಚ್ಚಿನಿಂದ ಹೀಗೆ ಬರೆದಿರುವರೆಂದು ವ್ಯಕ್ತವಾಗುತ್ತದೆ.

ವಸಂತಕಾಲದ ಶೃಂಗಾರವನ್ನು ನೋಡಲಿಕ್ಕೆಂದು ವನಕ್ಕೆ ಹೊರಟಾಗ್ಗೆ ಗುಣವತಿಯನ್ನು ಬಿಜ್ಜಳನು ನೋಡಿ ಮೋಹಿತನಾಗಿ ಮೂರ್ಛೆ ಹೊಂದಿದಂತೆಯೂ, ಬುದ್ಧಿಸಾಗರನು ಆಕೆಯನ್ನು ತಂದುಕೊಡಲು ಅಭಿವಚನವಿತ್ತು ಬಸವನಿಗೆ ಪ್ರಧಾನಿ ಪಟ್ಟವನ್ನು ಕೊಡಿಸಿ ಗುಣವತಿಯನ್ನು ಬಿಜ್ಜಳನಿಗೆ ಕೊಡಿಸಿದಂತೆಯೂ, ಹೇಳಿದೆ. ಧರಣಿಪಂಡಿತನು ಸಹ ಬಸವಣ್ಣನವರಿಗೆ ಪ್ರಧಾನಿಪಟ್ಟವು ಬರಬೇಕಾದರೆ ಆತನ ತಂಗಿಯಾದ ಪದ್ಮಿನಿಯನ್ನು ಬಿಜ್ಜಳನು ವರಿಸಿದೇ ಕಾರಣವೆಂದು ಹೇಳುತ್ತಾನೆ. ಲಿಂಗವಂತರಲ್ಲದವರಿಗೆ ಹಾಗೂ, ಬಸವಣ್ಣನವರ ವಚನಗಳನ್ನು ಓದದೆ ಇದ್ದವರಿಗೆ ಈಮಾತು ಸತ್ಯವೆಂದು ಕಾಣುತ್ತದೆ. ಆದರೆ ಬಿಜ್ಜಳನು ಕೇವಲ ಸ್ತ್ರೀವ್ಯಾಮೋಹಕ್ಕಾಗಿ ಮಂತ್ರಿಪದದಂಥ ಸ್ಥಾನವನ್ನು ಪರರ ಕೈಯಲ್ಲಿ ಕೊಡುವಷ್ಟು ಮೂರ್ಖನಿದ್ದಿಲ್ಲ. ಆತನಲ್ಲಿ ಗುಣಯೋಗ್ಯತೆಗಳನ್ನು ಪರೀಕ್ಷಿಸುವ ಸಾಮರ್ಥ್ಯವಿತ್ತು. ಬಸವಣ್ಣನವರು ತಮ್ಮ ವಚನಗಳ ಮೇಲಿಂದ ಭೌತಿಕ ಹಾಗೂ ವಿಷಯಾಭಿಲಾಷೆಯನ್ನು ಹೆಚ್ಚಿಸುವ ವಸ್ತುಗಳಿಗೆ ದಿವ್ಯಾನುಭವವನ್ನೂ, ಗೌರವವನ್ನೂ, ಮಾರಿಕೊಳ್ಳುವವರಲ್ಲವೆಂದು ಸಿದ್ಧವಾಗುತ್ತದೆ. ಇದಲ್ಲದೆ ಅವರು ಮಂತ್ರಿಗಳಾಗುವಾಗ್ಗೆ ತಮ್ಮ ತಾಯಿತಂದೆಗಳ ಮನೆಯಲ್ಲಿದ್ದಿಲ್ಲ. ಮತ್ತು ತಂಗಿಯನ್ನು ಬಿಜ್ಜಳನಿಗೆಕೊಟ್ಟು ತಾಯಿತಂದೆಗಳ ಅನುಮತಿಯಂತೆ ಮಂತ್ರಿಪದವನ್ನು ವಹಿಸಲಿಲ್ಲ.

"ಅಣ್ಣತಮ್ಮ ಹೆತ್ತಪ್ಪ ಗೋತ್ರವಾದರೇನು ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯಾ। ನೆಂಟಭಕ್ತಿ ನಾಯಕ ನರಕ ಕೂಡಲ ಸಂಗಮದೇವಾ"

ಇತ್ಯಾದಿ ವಚನಗಳಿಂದ ಈಮಾತಿನ ಸತ್ಯತೆಯು ವ್ಯಕ್ತವಾಗುತ್ತದೆ. ಬಸವಣ್ಣನವರಿಗೆ ಪಂಚ ಪುರುಷಗಳು ಸಿದ್ಧಿಸಿದ್ದವು. ಇವುಗ

ಳಿಂದ ವೀರಶೈವ ಶ್ರೇಷ್ಠತೆಯನ್ನು ತೋರಿಸುವದಕ್ಕಾಗಿ ಅವರು ಅನೇಕ ಪವಾಡಗಳನ್ನು ತೋರಿಸಿದರು. ಇವು ಜೈನರಿಗೆ ಭೂತಾಟಕೆಯ ಕಾರ್ಯಗಳಾಗಿಯೂ, ಗಾರುಡಿಗರ ಆಟಗಳಾಗಿಯೂ, ತೋರಿದವು. ಈ ಪವಾಡಗಳಲ್ಲಿ ಒಂದಾದ ತಾವ್ರ ಪಟಲೇಖವನ್ನು ಓದಿ ಬಿಜ್ಜಳನಿಗೆ ಅಪಾರವಾದ ಧನವನ್ನು ದೊರಕಿಸಿದ್ದರಿಂದಲೂ, ಅವರು ಸ್ವತಃ [illegible] ಸಂಪನ್ನರಿದ್ದವರಿಂದಲೂ ಅರಸನು ಅವರಿಗೊಲಿದು ಮಂತ್ರಿಪದವನ್ನಿತ್ತನೆಂದು ವೀರಶೈವ ಕವಿಗಳು ಹೇಳುತ್ತಾರೆ. ಮಂತ್ರಿಪದವು [illegible]ತಮೋಳಿ ಕಂಡಕಂಡವರಿಗೆ ದಾನವನ್ನು ಮಾಡಿ ತನ್ನ ಕೀ[illegible]ನ್ನು ಹೆಚ್ಚಿಸಿ ಯಾವತ್ತೂ ಮಂತ್ರಿಮಂಡಲದ ಮುಕುಟವನ್ನಿಳಿಸಿ ಐವತ್ತಾರು [illegible] "ಒಡೆಯನಾಗರಸಿತ್ತ ಬಿರುದುಗಳಿಡಿಸಿಕೊಂಡು ಬಸವ[illegible] ತಾನಾಗಿ" ಎಂದೂ "ಅಪ್ಪ ನರಸುತಲರ ಜನರಿಂ ಸೊಪ್ಪಿಸುತಲಾವಾದಿ ಪ್ರತಿವಾ। ದೊಪ್ಪರೊಳು ದುರ್ವ್ಯಸನರೊಳು [illegible]ಗೆ ದಂಡಗಳ॥ ಅಪ್ಪಸರ ಸುಕುಮಾರಿ ಪರವಧು॥ ವಪ್ಪರಿರೆ ರೂಪಿನಲಿ ಕಾಂಕ್ಷೆಗಿಪ್ಪ ಬಸವನು ಪಾಪಭಯಗೊಡವನುಚಿತಾಚಾರದಲಿ॥ ಆತನ[illegible] ಚರ್ಯೆಗಳುಮು। ತ್ತಾತ ನಡೆಯುದ ವ್ಯಸನಗಳುಮು। ತ್ತಾತ ಕಲಿಯುವ ವಿದ್ಯ ಸಾಧನೆಯಾತ ತಿರುಗದಿಹ ಭೂತಗಳಿಲ್ಲ" ಎಂದೂ **ಚಂದ್ರಸಾಗರ ವರ್ಣಿಯು** ಹೇಳಿರುವನು. ಇಲ್ಲಿ ಕುಹಕತನದ ಪರಮಾವಧಿಯು ಕಂಡಿರುತ್ತದೆ.

"ಹರಿವ ಹಾವಿಂಗಂಜೆ, ಉರಿವ ನಾಲಿಗೆಗಂಜೆ, ಸುರಿಗೆಯ ಮೊನೆಗಂಜೆ, ಒಂದಕ್ಕಂಜು ವೆನೊಂದಕ್ಕಳುಕುವೆನು। ಪರಸ್ತ್ರೀ ಪರಧನವೆಂಬ ಭುಜಿಂಗಂಗಜುವೆ। ಮುನ್ನಂಜದರಾವಣನೆ ಪಿಧಿಗೊಳಗಾದ। ಅಂಜುವೆನಯ್ಯ ಕೂಡಲ ಸಂಗಮದೇವಾ॥"

ನೋಡಲಾಗದು, ನುಡಿಸಲಾಗದು, ಪರಸ್ತ್ರೀಯರ ಭೇಟಿ ಬೇಡಕಾಣಿರೋ। ತಗರ (ಟಗರು) ಬೆನ್ನಿನಲ್ಲಿ ಹರಿವಸೊಣಗನಂತೆ ಬೇಡಕಾಣಿರೋ। ಒಂದಾಸೆಗೆ ಸಾಸಿರ ವರುಷ ನರಕದಲ್ಲಿಕ್ಕುವ ಕೂಡಲ ಸಂಗಮ ದೇವಯ್ಯ"

"ಒಡೆಯರು ತಮ್ಮ ಮನೆಗೆ ಒಡಕೊಂಡು ಹೋದರೆ, ತುಡುಗುಣಿತನದಲ್ಲಿ ಪರವಧುವ ನೋಡುವ ಸರಸಬೇಡವೋ। ಕೂಳ ಸೊಕ್ಕು ತಲಗೇರಿ ರಾಣಿವಾಸದೊಡನೆ ಸರಸಬೇಡವೋ। ಕೂಡಲ ಸಂಗಮದೇವ ಕರೆಯಿಸಿತಗನಯ್ಯ [ಸರಿಮಾಡುವನು],,

ಬಿಜ್ಜಳರಾಯ ಪುರಾಣವು' ಚಂದ್ರಸಾಗರ ವರ್ಣಿಯು

" ಪರವಧುವಿಗೆಳಸುವರ ಕಂಡು, ಗರುಡನ ಕಂಡ ಸರ್ಪಧರೆ ಗಿಳಿದಂತೆ ಅಡಗಿಪ್ಪೆನಯ್ಯಾ ಕೂಡಲಸಂಗಮದೇವ,,

ಎಲ್ಲ ನೋಡಿದಲ್ಲಿ ಮನಸೆಳಸಿದಡೆ ಆಣೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಪರವಧುವನು ಮಹಾದೇವಿ ಎಂದು ಕಾಂಬೆನು ಕೂಡಲಸಂಗಮದೇವಾ,,

ಇತ್ಯಾದಿಯಾಗಿ ಹಾಡಿಕೊಂಡ ಶ್ರೀ ಮದ್ಬಸವನು "ಸುಕುಮಾರಿ ಪರವಧು ವಪ್ಪುರಿರೆ ರೂಪಿನಲಿ ಕಾಂಕ್ಷಿಗಿಪ್ಪ,, ನೆನ್ನುವದು ಯೋಗ್ಯವೇ ಹೇಗೆ ವಾಚಕರೇ ಊಹಿಸಲಿ. ಇದು ಗ್ರಂಥಕಾರನ ಕೇವಲ ಕೀಳು ವೃತ್ತಿಯನ್ನು ತೋರಿಸುತ್ತದಲ್ಲದೆ ಬೇರೆಯಲ್ಲ.

ಬಸವಣ್ಣನವರು ಬೇತಾಳ "ವಿದ್ಯೆಯನ್ನು ಬಲ್ಲವರಾಗಿದ್ದರೂ ಅದರ ವರ್ಮವನ್ನು ತಿಳಿಯದವರಾದದ್ದರಿಂದ ಒಂದಾನೊಂದು ದಿವಸ ಒಬ್ಬ ಭೂತಿಕನು ಬಂದು ತನ್ನ ವಿದ್ಯೆಯನ್ನು ತೋರಲು "ಸಕಲ ವಿದ್ಯವ ಬಲ್ಲೆನೆನೆಗಿದರ || ಮಟ್ಟ ಸಿಕ್ಕಿಲ್ಲದನು ತೋರಿಸು" ಎಂದು ಕೇಳಿ "ಆತನೊಳಗಿಹ ತಂತ್ರವೆಲ್ಲವ ಕಲಿತು । ಭೂತಿಕಗೆ ಸಹಸ್ರವರಹದ । ಭೂತಳವನಿತ್ತನಗೆ ಸರಿಯಿನ್ನಿ । ಭೂತಳದೊಳಿಲ್ಲೆಂದು ಎಸೆದ ಪ್ರಧಾನಿ ಬಸವಣ್ಣ" ಎಂದು ಚಂದ್ರಸಾಗರ ವರ್ಣಿಯು ಕವಿತ್ವವನ್ನು ಮಾಡಿದ್ದಾನೆ.

ಎಂಬತ್ತೆಂಟು ಪವಾಡವ ಮೆರೆದು ಹರಗಣ ಚೋಹ [ಡೌಲಿನ ವೋಷಾಕು. ವೇಷ) ದಂತಾಯಿತ್ತೆನ್ನ ಭಕ್ತಿ ॥ ತನುವಿನೊಳಗೆ ಮನಸಿಲುಕದೆ, ಮನದೊಳಗೆ ತನು ಸಿಲುಕದೆ; ತನು ಅಲ್ಲಮನಲ್ಲಿ ಸಿಲುಕಿತ್ತು ॥ ಮನ ಚೆನ್ನಬಸವಣ್ಣನಲ್ಲಿ ಸಿಲುಕಿತ್ತು ॥ ನಾನೇತರಲ್ಲಿ ನೆನೆವೆನಯ್ಯಾ ಕೂಡಲ ಸಂಗಮದೇವಾ,,

ಎಂಬ ವಚನದಿಂದ ಪವಾಡಗಳನ್ನು ತೋರಿಸಿದ್ದು ಪಶ್ಚಾತ್ತಾಪಕ್ಕೆ ಕಾರಣವಾಗಿರಲು ತಾನು ಗಾರುಡಿಗ ವಿದ್ಯೆದಿಂದ ಮೆರೆದನೆಂಬುದು, ತೀರ ಹೊಲ್ಲದ ಮಾತು.

ಕರಿಸಿ ಭುಸೂರ ಕ್ಷತ್ರನೈಶ್ಯರ ॥ ನೆರವಿಯನು ಬಂದಾರ ಕೊರಳೊಳ । ಗಿರಲು ಫಲವೇ ನಿಷ್ಫಲಿಂಗವಧರಿಸದಿಹ ಅಂಗ ॥ ದರತೆ ಭೋವಿಗಳೆಂದು ಕೊರಳೊಳು । ಧರಿಸಿದರೆ ಪ್ರತ್ಯಕ್ಷ ಫಲವನು ಗರೆವನಾ, ಪರಮೇಶನೆನುತಲಿವರೆದ ಬಸವಣ್ಣ,,

ಎಂದೂ ಹೊಲೆ ಮಾದಿಗ ಮೊದಲಾದ ಕುಲಹದಿನೆಂಟು ಜಾತಿಯವರನ್ನು ಕೂಡಿಸಿಕೊಂಡು ವರ್ಣಸಂಕರವನ್ನು ಮಾಡಿದನೆಂದೂ, ಚಂದ್ರಸಾಗರ ವರ್ಣಿಯೂ, ನಿಜಲಿಂಗತತ್ತ್ವವನ್ನರಿಯದ ಎಷ್ಟೋ ಜನರೂ ಅನ್ನುತ್ತಾರೆ. ಭಗವದ್ಗೀತೆಯಲ್ಲಿ ಈ ವರ್ಣಸಂಕರ ವಿಷಯದಲ್ಲಿ ಹೀಗೆ ಹೇಳುತ್ತದೆ.

............स्त्रीषु दुष्टासु वार्ष्णेय जायते वर्णसंकरः॥
संकरो नरकायैव कुलघ्नानां कुलस्य च। पतंति पितरो ह्येषां लुप्तपिंडोदक क्रियाः॥
दोषैरेतैः कुलघ्नानां वर्णसंकरकारकैः। उत्साद्यन्ते जातिधर्माः कुलधर्माश्च शाश्वताः॥
उत्सन्नकुलधर्माणां मनुष्याणां जनार्दन। नरके नियतं वासो भवतीत्यनुशुश्रुम॥

भ. गी. अ. १.

ಮೇಲೆ ಹೇಳಿದ ವಾಕ್ಯಗಳು ವೀರಶೈವರಿಗೆ ಅನ್ವಯಿಸುವದಿಲ್ಲ. ಆದರೆ ಸ್ತ್ರೀಯರು ದುಷ್ಟರಾಗುವದು ಅರ್ಥಾತ್ ಅಪತೀವ್ರತೆಯರಾಗುವದು ಯಾವ ಜನಾಂಗಕ್ಕೂ ಯಾವ ಮತಕ್ಕೂ ಬೇಡ. ವರ್ಣಾಶ್ರಮಧರ್ಮಕ್ಕೂ ವೀರಶೈವ ಮತಕ್ಕೂ ಅಭ್ಯಂತರವದೆ. ಈ ಮತವು ವರ್ಣಾಶ್ರಮಧರ್ಮದಂತೆ ವೇದಶಾಸ್ತ್ರಪ್ರಮಾಣ್ಯವಾಗಿದ್ದರೂ ವರ್ಣಾಶ್ರಮಧರ್ಮದ ಕಟ್ಟುಗಳಿಗೊಳಗಾಗದೆ ತನ್ನ ಸ್ವಂತ ತತ್ತ್ವಗಳನ್ನು ಆರುಸ್ಥಲ ಮೆಟ್ಟುಗಳಿಂದ ಪ್ರಕಟೀಕರಿಸುವದಾಗಿದೆ. ಅಂತೆಯೇ ಶ್ರೀಯುತ ಶಿದ್ಧರಾಮಪ್ಪನವರು ಪಾವಟೆ ಇವರು ಇದಕ್ಕೆ "ಅತಿವರ್ಣ ಷಡಾಶ್ರಮಿ"ಯ ಧರ್ಮ ಎಂದು ಕರೆಯುವರು. ಕಾಮಾತುರತೆಯನ್ನು ಪೂರ್ತಿ ಮಾಡಿಕೊಳ್ಳುವದಕ್ಕಾಗಲಿ ಇನ್ನುಳಿದ ಯಾವದೊಂದು ಹೇತುವನ್ನು ಸಾಧಿಸಿಕೊಳ್ಳುವದಕ್ಕಾಗಿಯಾಗಲಿ ಅನ್ಯ ಕುಲಸ್ತ್ರೀಯರನ್ನು ವರಿಸುವದರಿಂದ ಸಂಕರ ವೆಸಗುವದು. ಇದೆಲ್ಲಕ್ಕೂ ಸ್ತ್ರೀಯರೇ ಮೂಲವೆಂದು ಗೀತೆಯು ಹೇಳುತ್ತದೆ. ಆದರೆ ವೀರಶೈವ ಲಕ್ಷಣದಲ್ಲಿ ದೀಕ್ಷೆಹೊಂದಿದ ಪ್ರತಿಯೊಬ್ಬನು ಹೆಣ್ಣಾಗಲೀ, ಗಂಡಾಗಲಿ, ತರುಣನಾಗಲಿ, ವೃದ್ಧನಾಗಲಿ, ಇವರೆಲ್ಲರೂ ಸಮಾನಸ್ಕಂದರು. ಇವರಲ್ಲಿ ಜಾತಿವಯೋಮಾನದ ತಾರತಮ್ಯಗಳಿರುವದಿಲ್ಲ. ಆದರೆ ಅನುಭವ ತಾರತಮ್ಯವುಂಟು. ಇದೇ ಸ್ಥಲ ಮೆಟ್ಟುಗಳ ಕಟ್ಟು. ಹೀಗೆ ದೀಕ್ಷೆ ಹೊಂದಿದವರೆಲ್ಲರೂ ಪೂರ್ವಾಶ್ರಯವನ್ನು

ಳಿದು ಪುನರ್ಜಾತರ ಗುಂಪಿನೊಳಗೆ ಬರುವರು. ಇವರಲ್ಲಿ ಮನೋರಾಜ್ಯದಲ್ಲಿ ಹರಿದಾಡಿ ಉದ್ದೇಶ ಪೂರ್ತಿಮಾಡಿಕೊಳ್ಳುವದು ಎಷ್ಟೋ ಇರುವದಿಲ್ಲ. ಯಾಸತ್ತೂ ಕಾರ್ಯಗಳು ಲಿಂಗದೃಷ್ಟಿಯಲ್ಲಿಯೇ ನಡಿಯುಬೇಕಾಗುತ್ತವೆ. ಲಿಂಗ ದೃಷ್ಟಿಯಿಂದ ಸಂಸಮಾನಸ್ಕಂದರಾದ ಲಿಂಗಾಂಗಿಗಳಲ್ಲಿ ಲಗ್ನದಂಥ ಮಂಗಲ ಕಾರ್ಯವು ನಡೆದಲ್ಲಿ ಇದೆಂತು ಸಂಕರವಾಗುವದು? (ಭಾವಬೀಜಗಳನ್ನೆಲ್ಲಹುರಿದು ಕೇವಲ ಲಿಂಗದೃಷ್ಟಿಯಲ್ಲಿ ಹರಿದಾಡುವ ತನಕ ಈ ಸಾಂಕರ್ಯ್ಯಭಾವವು ಅಡಗದು.) ಮತ್ತು ಎಲ್ಲಿಯ ವರೆಗೆ ಈ ಭಾವಬೀಜಗಳು ತೋರುವವೂ ಅಲ್ಲಿಯ ವರೆಗೆ ವರ್ಣಸಂಕರದ ಮಾತು ಒತ್ತಟ್ಟಿಗಿರಲಿ, ಅವರು ವೀರಶೈವದ ಮೊದನೇಯ ಲಕ್ಷಣವಾದ ದೀಕ್ಷೆಯ ಕಟ್ಟಿಗೂ ಸಹ ಯೋಗ್ಯರಲ್ಲವೆಂದು ಬಸವಣ್ಣನವರು ಹಾಡಿಕೊಂಡಿರುವರು.

"ಕುಂಬಳಕಾಯಿಗೆ ಕಬ್ಬುಣದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲು ಹಾಗ ಬಲ್ಲುದೇ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿಯಂತಹುವೋ ಮುನ್ನಿನಂತೆ! ಕೂಡಲ ಸಂಗಮ ದೇವಯ್ಯ ಮಾನಹೀನನ ಮೊಸಲ ಕಾಯ್ದಿರಿಸಿದಂತೆ ,,

ಸಗಣಿಯ ಬೆಸಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ ರಂಜನೆಯಹುದಲ್ಲನೆ ಅದರ ಗುಜಳ ಬಿಡದನ್ನ ಮಣ್ಣ ಪುತ್ಥಳಿಯ ಮಾಡಿ ಮಾಣದೆ ಜಲದಲ್ಲಿ ತೊಳೆದರೆ ನಿಚ್ಚ ನಿಚ್ಚ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣ ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ ಕೆಟ್ಟವನೇಕ ಸದ್ಭಕ್ತನಹನು ಕೂಡಲ ಸಂಗಮ ದೇವಾ"

ಈ ವಚನಗಳು ಅತನು ಸಿಕ್ಕಹಾಗೆ ಜನರನ್ನು ನೆರೆಯಿಸಿ ವರ್ಣಸಂಕರವನ್ನೆಸಗಿದನೆಂಬ ಮಾತು ಅಸತ್ಯವೆಂಬವಕ್ಕೆ ಸಾಕ್ಷಿಯಾಗಿದೆ.

ಬಸವನು ತಾನೇ 'ಈಶ್ವರನ ಅವತಾರನೆಂದೂ' "ತನ್ನ ನಾಮಾಂಕಿತದಿಪ್ಪಾಟಿಯೊಳಿನ್ನು ಬಸವನ ಗುಡಿಯ ಕಟ್ಟಿಸಿ ಉನ್ನತದ ಕೋಡುಗಳ ಬಸವನ ಪೂಜೆಸೈಸಿರಿಸಿ॥ ತನ್ನ ದರುಶನ ಹಗಲಿರುಳು ನಿಮಗನ್ನು ಮಾಡುವೆನೆಂದು ಮುದ್ರೆಯಾಳಿನ್ನು ಬಸವನ ರೂಪ ಕೆತ್ತಿಸಿ ಕೊಟ್ಟನೆಲ್ಲರಿಗೆ' "ಇನ್ನು ಮೊದಲಾಗೆನ್ನು ನಾಮವ ನಂದನರಿಗಿಡಿರಿ" ಇತ್ಯಾದಿಯಾಗಿ ಹೇಳಿ ಮೆರೆದನೆಂದೂ, ಚಂದ್ರಸಾಗರ ವರ್ಣಿಯ ತರ್ಕವು. ಬಸವಣ್ಣನವರು ಈಶ್ವರನೆಂದು ಅಂದುಕೊಳ್ಳುವ ದೊತ್ತಟ್ಟಿಗಿರಲಿ ಸ್ವತಃ ತಾನು

ಮಾಡುವ ಕಾರ್ಯವೂ ವಹ ಮನಸ್ಸಿನಲ್ಲಿ ಉಳಿಯಬಾರದೆಂದೂ ಲಿಂಗ ಧ್ಯಾನದಲ್ಲಿ ಜಿತ ಮನಕ್ಕೆ ತೆರವು ಕೊಟ್ಟು ಬಹಿರ್ಮುಖವಾಗಿ ಧ್ಯಾನ ವನ್ನು ಕೆಡಿಸಿಕೊಳ್ಳಬಾರದೆಂದೂ ಈ ವಚನವನ್ನು ಹಾಡಿಕೊಂಡಿರುವರು.

"ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ (ಚೇಷ್ಟೆಮಾಡಿ) ಕಾಡಿತು ಶಿವನ ಡಂಗುರ. ಮಾಡಿದೆನೆನ್ನದಿರಾ ಲಿಂಗಕ್ಕೆ ಮಾಡಿ ದೆನೆಂಬುದು ಮನದಲ್ಲಿ ಇಲ್ಲದಿರ್ದಡೆ ಬೇಡಿತ್ತನೀವ ಸ ಕೂ ಡಲ ಸಂಗಮದೇವ"

ಲಿಂಗವಂತರು ಗುರುಕೊಟ್ಟ ಲಿಂಗ ವ್ಯತಿರಿಕ್ತ ಅನ್ಯದೇವೋಪಾಸ ಕರಲ್ಲ. ಶಿವೋಪಾಸಕರು ಶಿವನ ಅನಂತ ರೂಪಗಳನ್ನು ಕಲ್ಪಿಸಿ ಆತನ ಅರ್ಚನೆಯನ್ನು ಮಾಡುತ್ತಾರೆ. ಬಸವಣ್ಣನವರು ನಿಜವಾದ ಗುರುಲಿಂಗ ಜಂಗಮದ ಆಚರಣೆಯ ಮಾರ್ಗವನ್ನು ಬೀರಲು ಬಂದವರು. ಅಂಥ ವರು ಸ್ವಂತ ಹೆಸರಿನಿಂದ ಗುಡಿಗಳನ್ನು ಕಟ್ಟಿಸಿ ಪೂಜಿಸಿರೆನ್ನುವದು ಘನತೆಗೆ ಕಲಂಕವೇ ಸರಿ. ಆದರೆ ವಸ್ತುಸ್ಥಿತಿಯು ಹೀಗಿಲ್ಲ. ಅವರು ಕೇವಲ ಇಷ್ಟ ಪ್ರಾಣ ಭಾವ ಲಿಂಗಾಭಿಲಾಷಿಗಳೆಂತಲೂ, ಲಿಂಗೇ ತರ ದೇವತೆಗಳನ್ನು ಜನನಗುಸ್ಸೈವಗಳೆಂದು ನಿಷೇಧಿಸಿರುವರೆಂದೂ ಅವರ ವಚನದಿಂದ ತಿಳಿದುಬರುವದು.

"ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದ ನೆನೆದಡೆ ತಲೆ ದಂಡ; ತಲೆದಂಡ। ಹುಸಿದನಾದಡೆ ದೇವಾ ತಲೆದಂಡ; ತಲೆದಂಡ। ಕೂಡಲ ಸಂಗಮ ದೇವಾ ನೀನಲ್ಲದೆ ಅನ್ಯವ ನೆನೆದಡೆ ತಲೆದಂಡ ತಲೆದಂಡ॥"

"ದೇವನೊಬ್ಬ ನಾಮ ಹಲವು। ಪರಮ ಪತಿವ್ರತೆಗೆ ಗಂಡ ನೊಬ್ಬ। ಮತ್ತೊಂದಕ್ಕೆರಗಿದೊಡೆ ಕಿವಿ ಮೂಗ ಕೊಯ್ಯುವನು। ಹಲವು ದೈವದ ಎಂಜಲ ತಿಂಬವರ ನೇನೆಂಬೆನಯ್ಯಾ ಕೂಡಲ ಸಂಗಮ ದೇವಾ"

"ನಂಬಿದ ಹೆಂಡತಿಗೆ ಗಂಡನೊಬ್ಬನೇ ಕಾಣಿರೋ। ನಂಬಬಲ್ಲ ಭಕ್ತರಿಗೆ ದೇವನೊಬ್ಬನೇ ಕಾಣಿರೋ। ಬೇಡ ಬೇಡ ಅನ್ಯದೈ ವದ ಸಂಗಹೊಲ್ಲ- ಅನ್ಯ ದೈವವೆಂಬುದು ಹಾದರ ಕಾಣಿರೋ। ಕೂಡಲಸಂಗಮದೇವರು ಕಂಡರೆ ಮೂಗು ಕೊಯ್ಯುವ"

"ಕಂಡ ಕಂಡವರೆಲ್ಲರ ಗಂಡರೆಂದೆಂಬ ದಿಂಡೆಯನವಳ ಸಜ್ಜನೆ ಎಂದೆನ್ನ ಬಹುದೇ? ಲಿಂಗ ಪ್ರಸಾದವನುಂಡು ಅನ್ಯದೈವಗಳ

ಕೊಂಡಾಡುವವರ ನಮ್ಮ ಕೂಡಲ ಸಂಗಮ ದೇವರು ಆ ಭಂಡರಿಗೆ ಮಾಡಿದ ಹುಳುಗೊಂಡವನು'

"ಕರ್ತನ ಪೂಜಿಸಿ ಕುತ್ಸಿತ ದೈವಕ್ಕೆರಗುವುದು ಕತ್ತೆಗೆ ಕುದುರೆಗೆ ಹುಟ್ಟಿದ ಹೇಸರನಂತೆ ಅವರ ಭಕ್ತರೆಂತೆಬೆ, ಭೃತ್ಯರೆಂತೆಂಬೆ ಶರಣರೆಂತೆಂಬೆನವರ ಎರಡುಳ್ಳ ಪ್ರಪಂಚಿಗಳ ಮೆಚ್ಚ ಕೂಡಲ ಸಂಗಮ ದೇವಾ,,

ಯಾವನೊಬ್ಬ ಮಹಾಪುರುಷನು ಅವತರಿಸಿ ಮಹತ್ಕೃತ್ಯಗಳನ್ನು ಮಾಡಿ ಲೋಕಪಾವನಕ್ಕಾಗಿ ಹೆಣಗಿದ್ದರೆ ಆತನ ಸದಾಸ್ಮರಣೆಗಾಗಿ ತಮ್ಮ ಸಂತತಿಗಳಲ್ಲಿ ಅವನ ಹೆಸರನ್ನು ಇಡುವದು ಸ್ವಾಭಾವಿಕವು. ದ್ವಿಜರಲ್ಲಿ ಹಲವರಿಗೆ ರಾಮ ಕೃಷ್ಣರೆಂದೂ, ಜೈನರಲ್ಲಿ ಪದ್ಮರಾಜ ಅನಂತರಾಜ ಪದ್ಮಾವತಿ ಜಿನ್ನಪ್ಪರೆಂದೂ, ಮಹಮ್ಮದೀಯರಲ್ಲಿ ಮಹಮ್ಮದ ಹಸನ ಹುಸೇನಿಗಳೆಂದೂ, ಕ್ರೈಸ್ತರಲ್ಲಿ ಜೀಸಸ್, ಜೋಸೆಫ್ ಜಾನ್ ಎಂದೂ ಹೆಸರು ಕಂಡು ಬಂದಿದ್ದಾದರೆ ಆಯಾ ಮತಗಳ ಮೂಲ ಪುರುಷರು ಅಥವಾ ಮಹಿಮರು ತಮ್ಮ ಘನತೆಯ ಪ್ರಸಾರಕ್ಕಾಗಿ ತಮ್ಮ ಅನುಯಾಯಿಗಳಿಗೆ ನಿಮ್ಮ ಮಕ್ಕಳುಗಳಿಗೆ ನಮ್ಮ ಹೆಸರನ್ನು ಇಡಿರೆಂದು ಹೇಳಿದರೆಂದೆನ್ನ ಬಹುದೇ? ಇವರು ಹೇಳಿದ್ದು ನಿಜವಿದ್ದರೆ **ಬಸವಣ್ಣನವರೂ** ನನ್ನ ಹೆಸರನ್ನು ನಿಮ್ಮ ಮಕ್ಕಳಿಗೆ ಇಡಿರೆಂದು ಹೇಳಿದ್ದು ನಿಜ. ಆದರೆ ಹೀಗೆಂದೆನ್ನಲಾಗದು. ಲಿಂಗವಂತ ಮತಕ್ಕಿದ್ದ ಚಂದ್ರಸಾಗರ ವರ್ಣಿಯ ನಿಜವಾದ ಹೃದಯವು ಇಲ್ಲಿಯೇ ವ್ಯಕ್ತವಾಗುತ್ತದೆ.

ಶೈವಶಾಸ್ತ್ರನಿರ್ಣಯದಲ್ಲಿ ಶಿವೋಪಾಸಕರನ್ನು ನಿಂದಿಸಿ **ಸುಬುದ್ಧಿ** ಮಂತ್ರಿಯ ನೀತಿಯಲ್ಲಿ **ಸುಬುದ್ಧಿಯು** ಅನೇಕ ವಿಧವಾಗಿ **ಬಸವಣ್ಣನವರಿಗೆ** ಸುಬುದ್ಧಿ ವಾದವನ್ನು ಹೇಳಿ ತನ್ನ ಕಡೆಗೆ ಒಲಿಸಿಕೊಂಡಂತೆ ಚಂದ್ರಸಾಗರ ವರ್ಣಿಯು ಹೇಳಿದ್ದಾನೆ. ಇದರಲ್ಲಿ ಬಸವಣ್ಣನವರಿಗೂ ಮಂತ್ರಿಗೂ ನಡೆದ ವಾಗ್ವಾದದಲ್ಲಿ ವೀರಶೈವ ಮತದ ವಿಷಯವಾಗಿ ಅನೇಕ ಕುಕಲ್ಪನೆಗಳನ್ನು ತುಂಬಿದ್ದಾನೆ. ಅವೆಲ್ಲವುಗಳಿಗೆ ಸಮರ್ಪಕ ಉತ್ತರಗಳನ್ನು ಕೊಡುತ್ತ ಹೋದರೆ ಲೇಖವು ವಿಸ್ತಾರವಾಗುವದು. ಆದರೆ ಮುಖ್ಯವಾದ ಇನ್ನು ಎರಡು ಮೂರು ವಿಚಾರಾರ್ಹಣೀಯವಾದ ವಿಷಯಗಳಿಂದ ಈ ಲೇಖವನ್ನು ಮುಗಿಸುವಾ.

ರಾಜನೀತಿಯಾಶ್ವಾಸದಲ್ಲಿ **ಬಸವಣ್ಣನವರು** ಕಪಟವೇಷದಿಂದ ದೊರೆಯ ಮಿತ್ರತ್ವವನ್ನು ಪಡೆದು ಅವನನ್ನು ಮೋಸಗೊಳಿಸಿದರೆಂದು ಬರೆದದೆ. ಅಸತ್ಯಶ್ರವಣಕ್ಕೂ ಆಸ್ಪದ ವಿಲ್ಲದ ಮಹಿಮನಲ್ಲಿ, ಸತ್ಯ ನುಡಿಯುವದೇ ಸ್ವರ್ಗ ಅಸತ್ಯವೇ ನರಕವೆಂದು ಕಂಡು ಹಿಡಿದ ಮಹಾತ್ಮನಲ್ಲಿ ಮೋಸಗಾರಿಕೆಯನ್ನು ಕಂಡು ಹಿಡಿದದ್ದು ಮೂರ್ಖತನದ ಕೆಲಸವೇ ಸರಿ. ರಾಜ ನೀತಿಯ ಅಂತ್ಯದಲ್ಲಿ **ಬಸವಣ್ಣನವರು ಬಿಜ್ಜಳನಿಗೆ**

ಭಾ.ಷ॥ "ತಂದೆ ನೀನೇ ಗುರುವು ದೇವರು। ಬಂಧು ನೀನೇ ಪಾದ ಸೇವಕ। ನೆಂದು ನೀನೇ ಸುಪ್ರತಿಷ್ಠೆಯುಗೈದೆಯಿಂದಾದಿ॥ ಮುಂದೆ ನಿನ್ನನು ಸರದಿ ನಡಕೊಳು। ವೆಂದು ವಿಜ್ಞಾಪಿಸಿದ ಬಸವನ। ದೊಂದು ಸದ್ಗುಣ ಭಕ್ತಿರಸಕವನೀಶ ಮೆಚ್ಚಿದನು."

ಎಂದು ಹೇಳಿದ್ದಾಗಿದೆ.

"ಕಾಯಗುಣವಕಳೆದುಳಿದವರಿಗೆ ಶರಣೆಂಬೆ" "ಆನೆಅಂಕುಶಕ್ಕಂಜುವದೇ ಅಯ್ಯಾ ಮಾಣದೆ ಸಿಂಹದ ನಖವೇದಂಜುವದಲ್ಲದೆ॥ ಆನೀ ಬಿಜ್ಜಳಂಗಂಜುವೆನೇ ಅಯ್ಯಾ; ಕೂಡಲ ಸಂಗಮ ದೇವಾ, ನೀನು ಸರ್ವ ಜೀವದಯಾಪಾರಿಯಾದ ಕಾರಣ ನಿಮಗಂಜುವೆನಲ್ಲದೆ"

" ಆರು ಮುನಿದು ಎಮ್ಮನೇನು ಮಾಡುವರು? ಊರ ಮುನಿದು ಎಮ್ಮನೆಂತು ಮಾಡುವರು!... ಆನೆಯ ಮೇಲೆ ಹೋಹವನ ಶ್ವಾನ ಮುಟ್ಟಬಲ್ಲುದೇ? ಕೂಡಲ ಸಂಗಮ ದೇವರುಳ್ಳನ್ನಕ್ಕರ ನಮಗೇನಯ್ಯಾ"

ಎಂದು ಅಂದಂಥ **ಬಸವಣ್ಣನವರು** ಹೀಗೆ ಅಂದಿರಬಹುದೇ ಹೇಗೆ ವಿಚಾರ ಶೀಲರಾದ ವಾಚಕರೇ ತರ್ಕಿಸಲಿ.

ರಾಯನ ದೀಕ್ಷಾಗ್ರಹಣ ಆಶ್ವಾಸದಲ್ಲಿ ಲಿಂಗವಂತರು ರಟ್ಟೆಯೊಳಗೆ ಲಿಂಗಧರಿಸುವದನ್ನು ನೋಡಿದ ಚಂದ್ರ ಸಾಗರ ವರ್ಣಿಯು "ಎದೆಯೊಳಗಾತ ಲಿಂಗವ ತೆಗೆದು ಕಟ್ಟಿದ ರಟ್ಟೆಯೊಳುಬಸವ" ಎಂದು ಕೂಡಿಸಿರುವನು ಲಿಂಗಭಕ್ತನಾದ ಶ್ರೀ ಮುದ್ದಬಸವನು ಜಿನಭಕ್ತರಿಗಂಜಿ ಎದೆಯೊಳಗಿರುವ ಲಿಂಗವನ್ನು ತೆಗೆದು ರಟ್ಟೆಯಲ್ಲಿ ಎಂದೂ ಕಟ್ಟಲಾರನು. ಇದಕ್ಕೆ ಆತನೇ ಸಾಕ್ಷಿ. ಆದೇ ಆಶ್ವಾಸದ ೩೫ ನೇ ಪದ್ಯದಲ್ಲಿ

ಭಾಷೆ” “ ಜೋಡಿಸಿದಕರ ಬುದ್ಧಿ ಬುದ್ಧಿಂ ಬಾಡುತೆ ಯ್ದೈತ
ರುವ ಬಸವನ। ಗೂಡಿ ಭೂಭುಜತ್ರಿಪ್ರದಕ್ಷಿಣಿಗೈದು ಸಾಷ್ಟಾಂಗ।
ನೀತಲಾಸಚಿವರರ ಒಡನೊಡ ಗೂಡಿಬಸವನು ಮಾಡಲೊಂದನೆ।
ಗೂಡಿದಾಶೀರ್ವಾದದಿಂದಲಿ ಸುಳಿತು ನೃಪನೆದುರು,।

ಎಂದು ಬರೆದದಕ್ಕೆ

ಹರಿಬ್ರಹ್ಮಂಗೆರಸದಂತೆ ಬಿಳಿನೀರ ನೆರೆಯುಯ್ಯಾ „ (ವಚನ ೧೪
೭೧ ಶಿವಾನುಭವಗಂಥ್ರಮಾಲಾನಂ ೧)

ಕಾಯಗುಣಂಗಳ ಕಳೆದುಳಿದವರಿಗೆ ಶರಣೆಂಬೆ” ಎಂಬವಾಕ್ಯ
ಗಳೇ ಉತ್ತರವು.

ಕಡೆಯ ಆಶ್ವಾಸದಲ್ಲಿ ಬಸವಣ್ಣನವರು ಸುರಬಿಜ್ಜಣನು ಅನಶನ ವ್ರತವನ್ನು ಕೈಕೊಂಡನಂತರ ಅತನ ಮಗನಾದ ಶಿವಬಿಜ್ಜಣನಿಗೆ ಲಿಂಗಧಾರಣವನ್ನು ಮಾಡಿ ಪಟ್ಟಗಟ್ಟಿ ಪುರಜನರನೆಲ್ಲರನ್ನೂ ಲಿಂಗಧಾರಕರನ್ನು ಮಾಡಿದರೆಂತಲೂ, ಅಂತ್ಯದಲ್ಲಿ ಅವರು ಶಿವಬಿಜ್ಜಣನಿಂದ ಹತರಾದರೆಂತಲೂ ಉಕ್ತವಾಗಿದೆ. ರಾಯಬಿಜ್ಜಣನ ದೀಕ್ಷಾಗ್ರಹಣದನಂತರ ಬಸವಣ್ಣನವರು ಅತನ ಮೂರು ವರ್ಷದ ಮಗುವನ್ನು ಸಿಂಹಾಸನದ ಮೇಲೆ ಕೂಡ್ರಿಸಿ ಹನ್ನೆರಡು ವರುಷಗಳ ಪರ್ಯಂತರ ಮಂತ್ರಿ ಪದವನ್ನು ವಹಿಸಿ ಕಲ್ಯಾಣಪುರವನೆಲ್ಲ ಲಿಂಗಾಂಗಿಗಳಿಂದ ತುಂಬಿಸಿ ಲಿಂಗವಿರಹಿತರು ಈ ಪಟ್ಟಣದಲ್ಲಿ ಇರಕೂಡದೆಂದು ಡಂಗುರವನ್ನು ಸಾರಿಸಿದಂತೆಯೂ ಯಾವತ್ತೂ ರಾಜ್ಯದಾಡಳಿತ ಸೂತ್ರಗಳನ್ನು ಕೈ ಸೆರೆ ಮಾಡಿಕೊಂಡು ತನ್ನ ಅಧಿಕಾರ ಬಲದಿಂದ ಬೊಕ್ಕಸವನ್ನು ಬಡಬಗ್ಗರಿಗೆ ಕೊಟ್ಟು ಬರಿದು ಮಾಡಹತ್ತಿದನೆಂದೂ ಚಂದ್ರಸಾಗರ ವರ್ಣಿಯು ಹೇಳುತ್ತಾನೆ. ಈ ಮಾತು ಎಷ್ಟರ ಮಟ್ಟಿಗೆ ಸಾಧ್ಯವದೆ ಎಂಬದು.

“ ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲಿ, ನಾಳೆ ಅವಿನ ಬೆನ್ನ
ಮೇಲೆ ಹರಿಯಲಿ, ಅದೇಕಯ್ಯಾ ಲಜ್ಜೆಗೆಡಲೇಕೆ ನಾಣಿಗೆಡ
ಲೇಕೆ? । ಕೂಡಲ ಸಂಗಮದೇವರುಳ್ಳನ್ನಕ್ಕರ ಬಿಜ್ಜಳನ ಭಂಡಾರ
ಎನಗೇಕಯ್ಯಾ „

ಎಂಬ ವಚನದಿಂದ ಸಿದ್ಧವಾಗುತ್ತದೆ.

ಶಿವ ಬಿಜ್ಜಣನು ತನ್ನ ತಾಯಿಯ ಮುಖಾಂತರ ಯಾವತ್ತೂ ವರ್ತಮಾನವನ್ನು ಕೇಳಿ ಬಸವ ನೊಡನೆ ಸೆಣಿಸಿ ಅತನನ್ನು ಸೋಲಿಸಿ

ಅನೇಕ ಶರಣರನ್ನು ಕೊಂದನೆಂದು ಬರೆದಿದೆ. ಲಿಂಗವಂತ ಕವಿಗಳಿಂದ ಬಸವಣ್ಣನು ಬಿಜ್ಜಳನೊಡನೆ ಕಾದಾಡಿದ್ದು ನಿಜವಿದ್ದರೂ ಕೂಡ ಅದರ ಕಾರಣವು ಭಿನ್ನವಿತ್ತೆಂದು ತಿಳಿದು ಬರುತ್ತದೆ. ಇದಲ್ಲದೆ ಯುದ್ಧವು ಜರುಗಿದ್ದು **ಬಸವಣ್ಣನವರ** ಐಕ್ಯವಾದನಂತರ. ಅದು ಏನೇ ಇರಲಿ ಬಸವಣ್ಣನವರು ಸೋತರೆಂಬುವದೇ ಈ ಆಶ್ವಾಸದ ಮುಖ್ಯಸಂಗತಿಯಾಗಿದೆ. ಬಸವಣ್ಣನವರಿಗೆ ಮರಿನೀಲವ್ವನೆಂಬ ಮಗಳಿದ್ದಳೆಂದೂ ಆಕೆಯನ್ನು **ಶಿವ ಬಿಜ್ಜಣನಿಗೆ ಕೊಟ್ಟಿತ್ತೆಂದೂ ಚಂದ್ರಸಾಗರ ವರ್ಣಿಯು** ಹೇಳುತ್ತಾನೆ. ಆದರೆ ಲಿಂಗವಂತ ಗ್ರಂಥಗಳಿಂದ ಆತನಿಗೆ **ಬಾಲಸಂಗಯ್ಯನೆಂಬ** ಒಬ್ಬನೇ ಮಗನಿದ್ದನೆಂದು ತಿಳಿದು ಬರುತ್ತದೆ. ಈ ಆಶ್ವಾಸದಲ್ಲಿ **ಬಸವಣ್ಣನವರ** ಧರ್ಮ ಪ್ರಚಾರ ಕಾರ್ಯವು ಕೇವಲ ಅನ್ಯಾಯದಿಂದ ಜರುಗಿತೆಂದೂ ಅದಕ್ಕೆ ಪ್ರತಿಫಲವು ಅದರ ಅವಸಾನವೆಂದೂ ತಿಳಿಸುವದೇ ಮುಖ್ಯಉದ್ದೇಶವಾಗಿದೆ. ಇಲ್ಲಿ ಹೇಳಿದ ಸಂಗತಿಗಳಲ್ಲಿ ಅನೇಕವುಗಳು ಮಿಥ್ಯವಾಗಿವೆ. ಅವುಗಳ ಸತ್ಯಾಸತ್ಯತೆಗಳನ್ನು ನಿರ್ಧರಿಸಲು ವಾಚಕರಿಗಾಗಿಯೇ ಬಿಟ್ಟಿದೆ.

ಪರಧರ್ಮದಲ್ಲಿ ಸಹಾನುಭೂತಿಯು ಇರದಿದ್ದರೆ ಸುಳ್ಳುಸಂಗತಿಗಳಿಗೆ ಇಷ್ಟು ಆಸ್ಪದವು ದೊರಿಯುತ್ತದೆ. ಚಂದ್ರಸಾಗರ ವರ್ಣಿಯ ಈ ನಿಂದೆಯಿಂದ ವೀರಶೈವ ಸಮಾಜಕ್ಕೂ ಬಸವಣ್ಣನವರ ಕೀರ್ತಿಗೂ, ಕಲಂಕವು ಎಳ್ಳಷ್ಟಾದರೂ ಇಲ್ಲ. ಆದಾಗ್ಯೂ ಪರಧರ್ಮಿಗಳಿಗೆ ಮಿಥ್ಯಾಭ್ರಮವಾಗಬಾರದೆಂದು ಈ ಲೇಖವು ಬರೆಯಲ್ಪಟ್ಟಿತು. ಸೂರ್ಯನು ತಾಪದಾಯಕನೆಂದು ಆತನಿಗೆ 'ಥೂ' ಹಾಕಿದರೆ ಆ ಉಗುಳು ಸಿಡಿಯುವದು ಯಾರಿಗೆ? 'ಥೂ' ಹಾಕಿದವರಿಗಲ್ಲವೇ? ಅದೇ ಮೇರೆಗೆ ಸೂರ್ಯನೋಪಾದಿಯಲ್ಲಿರುವ **ಬಸವಣ್ಣನವರಿಗೂ**, ಅವರ ಸಮಾಜಕ್ಕೂ ನಿಂದಿಸಿದರೆ ಅದು ತಗಲುವದು ನಿಂದಕರಿಗೇ ಸರಿ. ಸ್ತುತಿಗಿಂತಲೂ ನಿಂದೆಗೆ ಬೆಲೆಕೊಟ್ಟ, ಸಕಲರನ್ನೂ ಸರಿಯಾಗಿ ಕಂಡ ಆ ಮಹಾಮಹಿಮನ

> **"ತನಗೆ ಮುನಿವರಿಗೆ ತಾ ಮುನಿಯಲೇಕಯ್ಯ ಅವರಿಗಾದಡೇನು? ತನಗಾದಡೇನು? ತನುವಿನ ಕೋಪ ತನ್ನ ಹಿರಿಯತನದ ಕೇಡು। ಮನದ ಕೋಪ ತನ್ನ ಅರುವಿನ ಕೇಡು। ಮನೆಯೊಳಗಣಕಿಚ್ಚು ಮನೆಸುಟ್ಟಲ್ಲದೆ ನೆರೆಮನೆ ಬೇವುದೇ ಕೂಡಲ ಸಂಗಮದೇವಾ?"**

“ಕಾಣದ ಠಾವಿನಲ್ಲಿ ಜರಿದರೆ ಕೇಳಿ ಪರಿಣಾಮಿಸಬೇಕು. ಅದೇನು
ಕಾರಣ? ಕೊಳ್ಳದೆ ಕೊಡದೆ ಅವರಿಗೆ ಸಂತೋಷವಹುದಾಗಿ, ಎನ್ನ
ಮಾನದ ತದ್ವೇಷ ವಳಿದು, ನಿಮ್ಮ ಶರಣರಿಗೆ ಶರಣೆಂಬುದ ಕರು
ಣಿಸು ಕೂಡಲ ಸಂಗಮದೇವಾ”

ಎಂಬ ವಾಕ್ಯಗಳನ್ನು ಜ್ಞಾಪಕಕ್ಕೆ ತಂದು ತನ್ನ ಸುಕಲ್ಪನೆಯಿಂದ
ಬಿಜ್ಜಳರಾಯ ಪುರಾಣವನ್ನು ಬರೆದು **ಬಸವಣ್ಣನವರ** ಕೀರ್ತಿಯನ್ನು
ಮುಮ್ಮಡಿಗೊಳಿಸಿದ **ಚಂದ್ರಸಾಗರ** ವರ್ಣಿಯನ್ನು ಬಂಧು ಭಾವದಲ್ಲಿ
ಕಾಣಬೇಕೆಂಬದಾಗಿ ವಾಚಕ ವರ್ಗವನ್ನು ವಿಜ್ಞಾಪಿಸಿಕೊಂಡು ವಿರಮಿ
ಸುತ್ತೇನೆ.

---

# ದೇವರ ದಾಸಿಮಯ್ಯ

**ಲೇಖಕ:— ಶಿವಲಿಂಗಪ್ಪ ಮಹಾಂತಣ್ಣವರ ಮಾಸ್ತರ ದರ್ಗಾ**

---

ಸಮಾಜ ಸುಧಾರಣೆಗೆ ಸುಶಿಕ್ಷಣವೂ ಸುರಾಜ್ಯವೂ ಕಾರಣಗಳಿ
ದ್ದಂತೆ ಸದ್ಧರ್ಮವೂ ಬಹು ಮಟ್ಟಿಗೆ ಕಾರಣವಾಗಿದೆ. ಈಗಿನ ಸುಧಾರಿ
ಸಿದ ರಾಷ್ಟ್ರಗಳೆಲ್ಲ ಬಲವಾದ ಧಾರ್ಮಿಕ ತತ್ವಗಳ ದ್ಯೋತಕಗಳೆಂದು
ಹೇಳಬಹುದು. ಹಿಂದೊಂದು ಕಾಲದಲ್ಲಿ ಹಿಂದೂ ಧರ್ಮವನ್ನವಲಂಬಿ
ಸಿದ ಈ ಭರತಖಂಡವು ಸೌಭಾಗ್ಯದಿಂದಲೂ ಸಂಪತ್ತಿನಿಂದಲೂ ಸ್ವಾತಂ
ತ್ರ್ಯದಿಂದಲೂ ಸುಧಾರಣೆಯ ಶಿಖರಕ್ಕೆ ಮುಟ್ಟಿತ್ತು. ಮುಂದೆ ಕೆಲಕಾ
ಸಂದ ಮೇಲೆ ಬೌದ್ಧ ಜೈನ ಧರ್ಮಗಳು ಪ್ರಾದುರ್ಭವಿಸಿ, ಕ್ರಮೇಣ
ಬೆಳೆಯುತ್ತ ವೇದ ಧರ್ಮವನ್ನು ಮೂಲೆಗೊತ್ತಿದವು. ಆಗ್ಗೆ ಕುಮಾರಿಲ
ಭಟ್ಟ, ಶಂಕರಾಚಾರ್ಯರಂಥ ಧರ್ಮವೀರರು ಅವತರಿಸಿ ಬೌದ್ಧ ಜೈನ
ಧರ್ಮಗಳ ಏರಾಟವನ್ನು ಕೆಲಮಟ್ಟಿಗೆ ಕಡಿಮೆ ಮಾಡಿದರೆಂದು ಹೇಳ
ಬಹುದು. ಆದರೂ ನಮ್ಮೀ ಕರ್ನಾಟಕದಲ್ಲಿ ಪರಧರ್ಮಗಳ ಕಸುವು
ಕುಗ್ಗಲಿಲ್ಲ. ಎಲ್ಲೆಡೆಗಳಲ್ಲಿ ಇವುಗಳೇ ಪ್ರಬಲವಾಗಿದ್ದವು.

ಆಗ್ಗೆ ವೇದಾಗಮ ಪ್ರಣೀತವಾದ ವೀರಶೈವ ಮತದ ಹ್ರಾಸಕಾಲವು ಒದಗಿತ್ತು. ಶಿವಶರಣರ ಸಂಘವು ಕಲ್ಪನೇ ಇಲ್ಲ. ಭಕ್ತಮಾಹೇಶ್ವರರ ಸತ್ವವು ಎತ್ತಲೊ ಹೋಗಿತ್ತು. ಸದಾಚಾರದ ಸುದ್ದಿಯೇ ಇದ್ದಿಲ್ಲ. ಷಟ್‌ಸ್ಥಲದ ಜ್ಞಾನವಂತೂ ಬಹುದೂರ. ಅಂತೂ ಶಿವಭಕ್ತಿ ಶಿವವ್ರತ ಶಿವಪೂಜೆ ಶಿವಕೀರ್ತನ ಶಿವಧ್ಯಾನ ಶಿವಜ್ಞಾನ ಶಿವಯೋಗ, ಶಿವಾಚಾರಗಳು ಅಡಗಿದ್ದವೆಂದು ಹೇಳಲು ಪ್ರತ್ಯವಾಯವಿಲ್ಲ. ಇಂಥ ಪರಿಸ್ಥಿತಿಯಲ್ಲಿ ಪ್ರಮಥಗಣವರ್ಯನೂ ಸದ್ಭಕ್ತನೂ ಶಿವಶರಣನೂ ಆದ ದೇವರದಾಸಿಮಾರ್ಯನು ಮುದನೂರೆಂಬ ಗ್ರಾಮದಲ್ಲಿ ಶ್ರೀರಾಮಲಿಂಗೋದ್ಭವನಾದನು. ಈ ಗ್ರಾಮವು ಈಗ ಕಲಬುರ್ಗಿ ಜಿಲ್ಹೆಯಲ್ಲಿ ಇದೆ. ಮತ್ತು ಸಿಂದಗಿಯಿಂದ ಆಗ್ನೆಯ ಮೂಲೆಗೆ ೨೭ ಮೈಲುಗಳ ಅಂತರದ ಮೇಲೆ ಇದೆ. ದೇವರದಾಸಿಮಯ್ಯನ ಕಾಲವು ಬಸವೇಶ್ವರನಿಂದ ೧೦೦ ೧೫೦ ವರ್ಷದ ಪೂರ್ವದ್ದು. ಬಸವನ ಕಾಲದ ಶಿವಶರಣರ ವರ್ಗದ ಬೆಳವಣಿಗೆಯ ಆರಂಭ ಕಾಲವೇ ದಾಸಿಮಾರ್ಯನ ಕಾಲವೆಂದು ಊಹಿಸಲವಕಾಶವಿದೆ.

ದಾಸಿಮಾರ್ಯನು ವೀರಶೈವ ಮತ ಪ್ರಚಾರಕನೂ ದ್ಯೋತಕನೂ ದೀಪಕನೂ ಪಾಲಕನೂ ಆಗಿದ್ದನೆಂದು ಇವನ ಐತಿಹ್ಯದಿಂದ ಗೊತ್ತಾಗುತ್ತದೆ. ಮತ್ತು ವೇದಾಗಮ ಶಾಸ್ತ್ರಗಳಲ್ಲಿ ತಜ್ಞನಾಗಿದ್ದು ಸಶೀಲನೂ ಸದಾಚಾರಿಯೂ ಮಹಾನುಭವನೂ ಮಹಿಮಾಶಾಲಿಯೂ ಆಗಿದ್ದನು. ದಾಸಿಮಾರ್ಯನು ಬ್ರಹ್ಮಚರ್ಯಾಶ್ರಮದಿಂದ ಇಳದೆ ಗೃಹಸ್ಥಾಶ್ರಮಿಯಾಗಿ ಮನುಷ್ಯನು ಪಾರಮಾರ್ಥಿಕವನ್ನು ಹೇಗೆ ಸಾಧಿಸಬಹುದೆಂಬದನ್ನು ತೋರ್ಪಡಿಸಲು ಈಗಲೂ ಸದ್ಭಕ್ತರಿಗೆ ಒಳ್ಳೇ ಅನುಕರಣೀಯನಾಗಿದ್ದಾನೆ. ಧರ್ಮದಂತೆ ಆಚರಿಸಲು ಧರ್ಮಪತ್ನಿಯು ಅವಶ್ಯವೆಂದು ತಿಳಿದು ಕರ್ನಾಟಕದ ಬಹುಭಾಗದಲ್ಲಿ ಕನ್ಯೆಯರನ್ನು ಹುಡುಕುತ್ತ ನಡೆದನಂತೆ. ಕಬ್ಬು, ಭತ್ತ, ಉಸಿಕಗಳ ಸಾಧನದಿಂದ ಯಾವ ಕನ್ಯೆಯು ಬೆಂಕಿಯಿಲ್ಲದೆ ಪಾಕವನ್ನು ಮಾಡಿತೋರಿಸುವಳೋ ಅಂಥವಳನ್ನೇ ಲಗ್ನವಾಗಬೇಕೆಂಬ ಇವನ ಇಚ್ಛೆಯು. ಅದರಂತೆ ದುಗ್ಗಳಾಂಬಿಕೆಯು ಅವನ ಇಚ್ಛೆಯನ್ನು ಪೂರ್ಣಮಾಡಲು ಅವಳನ್ನು ದಾಸಿಮಾರ್ಯನು ಲಗ್ನವಾಗಿ, ಮುದನೂರ ಗ್ರಾಮದಲ್ಲಿ ಶ್ರೀ ರಾಮನಾಥನ

ಆಶ್ರಯದಲ್ಲಿ ತನ್ನ ನೇಯ್ಗೆಯ ಕಾಯಕವನ್ನು ಸಾಗಿಸುತ್ತ ಗೃಹಸ್ಥಾಶ್ರಮಿಯಾಗಿ ಪಾರಮಾರ್ಥಿಕ ಸಾಧನಂಗಳನ್ನು ಗೈಯುತ್ತ ಗುರುಲಿಂಗ ಜಂಗಮಾದಿ ಅಷ್ಟಾವರಣ ಆಚಾರಸ್ಥನಾಗಿ ಪಂಚಾಚಾರ ಪ್ರವೀಣನೆನಿಸಿ ಏಕಲಿಂಗನಿಷ್ಠಾ ತತ್ಪರನಾಗಿ ದಾಸೋಹಂಭಾವವಿಡಿದು ಶರಣಸ್ಥಲಾನುಭವಿಯಾಗಿದ್ದನು.

ಆ ಕಾಲಕ್ಕೆ ಹೊಟ್ಟೆಲಕೆರೆಯೆಂಬ ಪಟ್ಟಣದಲ್ಲಿ ಜೈನಧರ್ಮಾನುಯಾಯಿಯಾದ ಜಯಸಿಂಗನು ಅರಸನಾಗಿದ್ದನು. ಆತನ ರಾಣಿಯು ಸುಗ್ಗಲೆಯೆಂಬವಳು. ಆತನ ಪ್ರಜೆಗಳು ಬಹುಮಟ್ಟಿಗೆ ಜೈನರೇ. ಸುಗ್ಗಲೆಯು ಜೈನಧರ್ಮದಲ್ಲಿ ಹುಟ್ಟಿದವಳಾದರೂ ಹಿಂದೂ ಧರ್ಮದಲ್ಲಿ ವಿಶೇಷವಾಗಿ ವೀರಶೈವ ಧರ್ಮದಲ್ಲಿ ಪ್ರೀತಿಯುಳ್ಳವಳಾಗಿದ್ದಳು. ಅವಳು ತನಗೆ ಕನಸಿನಲ್ಲಿ ರಾಮೇಶನು ಹೇಳಿದಂತೆ ದಾಸಿಮಾರ್ಯನನ್ನು ತನ್ನ ಗುರುವರನನ್ನಾಗಿ ಮಾಡಿಕೊಳ್ಳಬೇಕಾಯಿತು. ಅರಸನ ಅಪ್ಪಣೆಯನ್ನು ಪಡೆಕೊಂಡು ದಾಸಿಮಾರ್ಯನ ಪಾದದರ್ಶನನಾಗಿ ಅವನ ಕೃಪೆಯಿಂದ ಅವಳಿಗೆ ವೀರಶೈವ ಮತ ದೀಕ್ಷೆಯೂ ಅಷ್ಟಾವರಣ ಮಹಾತ್ಮೆಯೂ ಸದಾಚರಣೆಗಳೂ ಬೋಧಿಸಲ್ಪಟ್ಟವು. ಈ ಸಂಗತಿಯು ಅವಳ ಜೈನಕುಲ ಗುರುವಿಗೆ ಗೊತ್ತಾಗಿ ಅವನು ಅರಸನ ಹತ್ತರ ಬಂದು "ನಿನ್ನ ರಾಣಿಯು ಬೇರೊಬ್ಬ ಗುರುವಿನನ್ನು ಮಾಡಿಕೊಂಡು ಲಿಂಗಾಂಗಿಯಾಗಿರುವಳೆಂದು ಕೇಳಿ ನನಗೆ ಬಹು ಸಂತಾಪವಾಗಿದೆ. ಇದು ತಕ್ಕುದ್ದಲ್ಲೆ"ಂದು ಆತನನ್ನು ಹೀಯಾಳಿಸಿದನು. ಆಗ ಅರಸನು ತನ್ನ ಕುಲಗುರುವಿನ ಧೋರಣದಂತೆ ಷಣ್ಮತಸ್ಥರನ್ನು ಕರೆಯಿಸಿ ದೇವರ ದಾಸಿಮಾರ್ಯನ ಕೂಡ ವಾದ ವಿವಾದಕ್ಕೆ ಹಚ್ಚಿದನು. ಆಗ್ಗೆ ಅವರೆಲ್ಲರೂ ರಾಜಸಭೆಗೆ ಬಂದು ದೇವರ ದಾಸಿಮಾರ್ಯನ ಕೂಡ ಧರ್ಮಶಾಸ್ತ್ರಾನುವಾದಗಳನ್ನು ಮಾಡತೊಡಗಿದರು. ಕಡೆಗೆ ದಾಸಿಮಾರ್ಯನು ಎಲ್ಲ ಮತಸ್ಥರನ್ನು ಗೆದ್ದದ್ದಲ್ಲದೆ ರಾಜನೆದುರಿಗೆ ವೀರಶೈವ ಮಹಿಮೆಯನ್ನು ಸಕಲ ಸಭಿಕರು ತಲೆದೂಗುವಂತೆ ತೋರ್ಪಡಿಸಿದನು.

ಆ ಕಾಲಕ್ಕೆ ಎಲ್ಲ ಜೈನ ಮತಾಗ್ರಣಿಗಳು ತಮ್ಮ ಮತವನ್ನು ತ್ಯಜಿಸಿ ದಾಸಿಮಾರ್ಯನಿಂದ ದೀಕ್ಷಾಬದ್ಧರಾಗಿ ವೀರಶೈವ ಮತವನ್ನು ಅಂ

ಗೀಕರಿಸಿದರು. ಆಗ್ಗೆ ದೇವರ ದಾಸಿಮಯ್ಯನು ಸಾಕ್ಷಾತ್ ಸೃಷ್ಟಿಕ ರ್ತನೋ ವೀರಶೈವ ಪ್ರಮಥಾಧಿಪನೋ ಭವಪಾಶಪರಿಹಾರಕನೋ ಎಂಬುವಂತೆ ಅರಸನಿಂದ ಮನ್ನಣೆ ಹೊಂದಿದ್ದು ಅರಿದಲ್ಲ.

ದಾಸಿಮಯ್ಯನ ಪುರಾಣವು ಸಂಸ್ಕೃತ ಭಾಷೆಯಲ್ಲಿ ಇದೆ. ಆದರೆ ಇನ್ನೂ ಅದು ನಮಗೆ ಉಪಲಬ್ಧವಿಲ್ಲ. ಆ ಸಂಸ್ಕೃತದ ಭಾಷಾಂತರವೇ ತಿಳಿಗನ್ನಡನಲ್ಲಿ ಭಾಮಿನಿ ಷಟ್ಪದಿಗಳಲ್ಲಿ ಒಬ್ಬ ಕನ್ನಡ ಕವಿಯಿಂದ ಬರೆ ಯಲ್ಪಟ್ಟಿದೆ. ಇದು ನಮ್ಮ ಸತ್ತರವಿದೆ. ಅದರಲ್ಲಿ ಭಕ್ತಿವಿಷಯವೂ ಅಷ್ಟಾ ವರಣದ ಮಹಿಮೆಯೂ ದಾಸಿಮಯ್ಯನ ಜೀವನ ಚರಿತ್ರೆಯೂ ಅವನ ಸ ವಾದಗಳೂ ಬಹು ಸುಗಮವಾಗಿ ವರ್ಣಿಸಲ್ಪಟ್ಟಿವೆ. ಇದು ಸಂಪೂರ್ಣ ವೀರಶೈವಪರ ಗ್ರಂಥವಿದೆ. ಶ್ರೀ ದಾಸಿಮಯ್ಯನು ಬಸವೇಶ್ವರನಂತೆ ರಾಜಕಾರಣದಲ್ಲಿ ಇಲ್ಲದಿದ್ದರೂ ಕಾಯಕದಿಂದ ಪಾರಮಾರ್ಥಿಕವನ್ನು ಸಾಧಿಸಿದನು. ಇವನು ಜೈನಮತವನ್ನು ಖಂಡಿಸಿ ಶಿವಮತವನ್ನು ಬೋಧಿ ಸಿ ಕರ್ನಾಟಕದಲ್ಲಿ ವೀರಶೈವ ಧರ್ಮದ ಪುನರುಧ್ಧಾರವನ್ನು ಮಾಡಿದ ನೆಂಬದು ಅವನ ಪುರಾಣವೇ ಸಾಕ್ಷಿಭೂತವಾಗಿದೆ.

ದಾಸಿಮಯ್ಯನು ತಪಸಿಧಿಯನ್ನು ಪಡೆದು ಗುರಲಿಂಗ ಜಂಗಮ ಭಕ್ತಿಯನ್ನು ಜನಸಾಮಾನ್ಯರಿಗೆ ತೋರ್ಪಡಿಸಿದ್ದಲ್ಲದೆ ಇವನ ಚರಿತ್ರವು ಅಜರಾಮರವಾಗಿದ್ದು ನಮ್ಮೆಲ್ಲರಿಗೆ ಅನುಕರಣೀಯವಾದದ್ದಾಗಿದೆ. ಇವನು ರಚಿಸಿದ ವಚನಗಳನ್ನು ಪರಿಶೀಲಿಸಿದರೆ ಅವುಗಳು ಹೃದಯಂಗಮವಾ ಗಿಯೂ ಅನುಭವಯುಕ್ತವಾಗಿಯೂ ಪ್ರಾಸಾದಿಕವಾಗಿಯೂ ಜ್ಞಾನಮ ಯವಾಗಿಯೂ ಸುಲಲಿತವಾಗಿಯೂ ಸರಳವಾಗಿಯೂ ಸೂತ್ರರೂಪವಾಗಿ ಯೂ ಸಿದ್ಧಾಂತಾಂತರ್ಗತವಾಗಿಯೂ ಇರುವವೆಂದು ಹೇಳಲವಶ್ಯಕತೆ ಯಿಲ್ಲ. ಅವುಗಳಲ್ಲಿ ಕನ್ನಡ ನುಡಿಯ ಸೊಬಗು ಹೊರಸೂಸುತ್ತದೆ. ಅವುಗಳಲ್ಲಿಯ ಕೆಲವುಗಳನ್ನು ನಾವು ಉದಾಹರಣೆಗಾಗಿ ಇಲ್ಲಿ ಕೊಟ್ಟಿ ದ್ದೇವೆ.

ಸಚ್ಚಿದಾನಂದ ರೂಪನಾದ ಅಷ್ಟತನುಗಳುಳ್ಳ ಸಗುಣ ರೂಪಿ ಯಾದ ಪರಮಾತ್ಮನು ಎಂಟು ಶರೀರಗಳಿಂದ ಕೂಡಿದ ಎಲ್ಲ ಪ್ರಾಣಿ ಗಳ ಹೃದಯದಲ್ಲಿ ಚೈತನ್ಯರೂಪನಾಗಿಯೂ ಅಣುರೇಣು ತೃಣಕಾಷ್ಠಮ ಧ್ಯದಲ್ಲಿ ಅವ್ಯಕ್ತರೂಪನಾಗಿಯೂ ಜಗಭರಿತನಾಗಿರುವನು. ಅಂದಬಳಿಕ

ಮನುಷ್ಯನು ಯಾವ ಪ್ರಾಣಿಯನ್ನೂ ನೋಯಿಸತಕ್ಕದಲ್ಲ "ಶಿವಮಯಂ ಜಗದಿದಂ,, ಎಂಬ ಶ್ರುತಿಯ ಸಾರವನ್ನು ತಿಳಿದ ವೀರಶೈವನಿಗೆ ಏಕೆ? ಪ್ರತಿಯೊಬ್ಬ ಮನುಷ್ಯಪ್ರಾಣಿಯು ದಯಾಪರನೂ, ಅಹಿಂಸಕನೂ ವಿನಯಪರನೂ ಆಗಿರತಕ್ಕದ್ದು. ಈ ತತ್ತ್ವಗಳನ್ನು ದೇವರದಾಸಿಮಯ್ಯನು ಬಹು ಸುಂದರವಾಗಿ ಕೆಳಗಿನ ವಚನಗಳಲ್ಲಿ ಸಿದ್ಧಗೊಳಿಸಿದ್ದಾನೆ.

ಒಂದಾಗಿಹವೈದು ಭೂತ ಚಂದ್ರ ಸೂರ್ಯರು ಸಂದಿವಾಹನ,
ನಿಮ್ಮ ತನು ವಲ್ಲವೇ? ಸಿಂದು ನೋಡಲು ಜಗ ಭರಿತನಾಗಿಪ್ಪೆ,
ಇನ್ನು ನೋಯಿಸುವೆನಾರನಯ್ಯ ರಾಮನಾಥ ||

ನಾನೊಂದು ಸುರಗಿಯನೇನೆಂದು ಹಿಡಿವೆನು? ಏನಕಿತ್ತೇನ ಇರಿವೆನು?
ಜಗವೆಲ್ಲ ನಾಗಿಪ್ಪೆ ಕಾಣಾ ರಾಮನಾಥಾ ||

ವಿಶ್ವರೂಪಿಯಾದ ಜಗದೀಶನು ಪ್ರಾಣಪ್ರಕೃತಿಗಳಲ್ಲಿ ನಿರವಯವನಾಗಿಯೂ ಅತಿಸೂಕ್ಷ್ಮನಾಗಿಯೂ ನಿರಾಕಾರಿಯಾಗಿಯೂ ಯಾರಿಗೂ ತಿಳಿಯದಂತೆ ಇರುತ್ತಾನೆ. ಅವನು ಶಿವಶರಣರಿಗೆ ಮಾತ್ರ ಅವರ ಕ್ರಿಯಾಜ್ಞಾನಶಕ್ತಿಗಳಿಂದ ಲಿಂಗರೂಪನಾಗಿ ಬೆಳಗಿ ತೋರುತ್ತಾನೆ ಹೊರತು ಇನ್ನಿತರರಿಗೆ ಶಿವಸಾಕ್ಷಾತ್ಕಾರವು ಅಸದಳವೆಂದು ವೀರಶೈವ ಸಿದ್ಧಾಂತವದೆ. ಈ ವಿಷಯವನ್ನು ದೇವರ ದಾಸಿಮಯ್ಯನು ಕೆಳಗೆ ಬರೆದ ವಚನಗಳಲ್ಲಿ ಸ್ಪಷ್ಟೀಕರಿಸಿರುವನು.

ಮಣಿಗಳ ಸೂತ್ರದಂತೆ ತ್ರಿನಯನನೀನಿಪ್ಪೆಯಯ್ಯ. ಎಣಿಸುವಡೆ ತನು ಭಿನ್ನ ಆತ್ಮನೊಬ್ಬನೇ, ಅಣುರೇಣು ಮಧ್ಯದಲ್ಲಿ ಗುಣಭರಿತ ನೀನೆಂದು ಮಣಿಯುತಿಪ್ಪೆನಯ್ಯ ರಾಮನಾಥ ||

ಮರಮಂದಾಗ್ನಿಯ ಉರಿಯದಂತಿರಿಸಿದೆ, ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ, ಶರೀರದೊಳಗಾತ್ಮನನಾರು ಕಾಣದಂತಿರಿಸಿದೆ, ನೀನು ಬೆರಿಸಿದ ಭೇದಕ್ಕೆ ಬೆರಗಾದೆನಯ್ಯ ರಾಮನಾಥ.

ಎಣ್ಣೆ ಇದ್ದು ಎಳ್ಳುನನೆಯದ ಭೇದವ, ಕಿಚ್ಚು ಇದ್ದು ಕಲ್ಲು ಸಿಡಿಯದ ಭೇದವ, ಕಾಮವಿದ್ದು ಕನ್ನೆಯನನು ಭವಿಸದ ಭೇದವ ಪರವಿದ್ದು ಪ್ರಾಣಪ್ರಕೃತಿ ಹರಿಯದ ಭೇದವ ನರರೆತ್ತ ಬಲ್ಲರೈ ರಾಮನಾಥ.

ಅಡಗನೊಳಗಣ ಹಾಲು ಅಡಗಿಪ್ಪ ಭೇದವನು, ಬೆಡಗಪ್ಪ ತುಪ್ಪದ ಕಂಪಿನ ಪರಿಯನು, ಎಲೆವ್ಯಡನೆ ನೀನು ಪ್ರಾಣಪ್ರಕೃತಿಗಳೊಳಡಗಿಹ ಭೇದವನು ಲೋಕದ ಜಡರೆತ್ತ ಬಲ್ಲರೈ ರಾಮನಾಥ.

ನಾದಬಿಂದು ಕಲೆಗಳಿಂದ ಕೂಡಿದ ಪ್ರಣವಸ್ವರೂಪನಾದ ಪರ

ಶಿವನು ಲಿಂಗರೂಪಿಯಾಗಿ ಅಂಗವನ್ನೊಳಕೊಳ್ಳುವ ರೀತಿಯನ್ನು ಅಂದರೆ ಅಂಗಲಿಂಗಗಳ ಸಾಮರಸ್ಯ ಭಾವವನ್ನು ಶಿವಶರಣರು ತಮ್ಮ ವಚನಗಳಲ್ಲಿ ಬಹು ವಿಧವಾಗಿ ವರ್ಣಿಸಿದ್ದಾರೆ. ಈ ವಿಷಯವನ್ನು ಕುರಿತು ದಾಸಿಮಯ್ಯನು ಅನ್ನುವದೇನಂದರೆ:—

ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು ಹೊಂದಿಯೂ ಹೊಂದದ ಭೇದವನು, ಲಿಂಗದೊಳಗೆ ಶರಣಸಂದಿರ್ದ ಭೇದವನು ಲೋಕದ ಸಂದೇಹಿಗಳೆತ್ತ ಬಲ್ಲರೈ ರಾಮನಾಥ॥೧॥

ಒಡಲುಗೊಂಡನಾಗಿ ಮೃಡ ನಿಮಗೆ ಹಗೆ ಯಾದೆನಯ್ಯ ಅನು ಒಡಲುಗೊಂಡೊಡೇನು? ಕಡಲೊಳಗಣ ಬೊಬ್ಬುಳಿಕೆ ಕಡಲೊಳಗೆ ಅಳಿವಂತೆ ಎನ್ನೊಡಲಳಿದು ಹೋದರೇನು? ಪ್ರಾಣನಿಮ್ಮೊಡೆಯಲಡಗುವದಯ್ಯ ರಾಮನಾಥ॥೨॥

ಒಡಲುಗೊಂಡ ನಾನು ಪ್ರಾಣವಿಡಿದವನೀನು, ಎನ್ನೊಡಲ ಸಂಚುವ ನೀನೆ ಬಲ್ಲೆ. ನಿನ್ನ ಪ್ರಾಣದ ಸಂಚುವ ನಾ ಬಲ್ಲೆ. ಇದು ಕಾರಣ ಎನ್ನೊಡಲಲ್ಲಿ ನಿನ್ನೊಡಲು ನಿನ್ನ ಪ್ರಾಣ ಎನ್ನಲಡಗಿದ ಭೇದವನೀ ಬಲ್ಲೆ ನಾ ಬಲ್ಲೆನೈ ರಾಮನಾಥ॥೩॥

ಶಿವಭಕ್ತಿಯು ಜೀವ ಭಾವಿಗಳಿಗೆ ಸೇರದು. ಭಕ್ತಿಯಿಲ್ಲದೆ ಶಿವ ಜ್ಞಾನವು ಅಳವಡದು. ಸದ್ಭಕ್ತನು ಅಹಂಕಾರಿಯಾಗಿರಬಾರದು. ದಾಸೋಹಂ ಭಾವಿಯಾಗಿರಬೇಕು. ಸದ್ಭಕ್ತರ ಆತಿಥ್ಯವನ್ನು ಭಕ್ತಿಯಿಂದ ಮಾಡಬೇಕು. ವೀರಶೈವ ಸಿದ್ಧಾಂತವಂತ ಆನಂದವೂ ಘನವೂ ಅನುರುಚಿಯೂ ಆದ ಪ್ರಸಿದ್ಧ ಪ್ರಸಾದನೇ ಶಿವನ ರೂಪವು. ಅಂತಪ್ಪ ಶಿವ ಪ್ರಸಾದ ಕ್ರಿಯಾಚಾರವುಳ್ಳ ಶಿವಶರಣರ ಮನೆಯ ಬಾಗಿಲ ಕಾಯ್ದು ಕೊಂಡಿರಬೇಕು. ಎಂಬದಾಗಿ ಶಿವ ಭಕ್ತಿಯನ್ನು ಸ್ಪಷ್ಟೀಕರಿಸಿ ಭಕ್ತಿಯೇ ಮುಕ್ತಿಗೆ ಸಾಧನ ಎಂಬ ತತ್ವವನ್ನು ದೇವರ ದಾಸಿ ಮಯ್ಯನು ಸ್ಥಿರಗೊಳಿಸಿದ್ದಾನೆ.

ಜ್ವರವಿಡಿದ ಬಾಯಿಗೆ ನೊರೆಹಾಲ ಉಲಿಪುವೇ? ನರಕದಲ್ಲಿ ಬೀಳುವ ಮನುಜರಿಗೆ ಶಿವಭಕ್ತಿಯೆಂಬುದು ಕಿರುಗಹಿ ಕಾಣಾ ರಾಮನಾಥಾ.

ಕತ್ತೆ ಬಲ್ಲುದೇ ಕಸ್ತುರಿಯ ವಾಸನೆಯ? ತೊತ್ತು ಬಲ್ಲಳೇ ಗುರು ಹಿರಿಯರುತ್ತಮರೆಂಬುದ, ಭಕ್ತಿಯನರಿಯದ ವ್ಯರ್ಥಜೀವಿಗಳು ನಿಮ್ಮನೆತ್ತ ಬಲ್ಲರೈ ರಾಮನಾಥ?

ಭಕ್ತನ ಮಠವೆಂಬ ಭಕ್ತ ಹೋದರೆ ಆ ಭಕ್ತ ಭಕ್ತಂಗೆ ಆದಿಯಿಟ್ಟು ಇದಿರೆದ್ದು ನಡೆದು ಹೊಡೆಗೆಡೆದು ಒಡಗೊಂಡು ಬಂದು, ವಿಭೂತಿ ವೀಳೆಯವನಿಕ್ಕಿ ಪಾದಾರ್ಚನೆಯಂ ಮಾಡಿ ಸಮಯುಪಚರಿತು ಲಿಂಗಾರ್ಚನೆಯಂ ಮಾಡಿಸಿ, ಒಕ್ಕುದ ಕೊಂಡು ಓಲಾಡುತಿಪ್ಪುದೇ ಭಕ್ತಿ. ಹೀಗಲ್ಲದೆ ಬೆಬ್ಬನೆ ಬೆರತು, ಬಿಬ್ಬನೆ ಬೀಗಿ, ಅಹಂಕಾರ ಭರಿತನಾಗಿಪ್ಪವನ ಮನೆಯು, ಲಿಂಗ ಸನುಮತರು ಹೋಗರು ಕಾಣಾ ರಾಮನಾಥಾ.

ಎತ್ತಪ್ಪೆ ಶರಣಂಗೆ ತೊತ್ತಪ್ಪೆ ಶರಣಂಗೆ, ಭೃತ್ಯನಾಗಿ ಸದ್ಭಕ್ತರ ಮನೆಯ ಬಾಗಿಲ ಕಾಯ್ದಿಪ್ಪ ಸೊಣಗನಪ್ಪೆ, ಕರ್ತಾರ ನಿನಗೆ ಕರವೆತ್ತಿ ಪೊಡೆವಡುವ ಭಕ್ತರ ಮನೆಯ ಹಿತ್ತಲ ಬೇಲಿಯೊಗಿಪ್ಪೆನೈ ರಾಮನಾಥ.

ಪಾರಮಾರ್ಥಿಕ ಜ್ಞಾನವು ಬಹು ಗಹನವಾದದ್ದು, ಈ ಜ್ಞಾನವು ಭಕ್ತಿಕ್ರಿಯೆಗಳಿಂದಲ್ಲದೆ ಸುಸಾಧ್ಯವಿಲ್ಲ. ಈ ಸಿದ್ಧಾಂತಾಂತರ್ಗತವಾದ ಅಷ್ಟಾವರಣ ಕ್ರಿಯೆಗಳೂ ಷಟ್‌ಸ್ಥಲಜ್ಞಾನವೂ ಗುರುವಿನಿಂದಲ್ಲದೆ ಅಳವಡವು. ಎಂಬದಾಗಿ ಇಲ್ಲಿ ಪಾರಮಾರ್ಥಿಕ ಜ್ಞಾನವನ್ನು ಸಂಪಾದಿಸುವ ಉಪಾಯಗಳನ್ನು ವಿವೇಚಿಸಿ ವಸ್ತು ಸ್ವರೂಪವನ್ನು ಶ್ರೀಗುರು ಮಹಾತ್ಮ್ಯೆಯನ್ನೂ ಹೇಳೋಣವಾಗಿವೆ.

ಘಟದೊಳಗೆ ತೋರುವ ಸೂರ್ಯನಂತೆ ಸರ್ವರಲ್ಲಿ ಶಿವಚೈತನ್ಯವಿಪ್ಪುದು; ಇದ್ದರೇನು ಸರ್ವರಿಗೆ ಸಾಧ್ಯವಲ್ಲ. ಮುಟ್ಟಿ ಮುಟ್ಟದು, ಅದಕೂಡುವರೆ ಗುರುವಿನಿಂದಲ್ಲದಾಗದು. ಕಾಣಾ ರಾಮನಾಥಾ.

ಚಿನ್ನದೊಳಗಣ ಬಣ್ಣವ ಆ ಚಿನ್ನ ತಾನರಿವುದೇ? ಕಬ್ಬ ರೂಪ ಬಲ್ಲದೇ? ತನ್ನ ತಾನೇ ಈ ಪರಿಯಂತೆ ನರರರಿವರೇ ಕ್ರಿಯಾಜ್ಞಾನಭೇದವ ರಾಮನಾಥ.

ಪರದಾರ ಗಮನವು ಎಷ್ಟು ಹ್ಯೇಯವಾದದ್ದು? ಎಷ್ಟು ಮಲಿನವಾದದ್ದು? ಎಷ್ಟು ಪಾಪಮಯವಾದದ್ದು? ಶಿವಶಿವ ಶಕ್ತಿಯು ನಿನ್ನ ಅರ್ಧಾಂಗಿಯಲ್ಲವೇ? ಸ್ತ್ರೀ ರೂಪವು ಶಕ್ತಿಯ ಅಂಶವಲ್ಲವೇ? ಜಗತ್ತಿನ ಸ್ತ್ರೀಯರೆಲ್ಲ ಪಾರ್ವತಿಯ ರೂಪುಗಳಲ್ಲವೇ? ಅಂದ ಬಳಿಕ ಪರಸ್ತ್ರೀಯರನ್ನು ಗೌರಿಯೆಂದು ಭಾವಿಸಬೇಕೆಂಬದಾಗಿ ಸ್ತ್ರೀಯರಿಗೆ ಬಹುಮಾನ ಕೊಟ್ಟು ಸ್ತ್ರೀಯರನ್ನು ಪೂಜ್ಯಭಾವದಿಂದ ನೋಡುವದೇ ಮುಖ್ಯ ವಿಷಯವಾಗಿಟ್ಟುಕೊಂಡು, ದುರಾಚಾರಿಗಳಾಗದಂತೆ ನೈತಿಕ ಭೋಧೆಯನ್ನು ಬಹು ಪರಿಣಾಮಕರವಾಗುವಂತೆ ಇಲ್ಲಿ ಮಾಡಿರುವದು.

ಅಡಗ ತಿಂಬರು ಕಣಕದಡಿಗೆ ಇರಲ್ಕೆ. ಸುರೆಯು ಕುಡಿವರು, ಹಾಲಿರಲ್ಕೆ. ಭಂಗಿಯು ಮೆದ್ದುವರು ಸಕ್ಕರೆ ಇರಲ್ಕೆ. ಸ್ವಸ್ತ್ರೀ ಇರಲ್ಕೆ ಪರಸ್ತ್ರೀಯಳಿಂಗೆ ಅಳಪುವರು. ಸತ್ತನಾಯ ಭಕ್ಷಿಸುವ ಹಡಕಿಗಳ ನೇಸೆಂಜಿಸಯ್ಯ ರಾಮನಾಥಾ.

ಈಶನ ಶರಣರು ವೇಶಿಯ ಹೋದರೆ ಮಿಸಲೋಗರವ ತೊರಗಿರಿಸಿ ದೊಡೆ ಹಂದಿ ಮೂಸಿ ನೋಡಿದಂತೆ ಕಾಣಾ ರಾಮನಾಥಾ!

ಎಳ್ಳು ಇಲ್ಲದ ಗಾಣದಲ್ಲಿ ಎಣ್ಣೆಯುಂಟೇ? ಜೊಳ್ಳು ತೂರಿದಲ್ಲಿ ಭತ್ತವುಂಟೇ? ಕಳ್ಳ ಹಾದರಿಗರ ಸಂಪಾದನೆ ಹೊಳ್ಳ ಕುಟ್ಟಿ ಕೈ ಹೊಟ್ಟಾದಂತೆ ಕಾಣಾ ರಾಮನಾಥಾ.

ಗಂಡನುಳ್ಳಮ್ಮನ ಗೌರಿಯೆಂದು ಕಂಡಡೆ ಭೂಮಂಡಲಕ್ಕೆ ಅರಸಾಗಿ ಹುಟ್ಟುವನಾತನು. ಗಂಡನುಳ್ಳಮ್ಮನ ಒಡೆವೆರೆದಾತ ನರಕದ ದಿಂಡು ಗೆಡೆದಿಪ್ಪನೈ ರಾಮನಾಥಾ.

ಗುರುನಿರೂಪವ ಮಾಡರು. ಪರವಧುವ ನೆರೆವರು. ಪರಾರ್ಥಕಳುಪುವರು. ಗುರುವಿಲ್ಲವವರಿಗೆ ಪರವಿಲ್ಲವವರಿಗೆ ಇಂತಪ್ಪ ನರಕಿಗಳ ಎನಗೊಮ್ಮೆ ತೋರದಿರಾ ರಾಮನಾಥಾ.

ಶ್ರೀಗುರೂಪದೇಶದಿಂದಲೂ ಮತ್ತು ಅವರ ಪಾದಕ್ಕೆ ತನುಮನಧನಗಳನ್ನರ್ಪಿಸುವದರಿಂದಲೂ ಜೀವಿಯ ಮಾಂಸಮಯ ಪಿಂಡವಳಿದು ಮಂತ್ರ ಪಿಂಡವಾಗುವದೆಂತಲೂ ವಿಷಯ ವಾಸನೆಯು ಅಳಿಯುವದೆಂತಲೂ ಆತನ ದಶೇಂದ್ರಿಯಗಳೂ ಅಂತಃಕರಣಗಳೂ ಪರಿಶುದ್ಧವಾಗಿ ಆತನು ಜಗದೀಶನೆಂಬದಾಗಿ ಹೇಳಿ "ಲಿಂಗದೇಹೀಸದಾಶುಚಿಃ" ಎಂಬ ತತ್ವವನ್ನು ವೀರಶೈವರು ಸ್ಪಷ್ಟೀಕರಿಸುವರು. ಈ ವಿಷಯದ ಬಗ್ಗೆ ದೇವರ ದಾಸಿಮಯ್ಯನು ಕೆಳಗೆ ಕಾಣಿಸಿದ ವಚನಗಳನ್ನು ಹೇಳಿದ್ದಾನೆ.

ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ ಆ ತೃಣವ ಆ ಕೆಂಡ ನುಂಗಿದಂತೆ, ಗುರು ಚರಣದ ಮೇಲೆ ತನುವೆಂಬ ತೃಣವ ತಂದಿರಿಸಿದರೆ ಆತನ ಸರ್ವಾಂಗವೆಲ್ಲ ಲಿಂಗ ಕಾಣಾ ರಾಮನಾಥಾ.

ಎನ್ನ ಸದ್ಗುರು ಸ್ವಾಮಿ ಎನಗೆ ಕರುಣಿಸಲು ಎನ್ನ ಸಂಸಾರ ವಿಷಯ ಕೆಟ್ಟಿತ್ತಯ್ಯಾ; ಎನ್ನ ಮಾಯಾ ಪ್ರಪಂಚ ಬಿಟ್ಟೋಡಿತ್ತಯ್ಯ ಮುಂದಣ ಹುಟ್ಟರತು ಹೋಯಿತ್ತು. ಎನ್ನ ಅಯ್ಯ ನೆಟ್ಟನೆ ಗುರುಪಾದ ಮುಟ್ಟಿಯಾನು ಭವಗೆಟ್ಟೆ ಕಾಣಾ ರಾಮನಾಥಾ.

ಕಣ್ಣು ಮಿಸಲು ಶಿವನ, ಕೈಮಿಸಲು ಶಿವನ, ಕಾಲು ಮಿಸಲು ಶಿವನ, ನಾಲಿಗೆ ಮಿಸಲು ಶಿವನ, ಕಿವಿ ಮಿಸಲು ಶಿವನ, ನಾಸಿಕ ಮಿಸಲು ಶಿವನ,

ತನು ಮೊಸಲು ಮನವೆಲ್ಲ ಮೊಸಲು ಶಿವನ, ಈ ಮೊಸಲು ಜೀಸರವೊಗದಂತಿದ್ದರೆ ಆತನೆ ಜಗದೀಶನು ಕಾಣಾ ರಾಮನಾಥ.

ವೀರಶೈವನು ಸ್ವಾವಲಂಬಿಯಾಗಿರಬೇಕೆಂತಲೂ ವಿಷಯವಾಸನೆಯುಳ್ಳ ಭವಿಗಳ ಅನ್ನಪಾನಾದಿಗಳನ್ನು ಸ್ವೀಕರಿಸಬಾರದೆಂತಲೂ ಶಿವನಲ್ಲದೆ ಅನ್ಯದೈವಂಗಳಿಗೆ ನಡಕೊಳ್ಳಬಾರದೆಂತಲೂ ಕೆಳಗಿನ ವಚನಗಳಲ್ಲಿ ಹೇಳಿದೆ.

ಅನ್ಯಜಾತಿಯ ಮನೆಯ ಅನ್ನಪಾನಾದಿಗಳ ತನ್ನುದರದಲ್ಲಿಕ್ಕುವ ಶಿವದ್ರೋಹಿ ಶಿವವಂಚಕನು. ಅವ ನಿಮ್ಮ ಓ ಎನಿಸಿದರೆ ಓ ಎನ್ನದಿರಿ. ಅವನ ಎನ್ನತ್ತ ತೋರದಿರಾ ರಾಮನಾಥ.

ಈಶ ನಿಮ್ಮ ಪೂಜಿಸಿದ ಬಳಿಕ ಅನ್ಯದೈವಂಗಳಿಗೆ ಹೇಸಿರಬೇಕು. ಹೇಸದೆ ಅನ್ಯದೈವಕ್ಕಾಶೆ ಮಾಡಿದರೆ, ಆತನು ನಮ್ಮ ಈಶ್ವರಂಗೆ ಹೊರಗು. ದೋಷರಹಿತ ಭಕ್ತರು ಅವರಿಗೆ ಕುಲವೆಂದು ಕೂಸಕೊಟ್ಟು ಕೂಡುಂಡರೆ ಮೊಸಲಬೋನವ ನಾಯಿ ಮುಟ್ಟಿದಂತೆ ಕಾಣಾ ರಾಮನಾಥ.

ಈ ಎಲ್ಲ ವಚನಗಳು ಎಷ್ಟು ಸುಂದರವಾಗಿವೆ! ಇವುಗಳೊಳಗಿಂದ ಸೌಂದರ್ಯ ರಸವು ಹೊರಸೂಸುತ್ತದೆ. ಇಂಥ ವಚನಗಳನ್ನು ನಮ್ಮ ವೀರಶೈವರು ಪ್ರಕಾಶಗೊಳಿಸಿ ಅವುಗಳ ಸ್ವಾದವನ್ನು ಈಂಟಿ, ಅವುಗಳಂತೆ ಆಚರಿಸುವ ಕಾಲವು ಬೇಗ ಬರಲೆಂದು ನಾನು ಪರಮಾತ್ಮನನ್ನು ಬೇಡಿಕೊಂಡು ಈ ಲೇಖವನ್ನು ಮುಗಿಸುತ್ತೇನೆ.



# ದುರ್ಗಾದೇವಿ

ಲೇಖಕ:—ಮಡಿವಾಳಪ್ಪಾ ವೀರಪ್ಪಾ ಮಿಣಜಗಿ ಎ. ಎಮ್ ಸ್ಕೂಲ
ಆಫ ಆರ್ಟ ಮುಂಬಯಿ.

"ನಮ್ಮೀ ಕರ್ನಾಟಕ ದೇಶವೆಂದರೆ ಶಿಲ್ಪ ಶಾಸ್ತ್ರದ ಆಗರವು" ಎಂದು ಎಷ್ಟೋ ಸಾರೆ ಓದಿ, ಕೇಳಿ, ಗೊತ್ತಾಗಿತ್ತು. ಆದರೆ ಅದನ್ನು ಪ್ರತ್ಯಕ್ಷ ಕಾಣುವ ಪ್ರಸಂಗವು ಇದು ವರೆಗೆ ಬಂದಿದ್ದಿಲ್ಲ. ಸುದೈವದಿಂದ ಒಮ್ಮೆ ನನ್ನ ಕೆಲವು ಮಿತ್ರರೊಡಗೂಡಿ ಬಾದಾಮಿಗೆ ಹೋಗುವ ಸುಸಂಧಿಯು ದೊರಕಿತು. ಅಲ್ಲಿ ಹೋದ ಮೇಲೆ ಅಲ್ಲಿಂದ ಸಮೀಪದಲ್ಲಿಯೇ ಇರುವ ಪಟ್ಟದಕಲ್ಲಗ್ರಾಮದೊಳಗೆ ರಮಣೀಯವಾದ ಅನೇಕ ಕಟ್ಟಡಗಳಿರುವವೆಂದು ಕೇಳಿ ಅಲ್ಲಿಗೆ ಹೋಗಿ ನೋಡಲು ಮೇಲ್ಕಾಣಿಸಿದ ಕರ್ನಾಟಕ ದೇಶದ ವರ್ಣನೆಯು ಅತಿಶಯೋಕ್ತಿಯಿರಬಹುದೆಂದು ತಿಳಿದಿದ್ದ ನಮ್ಮ ಭಾವನೆಯು ಬಯಲಾಗಿ ಆದು ನಿಜವಾದ ವರ್ಣನೆಯಿರುವದೆಂದು ನನ್ನ ಮನವರಿಕೆಯಾಯಿತು. ಅಲ್ಲಿಂದ ಮುಂದೆ ಆರು ಮೈಲು ದೂರದಲ್ಲಿರುವ ಐಹೊಳಿ ಎಂಬ ಗ್ರಾಮದಲ್ಲಿಯೂ ನೋಡತಕ್ಕಂಥ ಕಟ್ಟಡಗಳಿರುವವೆಂದು ತಿಳಿದು ಬಂದದ್ದರಿಂದ ಅಲ್ಲಿಗೆ ಹೋದೆವು. ಪ್ರಸ್ತುತ ಲೇಖದ ವಿಷಯವಾದ ದುರ್ಗಾದೇವಿಯ ಚಿತ್ರವನ್ನು ಐಹೊಳಿ ಗ್ರಾಮದಲ್ಲಿಯ ದುರ್ಗದ ಗುಡಿಯಲ್ಲಿಯ ಚಿತ್ರವನ್ನು ವಿಗ್ರಹದ ಆಧಾರದ ಮೇಲಿಂದ ತೆಗೆಯಲ್ಪಟ್ಟಿದೆ.

ದುರ್ಗಾದೇವಿಯೆಂದರೆ ದೇಶದಲ್ಲಿ ಬೇನೆಗಳನ್ನು ಬೀರುವ ಭೀಕರವಾದ ದೇವತೆಯೆಂದೂ ಜನರನ್ನು ಪರಿಪರಿಯಿಂದ ಪೀಡಿಸುವವಳೆಂದೂ ಸಾಧಾರಣವಾಗಿ ಎಲ್ಲ ಜನರ ಭಾವನೆಯಿರುವದು. ಮತ್ತು ಆ ದೇವಿಯನ್ನು ಸಂತುಷ್ಟಳನ್ನಾಗಿ ಮಾಡುವದಕ್ಕೋಸ್ಕರ ಬೇರೆಬೇರೆ ಜನರು ಬೇರೆ ಬೇರೆ ಪದಾರ್ಥಗಳಿಂದ ಆಕೆಯನ್ನು ಆರಾಧಿಸುವರು. ಕೆಲವರಂತೂ ಕೋಣಗಳ ಬಲಿಯನ್ನೂ ಕೊಡುವ ಸಾಂಪ್ರದಾಯವಿರುವದು. ಆದರೆ ಈ ದೇವಿಯ ವಿಗ್ರಹದ ವಿಷಯವಾಗಿ ಸ್ವಲ್ಪ ಹೆಚ್ಚು ವಿಚಾರ ಮಾಡಿ ನೋಡಿದರೆ ಈ ಭಾವನೆಯು ತಪ್ಪು ಇರುವ

ದೆಂಮು ತಿಳಿದು ಬರುವದು. ಇದಕ್ಕಾಗಿ ನಮ್ಮ ಭಾರತೀಯ ಕಲೆಯಲ್ಲಿ ಸ್ತ್ರೀರೂಪದ ಧ್ಯೇಯದ ಬಗ್ಗೆ ಸ್ವಲ್ಪ ವಿಚಾರ ಮಾಡುವಾ.

ಭಾರತೀಯರ ಭಾವನೆಯಂತೆ ದೇವತೆಗಳಲ್ಲಿ ತ್ರಿಮೂರ್ತಿಗಳು ಶ್ರೇಷ್ಠರು. ಆದರೆ ಪುರುಷ ಮತ್ತು ಪ್ರಕೃತಿ ಅಥವಾ ದೇಹ ಮತ್ತು ಆತ್ಮಾ ಇವು ಪರಸ್ಪರ ಕೂಡಿ ಇದ್ದರೇನೇ ಚೇತನಾತ್ಮಕವಾಗಿರುವವು ಹೊರತಾಗಿ, ತಮ್ಮಷ್ಟಕ್ಕೆ ತಾವೇ ಚೇತನಾತ್ಮಕವಾಗಲಾರವು. ಆದ್ದರಿಂದಲೇ ತ್ರಿಮೂರ್ತಿಗಳಲ್ಲಿ ಪ್ರತಿಯೊಬ್ಬನು ಈ ವಿಶ್ವದೊಳಗಿನ ಕಾರ್ಯಗಳನ್ನು ನೆರವೇರಿಸಲು ಸ್ತ್ರೀ ತತ್ವದ ಪ್ರತಿನಿಧಿಗಳಾದ ಶಕ್ತಿಗಳು ಸಹಾಯಕಗಳಾಗಿರುವವು. ಆದ್ದರಿಂದಲೇ ಸ್ತ್ರೀ ತತ್ವವು ಸೃಷ್ಟಿಸುವ ಕಾರ್ಯದಲ್ಲಿ ಒಂದು ವಿಶೇಷ ಶಕ್ತಿಯಿರುವದೆಂದು ಭಾವಿಸುತ್ತಾರೆ. ಈ ತ್ರಿಮೂರ್ತಿಗಳಲ್ಲಿಯ ಪ್ರತಿಯೊಂದು ಮೂರ್ತಿಯೂ ಪುರುಷ ಮತ್ತು ಪ್ರಕೃತಿ ಇವುಗಳಿಗೆ ಹೇಗೆ ಸಂಬಂಧ ಪಟ್ಟಿರುವವೆಂಬವನ್ನು ಸ್ವಲ್ಪದರಲ್ಲಿ ಹೇಳುವೆವು.

ಬ್ರಹ್ಮನು ಪುರುಷ ಸಂಬಂಧದಲ್ಲಿ ಸತ್ಯ ಮೂರ್ತಿಯಾಗಿರುವನು. ಪ್ರಕೃತಿಯ ಸಂಬಂಧದಲ್ಲಿ ಅವನು ಸೃಷ್ಟಿ ಕರ್ತನಾಗಿ ಚೇತನವನ್ನು ನಿರೂಪಿಸುವನು. ವಿಷ್ಣುವು ಪುರುಷ ಸಂಬಂಧದಲ್ಲಿ ಜ್ಞಾನ ಮೂರ್ತಿಯಾಗಿರುವನು. ಪ್ರಕೃತಿಯ ಸಂಬಂಧದಲ್ಲಿ ರಕ್ಷಕನಿರುವನು. ಆದ್ದರಿಂದ ನಿಷ್ಪಕ್ಷ ಪಾತಿಯಾದ ನ್ಯಾಯ ಮೂರ್ತಿಯಾಗಿರುವನು. ಶಿವನು ಪುರುಷ ಸಂಬಂಧದಲ್ಲಿ ಆನಂದ ಮೂರ್ತಿಯಾಗಿರುವನು. ಪ್ರಕೃತಿಯ ಸಂಬಂಧದಲ್ಲಿ ಸಂಹಾರಕ ನಾಗಿರುವನು. ಆದರೆ ಅವನ ಆ ಸಂಹಾರ ಮಾಡುವ ಶಕ್ತಿಯು ಪುನರ್ಜನ್ಮ ಸೂಚಕ ವಿರುತ್ತದೆ.

ಈ ತ್ರಿಮೂರ್ತಿಗಳ ಶಕ್ತಿಗಳು ಬೇರೆ ಬೇರೆ ರೂಪದಿಂದಿರುವವು. ವಿದ್ಯೆ, ಜ್ಞಾನ ಇವುಗಳ ಮೂರ್ತಿಯೂ, ಕಲೆಗಳ ( Fine Arts ) ಪೋಷಕಳೂ ಆದ ಸರಸ್ವತಿಯು ಬ್ರಹ್ಮ ಭಾರ್ಯೆಯಾಗಿರುವಳು. ಸೌಭಾಗ್ಯ ಅಥವಾ ಐಹಿಕ ಐಶ್ವರ್ಯದ ಮೂರ್ತಿಯಾದ ಲಕ್ಷ್ಮಿಯು ವಿಷ್ಣುವಿನ ಭಾರ್ಯೆಯಾಗಿರುವಳು. ಈಶ್ವರನು ಸಂಹಾರಕ ಮತ್ತು ಕಲ್ಯಾಣವೆಂಬ ಎರಡು ಸ್ವರೂಪಗಳಲ್ಲಿರುವನು. ಆದ್ದರಿಂದ ಆತನಿಗೆ ಎರಡು ತರದ ಶಕ್ತಿಗಳಿರುವವು, ಅವು ಯಾವವೆಂದರೆ ಸಂಹಾರಕ ಸ್ವರೂಪದಲ್ಲಿ ಅವನಿಗೆ ರಾಕ್ಷಸ ಸಂಹಾರಕರಾದ ದುರ್ಗಾ, ಕಾಲಿ ಮೊದ

ಲಾವ ಶಕ್ತಿಗಳಿರುವವು. ಇವು ಮೊದಲನೆಯ ತರದ ಶಕ್ತಿಗಳು. ಆತನ ಕಲ್ಯಾಣ ಸ್ವರೂಪದಲ್ಲಿ ಪವಿತ್ರ ಮೂರ್ತಿಯಾದ ಉಮಾದೇವಿ ಅಥವಾ ಪಾರ್ವತಿ ಎಂಬ ಎರಡನೇ ತರದ ಶಕ್ತಿಯಿರುವದು.

**ದುರ್ಗಾ ಮತ್ತು ಕಾಲಿ** ಇವರಿಬ್ಬರ ಕೆಲಸಗಳೂ ಸಾಧಾರಣ ಒಂದೇ ಆಗಿರುವವು. ಕಾಲಿಯು ಕಾಲಸಂಹಾರಕಳೂ, ನಿರ್ವಾಣದಾಯ ಕಳೂ ಆಗಿರುವದರಿಂದ ಕಾಲಿಯಲ್ಲಿ ಸ್ತ್ರೀ ತತ್ವವು ಸರ್ವದೇವತೆಗಳ ತಾಯಿಯೆಂದು ಪೂಜಿಸಲ್ಪಡುತ್ತದೆ. " ಮೋಡಗಳಿಂದುತ್ಪನ್ನವಾದ ಮಿಂಚು ಮೋಡಗಳಲ್ಲಿಯೇ ಅಡಗುವಂತೆ ಕಾಲಿಯಿಂದುತ್ಪನ್ನರಾದ ಬ್ರಹ್ಮ ಮೊದಲಾದ ದೇವತೆಗಳು ಕಾಲಿಯಲ್ಲಿಯೇ ಅಡಗುವರು " ಎಂದು ನಿರ್ವಾಣ ತಂತ್ರದಲ್ಲಿ ಹೇಳಿದೆ. ಮತ್ತು ಅದರಂತೆ ಪ್ರಳಯ ಕಾಲದಲ್ಲಿ ಕಾಲಿಯು ಸಕಲ ದೇವತೆಗಳನ್ನೂ ಸಂಹರಿಸುವಳೆಂದು ಜನರ ನಂಬುಗೆ. ಕಾಲಿಯ ವಿಗ್ರಹಗಳು ಕಪ್ಪು ಬಣ್ಣದವಿರುವಂತೆ ತೋರಿಸುವ ರೂಢಿಯುಂಟು. ಆದರೆ ಆ ಕಪ್ಪು ಬಣ್ಣವನ್ನು ತೋರಿಸುವದರಲ್ಲಿ ಒಂದು ವೈಶಿಷ್ಟ್ಯವುಂಟು. ಬಿಳಿ, ಹಳದಿ ಮೊದಲಾದ ಯಾವತ್ತೂ ಬಣ್ಣಗಳು ಕಪ್ಪು ಬಣ್ಣದಲ್ಲಿ ಅಡಗುವವು. ಮತ್ತು ಈ ಯಾವತ್ತೂ ಬಣ್ಣಗಳ ಸಮ್ಮೇಲನವು ಕಪ್ಪು ಬಣ್ಣದಲ್ಲಿ ಪರಿಣಮಿಸುವದು. ಅದರಂತೆ ಯಾವತ್ತೂ ತತ್ವಗಳು ( ಪಂಚ ತತ್ವಗಳು ) ಕಾಲಿಯಲ್ಲಿ ಅಡಗುವದರಿಂದ ಕಾಲಿ ಯನ್ನು ಕಪ್ಪು ಬಣ್ಣದಿಂದ ತೋರಿಸುತ್ತಾರೆ. ಮತ್ತು ಆ ಕಪ್ಪು ಬಣ್ಣದ ಸಹಾಯದಿಂದಲೇ ಪೂಜಕರು ಕಾಲಿಯು ನಿರ್ಗುಣಿಯೂ, ನಿರಾಕಾ ರಳೂ ಎಂದು ಭಾವಿಸಲು ಸುಲಭವಾಗುವದು. ವೀರಶೈವ ಮತದಂತೆ ಎಲ್ಲರೂ ಲಿಂಗೋದ್ಭವರಾಗಿ ಲಿಂಗದಲ್ಲಿಯೇ ಐಕ್ಯರಾಗುವರು. ಆದ್ದ ರಿಂದ ಮೇಲ್ಕಾಣಿಸಿದ ತತ್ವಕ್ಕನುಸರಿಸಿಯೇ ಅವರು ತಮ್ಮ ಇಷ್ಟ ಲಿಂಗಕ್ಕೆ ಕಪ್ಪು ಬಣ್ಣದ ಕಂಥೆಯನ್ನು ಕೂಡ್ರಿಸುತ್ತಾರೆ.

**ದುರ್ಗಾ ಮತ್ತು ಕಾಲಿ** ಇವರು ಸಂಹಾರ ಮಾಡುವ ದೇವತೆ ಗಳೆಂಬ ಭಾವನೆಯಿರುವದರಿಂದ ಅವರಿಗೆ ಉಗ್ರಸ್ವರೂಪವನ್ನು ಕಲ್ಪಿಸಿ ರುವರು. ಪಾರ್ವತಿಯೂ ಕೂಡ **ದುರ್ಗಾ (ವಿಜಯ) ದೇವಿಯ** ಸ್ವರೂ ಪದಲ್ಲಿದೇವದಾನವರ ಕಲಹಗಳಲ್ಲಿ ದೇವತೆಗಳಿಗೆ ನೆರವಾಗುವಳು. ಇವಳ ಪ್ರತಿಪಕ್ಷಿಯು ಸುರಲೋಕದಲ್ಲಿ ಹಾವಳಿಯನ್ನೆಬ್ಬಿಸಿದ ಮಹಿಷಾಸುರ

ಸೇಂಹಾರ ಸಿದ್ದನು. ಆತನ ಸಂಹಾರ ಮಾಡಿದುದರಿಂದಲೇ ಇವಳಿಗೆ ಮಹಿಷಾಸುರ ಮರ್ದಿನಿ ಎಂಬ ಹೆಸರು ಬಂದಿರುವದು. ಈ ಚಿತ್ರದಲ್ಲಿ **ದುರ್ಗಾದೇವಿಯು** ಮಹಿಷಾಸುರನ ಸಂಹಾರ ಕಾರ್ಯದಲ್ಲಿ ತೊಡಗಿರುವಂತೆ ತೋರಿಸಿರುತ್ತದೆ. ದುರ್ಗಾದೇವಿಯು ಒಂದು ಕೈಯ್ಯಲ್ಲಿ ತ್ರಿಶೂಲ, ಇನ್ನೊಂದು ಕೈಯ್ಯಲ್ಲಿ ಚಕ್ರ ಮತ್ತೊಂದು ಕೈಯ್ಯಲ್ಲಿ ಖಡ್ಗ ಹೀಗೆ ಬೇರೆ ಬೇರೆ ಆಯುಧಗಳನ್ನು ಹಿಡಿದಂತೆ ವಿಗ್ರಹಗಳಲ್ಲಿ ತೋರಿಸುವ ರೂಢಿಯುಂಟು. ಅದರಂತೆಯೇ ಚಿತ್ರಕಾರನಾದರೂ ಚಿತ್ರದಲ್ಲಿ ಹಾಗೇಯೆ ತೋರಿಸಿರುವನು.

ಈ ಬೇರೆ ಬೇರೆ ಆಯುಧಗಳನ್ನು ತೋರಿಸುವಿಕೆಯಲ್ಲಿ ಬೇರೆ ಬೇರೆ ಗೂಢಾರ್ಥಗಳಿವೆ. ದುರ್ಗಾದೇವಿಯು ತ್ರಿಶೂಲವನ್ನು ಧರಿಸಿ ಅದನ್ನು ಮಹಿಷಾಸುರನ ಮೇಲೆ ಪ್ರಯೋಗಿಸುತ್ತಿದ್ದಂತೆ ಚಿತ್ರದಲ್ಲಿ ತೋರಿಸಲ್ಪಟ್ಟಿದೆ. ಇಲ್ಲಿ ಮಹಿಷಾಸುರನೆಂದರೆ ಅಜ್ಞಾನ, ಪಾಪ, ಕೆಡಕು ಮುಂತಾದವುಗಳ ಮೂರ್ತಿಯಾಗಿರುವನು. ಇಂಥವುಗಳನ್ನು ನಾಶ ಮಾಡುವದಕ್ಕೆ ಸತ್ಯ, ಜ್ಞಾನ, ಪುಣ್ಯ ಮೊದಲಾದವುಗಳೇ ಬೇಕಾಗುವದರಿಂದಲೂ ಮತ್ತು ಇಲ್ಲಿ ತ್ರಿಶೂಲವನ್ನು ಅಂಥವುಗಳ ಸಂಹಾರಕ್ಕಾಗಿಯೇ ಉಪಯೋಗಿಸಿರುವದರಿಂದ ಆ ತ್ರಿಶೂಲವು ಸತ್ಯ, ಜ್ಞಾನ, ಪುಣ್ಯ ಮುಂತಾದವುಗಳನ್ನು ಶೂಚಿಸುತ್ತದೆ. ಇದರಂತೆಯೇ ಖಡ್ಗ, ಚಕ್ರ ಮೊದಲಾದ ಆಯುಧಗಳಿಗಾದರೂ ಬೇರೆ ಬೇರೆ ಅರ್ಥಗಳು ಇವೆ. ಇನ್ನು ಗಂಟೆ, ಶಂಖ ಇವುಗಳು ಈಶ್ವರನು ತನ್ನ ದಮರುಗದ ಸಪ್ಪಳದೊಂದಿಗೆ ನರ್ತಿಸಿ ಸಂಹಾರ ಮಾಡುವಂತೆ ದುರ್ಗಾದೇವಿಯಾದರೂ ಗಂಟೆ, ಶಂಖ ಇವುಗಳ ಸಪ್ಪಳದೊಂದಿಗೆ ಸಂಹಾರ ಕಾರ್ಯದಲ್ಲಿ ತೊಡಗಿರುವಂತೆ ತೋರಿಸಲ್ಪಟ್ಟಿವೆ. ಸೃಷ್ಟಿ ಕರ್ತನಾದ ಬ್ರಹ್ಮನು ಕಮಲದಿಂದುದ್ಭವಿಸಿರುನೆಂದು ನಮ್ಮ ಭಾವನೆ. ಅದಕ್ಕಾಗಿ ದುರ್ಗಾದೇವಿಯು ಆದಿ ಮಾತೆಯೆಂದು ತೋರಿಸುವದಕ್ಕೋಸ್ಕರ ಅವಳು ಕೈಯಲ್ಲಿ ಕಮಲವನ್ನು ಹಿಡಿದಂತೆ ತೋರಿಸಿರುಹರು. ಹೀಗೆ ಪ್ರತಿಯೊಂದು ಆಯುಧಗಳೂ ಒಂದೊಂದು ವಿಶೇಷಾರ್ಥ ಸೂಚಕಗಳಾಗಿವೆ.

**ಹೀಗೆ ದುರ್ಗಾದೇವಿಯು** ಮೇಲ್ಕಾಣಿಸಿದ ಉದಾತ್ತ ತತ್ವಗಳ ಮೂರ್ತಿಯಾಗಿರುವಳು.

---

# ವೀರಶೈವ ಮತದಕಾಲ

(ಲೇಖಕಃ — ಜೀರಗೆ ಬಸವಲಿಂಗಪ್ಪ ಚೀಫ ಕೋರ್ಟು ಟ್ರಾನ್ಸ್ಲೇಟರು ಆರಕೇಶೆಟಿ, ಬೆಂಗಳೂರು ಸಿಟಿ)

ವೀರಶೈವ ಮತವು ಅನಾದಿ ಸಂಸಿದ್ಧವಾದದ್ದೆಂದೂ ವೇದಗಳ ಕಾಲದಿಂದಲೂ ಬಂದದ್ದೆಂದೂ ವೀರಶೈವರು ತಿಳಿದಿರುತ್ತಾರೆ. ಆದರೆ ಪಾಶ್ಚಾತ್ಯವಿಧಾನರೀತ್ಯಾ ಶಾಶನ, ಚರಿತ್ರ ಪುರುಷರ ಭರವಣಿಗೆ ಮೊದಲಾದವುಗಳಿಂದ ದೃಢಪಡಿಸಬೇಕಾಗಿರುತ್ತದೆ. ವಿಜ್ಞಾನ ಶಾಸ್ತ್ರವು ಪ್ರಸರಣವಾಗಿರುವ ಈ ಕಾಲದಲ್ಲಿ ಬರೀಪುರಾಣ ಕಥೆಗಳನ್ನೂ ಐತಿಹ್ಯಗಳನ್ನೂ ಜನರು ನಂಬುವದಿಲ್ಲ. ಕಾಲನಿರ್ಣಯುಗಳಿಲ್ಲದ ವಿಷಯುಗಳು ಚರಿತಾರ್ಹಗಳಲ್ಲವೆಂದು ಪ್ರಸಿದ್ಧ ಚರಿತ್ರಕಾರರಾದ ಮೆ॥ ವಿನ್‌ಸೆಂಟುಸ್ಮಿತ್‌ರವರು ಹೇಳುತ್ತಾರೆ. ಆದದರಿಂದ ವೀರಶೈವ ಸನಾತನತ್ವವನ್ನು ಬಹು ಪ್ರಮಾಣಗಳಿಂದ ದೃಢಪಡಿಸಿದ ಹೊರತು ಪ್ರಯೋಜನವಾಗುವದಿಲ್ಲ. ವೇದಗಳಕಾಲದಲ್ಲಿತ್ತೆಂಬುದಕ್ಕೆ ಋಗ್ವೇದದ "ಪವಿತ್ರಂತೆ ವಿತತಂಬ್ರಹ್ಮಣಸ್ಪತೆ। ಪ್ರಭುಗಾರ್ತ್ರಾಣಿ........." ಎಂಬ ಪ್ರಮಾಣವೂ, ಯಜುರ್ವೇದದ— "ಯಾತೇರುದ್ರ ಶಿವಾತನೂರ ಘೋರಾಪಾಪಕಾಶಿನೀ" ಎಂಬ ಪ್ರಮಾಣವೂ, ಋಗ್ವೇದದ—"ಅಯಂಮೇಹಸ್ತೋಭಗವಾನ್ ಎಂಬ ಪ್ರಮಾಣವೂ, ಕೃಷ್ಣಯಜುರ್ವೇದ ತೈತ್ತರಿಯೋಪನಿಷತ್ತಿನ—" ಓಂ ನಮೋ ಬ್ರಹ್ಮಣೆಧಾರಣಂ ಎಂಬ ಪ್ರಮಾಣವೂ ಮೊದಲಾಗಿರುತ್ತವೆ. ಉಪನಿಷತ್ತುಗಳ ಕಾಲದಲ್ಲಿತ್ತೆಂಬುದಕ್ಕೆ ಸ್ವೇತಾಶ್ವತರೋಪನಿಷತ್ತೂ, ಬ್ರಹ್ಮೋಪನಿಷತ್ತೂ ಪ್ರಮಾಣಗಳಾಗಿರುತ್ತವೆ. ಸ್ಮೃತಿಗಳ ಕಾಲದಲ್ಲಿತ್ತೆಂಬುದಕ್ಕೆ ಗೌತಮ ಸ್ಮೃತಿಯ ಉಕ್ತಿಯು ಪ್ರಮಾಣವಾಗಿರುತ್ತದೆ. ಪುರಾಣಗಳಕಾಲದಲ್ಲಿತ್ತೆಂಬುದಕ್ಕೆ ಲಿಂಗಪುರಾಣ, ಪದ್ಮ ಪುರಾಣ, ಸ್ಕಾಂದ ಪುರಾಣದ ಶಂಕರ ಸಂಹಿತೆ ಮೊದಲಾದವು ಪ್ರಮಾಣವಾಗಿರುತ್ತವೆ. ಇತಿಹಾಸಗಳ ಕಾಲದಲ್ಲಿತ್ತೆಂಬುದಕ್ಕೆ ಮಹಾಭಾರತದ ಭೀಷ್ಮ ಧರ್ಮರಸಂವಾದವು ಪ್ರಮಾಣವಾಗಿರುತ್ತದೆ. ಇಷ್ಟೂ ಪ್ರಮಾಣಗಳಿದ್ದಾಗ್ಯು ಅನೇಕ

ವಿದ್ವಾಂಸರು ಅಲ್ಲಲ್ಲಿ ಬರೆದಿರುವ ಉಕ್ತಿಗಳು (Interpellation) ಈಚೆಗೆ ಸೇರಿಸಿದವುಗಳಾಗಿ ಏಕಿರಬಾರದು ಎಂದು ತರ್ಕಿಸುತ್ತಾರೆ. ಆದದರಿಂದ ಇವುಗಳಿಗೆ ಪುಷ್ಟೀಕರವಾಗಿ ಚರಿತ್ರಾರ್ಹಗಳಾದ ಬೇರೆ ಪ್ರಮಾಣಗಳು ಬೇಕಾಗಿರುತ್ತವೆ. ಕೆಲವು ವಿಷಯಗಳನ್ನು ಪಾಶ್ಚಾತ್ಯ ಇಂಗ್ಲೀಷು ವಿದ್ವಾಂಸರು ಚರ್ಚಿಸಿರುತ್ತಾರೆ. ಪ್ರೊಫೆಸರ ಹೆಚ್. ಹೆಚ್. ವಿಲ್ಸನ್ ಸಾಹೇಬರು ಶ್ರೀ ಶಂಕರಾಚಾರ್ಯರ ಸನ್ನಿಧಿ ಶಿಷ್ಯನಾದ ಆನಂದಗಿರಿಯಿಂದ ಬರೆಯಲ್ಪಟ್ಟ ಶಂಕರ ದಿಗ್ವಿಜಯವು ಶಂಕರಾಚಾರ್ಯರ ಕಾಲದಲ್ಲೇ ಬರೆಯಲ್ಪಟ್ಟಿದೆಂದು ದೃಢೀಕರಿಸಿ ಅದರಲ್ಲಿ ಬರೆಯಲ್ಪಟ್ಟಿರುವ ಪ್ರಕಾರ ಶಂಕರಾಚಾರ್ಯರಿಗಿಂತ ಮೊದಲು ಆರುವಿಧ ಶೈವರಿದ್ದರೆಂತಲೂ ಅವರಲ್ಲಿ ಜಂಗಮರೆಂಬವರು ಲಿಂಗವನ್ನು ಮಸ್ತಕದಲ್ಲಿ ಧರಿಸುತ್ತಿದ್ದರೆಂತಲೂ ಬರೆದಿರುತ್ತಾರೆ. ಈ ವಿಷಯವನ್ನು ಪ್ರಮಾಣವಾಗಿ ಅಂಗೀಕರಿಸುತ್ತಾರೆ. ಇದರ ಮೇಲಿಂದ ಲಿಂಗಧಾರಣ ಮತವು ಶಂಕರಾಚಾರ್ಯರಿಗಿಂತ ಪೂರ್ವದಲ್ಲಿತ್ತೆಂದು ವ್ಯಕ್ತವಾಗುತ್ತದೆ. ಶ್ರೀ ಶಂಕರಾಚಾರ್ಯರ ಕಾಲವು ಕ್ರಿ. ಶ. ೮೦೦ ನೇ ವರ್ಷವೆಂದು ನಿಶ್ಚಯಿಸಿರುತ್ತಾರೆ. ಆದದರಿಂದ ಲಿಂಗಧಾರಣ ಮತವು ಬಸವೇಶ್ವರನಿಗಿಂತಲೂ ಸುಮಾರು ಮೂರುನೂರು ವರ್ಷಗಳ ಹಿಂದೆಯೇ ಇತ್ತೆಂದು ನಿರ್ಧರಿಸಿದ ಹಾಗಾಯಿತು. ಮತ್ತೂ ಅದೇ ಪ್ರೊಫೆಸರ ಹೆಚ್. ಹೆಚ್. ವಿಲ್ಸನ್ ಸಾಹೇಬರು ಪೂರ್ವೋಕ್ತ ಆರುವಿಧ ಶೈವರ ಕಾಲದಲ್ಲಿ ಶಿವಗೀತೆ, ರುದ್ರಯಾಮಳ ತಂತ್ರ ಮೊದಲಾದ ಕೆಲವು ಗ್ರಂಥಗಳು ಪ್ರಚಾರದಲ್ಲಿದ್ದವೆಂದು ದೃಢೀಕರಿಸಿರುತ್ತಾರೆ. ಶಿವಗೀತೆಯಲ್ಲಿ ಲಿಂಗಧಾರಣವು ಪ್ರಸ್ತಾಪಿಸಲ್ಪಟ್ಟಿದೆ. ವಾರ್ಧಿಕ ಷಟ್ಪದಿಯಲ್ಲಿ ಭಾಷಾಂತರವಾಗಿರುವ ಕನ್ನಡ ಶಿವಗೀತೆಯಲ್ಲೂ ಮೂಲಗ್ರಂಥದಂತೆ ಲಿಂಗಧಾರಣ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ. ಇದರಿಂದ ಕ್ರಿ. ಶ ೮೦೦ ರಲ್ಲಿ ವೀರಶೈವ ಮತಬೋಧಕ ಗ್ರಂಥಗಳಿದ್ದವೆಂದು ತಿಳಿದಂತಾಯಿತು. ಅನೇಕ ಆಗಮಗಳು ಆಗ್ಗೆ ಪ್ರಚಾರದಲ್ಲಿದ್ದವೆಂದು ಪ್ರೊ॥ ಹೆಚ್ ಹೆಚ್. ವಿಲ್ಸನ್ ಸಾಹೇಬರವರು ಹೇಳುತ್ತಾರೆ. ಈ ಎಲ್ಲ ವಿಷಯಗಳಿಂದಲೂ ಬಸವೇಶ್ವರನು ಲಿಂಗಧಾರಣಮತವನ್ನು ಹೊಸದಾಗಿ ಉತ್ಪನ್ನ ಮಾಡಿದನೆಂಬುದು ಆಕಾಶಕುಸುಮದಂತೆ ಸುಳ್ಳಾಗಿರುತ್ತದೆಂಬುದನ್ನು ಎಲ್ಲರೂ ಅರಿಯತಕ್ಕದ್ದು. ವೀರಶೈವ ಮತ ಪ್ರಸರಣಕಾರ್ಯವು ಬಸವೇಶ್ವರನಿಗಿಂತ ಪೂರ್ವಸುಮಾರು ೧೦೦—೨೦೦ ವರ್ಷಗಳ ಮುಂಚೆಗೇನೇ

ಕೆಲವರು ಪ್ರಬಲದಿಂದ ಪ್ರಾರಂಭಿಸಲ್ಪಟ್ಟಿತೆಂದು ಕೆಲವು ಕಾರಣಗಳಿಂದ ಗೊತ್ತಾಗುತ್ತದೆ. ಅಷ್ಟು ದಿನಗಳು ಸಾಗುತ್ತ ಬಸವೇಶ್ವರನ ಕಾಲಕ್ಕೆ ಪ್ರಸರಣ ಕಾರ್ಯವು ಅತ್ಯುತ್ಕಟ ಸ್ಥಿತಿಯನ್ನು ಹೊಂದಿತೆಂದು ನನಗೆ ತೋರುತ್ತದೆ. ವೀರಶೈವಮತ ಪ್ರಸರಣಕಾರ್ಯದಲ್ಲಿ ಬಸವೇಶ್ವರನೇ ಕೊನೆಯವನೆಂದು ನನಗೆ ತೋರುತ್ತದೆ. ಅವನ ನಂತರ ಪ್ರಸರಣ ಕಾರ್ಯವು ತಕ್ಕಮಟ್ಟಿಗೆ ನಡೆದು ಬಂದಿದ್ದರೂ ಅವನಷ್ಟು ಉತ್ತಮ ಸ್ಥಿತಿಯಲ್ಲಿ ನಡೆದು ಬರಲಿಲ್ಲ. ವೀರಶೈವ ಮತ ಪ್ರಸರಣಕಾರ್ಯವನ್ನು ಮಾಡಿದವರಲ್ಲಿ ಶ್ರೀ ಬಸವೇಶ್ವರನೇ ವಿಶೇಷ ಚಳವಳಿಯನ್ನು ಮಾಡಿದವನಾದ್ದರಿಂದ ಲಿಂಗಧಾರಣ ಮತವನ್ನು ಅವನೇ ಹೊಸದಾಗಿ ಏರ್ಪಡಿಸಿದನೆಂಬ ಭ್ರಾಂತಿಯು ಕೆಲವರಿಗೆ ಕಾಣಿಸಿಕೊಂಡಿರಬಹುದು. ಈಚೀಚೆಗೆ ಅನೇಕ ಪ್ರಮಾಣಗಳು ಹೊರಬೀಳುತ್ತಿರುವದರಿಂದ ಆ ಭ್ರಾಂತಿಯು ಅಳಿದು ಹೋಗುತ್ತಲಿದೆ.

ಮತ್ತೆ ಕೆಲವು ವಿಷಯಗಳೇನೆಂದರೆ— ಹೃದಯವನ್ನು ಕರಗಿಸುವ ವಚನಗಳನ್ನು ಬರೆದು ಲಿಂಗಧಾರಣಮತವನ್ನು ಜನರಿಗೆ ಬೋಧಿಸುವ ಕ್ರಮವು ಬಸವೇಶ್ವರನ ಕಾಲದಲ್ಲಿ ಬಹುಜನ ಹಿಂಬಾಲಕರಿಂದ ನಡೆಸಲ್ಪಟ್ಟದ್ದು ಶ್ರೀ ಬಸವೇಶ್ವರನ ಕಾಲದಲ್ಲೇ ಬಹಳವಾಗಿದ್ದಾಗ್ಯು ಈ ಕ್ರಮವು ಅವನಿಗಿಂತಲೂ ಪೂರ್ವ ೧೦೦ ವರ್ಷಗಳಲ್ಲಿ ಕಲೆಹಾಕಿದ್ದದಂತೆ ತೋರುತ್ತದೆ. ಜೇಡರ ದಾಸಿಮಯ್ಯನೆಂಬ ಶರಣನು ರಾಮನಾಥ ಎಂಬ ಅಂಕಿತದಿಂದ ಕ್ರಿ. ಶ. ೧೦೪೦ ರಲ್ಲಿ ವಚನಗಳನ್ನು ಬರೆದಿರುವ ಸಂಗತಿಯನ್ನು ಮ॥ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತ್ರೆಯಲ್ಲಿ ಬರೆದಿರುತ್ತಾರೆ. ಈ ಜೇಡರ ದಾಸಿಮಯ್ಯನ ಹೆಸರನ್ನು ಬ್ರಹ್ಮಶಿವನೆಂಬ ಕವಿಯು ತನ್ನ ಗ್ರಂಥದಲ್ಲಿ ಎತ್ತಿರುತ್ತಾನೆ. ಬ್ರಹ್ಮಶಿವನಕಾಲಕ್ಕೆ ಶೈವಮತ ಸಂಬಂಧ ಚಳವಳಿಗಳು ಬಹಳವಾಗಿದ್ದವೆಂದು ತಿಳಿದುಬರುತ್ತದೆ. ಮೆರೆಮಿಂಡಯ್ಯನೆಂಬ ಶರಣನು ಕ್ರಿ. ಶ. ೧೧೦೦ ರಲ್ಲಿ ಐಘಟದೂರ ರಾಮೇಶ್ವರಲಿಂಗ ಎಂಬ ಅಂಕಿತದಿಂದ ವಚನವನ್ನು ಬರೆದಿರುತ್ತಾನೆ. ಇದು ಬಸವೇಶ್ವರನ ಜನನಕ್ಕಿಂತ ಮುಂಚೆ ಆದಹಾಗಾಯಿತು. ಆದುದರಿಂದ ವೀರಶೈವ ಮತ ಪ್ರಸರಣದ ಕಾರ್ಯವನ್ನು ಬಸವೇಶ್ವರನೇ ಮೊದಲು ಮಾಡಿದಂತಾಗಲಿಲ್ಲ. ಅವನಿಗಿಂತಲೂ ಪೂರ್ವದಿಂದ ಪ್ರಾರಂಭವಾದಂತಾಯಿತು. ಬಸವೇಶ್ವರನು ಮಾತ್ರ

ಬಹಳ ಚನ್ನಾಗಿ ನಡಿಸಿದ್ದರಿಂದ ದೊಡ್ಡ ಕೀರ್ತಿಯು ಬಸವೇಶ್ವರನಿಗೆ ಬಂತು. ಕೆರೆಯ ಪದ್ಮರಸರು ಸ್ವಲ್ಪ ಹೆಚ್ಚು ಕಡಿಮೆ ಬಸವೇಶ್ವರನ ಸಮಕಾಲದವರು. ಇವರ ದೀಕ್ಷಾ ಬೋಧೆಯೆಂಬ ಕನ್ನಡ ಗ್ರಂಥದಲ್ಲಿ ಲಿಂಗಧಾರಣ ಸಂಬಂಧವಾದ ಅನೇಕ ಆಗಮ ಶ್ಲೋಕಗಳು ಉದಾಹೃತವಾಗಿವೆ. ಬಸವೇಶ್ವರನು ಹೊಸದಾಗಿ ಲಿಂಗ ಧಾರಣ ಮತವನ್ನು ಕಲ್ಪಿಸಿದ್ದರೆ, ತತ್ಸಂಬಂಧವಾದ ಆಗಮಗಳು ಅಷ್ಟು ಜಾಗ್ರತೆಯಾಗಿ ಹುಟ್ಟಿ ಅಷ್ಟು ಜಾಗ್ರತೆಯಾಗಿ ಕೆರೆಪದ್ಮರಸರ ಕೃತಿಯಲ್ಲಿ ಉದಾಹರಿಸಲ್ಪಟವೆ ? ಇದು ಅಸಂಭವವು. ಬಸವೇಶ್ವರನಿಗಿಂತಲೂ ಎಷ್ಟೋ ಪೂರ್ವದಲ್ಲಿ ಆಗಮಗಳು ಏರ್ಪಟ್ಟಿರಬೇಕು. ಬಸವೇಶ್ವರನಿಗಿಂತಲೂ ಎಷ್ಟೋ ಪೂರ್ವದಲ್ಲಿ ವೀರಶೈವ ಮತ ಸಂಬಂಧವಾದ ಚಳವಳಿಗಳು ಹುಟ್ಟಿರಬೇಕು.

ಮೆ|| ಆರ್. ನರಸಿಂಹಾಚಾರ್ಯರ ಕವಿ ಚರಿತ್ರೆಯಲ್ಲಿ ಬರೆದಿರುವ ಧಾರವಾಡ ಜಿಲ್ಹೆಯ ನರಗುಂದದ ಸಮೀಪದಲ್ಲಿರುವ ಹದಳಿಯ ಶಾಸನವನ್ನು ಬರೆದ ಕರ್ಪರಸನ ವಿಷಯಕವಾದ ಪದ್ಯದಲ್ಲಿ "………ಸಕಲ ಲೋಕಾರಾಧ್ಯನಾರಾಧ್ಯನೆಂದು" ಇತ್ಯಾದಿ ಸಂಬೋಧಿಸಿದೆ. ಈ ಕರ್ಪರಸನ ತಂದೆ ಮದನ ತಿಲಕವನ್ನು ಬರೆದ ಚಂದ್ರರಾಜನೆಂದು ಊಹಿಸಲ್ಪಟ್ಟದೆ. ಈ ಚಂದ್ರರಾಜನು ತನ್ನಗ್ರಂಥದಲ್ಲಿ- ತನ್ನನ್ನು " ಶಿವಶೀಲಂ, ಭವತೇಜಂ " ಎಂದು ಬರೆದುಕೊಂಡಿದ್ದಾನೆ. ಈ ಕಾರಣದಿಂದ ಇವರಿಬ್ಬರೂ ದ್ವಿಜರೆಂದು ಬರೆದುಕೊಂಡಿದ್ದಾಗ್ಯು ಇವರು ಶಿವಭಕ್ತರೆಂದು ಸ್ಪಷ್ಟವಾಗುತ್ತದೆ. ಇವರು ಇದ್ದದ್ದು ಕ್ರಿ. ಶ. ೧೦೭೫ರಲ್ಲಿ. ಇವರು ಬಹುಶಃ ಆರಾಧ್ಯ ಬ್ರಾಹ್ಮಣರಾಗಿರಬೇಕು. ಏತಕ್ಕೆಂದರೆ ಮೇಲೆ ಕಂಡಂತೆ ಆರಾಧ್ಯರೆಂದು ಹೇಳಲ್ಪಟ್ಟವೆ. ಇದೂ ಅಲ್ಲದೆ ಇವರು ದೇವಶಕ್ತಿ ಪಂಡಿತ, ಜ್ಞಾನಶಕ್ತಿ ಪಂಡಿತರೆಂಬವರ ವಿಷಯಯವಾಗಿ ಶಾಸನದಲ್ಲಿ ಸೂಚಿಸಿದ್ದಾರೆ. ಈ ಜ್ಞಾನ ಶಕ್ತಿ ಪಂಡಿತರಿಗೆ ಜ್ಞಾನ ಶಕ್ತಿ ದೇವರೆಂದೂ ಕೂಡ ಬೇರೆ ಹೆಸರೂ ಶಾಸನದಲ್ಲಿ ಬರೆಯಲ್ಪಟ್ಟದೆ. ಇವರೆಲ್ಲರೂ ಲಿಂಗ ಧಾರಿಗಳಾದ ಆರಾಧ್ಯ ಬ್ರಾಹಣರೆಂದು ನನಗೆ ತೋರುತ್ತದೆ. ಅನೇಕ ವಿಷಯಗಳು ಆಚ್ಛಾದಿತವಾಗಿ ಹೋಗಿ ಬಿಟ್ಟವೆ. ಇದೆಲ್ಲವೂ ವೀರಶೈವ ಮತದ ದೌರ್ಭಾಗ್ಯವೇ ಸರಿ. ಜ್ಞಾನಶಕ್ತಿ ಪಂಡಿತರ ಮಠ, ಕ್ರಿಯಾಶಕ್ತಿ ಪಂಡಿತರ ಮಠ, ಎಂದು ಮೊದಲಾಗಿ ಮೇಲೆ ಕಂಡವರ ಕಾಲದಲ್ಲಿ ಇದ್ದುವೆಂತಲೂ ಇವು ವೀರಶೈವ ಮಠಗಳಾಗಿದ್ದವೆಂತಲೂ ಇವುಗಳಿಗೆ

ವೀರಬಣಂಜಿಗರು ಪೋಷಕರಾಗಿದ್ದರೆಂತಲೂ ಇವರುಗಳ ಹೆಸರಗಳ ಸಮೇತ ಬಹುದಿನಗಳ ಹಿಂದೆ "ಸ್ವಾರ" ಪತ್ರಿಕೆಯಲ್ಲಿ ಲೇಖನವು ಬಂದಿತ್ತು. ಅದು ಈಗ ನನಗೆ ಶಿಕ್ಕಲಿಲ್ಲವಾಗಿ ನನಗೆ ಹೆಚ್ಚಿಗೆ ಬರೆಯುವದಕ್ಕೆ ಅವಕಾಶವಾಗಲಿಲ್ಲ. ಮೇಲೆ ಹೇಳುವ ಜ್ಞಾನ ಶಕ್ತಿ ಪಂಡಿತರು, ದೇಶಶಕ್ತಿ ಪಂಡಿತರು ಆ ಮಠಗಳವರೇ ಆಗಿರಬೇಕೆಂದು ನಾನು ಊಹಿಸುತ್ತೇನೆ. ಆದರೆ ಇನ್ನೂ ಹೆಚ್ಚಿನ ಪರಿಶೋಧ ನಡೆದು ಅನೇಕ ವಿಷಯಗಳು ಹೊರಬೀಳುವ ವರೆಗೂ ಗಟ್ಟಿಯಾಗಿ ಹೇಳುವದಕ್ಕೆ ಬರುವದಿಲ್ಲ. ಪರಿಶೋಧಕರು ಒಂದು ವಿಷಯುವನ್ನು ಮನಸ್ಸಿನಲ್ಲಿ ಭದ್ರವಾಗಿಟ್ಟುಕೊಳ್ಳಬೇಕು. ಶ್ರೀ ಬಸವೇಶ್ವರನಿಗಿಂತಲೂ ಹಿಂದಕ್ಕೆ ಮೂರುನೂರು ವರ್ಷಗಳಕಾಲ ಲಿಂಗಧಾರಣ ಮತಸಂಬಂಧವಾದ ಚಳವಳಿಗಳು ಆವರಣದೊಳಗೆ ಬಹಳವಾಗಿ ನಡೆದಿರುತ್ತವೆ. ಅಂದರೆ ಶ್ರೀ ಶಂಕರಾಚಾರ್ಯರ ಕಾಲದಿಂದ ಹಿಡಿದು ಶ್ರೀಬಸವೇಶ್ವರರ ಕಾಲದ ವರೆಗೂ ಅನೇಕ ಕಾರ್ಯಕರಣಗಳು ನಡೆದು ಹೋಗಿರುತ್ತವೆ. ಅವು ಎಂತವುಗಳೆಂಬುವದಕ್ಕೆ ಭೂಕಂಪದಿಂದ ಭೂಮಿಯೊಳಗೆ ಅವಿತುಹೋದ ಪಟ್ಟಣಗಳಂತೆ ಅವು ತಕ್ಕಪ್ರಮಾಣಗಳು ಕೈಗೆ ಶಿಗದೆ ಎಲ್ಲಿಯೋ ಅಡಗಿ ಹೋಗಿರುವದರಿಂದ ಏನು ಹೇಳುವದಕ್ಕೂ ಬರುವದಿಲ್ಲ. ಭೂಕಂಪದಿಂದ ಹೊರಬಿದ್ದ ಕೆಲವು ಗುಡ್ಡ ಬೆಟ್ಟ ಮರಗಳಂತೆ ಶ್ರೀ ಬಸವೇಶ್ವರ ದೇವರ ಕಾಲದ ಚಳವಳಿಗಳು ಮಾತ್ರ ಕಣ್ಣಿಗೆ ವಿಸ್ತಾರವಾಗಿ ಕಾಣಿಸುತ್ತವೆ. ಹಿಂದಿನ ಮೂರುನೂರು ವರ್ಷಗಳ ಕಾಲವನ್ನೂ ವೀರಶೈವ ಶೋಧಕರು ಚನ್ನಾಗಿ ಪರಿಶೋಧಿಸಬೇಕು. ಪರಿಶೋಧಿಸಿದಲ್ಲಿ ಅನೇಕ ಗುಪ್ತ ವಿಷಯಗಳೂ, ಆಶ್ಚರ್ಯಕರವಾದ ವಿಷಯಗಳೂ ಹೊರಬಿದ್ದು ಜನರ ಮನಸ್ಸಿಗೆ ಹೊಸಬೆಳಕನ್ನೂ ಅತ್ಯಾನಂದವನ್ನೂ, ಉಂಟುಮಾಡ ಬಹುದು.



# ಹಂಪೆಯ ಹರೀಶ್ವರಕೃತ ರಘಟಾ ಪ್ರಬಂಧದೊಳಗಣ ಪಂಚಾಕ್ಷರ ರಗಳೆ.

(ಶ್ರೀ ಶಂಭುಲಿಂಗ ಸ್ವಾಮಿಗಳು ಹಿರೇಮಠ ವಿಜಾಪುರ ಇವರು ಕಳಿಸಿದ್ದು.)

ಶ್ರೀಮತ್ಪಂಚಾಕ್ಷರೀ ಮಂತ್ರದ ನಿಜಸಾಮರ್ಥ್ಯವಂ ಬಣ್ಣಿಸಲ್ಕು।
ತ್ರಾಮದಿ ಪ್ರೌಢದೇವ ಪ್ರತತಿಗರಿದೆನಲ್ಮರ್ತ್ಯದೋಳ್ ಭಕ್ತಿ ಮಾತ್ರಂ॥
ಸಾಮಾನ್ಯಂಬಣಿಪೆನೆನೆ ಪರಿಹಾಸಾಸ್ಪದಂ ಪ್ರೀತಿಯಿಂದಂ।
ಪ್ರೇಮಂ ಕೈಮಿಕ್ಕು ಬಲ್ಲಂದದಿ ಪೊಗಳ್ದಪೆನಾಂ ಶ್ರೀ ವಿರೂಪಾಕ್ಷಲಿಂಗಂ ॥೧।

॥ರಗಳೆ॥ ಶ್ರೀಗುರು ಶಂಕರ ದೇವರ ದಯೆಯಿಂ। ರಾಗದಿ ಮಾದರ ಸರಘನ ಕೃಪೆಯಿಂ। ಗುರು ಹಂಪೆಯ ಮಾದರಸರ ದಯೆಯೊಳ್। ವರ ಪಂಚಾಕ್ಷರಿಯಂ ಧಾರುಣಿಯೋಳ್।
ಬಣ್ಣಿಪಿದಂ ಹಂಪೆಯ ಹರಿದೇವಂ। ಬಣ್ಣಿಸಲಳವಲ್ಲಲ್ಲತಿ ಭಾವಂ।
ಆದೊಡೆ ಮೆನಗುಳ್ಳಂತುಟುಮತಿಯೋಳ್। ಸಾದರದಿಂ ಬಣ್ಣಿಸುವೇಂ ಕೃತಿಯೋಳ್।

ಶ್ರೀ ಪಂಪಾಪುರ ದರಸನನಾಮಂ। ಭಾಪುರೆ ಶರಣರ ಪರಮಪ್ರೇಮಂ।
ಹರಭಕ್ತರನುದ್ಧರಿಪಭಿಮಾನಂ। ಶರಣರ ನೊಲವಿಂ ಪೊರೆವಭಿಮಾನಂ।
ನೋಡೆ ಅಕಾರ ಉಕಾರ ಮಕಾರಂ। ಕೂಡಲ್ಬಿಂದು ಸಹಿತ ಮೊಂಕಾರಂ।
ತುದಿಯೊಳು ನಮಃ ಶಿವಾಯೆನುತಿರ್ಪುದು। ಮದನಾರಿಯನೊಲವಿಂ ಪಿಡಿತರ್ಪುದು।

ವೇದದ ಮಾತೆ ಪಿತಂ ಪಂಚಾಕ್ಷರಿ। ವೇದನಿದಾನಂ ಶ್ರೀ ಪಂಚಾಕ್ಷರಿ.।
ವಿಸ್ತ್ರತವೆಲ್ಲ ರೊಳುಂ ಪಂಚಾಕ್ಷರಿ। ಶಾಸ್ತ್ರದ ಸರ್ವಸ್ವಂ ಪಂಚಾಕ್ಷರಿ।
ಸಕಲ ಪುರಾಣದೊಳುಂ ಪಂಚಾಕ್ಷರಿ। ಸಕಲಸ್ಮೃತಿಗಳೊಳುಂ ಪಂಚಾಕ್ಷರಿ।
ಮಂತ್ರದ ತಂತ್ರದಗತಿ ಪಂಚಾಕ್ಷರಿ। ಯಂತ್ರದ ಯಾಗದಗತಿ ಪಂಚಾಕ್ಷರಿ।

ಪಂಚಾಕ್ಷರಿ ಶುದ್ಧಗೆ ಯೊಳಗೆಲ್ಲಂ। ಪಂಚಾಕ್ಷರಿ ಪ್ರೇಮವದಿಳೆಯಲ್ಲಂ।
ಕಡೆಯೊಳ್ಪ ಪಂಚಾಕ್ಷರಿಯೇ ವಿಧಾನಂ। ಬಿಡದೆ ಸಮಾಸ್ತ್ರವೆನಿಸಿಪ್ಪುದು ನೂನಂ।

ಆದರಿಂ ಪಂಚಾಕ್ಷರಿಯೇ ಸತ್ಯಂ। ಸದಮಲ ಪಂಚಾಕ್ಷರಿಯೇ ನಿತ್ಯಂ।
ಪಂಚಾಕ್ಷರಿ ಪರಮನ ಪರಮಾರ್ಥಂ। ಪಂಚಾಕ್ಷರಿ ಜಿಸ್ವೆಯು ಪುರುಷಾರ್ಥಂ।
ಪಂಚಾಕ್ಷರಿ ಶಿವಭಕ್ತಿಸ್ವಾರ್ಥಂ। ಪಂಚಾಕ್ಷರಿ ಕರುಣಾಮೃತ ತೀರ್ಥಂ।
ಗಿರಿಜಾದೇವಿಯ ಗುರುಪಂಚಾಕ್ಷರಿ। ಹರಿಬೊಮ್ಮರ ಸುರತರು ಪಂಚಾಕ್ಷರಿ।
ಗಣಪತಿ ಗುಹರನು ಮತಿ ಪಂಚಾಕ್ಷರಿ। ಗಣಸಂಕುಳ ಮನ್ನತಿ ಪಂಚಾಕ್ಷರಿ।

ಮುನಿಗಳ ಮುಕ್ತಿಯ ಬೆಳೆಪಂಚಾಕ್ಷರಿ। ಮನುಗಳ ಚಿತ್ತದಕಳೆಪಂಚಾಕ್ಷರಿ।
ಶಿವನ ನಿವಾಸಂ ಶ್ರೀ ಪಂಚಾಕ್ಷರಿ। ಭವನ ಪರಾನಂದಂ ಪಂಚಾಕ್ಷರಿ।
ಶರ್ವನ ಪಂಚ ಮುಖಂ ಪಂಚಾಕ್ಷರಿ। ಶರ್ವನ ಸಾಮರ್ಥ್ಯಂ ಪಂಚಾಕ್ಷರಿ।
ಈಶ್ವರ ಜಪಮಾಲೆಯೆ ಪಂಚಾಕ್ಷರಿ। ಶಾಶ್ವಿತ ಸುಖಲೀಲೆಯೆ ಪಂಚಾಕ್ಷರಿ।
ಶಿವಸರ್ವಾವಯವಂ ಪಂಚಾಕ್ಷರಿ। ಶಿವನ ಮನೋಹರವೀ ಪಂಚಾಕ್ಷರಿ।
ಶಿವಕರ್ಣಾಭರಣಂ ಪಂಚಾಕ್ಷರಿ। ಶಿವನಂತಃಕರುಣಂ ಪಂಚಾಕ್ಷರಿ।
ಪಂಚಬ್ರಹ್ಮಂ ಶ್ರೀಪಂಚಾಕ್ಷರಿ। ಪಂಚಾಚಾರ್ಯರತನು ಪಂಚಾಕ್ಷರಿ।
ಸತ್ಯದ ಸಾಕಾರಂ ಪಂಚಾಕ್ಷರಿ। ನಿತ್ಯದ ನಿಳಯಂ ಶ್ರೀ ಪಂಚಾಕ್ಷರಿ।
ಶರಣಾಳಿಯ ಸುರತರು ಪಂಚಾಕ್ಷರಿ। ಹರನಂತೋರುವ ಗುರುಪಂಚಾಕ್ಷರಿ।
ಜ್ಞಾನಲತೆಯ ಕಂದಂ ಪಂಚಾಕ್ಷರಿ। ನಾನಾರುದ್ರಪದಂ ಪಂಚಾಕ್ಷರಿ।
ಪರಮಜ್ಯೋತಿರ್ಲತೆ ಪಂಚಾಕ್ಷರಿ। ಪರಮ ಪವಿತ್ರಂ ಶ್ರೀಪಂಚಾಕ್ಷರಿ।
ಪರಮ ಧ್ಯಾನದಕೊನೆ ಪಂಚಾಕ್ಷರಿ। ಪರತತ್ವದ ನೆಲೆಮನೆ ಪಂಚಾಕ್ಷರಿ।
ಅಘಕುಲವನದಾವಂ ಪಂಚಾಕ್ಷರಿ। ಅಘಹರ ನತಿಭಾವಂ ಪಂಚಾಕ್ಷರಿ॥
ಅಕ್ಷರ ಕುಲಬೀಜಂ ಪಂಚಾಕ್ಷರಿ। ರಕ್ಷೆಗೆ ರಕ್ಷಾನಿಧಿ ಪಂಚಾಕ್ಷರಿ।
ಶಬ್ದಬ್ರಹ್ಮಂ ಶ್ರೀ ಪಂಚಾಕ್ಷರಿ। ಶಬ್ದಾಮೃತರಸವೀ ಪಂಚಾಕ್ಷರಿ।
ಪ್ರಣವದ ಚೂಡಾಮಣಿ ಪಂಚಾಕ್ಷರಿ। ಪ್ರಣವ ಲತಾಫಲವೀ ಪಂಚಾಕ್ಷರಿ।
ಶಿವವಿಸ್ತಾರಂ ಶ್ರೀ ಪಂಚಾಕ್ಷರಿ। ಶಿವನ ಸುಖಾಕಾರಂ ಪಂಚಾಕ್ಷರಿ।

ಸಕಳಾಗಮದೊಳಗಿಂತಿದೆ ಮುಖ್ಯಂ। ಸಕಳಾಧ್ವರದೊಳಗಿದೆ ತತ್ವಾಖ್ಯಂ।
ಎಲ್ಲಿದ್ದಾದೊಡೆ ಮಿದನುಚ್ಚರಿಪುದು। ಎಲ್ಲಾಕಾಲದೊಳೊಲ್ದುಚ್ಚರಿಪುದು।
ಸರ್ವ ಕ್ರಿಯೆಗಳೊಳುಂ ಜಪವಿಪ್ಪುದು। ಸರ್ವ ರಾಧನೆಯೊಳ್ ಜಪವಿಪ್ಪುದು।

ಪಂಚಮಹಾ ಪಾತಕ ಪರಿಹಾರಂ। ಸಂಚಿತ ದುಷ್ಕರ್ಮಾಳಿ ನಿವಾರಂ।
ಕುಲಕೋಟಿಯ ನೊಲವಿಂದುದ್ಧರಿಪುದು। ಸಲೆಶಿವಸಾಯೋಜ್ಯವ ನೊಲಿದೀವುದು।

ಸಿದ್ಧಿಗೆ ಸಿದ್ಧಿಕರಂ ಪಂಚಾಕ್ಷರಿ। ಬುದ್ಧಿಗೆ ಭೂಷಣವೀ ಪಂಚಾಕ್ಷರಿ।
ಸರ್ವಾಧಿಕ್ಯ ಶ್ರೀ ಪಂಚಾಕ್ಷರಿ। ಸರ್ವ ಸುಲಭವಹ ಶ್ರೀ ಪಂಚಾಕ್ಷರಿ।
ಸ್ಥೂಲಂ ಸೂಕ್ಷ್ಮಂ ಶ್ರೀಪಂಚಾಕ್ಷರಿ। ನೀಲಗಳನ ನಿಜ ಶ್ರೀಪಂಚಾಕ್ಷರಿ।

ಭಕ್ತರ ಭಕ್ತಿಯ ನೆಲೆ ಪಂಚಾಕ್ಷರಿ। ಭಕ್ತರ ಭಾಗ್ಯದ ಬೆಳೆ ಪಂಚಾಕ್ಷರಿ।
ಶರಣರ ಪರುಷದ ಖಣಿ ಪಂಚಾಕ್ಷರಿ। ಶರಣರ ಚಿಂತಾಮಣಿ ಪಂಚಾಕ್ಷರಿ।
ತ್ರೈಲೋಕ್ಯಕ್ಕಧಿಪತಿ ಪಂಚಾಕ್ಷರಿ। ಭಾಳಾಕ್ಷನ ಮುಖತಲೆ ಪಂಚಾಕ್ಷರಿ।
ಗುರುಪದವಶ್ಯಂ ಶ್ರೀ ಪಂಚಾಕ್ಷರಿ। ದುರಿತವಿನಾಶಂ ಶ್ರೀ ಪಂಚಾಕ್ಷರಿ।

ಮರೆದುಚ್ಚರಿಸಲ್ಸುಖ ಪದವೀವುದು। ಅರಿದುಚ್ಚರಿಸಲ್ಸುರ ಪದವೀವುದು।
ಪದಪಿಂ ನನೆದಡೆ ಗಣಪದ ವೀವುದು। ಮುದದಿಂ ನೆನೆದಡೆ ಶಿವನಂ ಮಾಳ್ಪುದು।

ಸಂಪದವಖಿಳಪದಂ ಪಂಚಾಕ್ಷರಿ। ಇಂಪಂ ಸೂಸುವ ಸುಧೆ ಪಂಚಾಕ್ಷರಿ।
ಅಣಿಮಾದ್ಯಷ್ಟ ಗುಣಂ ಪಂಚಾಕ್ಷರಿ। ತ್ರಿಣಯನರಾಜಗೃಹ ಪಂಚಾಕ್ಷರಿ।

ಉರುತರ ಪರಮಪದಂ ಪಂಚಾಕ್ಷರಿ। ಪರಲಿಂಗಂ ಪರವೀ ಪಂಚಾಕ್ಷರಿ।
ಮಂತ್ರದ ಮಂತ್ರಂ ಶೈವದ ಶೈವಂ। ಮಂತ್ರ ಮುಖ್ಯ ಕಧಿದೈವಂದೈವಂ।
ಸತ್ಯದಸತ್ಯಂ ಶ್ರೀ ಪಂಚಾಕ್ಷರಿ। ಸತ್ಯದನಿಳಯಂ ಘನ ಪಂಚಾಕ್ಷರಿ।
ಅತ್ಯಧಿಕಂ ಸದ್ಗತಿ ಪಂಚಾಕ್ಷರಿ। ಅತ್ಯನುಪಮ ಮೂರ್ಜಿತ ಪಂಚಾಕ್ಷರಿ।
ಜನನ ಮರಣರಹಿತಂ ಪಂಚಾಕ್ಷರಿ। ಅನವಧಿಪರಮಹಿತಂ ಪಂಚಾಕ್ಷರಿ।
ಗುರು ಪಂಚಾಕ್ಷರಿ। ಸಿರಿ ಪಂಚಾಕ್ಷರಿ। ಗತಿ ಪಂಚಾಕ್ಷರಿ। ಮತಿ ಪಂಚಾಕ್ಷರಿ।
ಶೃತಿ ಪಂಚಾಕ್ಷರಿ। ಸ್ಮೃತಿ ಪಂಚಾಕ್ಷರಿ। ದಯ ಪಂಚಾಕ್ಷರಿ। ಜಯ ಪಂಚಾಕ್ಷರಿ ॥

॥ ಜಯತು ಜಯತು ನಮಸ್ತೇ ನಮಸ್ತೇ ॥--॥

ಕಂದ॥ ಸುರನರ ಪನ್ನಗ ವಿದ್ಯಾ।
ಧರರೋಳ್ ಪಂಪಾಧಿನಾಥನ ನಾಮಂ ಪಂಚಾ॥
ಕ್ಷರಿ ಪಂಚಾಕ್ಷರಿ ಪಂಚಾ।
ಕ್ಷರಿಯಲ್ಲದೆ ಮತ್ತೆ ಬೇರೆ ಮಂತ್ರ ಮುಮುಂಟೇ ॥--॥



# ಶಿವಾನುಭವದ ಕಾರ್ಯಗಳು

ವಾಚಕರಿಗೆ ಹಸ್ತಗತವಾಗಿರುವ ಈ ಶಿವಾನುಭವ ಪತ್ರಿಕೆಯು ಸಂಚಿಕೆಯೊಂದಿಗೆ ಆದರ [illegible]ನೇ ವರ್ಷವು ಮುಗಿಯಿತು. ಈ ಪತ್ರಿಕೆಯು ಈ ವರೆಗೆ ನಿರ್ವಿಘ್ನತೆಯಿಂದ ತನ್ನ ಕಾರ್ಯವನ್ನು ನಡೆಸಲಿಕ್ಕೆ ಶಕ್ಯವಾದದ್ದಕ್ಕೆ ನಾವು ಪರಮಾತ್ಮನನ್ನು ಅನನ್ಯ ಭಾವದಿಂದ ಬೇಡಿಕೊಳ್ಳುತ್ತೇವೆ. ನಾವು ಕೈಕೊಂಡ ಈ ಕಾರ್ಯವು ಬಹಳ ತೊಂದರೆಯುಳ್ಳದು. ಆದರೂ ಈ ಅಲ್ಪಾವಧಿಯಲ್ಲಿಯೇ ಇದು ಜನರ ಮನಸ್ಸಿನ ಮೇಲೆ ಉತ್ತಮ ತರವಾದ ಪರಿಣಾಮ ಮಾಡಹತ್ತಿದ್ದರ ಚಿನ್ಹಗಳು ಈಗ ಸ್ಪಷ್ಟವಾಗಿ ಕಂಗೊಳಿಸಹತ್ತಿವೆ. ಇದರಿಂದ ನಾವು ಹೆಚ್ಚಿಗೆ ಉತ್ಸಾಹತೆಯಿಂದ ಈ ನಮ್ಮ ಸಂಶೋಧನ ಕಾರ್ಯವನ್ನು ಮುಂದೆ ಸಾಗಿಸುವ ಕುರಿತು ಅಪೇಕ್ಷೆಯನ್ನು ಹೊಂದಲಿಕ್ಕೆ ಕಾರಣವಾಗಿದೆ. ಈ ಅವಧಿಯಲ್ಲಿ ಶಿವಾನುಭವ ಪತ್ರಿಕೆಯಿಂದ ಯಾವ ಯಾವ ಕಾರ್ಯಗಳು ಜರಿಗಿದವೆಂಬದನ್ನು ಜನರ ಮುಂದೆ ಇಡುವದು, ಅತ್ಯಾವಶ್ಯಕ ವಿರುವದರಿಂದ ಅವುಗಳನ್ನು ಇಲ್ಲಿ ಸ್ಥೂಲ ರೀತಿಯಿಂದ ವಿವರಿಸಲು ಯತ್ನಿಸುತ್ತೇವೆ.

## ಧಾರ್ಮಿಕ ತತ್ವಗಳ ವಿವೇಚನೆ.

ವೀರಶೈವ ಧಾರ್ಮಿಕ ವಾಙ್ಮಯಕ್ಕೆ ಶಿವಾನುಭವವೆಂಬ ಹೆಸರು ಇದೆ. ಈ ಹೆಸರನ್ನೇ ಬಸವಾದಿ ಪ್ರಮಥರು ಉಪಯೋಗಿಸಿದ್ದಾರೆ. ಆದರೆ ಈ ಶಿವಾನುಭವದ ಮರ್ಮಗಳು ಇನ್ನೂ ಬಹಿರಂಗ ಗೊಳಿಸಲ್ಪಟ್ಟಿರುವದಿಲ್ಲ, ಇವುಗಳ ಬಹಿರಂಗ ವಿವೇಚನೆಗಳು ಮಾತ್ರ ಕೆಲವು ಸದ್ಗೃಹಸ್ಥರಿಂದ ಈ ಪತ್ರಿಕೆಯಲ್ಲಿ ಮಾಡಲ್ಪಟ್ಟಿರುತ್ತವೆ. ಇವರಲ್ಲಿ ಶ್ರೀ ಸಂಗನಬಸವ ಸ್ವಾಮಿಗಳು ಬಂಥನಾಳ ಮತ್ತು ಶ್ರೀ ಶಂಭುಲಿಂಗ ಸ್ವಾಮಿಗಳು ಹಿರೇಮಠ ವಿಜಾಪುರ ಇವರು ಬರೆದ ಲೇಖಗಳು ಬಹು ಉಚ್ಚತಮವಾಗಿರುತ್ತವೆ. ಹೀಗೆ ಶಿವಾನುಭವ ಶಾಸ್ತ್ರದ ಸಾಮಾನ್ಯ ವಿವೇಚನೆಯಲ್ಲದೆ ಅದಕ್ಕೆ ಸಂಬಂಧಿಸಿದ ಅನೇಕ ವಿಷಯಗಳ ಬಗ್ಗೆಯೂ ಅನೇಕ ವಿದ್ವಜ್ಜನರು ಸ್ವತಂತ್ರ ಲೇಖಗಳನ್ನು ಇದರಲ್ಲಿ ಬರೆದಿರುವರು. ಮಿ॥ ಪಾವಟೆಯವರು “ಲಿಂಗ ಹೋದರೆ ಆತ್ಮ

ಘಾತ ಮಾಡಿಕೊಳ್ಳಬಹುದೋ" ಎಂಬ ವಿಷಯವನ್ನು ತೆಗೆದುಕೊಂಡು ಲಿಂಗದ ಸ್ವರೂಪದ ಬಗ್ಗೆ ಬಹು ವಿಸ್ತೃತ ಲೇಖಗಳನ್ನು ಬರೆಯಿರುವರು. ಇದೇ ಮೇರೆಗೆ ಇಷ್ಟ ಲಿಂಗ, ಪ್ರಾಣ ಲಿಂಗ, ಇವುಗಳ ಪರಸ್ಪರ ಸಂಬಂಧ, ಅವುಗಳ ಷಟ್‌ಸ್ಥಲಾತ್ಮಕ ಪೂಜೆ, ಇಷ್ಟತ್ರೋಂದು ದೀಕ್ಷೆಗಳು, ದೇವರು ಒಬ್ಬನೇ ಇರುವನೆ, ಇನೇ ಮೊದಲಾದ ಅನೇಕ ವಿಷಯುಗಳ ಬಗ್ಗೆ ಮಹತ್ವದ ಲೇಖಗಳು ಬಂದಿವೆ. ಇದರಂತೆಯೇ ಬಸವೇಶ್ವರನ ನೈತಿಕ ತತ್ವಗಳು, ಪಂಚಾಚಾರಗಳು, ಕಾಯಕಗಳು ಈ ವಿಷಯುಗಳ ಬಗ್ಗೆ ಆಧುನಿಕ ವಿವೇಚನಾತ್ಮಕ ಪದ್ಧತಿಯಿಂದ ವಿಸ್ತೃತ ಲೇಖಗಳು ಶಿವಾನುಭವದ ಬೇರೆ ಬೇರೆ ಸಂಚಿಕೆಗಳಲ್ಲಿ ಬಂದಿವೆ. ವೀರಶೈವ ಧರ್ಮದ ಉಚ್ಚತತ್ವಗಳು ಬಹುತರವಾಗಿ ಸಾಮಾನ್ಯ ಜನರಿಗೆ ತಿಳಿಯುವದು ಕಠಿಣವಿರುತ್ತದೆ ಆದರೂ ಇವುಗಳು ಎಲ್ಲರಿಗೂ ತಿಳಿಯುವಂತೆ ಅದನ್ನು ಸುಲಭ ಭಾಷೆಯಲ್ಲಿ ವಿವರಿಸಲು ನಾವು ಯತ್ನಿಸುತ್ತ ಬಂದಿದ್ದೇವೆ.

### ಐತಿಹಾಸಿಕ ಶೋಧಗಳು

ವೀರಶೈವ ರಾಜ ಮನೆತನಗಳು, ಧಾರ್ಮಿಕ ಮತ್ತು ರಾಜಕೀಯ ಪುರುಷರುಗಳು ಇವರ ಇತಿಹಾಸವನ್ನು ಶೋಧಿಸಲು ನಾವು ಅತ್ಯಂತ ಪ್ರಯತ್ನ ಪಟ್ಟಿದ್ದೇವೆ. ಇವರ ಬಗ್ಗೆ ನಮಗೆ ಉಪಲಬ್ಧವಿದ್ದ ಸಂಗತಿಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ, ಅವುಗಳ ನಿಜಾಂಶವನ್ನು ಕಂಡು ಹಿಡಿದು ಅನೇಕ ಲೇಖಗಳನ್ನು ಬರೆದಿರುವೆವು. ಇದು ಶಿವಾನುಭವವು ಮಾಡಿದ ಇನೇ ಮಹತ್ವದ ಕಾರ್ಯವು. ಬೀಳಗಿ ರಾಜ್ಯದ ಅಸ್ತಿತ್ವವು ಕರ್ನಾಟಕಸ್ಥರಿಗೆ ಬಹುತರ ಯಾರಿಗೂ ಗೊತ್ತಿದ್ದಿಲ್ಲ. ಆದರೆ ಇವರ ಪರಿಚಯುವನ್ನು ಶಿವಾನುಭವವು ಕರ್ನಾಟಕಸ್ಥರಿಗೆ ಮೊದಲು ಮಾಡಿಕೊಟ್ಟಿದೆ " ಬೀಳಗಿ ಅರಸುಗಳ ವಂಶಾವಳಿ " ಎಂಬ ಕಾವ್ಯವು ಶ್ರೀ|| ಬಿ. ರಾಮರಾವ ಎಮ್. ಎ. ಮದ್ರಾಸ ಇವರಿಂದ ಶೋಧಿಸಲ್ಪಟ್ಟಿದ್ದು, ಅದು ಶಿವಾನುಭವದಲ್ಲಿ ಅಚ್ಚಾಗುತ್ತಲಿದೆ. ಅದರಲ್ಲಿ ಅನೇಕ ಐತಿಹಾಸಿಕ ವಿಷಯಗಳು ತುಂಬಿ ಹೋಗಿವೆ. ಕೆಳದಿ ಮತ್ತು ಸ್ವಾದಿ ಅರಸರು ಕರ್ನಾಟಕದಲ್ಲಿ ಎಷ್ಟು ಮಹತ್ತರವಾದ ವಾಙ್ಮಯಾತ್ಮಕ, ಆರ್ಥಿಕ, ರಾಜಕೀಯ ಕಾರ್ಯಗಳನ್ನು ಮಾಡಿರುವರೆಂಬದರ ಬಗ್ಗೆ ಅನೇಕ ಲೇಖಗಳು ಶಿವಾನುಭವದಲ್ಲಿ ಬಂದಿವೆ.

ಇದರಂತೆಯೇ ಅನೇಕ ವೀರಶೈವ ರಾಜಕೀಯ ಮಹಾಪುರುಷರ ಚರಿತ್ರೆಗಳೂ ಇದರಲ್ಲಿ ಬಂದಿವೆ. ಶಿವಾಜಿಯನ್ನು ಸೋಲಿಸಿದ ಬೆಳವಡಿ ಮಲ್ಲಮ್ಮಾಬಾಯಿ, ಔರಂಗಜೇಬನ ಸೈನ್ಯವನ್ನು ಹಿಂದಕ್ಕೊತ್ತಿದ ಬಿದನೂರಿನ ಚನ್ನಮ್ಮಾಜಿಯು, ಟೀಪುವಿನೊಡನೆ ಅನೇಕ ವರ್ಷ ಕಾದಾಡಿ ಕೊಡಗು ರಾಜ್ಯವನ್ನು ಸಂರಕ್ಷಿಸಿದ ಮಹಾ ವೀರನಾದ ವೀರರಾಜೇಂದ್ರನು, ರಾಜ್ಯ ಕಾರಭಾರ ಧುರಂಧರನಾದ ಸುರಪುರದ ನಿಶ್ಶೀವೀರಪ್ಪನು ಈ ಮಹಾ ವಿಭೂತಿಗಳ ಚರಿತ್ರೆಗಳು ಕರ್ನಾಟಕಸ್ಥರಿಗೆ ಈ ಮೊದಲಿಗೆ ಯಾರಿಗೂ ಗೊತ್ತಿರಲಿಲ್ಲ. ಆದರೆ ಶಿವಾನುಭವವು ಅವರ ಅರಿಕೆಯನ್ನು ಮೊದಲು ಮಾಡಿಕೊಟ್ಟಿದೆ.

ಇದರಂತೆಯೇ ಕೆಲವು ಧಾರ್ಮಿಕ ಮಹಾಪುರುಷರ ಚರಿತ್ರೆಗಳೂ ಶೋಧಿಸಲ್ಪಟ್ಟಿರುವವು. ಪೇಶ್ವೆಯವರಿಂದ ಅತ್ಯಂತ ಮನ್ನಣೆಯನ್ನು ಹೊಂದಿದ ಗಲಗಲಿಯ ಬಸವಲಿಂಗ ಸ್ವಾಮಿಗಳು, ಸಾಧು ಶಿರೋಮಣಿಯಾದ ಕಡಕೋಳ ಮಡಿವಾಳಪ್ಪನವರು, ಸಂಸ್ಥಾನಿಕರಿಂದ ಆದರಿಸಲ್ಪಟ್ಟ ದುರದುಂಡಿಯ ಶಿವಲಿಂಗೇಶ್ವರರು ಇವರುಗಳ ಇತಿಹಾಸವು ಈವರೆಗೆ ಅಪರಿಚಿತವಾಗಿದ್ದು ಅವರ ನಿಜವಾದ ವೃತ್ತಾಂತಗಳು ಈ ಪತ್ರಿಕೆಯ ಮೂಲಕ ಪ್ರಸಿದ್ಧಿಸಲ್ಪಟ್ಟಿವೆ. ಅದರಂತೆಯೇ ವೀರಶೈವ ಶಿವಶರಣ ಶ್ರೇಷ್ಠರಾದ ದೇವರ ದಾಸಿಮಯ್ಯ ಮತ್ತು ಹರಳಯ್ಯ ಮಧುವಯ್ಯಗಳ ಚರಿತ್ರೆಗಳೂ ಇದರಲ್ಲಿ ಬಂದಿವೆ.

## ಐತಿಹಾಸಿಕ ಸ್ಥಾನಗಳ ಶೋಧ

ಕರ್ನಾಟಕದಲ್ಲಿ ವೀರಶೈವ ಇತಿಹಾಸಕ್ಕೆ ಸಂಬಂಧಿಸಿದ ಅನೇಕ ಸ್ಥಾನಗಳು ಇವೆ. ಅವುಗಳನ್ನು ಪ್ರತ್ಯಕ್ಷ ನಿರೀಕ್ಷಿಸುವದರಿಂದ ವೀರಶೈವ ಮತದ ಪ್ರಾಚೀನತೆಯ ಬಗ್ಗೆ ಪ್ರಕಾಶವು ಬೀಳುವಂತೆ ಇರುತ್ತದೆ. ಈ ಉದ್ದೇಶಕ್ಕೆ ಅನುಸರಿಸಿ ಶ್ರೀ|| ಮ|| ಚಂದ್ರಶೇಖರ ಶಾಸ್ತ್ರಿಗಳು ಹೊಳಲು ಪ್ರಿ|| ಶಂಕರ ಸಂಸ್ಕೃತ ಕಾಲೇಜ ಯಾದಗಿರಿ ಇವರು ರೇಣುಕರ ಮೂಲ ಸ್ಥಾನವಾದ ಕೊಲ್ಲಿಪಾಕಿಯನ್ನು ಪ್ರತ್ಯಕ್ಷವಾಗಿ ಸಂದರ್ಶಿಸಿ ಅಲ್ಲಿ ತಾವು ಕಂಡ ಅನೇಕ ಸಂಗತಿಗಳ ಬಗ್ಗೆ ಸವಿಸ್ತಾರವಾದ ಒಂದು ಮಹತ್ವದ ಲೇಖವನ್ನು ಬರೆದಿರುವರು. ಹಲಸಂಗಿಯ ಮಿ. ಚನಮಲ್ಲಪ್ಪನವರು

ಹೊಲಿಗೆ ಹೋಗಿ ಅಲ್ಲಿಯ ಅನೇಕ ವಿಷಯಗಳನ್ನು ಕಂಡು ಹಿಡಿದು ವೀರಶೈವ ಮತದ ಪ್ರಾಚೀನತೆಯನ್ನು ಸಿದ್ಧಪಡಿಸಿರುವರು. ಮಿ॥ ವೀರಭದ್ರಪ್ಪ ಹಾಲಭಾವಿ ಸಬಜಜ್ಜ ವಿಜಾಪುರ ಇವರು ಜತ್ತ ಸಂಸ್ಥಾನದಲ್ಲಿರುವ ದಾನಮ್ಮನ ಸ್ಥಾನವಾದ ಗುಡ್ಡಾಪುರಕ್ಕೆ ಹೋಗಿ ಅದರ ವಿವರಣೆಯನ್ನು ಶಿವಾನುಭವದಲ್ಲಿ ಕೊಟ್ಟಿರುವರು. ಶಿ॥ ಮೂ॥ ಶಿವಮೂರ್ತಿ ಶಾಸ್ತ್ರಿಗಳು ತುಮಕೂರು ಇವರು ಬೀಳಗಿಗೆ ಹೋಗಿ ಅಲ್ಲಿಯ ಶಿಲಾಶಾಸನಗಳನ್ನು ನೋಡಿ ಅಲ್ಲಿಯ ರಾಜರಬಗ್ಗೆ ಅನೇಕ ಮಹತ್ವದ ವಿಷಯಗಳನ್ನು ಕಂಡು ಹಿಡಿದು ಕೆಲವು ಲೇಖಗಳನ್ನು ಬರೆದಿರುವರು. ಇವರು ಮಾಡಿದ ಪರಿಶ್ರಮಕ್ಕೆ ಶಿವಾನುಭವವು ಅತ್ಯಂತ ಋಣಿಯಾಗಿರುವದು.

## ವೀರಶೈವ ಧರ್ಮದ ಪ್ರಾಚೀನತ್ವ

ಇದರ ಬಗ್ಗೆಯೂ ಕೆಲವು ಮಹತ್ವದ ಲೇಖಗಳು ಇವರಲ್ಲಿ ಬಂದಿವೆ. ಅಗಸ್ತ್ಯ ಮತ್ತು ರೇಣುಕ ಈ ಬಗೆಯದ್ದಿರುತ್ತದೆ. ಅದು ವೀರಶೈವ ಧರ್ಮದ ಪ್ರಾಚೀನತ್ವವನ್ನು ಸಿದ್ಧಪಡಿಸುತ್ತದೆ. ಪ್ರೋ॥ ನಂದಿಮಠ ಎಮ್. ಎ. ಕೊಲ್ಹಾಪುರ ಇವರು ಬರೆದ ಶೈವ ಧರ್ಮಗಳ ಇತಿಹಾಸ. ವೇ॥ ಚಂದ್ರಶೇಖರ ಶಾಸ್ತ್ರಿಗಳು ಬರೆದ ಲಿಂಗಧಾರಣವು ಮತ್ತು ವೇದಮಂತ್ರಗಳು, ಶ್ರೀ ಶಂಭುಲಿಂಗ ಸ್ವಾಮಿಗಳು ಬರೆಯುತ್ತಲಿರುವ ವೇದವಾಙ್ಮಯ ಈ ಲೇಖಗಳೆಲ್ಲವೂ ವೀರಶೈವ ಮತದ ಪ್ರಾಚೀನತೆಯನ್ನು ಕಂಡು ಹಿಡಿಯಲು ಬಹು ಉಪಯುಕ್ತವಾಗಿರುತ್ತವೆ.

## ವೀರಶೈವ ವಾಙ್ಮಯ ವಿಮರ್ಶನೆ

ಈ ಬಗ್ಗೆಯಾದರೂ ಕೆಲವು ಮಹತ್ವದ ಲೇಖಗಳು ಶಿವಾನುಭವದಲ್ಲಿ ಬಂದಿರುತ್ತವೆ. ಇವುಗಳಲ್ಲಿ ಶ್ರೀಕರಭಾಷ್ಯ ಶ್ರೀ॥ ಸದಾ ಶಿವಯ್ಯನವರು ಎಮ್ ಎ. ಬಿ. ಎಲ್. ಇವರು ಬರೆದ ಆಂಧ್ರ ವಾಙ್ಮಯ, ಶಿ॥ ಮೂ॥ ಶಿವಮೂರ್ತಿ ಶಾಸ್ತ್ರಿಗಳು ತುಮಕೂರು ಇವರು ಬರೆದ "ಬೀಳಗೀಯ ಮಹಾಕವಿಗಳು" ಇವುಗಳೇ ಮಹತ್ವವಾದವುಗಳು ಅಲ್ಲದೆ ಮಿ॥ ಆಲಬಾಳ ಬಿ. ಎ. ಇವರು ಪಾಶ್ಚಿಮಾತ್ಯ ವಾಙ್ಮಯಕ್ಕೆ ವೀರ

ಶೈವ ವಾಙ್ಮಯವನ್ನು ಹೋಲಿಸಿ ಕೆಲವು ಲೇಖಗಳನ್ನು ಬರೆದಿರುವರು. ಇವಾದರೂ ಬಹಳ ಮಹತ್ವವಾದವುಗಳಿವೆ.

## ಶಿವಶರಣರ ಕಾಲವಿವೇಚನೆ

ಬಸವೇಶ್ವರನ ಕಾಲವಿವೇಚನೆಯ ಬಗ್ಗೆ ಮೂರು ಮಹತ್ವದ ಲೇಖಗಳು ಶಿವಾನುಭವದಲ್ಲಿ ಬಂದಿವೆ. ಇದರಂತೆಯೇ ಸಿದ್ಧರಾಮೇಶ್ವರ, ಏಕಾಂತದ ರಾಮಯ್ಯ, ದೇವರ ದಾಸಿಮಯ್ಯ ಇವರ ಬಗ್ಗೆ ದೊರೆದ ಶಿಲಾಲೇಖಗಳ ವಿವರಣೆಗಳೂ ಇದರಲ್ಲಿ ಬಂದಿವೆ.

## ಗ್ರಂಥ ಪ್ರಕಾಶನೆ

ಶಿವಾನುಭವದ ಸಂಚಿಕೆಗಳಲ್ಲಿ ಈವರೆಗೆ ಪ್ರಸಿದ್ಧವಾದ ಮಹತ್ವದ ಗ್ರಂಥಗಳು ಯಾವವೆಂದರೆ:—೧ ಬಸವೇಶ್ವರನ ವಚನಗಳು ೨ ಗಣದಾಸಿ ವೀರಣ್ಣನ ವಚನಗಳು, ೩ ಮಹಾದೇವಿಯಕ್ಕನ ವಚನಗಳು, ೪ ಸಂಗನಬಸವೇಶ್ವರನ ವಚನಗಳು, ೫ ಘನಲಿಂಗನ ವಚನಗಳು, ೬ ಬೀಳಗಿ ಅರಸುಗಳ ವಂಶಾವಳಿ ಮತ್ತು ೭ ಏಕೋತ್ತರ ಶತಸ್ಥಲಗಳು, ಇವುಗಳೇ ಮುಖ್ಯವಾದವುಗಳು.

## ಸಣ್ಣ ಕಾವ್ಯಗಳು

ವೀರಶೈವ ವಾಙ್ಮಯದಲ್ಲಿ ನಾನಾಬಗೆಯ ಕಾವ್ಯಗಳು ಅಸಂಖ್ಯವಾಗಿರುತ್ತವೆ. ಅವುಗಳು ಷಟ್ಪದಿ, ಸಾಂಗತ್ಯ, ತ್ರಿಪದಿ, ರಗಳೆ, ಕಂದ ಈ ರೂಪದಿಂದ ಬರೆಯಲ್ಪಟ್ಟಿರುತ್ತವೆ. ಸದ್ಯಕ್ಕೆ ದೊಡ್ಡ ಕಾವ್ಯಗಳನ್ನು ಶಿವಾನುಭವದಲ್ಲಿ ಕೊಡಲು ಶಕ್ಯವಿಲ್ಲ. ಆದ್ದರಿಂದ ಸಣ್ಣ ಸಣ್ಣ ಕಾವ್ಯಗಳು ಮಾತ್ರ ಇದರಲ್ಲಿ ಬಂದಿವೆ. ಅಲ್ಲದೆ ಕೆಲವು ಆಧುನಿಕ ಕವಿಗಳ ಹೃದಯಂಗಮ ಪದ್ಯಗಳೂ ಇದರಲ್ಲಿ ಬಂದಿರುವವು. ಇವುಗಳಲ್ಲಿ ರಾ|| ರಾ|| ಲಕ್ಕಪ್ಪ ಶಿರಹಟ್ಟಿ ಇವರು ಬರೆದವುಗಳೇ ಬಹಳ ಮಹತ್ವವಾದವುಗಳು.

## ಚಿತ್ರಗಳು

ವೀರಶೈವ ಧರ್ಮಕ್ಕೆ ಸಂಬಂಧಪಟ್ಟ ದೇವತೆಗಳ ಮತ್ತು ಅವರ ಮಹತ್ವದ ಸ್ಥಾನಗಳ ಕೆಲವು ಚಿತ್ರಗಳು ಇದರಲ್ಲಿ ಬಂದಿವೆ. ಅವೆಲ್ಲವೂ

ಬಹುತರವಾಗಿ ವಿ|| ಮಡಿವಾಳಪ್ಪ ಮಿಣಜಗಿ ಬಿ. ಎಸ್. ಇವರಿಂದ ತೆಗೆಯಲ್ಪಟ್ಟಿರುತ್ತವೆ. ಅವು ಯಾವವೆಂದರೆ ೧ ತಾಂಡವನೃತ್ಯ, ೨ ದ. ಗಾರ್, ೩ ಹರಳಯ್ಯ ಮಧುವಯ್ಯ, ಇವುಗಳು ಇವೆ. ಇವೆಲ್ಲವೂ ವೀರಶೈವ ಸಂಸ್ಕೃತಿ ದ್ಯೋತಕವಾಗಿ ಸುಂದರವಾಗಿರುತ್ತವೆ. ಅಲ್ಲದೆ ದಾನಮ್ಮನ ದೇವಸ್ಥಾನ ಎಡೂರ ವೀರಭದ್ರ ದೇವಾಲಯ ಇವುಗಳ ಚಿತ್ರಗಳೂ ಸಹ ಇದರಲ್ಲಿ ಬಂದಿವೆ.

ಈ ಮೇರೆಗೆ ಶಿವಾನುಭವವು ಈವರೆಗೆ ಮಾಡಿದ ಕಾರ್ಯಗಳ ವಿವರಣೆಯನ್ನು ಸಂಕ್ಷಿಪ್ತವಾಗಿ ಇಟ್ಟಿದ್ದೇವೆ. ಇದರ ಸಂಚಿಕೆಗಳಲ್ಲಿ ಸುಮಾರು ಹನ್ನೆರಡುನೂರು ಪುಟಗಳಷ್ಟು ನಾನಾವಿಧ ಮಹತ್ವದ ಲೇಖಗಳು ಬಂದಿರುತ್ತವೆ. ಹೋದ ವರುಷ ನಾವು ಯಾವದಾದರೊಂದು ಪಕ್ಷವನ್ನು ಹಿಡಿದು ಶಿವಾನುಭವವನ್ನು ನಡಿಸುತ್ತಲಿರುವೆವೆಂದು ಕೆಲವರು ಸಾಶಂಕರಾಗಿದ್ದರು. ಆದರೆ ಈ ವೃತ್ತಿಯು ಈಗ ಕಡಿಮೆಯಾಗುತ್ತಲಿದೆಂದು ನಾವು ಹೇಳಲು ಸಂತೋಷಿಸುತ್ತೇವೆ. ನಾವು ಯಾವಬಗೆಯ ಪಕ್ಷ ಭೇದವನ್ನು ಎಣಿಸವು. ಸತ್ಯವಾದದ್ದನ್ನು ಸಂಶೋಧಿಸುವ ಉದ್ದೇಶ್ಯವಾಗಿ ಆಧುನಿಕ ಪದ್ಧತಿಗೆ ಅನುಸಾರವಾಗಿ ವಿಷಯ ಚಿಕಿತ್ಸೆಯನ್ನು ಮಾಡುತ್ತಬಂದಿದ್ದೇವೆ. ಇತ್ತಿತ್ತ ಈ ಪತ್ರಿಕೆಯಲ್ಲಿಯ ಅನೇಕ ಲೇಖಗಳನ್ನು ಆಧಾರವಾಗಿಟ್ಟುಕೊಂಡು ಅನೇಕ ಪತ್ರಿಕಾ ಕರ್ತರು ಅವುಗಳನ್ನು ಉದ್ಧರಿಸುತ್ತಲಿದ್ದಾರೆ. ಇಷ್ಟೇ ಅಲ್ಲ ಇದರಲ್ಲಿ ನಿರ್ದೇಶಿಸಿದ ಅನೇಕ ಸಂಗತಿಗಳು ನ್ಯಾಯ ಕೋರ್ಟುಗಳಲ್ಲಿ ಪ್ರಮಾಣವೆಂದು ಪುರಾವೆಗಾಗಿ ಇಡಲ್ಪಡಹತ್ತಿವೆ. ಪರ್ವತ ಸಿಂಹಾಸನ ಪೀಠದ ಬಗ್ಗೆ ಕರ್ನೂಲ ಕೋರ್ಟಿನಲ್ಲಿ ನಡೆದ ವ್ಯಾಜ್ಯದಲ್ಲಿ ವೀರಶೈವ ರಗಳೆಯೊಳಗಿಯ ಅನೇಕ ಉಕ್ತಿಗಳು ಉದಹರಿಸಲ್ಪಟ್ಟವು. ಗಲಗಲಿಯ ಬಸವಲಿಂಗ ಸ್ವಾಮಿಗಳವರಿಗೆ ಪೇಶ್ವೆಯವರು ಪುಣೆಯಲ್ಲಿ ಒಂದು ಮಠವನ್ನು ಕೊಟ್ಟಿದ್ದರ ಬಗ್ಗೆ ಉಲ್ಲೇಖವು ಶಿವಾನುಭವದಲ್ಲಿ ಬಂದಿದೆಯಷ್ಟೇ, ಈ ಮಠದ ಸ್ಥಳವು ಈಗ ಪುಣೇ ಪಟ್ಟಣದಲ್ಲಿ ಒಂದು ಮುಖ್ಯ ಭಾಗದಲ್ಲಿದೆ. ಆ ಸ್ಥಳದ ಬಗ್ಗೆ ಈಗ್ಗೆ ಅಲ್ಲಿ ನ್ಯಾಯ ಕೋರ್ಟಿನಲ್ಲಿ ಕೆಲಸ ನಡಿದಿದೆ. ಅದರಲ್ಲಿ ನಾವು ಶಿವಾನುಭವದಲ್ಲಿ ಪ್ರಸಿದ್ಧ ಮಾಡಿದ ಈ ಮಠದ ವೃತ್ತಾಂತವು ಹಾಜರ ಮಾಡಲ್ಪಟ್ಟಿದೆ. ಇದರ ಮೇಲಿಂದ ನಾವು ಹಿಂದಿನ ಮಹಾತ್ಮಿಕ ಪುರುಷರು ಮಾಡಿದ ಕೇವಲ ಮಹಾತ್ಮೆ

ಗನ್ನು ವಿವರಿಸುವವಕ್ಕಿಂತಲೂ ಅವರಿಂದಾದ ಲೋಕೋಪಯೋಗಿ ಐತಿಹಾಸಿಕ ವಿಷಯುಗಳನ್ನು ವಿವರಿಸುವದು ಎಷ್ಟು ಉಪಯುಕ್ತವಿದೆಂಬದು ಗೊತ್ತಾಗುತ್ತದೆ. ಇದೇ ದೃಷ್ಟಿಯಿಂದ ನಾವು ಶಿವಶರಣರ ವೃತ್ತಾಂತಗಳನ್ನೂ ಅವರ ಮತಗಳನ್ನೂ ವಿವರಿಸುತ್ತ ಬಂದಿದ್ದೇವೆ.

ನಾವು ಮಾಡುತ್ತಲಿರುವ ಕಾರ್ಯದಲ್ಲಿ ಕೆಲವು ದೋಷಗಳಿರುವವೆಂಬದು ನಮಗೆ ಗೊತ್ತು ಇದೆ. ನಾವು ಅಚ್ಚು ಹಾಕುವ ಪುರಾತನ ಗ್ರಂಥಗಳ ಪ್ರತಿಗಳು ನಮ್ಮಲ್ಲಿ ಬಹಳ ಇರದ್ದರಿಂದ ಅವು ಅಷ್ಟು ಶುದ್ಧವಾಗಿಲ್ಲ. ಈ ದೋಷವು ಸದ್ಯ ಸ್ಥಿತಿಯಲ್ಲಿ ನಮಗೆ ಅಪರಿಹಾರ್ಯವಾಗಿರುತ್ತದೆ. ಈ ದೋಷವು ದೂರಾಗಬೇಕಾದರೆ ಗ್ರಂಥಗಳ ದೊಡ್ಡ ಭಂಡಾರವೇ ಬೇಕು. ಶಿವಾನುಭವದಲ್ಲಿ ಬರುತ್ತಿರುವ ಲೇಖಗಳೂ ಗ್ರಂಥಗಳೂ ತಿಳಿಯುವದಿಲ್ಲೆಂದು ಎರಡನೇ ಆಕ್ಷೇಪವು. ಇದು ದೂರಾಗಬೇಕಾದರೆ ಗ್ರಂಥಗಳಿಗೆ ಸವಿಸ್ತಾರ ಟಿಪ್ಪಣಿಗಳು ಅವಶ್ಯವು. ಆದರೆ ಈ ಕಾರ್ಯವನ್ನು ಮಾಡಲಿಕ್ಕೆ ಕೆಲವು ಪಂಡಿತರನ್ನು ನಾವು ನೇಮಿಸಿಕೊಳ್ಳಬೇಕಾಗುತ್ತದೆ. ಆದರೆ ಯಾವ ಸ್ಥಿತಿಯಲ್ಲಿ ಶಿವಾನುಭವ ಪತ್ರಿಕೆಯನ್ನು ಪ್ರಸಿದ್ಧಿಸಲಿಕ್ಕೆ ಹತ್ತುವಷ್ಟು ಖರ್ಚು ಸಹ ಬರುವದು ಕಷ್ಟವಿರುತ್ತದೋ ಆ ಸ್ಥಿತಿಯಲ್ಲಿ ದೊಡ್ಡ ಪಗಾರ ಕೊಟ್ಟು ಸ್ವತಂತ್ರವಾಗಿ ಶಾಸ್ತ್ರಿಗಳನ್ನು ನೇಮಿಸಿಕೊಳ್ಳುವದು ಅಶಕ್ಯವಿರುತ್ತದೆ. ಒಂದು ವೇಳೆ ಶಿವಾನುಭವಕ್ಕೆ ಸಮಾಜದವರಿಂದ ಸಹಾಯವು ದೊರೆದದ್ದಾದರೆ ಅಥವಾ ವರ್ಗಣೀದಾರರು ಹೆಚ್ಚಿದರೆ ಇದು ಕೆಲಮಟ್ಟಿಗೆ ಶಕ್ಯವಾಗುತ್ತದೆ. ಆದ್ದರಿಂದ ನಮ್ಮ ವೀರಶೈವ ಸಮಾಜ ಬಾಂಧವರು ಈ ರೀತಿಯಿಂದ ನಮಗೆ ಸಹಾಯ ಮಾಡುವರೆಂದು ಅವರಿಗೆ ವಿನಂತಿಮಾಡಿಕೊಳ್ಳುತ್ತೇವೆ.

ಈ ಗ್ರಂಥ ಪ್ರಕಾಶದ ಕಾರ್ಯಕ್ಕೆ ಅನುಕೂಲವಾಗಬೇಕೆಂದು ನಾವು ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸು ಎಂಬ ಮುದ್ರಣಾಲಯವನ್ನು ಸ್ಥಾಪಿಸಿದ್ದೇವಷ್ಟೇ. ಈ ಮುದ್ರಣಾಲಯದ ವಾರ್ಷಿಕ ಸಮಾರಂಭವು ತಾ|| ೨೪-೧೧-೧೯೩೭ನೇ ದಿವಸ ರಾ|| ಸಾ|| ಹಳಕಟ್ಟಿಯವರ ಮನೆಯಲ್ಲಿ ವಿಜಾಪುರ ಕಲೇಕ್ಟರರಾದ ಮೇ|| ಶ್ರೀ. ಎಚ್. ನಾಯಿಕ ಎಮ್. ಎ. [ಬಾರ-ಅಟ-ಲಾ] ಇವರ ಅಧ್ಯಕ್ಷತೆಯಲ್ಲಿ ನೆರವೇರಿತು. ಆ ಕಾಲಕ್ಕೆ ಪುರಾತನ ಗ್ರಂಥಗಳ ಪ್ರದರ್ಶನವೂ ಮಾಡಲ್ಪಟ್ಟಿತು. ಈ ಸಮಾರಂಭಕ್ಕೆ

ಪಟ್ಟಣದಲ್ಲಿ ಎಲ್ಲ ಜಾತಿಯ ಜನರೂ ಆಗಮಿಸಿದ್ದರು. ಈ ಸಮಾರಂಭವು ಪಟ್ಟಣದಲ್ಲಿ ಬಹು ಪರಿಣಾಮಕಾರಕವಾಗಿ ಜರಗಿತು. ಆಕಾಲಕ್ಕೆ ಪ್ರೆಸ್ಸಿನ ರಿಪೋರ್ಟರ್ ಓದಲ್ಪಟ್ಟಿತು. ಅದನ್ನು ಶಿವಾನುಭವದ ವಾಚಕರಿಗಾಗಿ ಇಲ್ಲಿ ಅಚ್ಚುಹಾಕಿದ್ದೇವೆ.

ಶಿವಾನುಭವದ ೩ ನೇ ವರ್ಷವು ಪ್ರಾರಂಭವಾಗಿದ್ದು ಇದಕ್ಕೆ ನಮ್ಮ ಚಂದಾದಾರರು ಮೊದಲಿನಂತೆಯೇ ಸಹಾಯ ಮಾಡುವರೆಂದು ನಾವು ಅವರಿಗೆ ವಿನಂತಿ ಮಾಡಿಕೊಳ್ಳುತ್ತೇನೆ.



# ವಿಜಾಪುರ
# ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನ
# ೨ ವರ್ಷದ ವರದಿಯು.

(ತಾ ೨೭-೧೧-೧೯೩೫ ರಿಂದ ತಾ. ೨೭-೧೦-೧೯೩೭ ರ ವರೆಗೆ)

## ಉದ್ದೇಶ

ಕರ್ನಾಟಕ ವಾಙ್ಮಯವು ದೊಡ್ಡದದೆ. ಮತ್ತು ಅದರ ಇತಿಹಾಸವೂ ಮಹತ್ವದ್ದದೆ. ಅದರ ಪ್ರಭಾವವನ್ನು ಜೈನ, ವೀರಶೈವ, ಬ್ರಾಹ್ಮಣ ಮೊದಲ್ಗೊಂಡು ಎಲ್ಲರೂ ಹೆಚ್ಚಿಸಲು ಎತ್ನಿಸಿರುತ್ತಾರೆ. ಆದರೆ ಇದರ ಶೋಧವು ಇನ್ನೂ ಆಗಿರುವದಿಲ್ಲ. ಈ ಶೋಚನೀಯ ಸ್ಥಿತಿಯನ್ನು ಕೆಲಮಟ್ಟಿಗಾದರೂ ದೂರ ಮಾಡುವ ಉದ್ದೇಶದಿಂದ ನಾವು ಈ "**ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸನ್ನು**" ಸ್ಥಾಪಿಸಿದ್ದೇವೆ. ಈ ದೃಷ್ಟಿಯಿಂದ ನಾವು ಈ ವರೆಗೆ ಮಾಡಿದ ಕಾರ್ಯಗಳ ವಿವರವನ್ನು ತಮ್ಮ ಮುಂದೆ ಇಡಲು ಯತ್ನಿಸುತ್ತೇವೆ.

## ೧. ತಾಡವಾಲೆಯ ಗ್ರಂಥಗಳನ್ನು ಬರೆಯಿಸುವದು

ನಮಗೆ ದೊರೆದ ಗ್ರಂಥಗಳಲ್ಲಿ ಉಪಯುಕ್ತವಾದವುಗಳನ್ನು ಆರಿಸಿ ನಾವು ಬರೆಯಿಸಲಿಕ್ಕೆ ಹತ್ತಿದ್ದೇವೆ. ವಚನ ಗ್ರಂಥಗಳ ವಾಙ್ಮಯವು ಕರ್ನಾಟಕಸ್ತರಿಗೆ ಇನ್ನೂ ಅಪರಿಚಿತವಿರುತ್ತದೆ. ಇವು ಒತ್ತಟ್ಟಿಗೆ ಶಿಗುವದಿಲ್ಲ. ಇವು ಬೇರೆ ಬೇರೆ ಗ್ರಂಥಗಳಲ್ಲಿ ಖಂಡಶಃ ಶಿಗುತ್ತವೆ. ಇವುಗಳನ್ನು ಆರಿಸಿ ಒತ್ತಟ್ಟಿಗೆ ಸೇರಿಸಿ ಬರೆಯಿಸಲು ಪ್ರಾರಂಭಿಸಿರುತ್ತೇವೆ. ಹೀಗೆ ಈ ವರೆಗೆ ಹತ್ತು ಹದಿನೈದು ಸಾವಿರ ವಚನಗಳನ್ನು ಸಂಗ್ರಹಿಸಿದ್ದೇವೆ. ವ್ಯವಸ್ಥಿತವಾಗಿ ಒತ್ತಟ್ಟಿಗೆ ಸೇರಿಸಲ್ಪಟ್ಟ ಇಷ್ಟು ದೊಡ್ಡ ವಚನ ಗ್ರಂಥಸಂಗ್ರಹವು ಕರ್ನಾಟಕದಲ್ಲಿ ಎಲ್ಲಿಯೂ ಇಲ್ಲೆಂದು ಹೇಳಬಹುದು. ಇದಲ್ಲದೆ ಕೆಲವು ಮಹನೀಯರು ತಾವು ಬರೆದ ಕೆಲವು ಗಂಥಗಳನ್ನು ನಮಗೆ ಕಳಿಸಿದ್ದಾರೆ.

## ೨. ತಾಡವಾಲೆ ಗ್ರಂಥ ಸಂಗ್ರಹಾಲಯ.

ಎಷ್ಟೋ ಕಡೆಯಲ್ಲಿ ವ್ಯವಸ್ಥೆ ಇಲ್ಲದೆ ಹಾಗೇ ಬಿದ್ದಿರುವ ತಾಡವಾಲೆ ಮತ್ತು ಇತರ ಕೈಬರಹದ ಗ್ರಂಥಗಳನ್ನು ಶಕ್ಯವಿದ್ದಷ್ಟು ಶೋಧ ಮಾಡಿ ಸಂಗ್ರಹಿಸಿ ಇಟ್ಟಿರುತ್ತೇವೆ. ಎಷ್ಟೋ ಜನರು ತಾವಾಗಿಯೇ ತಮ್ಮಲ್ಲಿದ್ದ ಗ್ರಂಥಗಳನ್ನು ಟಪಾಲದ್ವಾರಾ ಕಳಿಸಿರುತ್ತಾರೆ. ಹೀಗಾಗಿ ಈಗ ನಮ್ಮಲ್ಲಿ ಸುಮಾರು ೩೦೦-೪೦೦ ಗ್ರಂಥಗಳು ಕೂಡಿರುತ್ತವೆ. ಇವುಗಳನ್ನು ತಮ್ಮ ಮುಂದೆ ಇಟ್ಟಿದ್ದು, ನೋಡಿರುವಿರಿ. ಈ ಗ್ರಂಥಾಲಯದಿಂದ ನಮ್ಮ ಕಾರ್ಯಕ್ಕೆ ಬಹಳ ಸಹಾಯವಾಗಿರುತ್ತದೆ. ಹೀಗೆ ಗ್ರಂಥಗಳನ್ನು ಕಳಿಸಿ ಕೊಟ್ಟಂಥ ಮಹನೀಯರ ಹೆಸರುಗಳನ್ನು ನಾವು ಶಿವಾನುಭವದನೇಕ ಸಂಚಿಕೆಯಲ್ಲಿ ಪ್ರಸಿದ್ಧಿಸಿದ್ದೇವೆ.

## ಶಿವಾನುಭವ ತ್ರೈಮಾಸಿಕ.

ನಾವು ಮೇಲ್ಕಂಡ ಕಾರ್ಯಗಳನ್ನು ಕೈಕೊಂಡದ್ದರಿಂದ ಒಂದು ಪತ್ರಿಕೆಯನ್ನು ಪ್ರಾರಂಭಿಸುವ ಅವಶ್ಯಕತೆಯು ಉತ್ಪನ್ನವಾಯಿತು. ಆದ್ದರಿಂದ ನಾವು ಈ ಎರಡು ವರ್ಷಗಳಿಂದ ಈ ಪತ್ರಿಕೆಯನ್ನು ಪ್ರಾರಂಭಿಸಿದ್ದೇವೆ. ವೀರಶೈವ ವಾಙ್ಮಯ ಮತ್ತು ಇತಿಹಾಸ ಇವುಗಳನ್ನು ಪ್ರಕಟ ಪಡಿಸುವದೇ ಇದರ ಉದ್ದೇಶವಾಗಿರುತ್ತದೆ. ಕರ್ನಾಟಕದ ಎಲ್ಲ ಭಾಗದ ಮಹನೀಯರು ಈ ಪತ್ರಿಕೆಯನ್ನು ಈಗ ಬಹಳ ಆದರಿಸಲಿಕ್ಕೆ ಹತ್ತಿದ್ದಾರೆ. ಇದರ ಪುಟಗಳು ೧೪೪ ಇದ್ದು ಇಷ್ಟು ದೊಡ್ಡ ತ್ರೈಮಾಸಿಕವು ಕರ್ನಾಟಕದಲ್ಲಿ ಎಲ್ಲಿಯೂ ಇಲ್ಲ. ಇದರ ದ್ವಾರಾ ಈ ವರೆಗೆ ನಾವು ಮಾಡಿದ ಕಾರ್ಯಗಳು.

(ಅ) **ಗ್ರಂಥ ಪ್ರಕಟನೆಃ**— ಈ ವರೆಗೆ ಪುರಾತನ ಅನೇಕ ವಚನಗಳು, ಕಾವ್ಯಗಳು, ಸಾಂಗತ್ಯಗಳು, ರಗಳೆಗಳು ಇವುಗಳನ್ನು ಈ ಪತ್ರಿಕೆಯ ದ್ವಾರಾ ಪ್ರಕಟ ಪಡಿಸಿದ್ದೇವೆ.

(ಬ) **ಇತಿಹಾಸ ಶೋಧನೆಃ**— ವೀರಶೈವರಲ್ಲಿ ಅನೇಕ ಸಾಧು ಸತ್ಪುರುಷರೂ, ಮಹಾಧಿಕಾರಿಗಳೂ, ವೀರರೂ, ಕವಿಗಳೂ, ರಾಜಮನೆತನಗಳೂ ಆಗಿರುತ್ತವೆ. ಪ್ರತಿಯೊಂದು ಸಂಚಿಕೆಯಲ್ಲಿ ಇವರ ಚರಿತ್ರೆಗಳು ಬಂದಿರುತ್ತವೆ. ಈ ಚರಿತ್ರೆಗಳು ಬೇರೆ ಬೇರೆ ಮನೆತನ

ದಲ್ಲಿ ಉಪಲಬ್ಧವಿದ್ದ ಮಾಹಿತಿಯ ಮೇಲಿಂದ ಅಲ್ಲಲ್ಲಿ ಮಾಡಿದ ಸ್ವತಂತ್ರ ಶೋಧದಿಂದ ಮತ್ತು ಈ ವರೆಗೆ ಪ್ರಸಿದ್ಧಿಸಲ್ಪಟ್ಟ ವಿವರಣೆಗಳ ಮೇಲಿಂದ ಬರೆಯಲ್ಪಟ್ಟಿರುತ್ತವೆ. ಈ ಕಾರ್ಯದಲ್ಲಿ ನಮಗೆ ಕೆಳಗೆ ಬರೆದ ಮಹನೀಯರು ಬಹಳ ಸಹಾಯ ಮಾಡಿರುತ್ತಾರೆ. (೧) ರಾ॥ ರಾ॥ ಬಿ. ರಾಮರಾವ ಎಮ್. ಏ. (೨) ರಾ॥ ರಾ॥ ಕೃಷ್ಣರಾವ ಕಪಟ್ರಾಳ್. (೩) ಶಿ॥ ಮೂ॥ ಬುದ್ಧಯ್ಯಾ ಪುರಾಣಿಕ. (೪) ರಾ॥ ರಾ॥ ಸದಾಶಿವಯ್ಯಾ ಎಮ್ ಏ. ಬಳ್ಳಾರಿ. (೪) ಶಿ॥ ಮೂ॥ ಶಿವಮೂರ್ತಿ ಶಾಸ್ತ್ರಿ ತುಮಕೂರ. (೫) ಶಿ॥ ಮೂ॥ ಚಂದ್ರಶೇಖರ ಶಾಸ್ತ್ರಿ ಯಾದಗಿರಿ. (೬) ರಾ॥ ರಾ॥ ಚನ್ನಮಲ್ಲಪ್ಪ ಗಲಗಲಿ ಸಾಕೀನ ಹಲಸಂಗಿ. (೭) ರಾ॥ ರಾ॥ ಮಂಜಪ್ಪ ಹರ್ಡೇಕರ. (೮) ಶಿ॥ ಮೂ॥ ಸಿದ್ಧಾಂತಿ ಶಿವಬಸಯ್ಯನವರು ಸಾ. ಹೂಲಿ.

(ಕ) **ಸ್ವತಂತ್ರ ಲೇಖಗಳುಃ—** ವೀರಶೈವ ಮತದ ಬಗೆ ಕರ್ನಾಟಕದ ಅನೇಕ ಪಂಡಿತರು ಆಧುನಿಕ ಪದ್ಧತಿಗೆ ಅನುಸರಿಸಿ ಅನೇಕ ಲೇಖಗಳನ್ನು ಬರೆದು ನಮಗೆ ಬಹಳ ಸಹಾಯ ಮಾಡಿದ್ದಾರೆ. ಇವರ ಹೆಸರುಗಳು. (೧) ಶ್ರೀಶಂಭುಲಿಂಗಸ್ವಾಮಿಗಳು ಹಿರೇಮಠ ವಿಜಾಪುರ (೨) ರಾ. ಸಿದ್ಧರಾಮಪ್ಪ ಪಾವಟೆ ವಕೀಲ ಹುಬ್ಬಳ್ಳಿ. (೩) ರಾ. ವಿರಕ್ತಪ್ಪ ಮುಧೋಳಕರ ವಕೀಲ ವಿಜಾಪುರ. (೪) ರಾ. ಶಿವಲಿಂಗಪ್ಪಾ ಮಹಾಂತಣ್ಣವರ ಮಾಸ್ತರ ವಿಜಾಪುರ. (೫) ರಾ. ಗಂಗಾಧರಪ್ಪ ಸಂಗಪ್ಪ ಸಾಬೋಜಿ ಬೆಳಗಾವ. (೬) ಶ್ರೀ ರೇವಯ್ಯಸ್ವಾಮಿ ವಿರೂಪಾಕ್ಷ ಸ್ವಾಮಿ ಸ್ಥಾವರದ ಗಲಗಲಿ. (೭) ರಾ. ಗುಂಡಪ್ಪ ಸಿದ್ಧರಾಮಪ್ಪ ಶಾಬಾದಿ ಮೊರಟಗಿ. (೮) ಶ್ರೀ ಎಸ್. ಸಿ. ನಂದೀಮಠ ಎಮ್ ಏ. ಕೊಲ್ಹಾಪುರ. (೯) ರಾ. ಮಡಿವಾಳಪ್ಪ ಹೆಡ್ ಮಾಸ್ತರ ಸಾಸನೂರ. (೧೦) ರಾ. ಲ. ಅ. ಶಿರಹಟ್ಟಿ ವಿಜಾಪುರ. (೧೧) ರಾ. ಕೃಷ್ಣರಾವ ಕಪಟ್ರಾಳ ವಕೀಲ ಗುಲಬುರ್ಗಾ. (೧೨) ಶ್ರೀ ಸಂಗನಬಸವ ಸ್ವಾಮಿಗಳುಬಂಥನಾಳ. (೧೩) ಶ್ರೀಸಚ್ಚಿದಾನಂದ ಅನ್ನದಾನಿ ಸ್ವಾಮಿಗಳು ಅಂಬೂರ. (೧೪) ಶಿವಸುತ. (೧೫) ರಾ. ವೀರಪ್ಪ ಚನಬಸಪ್ಪ ಯಗಟಿಬಿ. ಏ. (೧೬) ಶಿ. ಬಿ. ಶಿವಮೂರ್ತಿಶಾಸ್ತ್ರಿ ತುಮಕೂರ. (೧೭) ಶಿ. ಚಂದ್ರಶೇಖರ ಶಾಸ್ತ್ರೀ ವ್ಯಾಕರಣ ತೀರ್ಥ ಯಾದಗಿರಿ. (೧೮) ಕೈ. ವಾ. ಬಿ. ಎಮ್. ಕುಲಕರ್ಣಿ ಬಿ. ಏ. (೧೯) ರಾ. ಆರ್. ಬಿ. ಆಲ

ಬಾಳ ಬಿ. ಎ ವಿಜಾಪುರ. (೨೦) ಶ್ರೀ ಬಸವರಾಜ ಶಾಸ್ತ್ರೀ ಕೋಡಿಕೊಪ್ಪ. (೨೧) 'ಶ್ರೀಶಾಂತವೀರ' ಬಬಲೇಶ್ವರ.

(ಡ) **ಚಿತ್ರಕಾರರಿಗೆ ಉತ್ತೇಜನ**:— ಶಿವಾನುಭವದಲ್ಲಿ ಅನೇಕ ಮಹತ್ವದ ಚಿತ್ರಗಳು ಬಂದಿವೆ. ಅವುಗಳನ್ನು ರಾ. ಮಡಿವಾಳಪ್ಪ ಮಿಣಜಿಗಿ ಇವರು ಮಾಡಿದ್ದಾರೆ. ಇವರು ಎ. ಎಮ್, ಪರೀಕ್ಷೆ ಪಾಸಾಗಿದ್ದು ಇವರು ಕರ್ನಾಟಕದಲ್ಲಿ ಒಬ್ಬ ಅತ್ಯುತ್ತಮ ಚಿತ್ರಕಾರರು ಇದ್ದಾರೆ. ಅವರು ತೆಗೆದಿರುವ ಚಿತ್ರಗಳು ಅತ್ಯಂತ ಪ್ರತಿಭಾಪೂರ್ಣವಾಗಿರುತ್ತವೆ.

(ಇ) **ಕವಿತೆಗಳು**:— ಶಿವಾನುಭವದಲ್ಲಿ ಅನೇಕ ಕವಿತೆಗಳು ಪ್ರಸಿದ್ಧವಾಗಿರುತ್ತವೆ. ಇವೆಲ್ಲವೂ ಉಚ್ಚತಮವಿರುತ್ತವೆಂಬದನ್ನು ಅನೇಕರು ಒಪ್ಪಿಕೊಂಡಿದ್ದಾರೆ. ಇವುಗಳಲ್ಲಿ ರಾ॥ ರಾ॥ ಲ. ಅ. ಶಿರಹಟ್ಟಿ ಮಾಸ್ತರ ವಿಜಾಪುರ ಇವರು ರಚಿಸಿದವುಗಳು ಬಹು ಶ್ರೇಷ್ಠತರದವುಗಳು ಇವೆ.

## ೪. ಶಿವಾನುಭವ ಗ್ರಂಥಮಾಲೆ.

ಈ ಮಾಲೆಯಲ್ಲಿ ಈ ವರೆಗೆ ಕೆಳಗೆ ಕಾಣಿಸಿದ ಗ್ರಂಥಗಳು ಅಚ್ಚಾಗಿವೆ. ಅವು ಯಾವವೆಂದರೆ:— (೧) ಬಸವೇಶ್ವರ ವಚನ (೨) ಮಹಿಮ್ನ ಸ್ತೋತ್ರ ಇದನ್ನು ವೇ॥ ಶ್ರೀಶಂಭುಲಿಂಗ ಸ್ವಾಮಿಗಳು ಬರೆದು ಮಾಲೆಗೆ ಕೊಟ್ಟಿರುತ್ತಾರೆ. (೩) ಮಹಾದೇವಿಯಕ್ಕನ ವಚನ (೪) ಲಿಂಗಾಪೂಜಾ ತತ್ವ (೫) ವೀರಶೈವ ರಗಳೆ (೬) ತೋಂಟದಾರ್ಯ ರಗಳೆ (೭) ಶಿವಯೋಗಾಚರಣೆ (೮) ವರದಾನಿ ಗುಡ್ಡವ್ವೆಯ ಚರಿತ್ರೆ (೯) ಗಣದಾಸಿ ವೀರಣ್ಣನವರ ವಚನ (೧೦) ಸಂಗನ ಬಸವೇಶ್ವರ ವಚನ (೧೧) ನೈತಿಕ ಮತ್ತು ಭಕ್ತಿಯ ವಚನ (೧೨) ಲಿಂಗ ಮತ್ತು ಪರಮಾತ್ಮ (೧೩) ಘನಲಿಂಗನ ವಚನ ಈ ಪ್ರಕಾರ ೧೩ ಗ್ರಂಥಗಳು ಅಚ್ಚಾಗಿರುವವು. ಏಕೋತ್ತರ ಶತಸ್ಥಲ, ಬಿಳಗಿ ಅರಸುಗಳ ವಂಶಾವಳಿ ಎಂಬೆರಡು ಗ್ರಂಥಗಳು ಅಚ್ಚಿನಲ್ಲಿರುತ್ತವೆ. ಈ ಗ್ರಂಥಗಳಲ್ಲಿ ಮಹಾದೇವಿಯಕ್ಕ ವಚನವು ಎಮ್. ಎ. ಪರೀಕ್ಷೆಗೆ ಅರ್ಹವೆಂದು ಮುಂಬಯಿ ವಿಶ್ವ ವಿದ್ಯಾಲಯದವರು ಅಭಿಪ್ರಾಯ ಪಟ್ಟಿದ್ದಾರೆ. ಅಲ್ಲದೆ ಲಂಡನ್ನ ಪ್ರದರ್ಶನಾಲಯದ ಲೈಬ್ರರಿಗೋಸ್ಕರ

ಇಂಡಿಯಾ ಸರಕಾರದವರು ಇದನ್ನು ತರಿಸಿಕೊಂಡಿದ್ದಾರೆ. ಮತ್ತು ನೈತಿಕ ಮತ್ತು ಭಕ್ತಿಪರ ವಚನಗಳು ಎಂಬ ಪುಸ್ತಕವು ಮುಂಬಯಿ ಇಲಾಖೆಯ ವಿದ್ಯಾಧಿಕಾರಿಗಳಿಂದ ಲೈಬ್ರರಿ ಬುಕ್ಕಿಗೆ ತಕ್ಕದ್ದೆಂದು ಅಂಗೀಕರಿಸಲ್ಪಟ್ಟಿದೆ. ಇವುಗಳಲ್ಲದೆ ಈಗ ಇನ್ನೂ ಕೆಲವು ಗ್ರಂಥಗಳು ಅಚ್ಚು ಹಾಕಲು ಸಿದ್ಧವಾಗಿವೆ. ಅವು ಯಾವವೆಂದರೆ:— ವಚನ ಶಾಸ್ತ್ರಸಾರ ಭಾ. ೨; ಚನ್ನಬಸವೇಶ್ವರ, ಪ್ರಭುದೇವ, ಸಿದ್ಧರಾಮೇಶ್ವರ ಇವರ ಉಕ್ತಿಗಳು, ಮತ್ತು ಶೂನ್ಯ ಸಂಪಾದನೆ, ಮತ್ತು ಈಗ ವೇದಾಂತ ಚಿಂತಾಮಣಿಸಾರ ಭಾಗ ೧ ಎಂಬ ಗ್ರಂಥವನ್ನು ಬರೆಯಿಸಲು ತೊಡಗಿದ್ದೇವೆ. ಇದನ್ನು ಶ್ರೀ ಮ|| ಬಸವರಾಜ ಶಾಸ್ತ್ರಿಗಳು ತಾಡವಾಲೆಯಿಂದ ಎತ್ತಿ ಬರೆಯಲು ಪ್ರಾರಂಭಿಸಿದ್ದಾರೆ.

## ೫. ಇತರ ಪುಸ್ತಕಗಳು.

ನಮ್ಮ ಅಚ್ಚು ಕೂಟದ ಈ ಅವಧಿಯಲ್ಲಿ ಅನೇಕ ಮಹತ್ವದ ಗ್ರಂಥಗಳು ಅಚ್ಚಾಗಿವೆ. ಇವುಗಳಲ್ಲಿ ಮುಖ್ಯವಾದವುಗಳು ಯಾವವೆಂದರೆ, ಶ್ರೀಶಂಭುಲಿಂಗ ಸ್ವಾಮಿಗಳು ಬರೆದ ತತ್ವಜ್ಞಾನ, ಮ. ರಾ. ವೀರಭದ್ರಪ್ಪ ಹಾಲಭಾವಿ ಸಬ್ಬಜಜ್ಜ ವಿಜಾಪುರ ಇವರು ಬರೆದ ಲಿಂಗಾಯತ ಮತತತ್ವವೆಂಬ ಗ್ರಂಥ, ಮ. ರಾ. ವೀರಪ್ಪ ಬಿಳೇ ಅಂಗಡಿ ವಕೀಲ ಹುಬ್ಬಳ್ಳಿ ಇವರು ಮಿ. ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಇವರಿಂದ ಬರೆಯಿಸಿ ಪ್ರಸಿದ್ಧಿಸಿದ ಶೈವಾಗಮವೆಂಬ ಇಂಗ್ಲಿಷ ಗ್ರಂಥ, ಮ. ರಾ. ಮಲ್ಲಪ್ಪ ಮಾಸ್ತರ ಜುಮನಾಳ ಇವರು ಬರೆದ ಗಂಗಾವತರಣ ಮಹಿಮೆ ಎಂಬ ಕಾವ್ಯ ಇವುಗಳು ಇರುತ್ತವೆ. ಈಗ ಶ್ರೀಜಗದ್ಗುರು ಮಹಾಸ್ವಾಮಿಗಳವರು ರಚಿಸಿರುವ ಪಾತಂಜಲಿ ಯೋಗಶಾಸ್ತ್ರವೆಂಬ ಗ್ರಂಥವು ಅಚ್ಚಿನಲ್ಲಿರುತ್ತದೆ.

## ೬. ಶಿಲಾಲೇಖಗಳ ನಕಲು.

ನಮ್ಮ ಪೂರ್ವದ ಇತಿಹಾಸ ಮತ್ತು ಸಂಸ್ಕೃತಿಯನ್ನು ಅರಿಯಬೇಕಾದರೆ ಶಿಲಾಲೇಖಗಳು ಒಳ್ಳೇ ಸಹಾಯಕಾರಿಗಳಾಗಿವೆ. ಆ ಕೆಲಸವಾದರೂ ನಮ್ಮ ಕರ್ನಾಟಕದಲ್ಲಿ ಸಮಾಧಾನಕರವಾಗಿ ಸಾಗಿರಲಿಲ್ಲ. ಈ ಕೊರತೆಯನ್ನು ದೂರ ಮಾಡುವದಕ್ಕೋಸ್ಕರ ಅವುಗಳ ನಕಲನ್ನು

ತೆಗೆದುಕೊಳ್ಳಲಿಕ್ಕೆ ಪ್ಯಾಡ್, ಬ್ರೆಶ್‌ಗಳನ್ನು ತರಿಸಿದ್ದೇವೆ. ಅವುಗಳ ಸಹಾಯದಿಂದ ಬೇರೆ ಬೇರೆ ಕಡೆಯಲ್ಲಿಯ ಎಷ್ಟೋ ಶಿಲಾಲೇಖಗಳ ನಕಲನ್ನು ತೆಗೆದುಕೊಂಡು ಬಂದದ್ದಾಗಿದೆ. ಅವುಗಳಲ್ಲಿ ಬಸವೇಶ್ವರನ ಉಲ್ಲೇಖವಿದ್ದಶಿಲಾಲೇಖವು ಅತಿ ಮಹತ್ವದ್ದು. ಬಸವೇಶ್ವರನ ಉಲ್ಲೇಖವಿದ್ದ ಶಿಲಾಶಾಸನವು ಸಿಕ್ಕದ್ದು ಇದೇ ಮೊದಲನೇದು. ಇಂಥ ಶಿಲಾಲೇಖಗಳನ್ನು ಇನ್ನೂ ಎಷ್ಟೋ ಕಡೆಯಲ್ಲಿ ತೆಗೆದುಕೊಂಡು ಬರತಕ್ಕವು ಇರುತ್ತವೆ. ಈ ಕಾರ್ಯದಲ್ಲಿ ವೇ. ಮೂ. ಸಿದ್ಧಾಂತಿ ಶಿವಬಸಯ್ಯನವರು ಹೂಲಿ ರಾ. ರಾ. ಚನಮಲ್ಲಪ್ಪ ಹಲಸಂಗಿ, ಗೊಲ್ಲಾಳ ಪೂಜಾರಿ ಪ್ರೋ. ನಂದೀಮಠ ಇವರು ನಮಗೆ ಬಹಳ ಸಹಾಯ ಮಾಡುತ್ತಲಿದ್ದಾರೆ.

## ೭. ನವಕರ್ನಾಟಕ.

ಕರ್ನಾಟಕವು ರಾಜಕೀಯ, ಸಾಮಾಜಿಕ, ಔದ್ಯೋಗಿಕ, ಶೈಕ್ಷಣಿಕ ಮುಂತಾದ ವಿಷಯಗಳಲ್ಲಿ ಮುಂದುವರೆಯ ಬೇಕೆಂದೂ ಕರ್ನಾಟಕದ ಏಕೀಕರಣವಾಗಬೇಕೆಂದೂ ನಾವು ಈ ಪತ್ರಿಕೆಯನ್ನು ತಾ. ೬-೧೦-೧೯೩೭ ಇಸ್ವಿ (ವಿಜಯ ದಶಮಿ ೧೮೪೯) ದಿವಸ ಹೊರಡಿಸಿದ್ದೇವೆ. ಇದು ಯಾವತರದ ಭೇದಭಾವವನ್ನೆಣಿಸದೆ ಕರ್ನಾಟಕವು ಮುಂದುವರಿಯುವಂತೆ ಪ್ರಯತ್ನಿಸಿ "ನವಕರ್ನಾಟಕ"ವನ್ನು ಸಿದ್ಧಗೊಳಿಸುವದೇ ಇದರ ಮುಖ್ಯ ಧ್ಯೇಯವಾಗಿದೆ. ಈಗ್ಗೆ ಇದರ ೭ ಸಂಚಿಕೆಗಳು ಹೊರಟಿರುತ್ತವೆ. ಈಗಿನಿಂದಲೇ ಎಲ್ಲ ಭಾಗದ ಕರ್ನಾಟಕಸ್ಥರು ಆದರದಿಂದ ಬರಮಾಡಿಕೊಳ್ಳುವದನ್ನು ನೋಡಿದರೆ ತೀವ್ರವೇ ಇದು ಬೆಳೆದು, ಕರ್ನಾಟಕಕ್ಕೆ ಒಳ್ಳೇ ಉಪಯುಕ್ತಪತ್ರಿಕೆಯಾಗಬಹುದೆಂದು ಆಶಿಸುತ್ತೇವೆ.

## ೮. ಫಿರ್ತಿ ಲೈಬ್ರರಿ.

ನವಕರ್ನಾಟಕಕ್ಕೂ ಶಿವಾನುಭವಕ್ಕೂ ವಿನಿಮಯವಾಗಿ ಅನೇಕ ಪತ್ರಿಕೆಗಳು ಬರುತ್ತವೆ. ಅವುಗಳನ್ನು ನಾವು ಫಿರ್ತಿ ಲೈಬ್ರರಿ ಗೋಸ್ಕರ ಉಪಯೋಗಿಸುತ್ತೇವೆ. ಜುಮನಾಳ ಮತ್ತು ಹಿಟ್ಟನಹಳ್ಳಿ ಗ್ರಾಮದವರು ಇವುಗಳ ಉಪಯೋಗವನ್ನು ಬಹಳ ಮಾಡಿಕೊಳ್ಳ ಹತ್ತಿದ್ದಾರೆ.

## ೯. ಬೇರೆ ಕೆಲಸಗಳು.

ನಮ್ಮ ಪ್ರೆಸ್ಸಿನ ಮುಖ್ಯ ಧ್ಯೇಯವು ಗ್ರಂಥಗಳ ಪ್ರಸಾರವಿದ್ದರೂ ಇತರ ಚಿಲ್ಲರ ಕೆಲಸಗಳನ್ನಾದರೂ ಕೆಲವು ಜನರ ಸೂಚನೆಯ ಮೇರೆಗೆ ಹಿಡಿಯಲಿಕ್ಕೆ ಹತ್ತಿದ್ದೇವೆ. ನಾವು ಪ್ರಿಂಟಿನಲ್ಲಿ ಆದಷ್ಟು ಮಟ್ಟಿಗೆ ಸೌಂದರ್ಯದ ಕಡೆಗೆ ಹೆಚ್ಚಿಗೆ ಲಕ್ಷ್ಯ ಕೊಡುತ್ತಿರುತ್ತೇವೆ. ಆದರೆ ನಮ್ಮ ಕಾರ್ಯದಲ್ಲಿ ಅನೇಕ ಅಡಚಣೆಗಳಿದ್ದು ಅವುಗಳನ್ನು ಆದಷ್ಟು ಮಟ್ಟಿಗೆ ದೂರ ಮಾಡಲು ಯತ್ನಿಸುತ್ತೇವೆ. ಈ ಕಾರ್ಯಕ್ಕೆ ನಮ್ಮ ಕೆಲಸ ಮಾಡುವವರು ನಮಗೆ ಬಹಳ ಸಹಾಯ ಮಾಡುತ್ತಾರೆ- ಇವರಿಗೆ ಪ್ರಾವಿಡೆಂಟ ಫಂಡನ್ನು ಇಟ್ಟಿದೆ. ಅವರು ಇದೇ ಪ್ರಕಾರ ಅಭಿಮಾನವಿಟ್ಟು ಸಹಾಯ ಮಾಡಿದಲ್ಲಿ ನಮ್ಮ ಪ್ರೆಸ್ಸಿನ ಸ್ಥಿತಿಯಾದರೂ ಬೆಳೆಯುವದೆಂಬುದರಲ್ಲಿ ಏನೂ ಸಂದೇಹ ವಿಲ್ಲ. ಅದೇ ಮೇರೆಗೆ ಪಟ್ಟಣದಲ್ಲಿ ಅನೇಕರು ನಮ್ಮ ಕೆಲಸದಲ್ಲಿ ಬಹಳ ಸಹಾಯ ಮಾಡುತ್ತಲಿದ್ದಾರೆ. ಅವರಿಗೆ ನಾವು ಬಹಳ ಆಭಾರಿಯಾಗಿದ್ದೇವೆ.

ಈ ಪ್ರಕಾರ ಈ ಎರಡು ವರ್ಷಗಳ ವರೆಗೆ ನಾವು ಮಾಡಿದ ಕಾರ್ಯಗಳ ವರದಿಯನ್ನು ತಮ್ಮ ಮುಂದೆ ಇಟ್ಟಿದ್ದೇವೆ. ನಮ್ಮ ಕಾರ್ಯದಲ್ಲಿ ಅನೇಕ ತೊಂದರೆಗಳು ಬಂದಿರುತ್ತವೆ. ಬಹು ಜನರಲ್ಲಿ ವಾಚನಾಭಿರುಚಿಯು ಬಹಳ ಕಡಿಮೆ ಇರುತ್ತದೆ. ಅದರಲ್ಲಿ ನಾವು ಕೈಕೊಂಡ ಕಾರ್ಯದ ಮಹತ್ವವನ್ನು ಗ್ರಹಣ ಮಾಡುವಂಥ ಜನರ ಸಂಖ್ಯೆಯಾದರೂ ಅಲ್ಪ ಇರುತ್ತದೆ. ಆದ್ದರಿಂದ ನಾವು ಪ್ರಸಿದ್ಧಿಸುವ ಗ್ರಂಥಗಳ ಪ್ರಸಾರವು ಸಮಾಧಾನಕರವಿರುವದಿಲ್ಲ. ಆದರೂ ಬರಬರುತ್ತ ಜನರ ಲಕ್ಷ್ಯವು ನಾವು ಮಾಡುವ ಕಾರ್ಯದ ಬಗ್ಗೆ ಹೆಚ್ಚುತ್ತ ಹೋಗಬಹುದೆಂದು ಆಶೆ ಇದೆ. ನಾವು ಮಾಡುವ ಕಾರ್ಯವನ್ನು ಸುಸಂಘಟಿತ ರೀತಿಯಿಂದ ಮಾಡುವ ಉದ್ದಿಶ್ಯವಾಗಿ ಧರ್ಮಗ್ರಂಥ ಪ್ರಸಾರಕ ಸಂಘವೆಂಬ ಸಂಸ್ಥೆಯು ಸ್ಥಾಪಿಸಲ್ಪಟ್ಟಿರುವದು. ಇದಕ್ಕೆ ಕೆಳಗೆ ಕಾಣಿಸಿದ ಸದ್ಗೃಹಸ್ಥರು ಆಶ್ರಯದಾತರು ಆಗಿರುವರು. ಅವರ ಹೆಸರುಗಳು (೧) ಶ್ರೀಮನ್ನಿರಂಜನ ಜಗದ್ಗುರು ಗುರುಸಿದ್ಧ ಸ್ವಾಮಿಗಳು ಹುಬ್ಬಳ್ಳಿ (೨) ಸರದಾರ ಲಖಮಗೌಡಾ ಬಸವ ಪ್ರಭು ಸರದೇ

ಸ್ವಾಮಿ ಒಂಟಮುರಿ (೩) ರಾ. ಸಾ. ಮಲ್ಲಪ್ಪ ಅಣ್ಣಾ ಶಿಂತ್ರೆ (೪) ರಾ. ಧರ್ಮಗೌಡಾ ಪಾಟೀಲ ಚಿಂಚಣಿ (೫) ರಾ. ಗಂಗಾಧರಪ್ಪ ಸಾಬೋಜಿ (೬) ಶ್ರೀ. ಮುರಿಗಯ್ಯಸ್ವಾಮಿ ಬಾಗೋಜಿ ರಬಕವಿ (೭) ರಾ. ಬಸಲಿಂಗಪ್ಪ ಘಟ್ಟನಟ್ಟಿ ಮಹಾಲಿಂಗಪೂರ (೮) ರಾ. ವೀರಭದ್ರಪ್ಪ ಹಾಲಭಾವಿ ಸಬಜಜ್ಜ ವಿಜಾಪುರ (೯) ಶ್ರೀ. ಮಾನಾಸಾಹೇಬ ದೇಸಾಯಿ ಅಮರಾವತಿ (೧೦) ರಾ ಶಿವಲಿಂಗಪ್ಪ ಹೆರಲಗಿ ವಿಜಾಪುರ ಇದೇ ಪ್ರಕಾರ ಯಾವತ್ತು ಮಹನೀಯರು ಈ ಸಂಶೋಧನ ಕಾರ್ಯದಲ್ಲಿ ಸಹಾಯ ಮಾಡುವರೆಂದು ಆಶಿಸುತ್ತೇವೆ.

ತಾವೆಲ್ಲರು ನಮ್ಮ ಆಮಂತ್ರಣಕ್ಕೆ ಮಾನ ಕೊಟ್ಟು ಈ ಸಮಾರಂಭಕ್ಕೆ ಬಂದದ್ದಕ್ಕೆ ನಾನು ತಮ್ಮ ಆಭಾರಿಯಾಗಿದೇನೆ.

**ವಿಜಾಪುರ**
ತಾ ೨೪-೧೧-೨೭

**ಫ. ಗು. ಹಳಕಟ್ಟಿ**
ಡಾಯರೇಕ್ಟರ.

ಪಣೆಯೊಳ್ತಿಲಕದ ಕತ್ತುರಿ।
ಗಣೆದಿರಪ ಗರಿಯ ಬಿಚ್ಚತೆರಗಿದ ಭೃಂಗ॥
ಕ್ಕೆಣೆ ಇಕ್ಷುಚಾಪಕೆಣೆ ಕಾ।
ಮನಬಿಲ್ಲಿಣೆಯಾಯ್ತು ನೃಪನ ಭ್ರೂವಿಭ್ರಮಮುಂ ॥೭೮॥
ವಿದಿತಂ ರಾಕಾ ಚಂದ್ರಂ।
ಸ್ಪೃಶಮೆ ದೋಷಾಕರಂ [ಕರಂ] ರಂಜಿಸುವಾ ॥
ಮದನನ ಹಸ್ತದ ಕನಕಾ।
ಬ್ಜದೊಳಿರ್ದುದು ನೃಪನ ವಿಶದ ರುಚಿಯುತ ವಕ್ತ್ರಂ ॥೭೯॥
ಪೊಸ ಮಿಸುಸಿದಾವರೆಯ ಚೆ।
ಲ್ವೆಸಳ್ಗಳೊಳಳಿಯೊರಗಿ ರಾಜಿಸುತ್ತಿರಲದರೊಂ॥
ದೇಗಕಮನನುಕರಿಸಿದುದೆನೆ।
ಕುಸುಮಾಸ್ತ್ರಗಳೆಣೆಯೆ ನೃಪನ ನೇತ್ರಯುಗಕ್ಕಂ ॥೮೦॥
ವದನಾಬ್ಜದ ಸೌರಭ್ಯಮು।
ನದಿರದೆ ಷಟ್ಪದಗಳಪಹರಿಸದ ವೊಲಂ ತಾ॥
ಬಿದಿ ಕಾವಲ್ಲಿಟ್ಟ ಚಂಪಕ।
ದೊದವಿನವೊಲಾಯ್ತು ನಾಸಿಕ [ಮದು] ನೃಪವರನಾ ॥೮೧॥
ವಾರಿಜಭವನಾ ಸುಧೆಯೊಳ್।
ಸಾರಂ ಮಿಗಲದ್ದಿ ಪಕ್ವ ಬಿಂಬದಫಲಮಂ॥
ಸೇರಿಸಿದನೆಂಬ ಪರಿಯಿಂ।
ಭೂರಮಣನ ವಿದ್ರುಮಾಧರಂ ಕರಮೆಸೆಗುಂ ॥೮೨॥
ಕುಲಿಶದ ಶಕಲಗಳಂ ವಿಚ।
ಕಿಲ ಕುಂದದ ಕುಟ್ಮಲಂಗಳಂ ಪಂಜೆಗಳಿಂ॥
ದಲಸದೆ ಬಿದಿ ರಚಿಸಿದನೆನೆ।
ಚಲಭೀಮನ ರದನಪಂಕ್ತಿಗಿನ್ನೆಣೆಯುಂಟೇ? ॥೮೩॥
ಮುನ್ನಂ ಬಿದಿ ಪಣೆಯೊಳ್ಬಿಡ।
ದುನ್ನತಿಕೆಯ ಫಲವ ಬರೆಯಲಾದ್ಯಂತದೊಳಂ॥
ಕನ್ನಡದಿಂ ಶ್ರೀಕಾರಗ।
ಳಂ ನೆರೆ ಬರೆದಂತೆ ಕರ್ಣಗಳ್ ನೃಪವರನಾ ॥೮೪॥
ರನ್ನಗನ್ನಡಿಯ ಸುತ್ತಲ್।

ಚೆನ್ನಂಮಿಗೆ ನೀಲ ರತ್ನದಿಂ ಕೆತ್ತಿದವೋ ॥
ಲ್ಸನ್ನತ ಮಾಗಿಯೆ ಮಿರುಗುವ।
ಮನ್ನತಿಕೆಯು ಶ್ಮಶ್ರು ಸೂಕ್ಷ್ಮ ಲೋಮಂ ನೃಪನಾ ॥೫೫॥
ಗುಂಠಿತ ಮಂತ್ರಮ ನಾಸ್ಯೆ।
ಕುಂಠನ ಸುತ ಬರೆವ ಕಯ್ಯ ಕಂತೆ [ಯ.] ಪುಡಿಯೆ ॥
ಕಂಠಂ ನಲುಗಿಪುದೀ ರಣ।
ಕಂಠೀರವ ಸೋಮಶೇಖರೇಂದ್ರನ ಕಂಠಂ ॥೫೬॥
ಹೃದಯಸ್ಥ ಶ್ರೀದೇವಿಗೆ।
ಪದಪಿಂ ಲಾವಣ್ಯದಮೃತದಭಿ [ಷೇಚನ] ವಂ ॥
ಒದವಿಸುವ ವರದ ಕರಯುಗ।
ಮೊದನಂ ಪಡೆದತ್ತು ಬಾಹುಗಳ್ ನೃಪವರನಾ ॥೫೭॥
ಅಂಗಜಮೋಹನಲಕ್ಷ್ಮಿಯು।
ರಂಗಸ್ಥಲವಂತೆ ಮೆರೆವ ವಕ್ಷಸ್ಥಲಮುಂ ॥
ಕಂಗಳ ಪುತ್ರಿಕೆಗಂ ನೃ।
ತ್ಯಂಗಳನಾಗಿಪು [ದು] ಸಹಜ ಮಾಭೂವರನಾ ॥೫೮॥
ಶೃಂಗಾರ ಶರಧಿಯೊಳ್ಸಿರಿ।
ಕಂಗೊಳಿಸುವ ದಕ್ಷಿಣೋರು ನಿಮ್ನಾವರ್ತಂ ॥
ಮಂಗಳ ಮುಖಿಯರ ಕಣ್ಮೀ।
ನಂಗಳಿಗಿದು ಸರಸಿಯಾಯ್ತು ನಾಭೀದೇಶಂ ॥೫೯॥
ಹಡೆದ ಜನ ಕಯ್ಯ ಪಿಡಿಗಳ।
ಪ್ರೊಡನಂತುಬ್ಬಿ ಬೆಳೆದು ಕಡ ಚೆಲ್ವಿಕೆಯುಂ ॥
ಪಡೆದು ನುಣ್ಪಡರು ತೊಪ್ಪುವ।
ಕಡುಗಾಡಿಯು ಮಧ್ಯ ರಂಜಿಕುಂ ನೃಪವರನೊಳ್ ॥೬೦॥
ವಾರಣವ ಕುಂಭವದು ಸಾ।
ಧಾರಣ ಸಾದೃಶ್ಯ ಮುಲ್ತು ಲಾವಣ್ಯಾ ಸರ ॥
ಸ್ತ್ರೀರದ ಪುಳಿನಗಳಲ್ಲದೆ।
ಬೇರಿನ್ನಿದ ಕೆಣೆಯೆ? ನೃಪನ ಜಘನದ್ವಯಕಂ ॥೬೧॥
ಮಾನವ ಮದನನ ರೂಪ।
ಸ್ಥಾನವೆ ಕಾನನಮದಾಗೆ ಬಿಸುಟ್ಟಿವನೀಯಲ್ ॥

ಲೀನ ಮನೋಮದಗಜ ಕಾ।
ಲಾನ ಸ್ತಂಭಂಗಳಾದ[ಪೀ] ತನ ತೊಡೆಗಳ್ ।೬೨॥
ಬೀಳೆಚ್ಚು ಪಿರಿದು ಜನಗಳ।
ಕಾಳೆಗಮಂ ಜಯಿಸಿ ಮದನ ನೂಡುವಕಹಕಾ॥
ಪಾಳಿಕೆಯನನುಕರಿಸೆ ಭೂ।
ಪಾಲ[ನ] ಜಂಘಾದ್ವಯಕ್ಕೆ ಪಡಿಯಿಡಲುಂಟೇ? ॥೬೩॥

ಮತ್ತೇಭ॥

ವಿನತಾರಾತಿ ನೃಪಾಲ ಮೌಳಿ ವಿಲಸನ್ಮಾಣಿಕ್ಯರತ್ನ ಪ್ರತಾ।
ನನ ಮೀನೋಜ್ವಲ ಕಾಂತಿ ರಂಜಿತ ಪದದ್ವಂದ್ವಂ ಪ್ರಭಾಭಾಸುರಂ।
ಜನತಾನಂದಕರಂ ನಖೇಂದು ನಿಕರಂ ಕಂದರ್ಪ ನಸ್ತ್ರಕ್ಕೆ ತಾ।
ನಿನಿತುಂ ಕೆಂಪಿನ ವಿಗಾಂಟಿಯಿಟ್ಟ ತೆರದಿಂ ಚೆಲ್ವಾದು ದೀಭೂಪರೊಳ್ ॥೬೪॥
ಮೃದುರಕ್ತಚ್ಛವಿಗೂಡಿ ಕೂರ್ಮನಿರವಂ ತಾಳ್ದಿರ್ದ ಪಾದದ್ವಯ।
ಕ್ಕೆದಿರಿಲ್ಲಂ ಪಡಿಯಿಲ್ಲ ಕೆಂಕವಡರ್ದೀ ಕಂಚೀದ್ವಯಂ ಕೇದಳಿರ್।
ವಿದಿತಂ ಧಾತ್ರಿಯ ಭಾರಮಂ ವಹಿಸಲಿನ್ನಿಂತಲ್ಲದೆಂ ದೀಗಳಾ।
ಬಿದಿ ಪೃಥ್ವೀಶನ ಪಾದಪದ್ಮಯುಗಮಂ ಕೈಮುಟ್ಟಿತಾಂ ಮಾಡಿದಂ ॥೬೫॥
ಜನಕಾನಂದಕರಂ ಲಸತ್ಸಕಲ ಸೌಂದರ್ಯಾಕರಂ ರೂಪುಮೋ।
ಹನ ಲಕ್ಷ್ಮೀ ನಿಕರಂ ಪ್ರತಾಪದೊದವಿಂ ತಾನೀತನೇ ಭಾಸ್ಕರಂ।
ವನಿತಾನೇತ್ರ ಚಕೋರ ಸಮ್ಮುದಕರಂ ಭೋಗಾಬ್ಧಿ ರಾತ್ರೀಕರಂ।
ಮನುಜಾಧೀಶ್ವರ ಸೋಮಶೇಖರವರಂ ಶೃಂಗಾರ ರತ್ನಾಕರಂ ॥೬೬॥

ಕಂದ॥

ಪೂರ್ವಕೃತ ಸುಕೃತದಿಂ ನಿಮ।
ಗೀರ್ವಗರ್ಗಂ ಮನುಜ ಮನ್ಮಥಂ ದೊರೆಕೊಂಡಂ॥
ಪಾರ್ವತಿಗಂ ಗಂಗೆಗಮಾ।
ಸರ್ವೇಶ್ವರನಂತೆ ಸೋಮಶೇಖರ ಭೂಪಂ ॥೬೭॥
ಮಲ್ಲಿಗೆಯುಂ ಮಾಧವಿಯುಂ।
ನಿಲ್ಲದೆ ಮಾಕಂದಕಡರಿ ಪರ್ಬಿದ ತೆರದಿಂ॥
ಪುಲ್ಲಶರ ರೂಪನಂಗವ।
ಮೆಲ್ಲನೆ ಸೋಂಕಿದೊಡೆ ನಿಮಗಮತಿಶಯಮಕ್ಕುಂ ॥೬೮॥

ಇಂತು ನೃಪನ ವಿಷಯಂಗಳ।
ಕಾಂತಾ ಮಣಿಯರ್ಗೆ ಪೇಳಿ ಮೀನಾಕ್ಷಿಯು ತಾ।
ನಂತರಿಸದೆ ಪೋಗಲೊಡಂ।
ಚಿಂತಿಸಲೊಡನೆಚ್ಚ ನಿರ್ವಗಂ ಷಂಚಶರಂ ॥೬೯॥

**ಮತ್ತೇಭ॥**

ಸಿರಿದುಂ ಪುಟ್ಟಿದ ಚಿಂತೆಯಿಂ ಬಿಡದೆ ನೋಳ್ಪೊಂದಾಸೆ ಯುಚ್ಛ್ವಾಸದೊಳ್।
ನೆರೆದುಷ್ಟಂ ನಿಜದೇಹಮೊಂದಿದುರಿಯುಂ ಬಿಟ್ಟಿರ್ಪುದಾಹಾರಮುಂ।
ಭರದಿಂ ಲಜ್ಜಿತಗುಳ್ದು ಪೈಸರಿಸುದುಂ ತತ್ಕಾತರಂ ಮೌನಮುಂ।
ನೆರೆ ಮೂರ್ಛಾದಿಯೊಳೊಂದಿ ಯೊಂದುಳಿದುದೀ ಕಾಂತಾವ್ವಯುಕ್ತಂ ನಿಜಂ ॥೭೦॥

**ಶಾರ್ದೂಲ॥**

ಚಂದ್ರಂಚಂಡ ಮರೀಚಿಯಾದ ನನಿಲಂ ತಾಂವಜ್ರಮಾದಂಲಸತ್।
ಸಾಂದ್ರ ಶ್ರೀನವಗಂಧ ಬಂಧುರಚಯಂ ಜಾಜ್ವಲ್ಯ ಮಾನಾಗ್ನಿಯಾ।
[ಯ್ತ್ರೈಲೋ]ದ್ರೀಲೋಕದ ಪುಷ್ಪಮಾಲ್ಯಕುಲಮುಂಶೂಚ್ಯಗ್ರಮಾಯ್ತೀಗಲಾ।
ಮಂದ್ರಧ್ವಾನದ ಗೇಯವಜ್ರ ಮೆನಿಸಲ್ಕನ್ನೆಂತು ತಾಳ್ದಿರ್ದಪರ್ ॥೭೧॥

**ಕಂದ॥**

ಪಗಲಿರುಳುಂ ನೆನೆನೆನೆದಾ।
ಒಗೆ ಕೈಗೂಡದಿರೆ ನಿಮಿಷಮದೆ ಕೋಟಿಯುಗಂ।
ಮೃಗಧರ ನುದಿಸಿದೊಡಿನ್ನೆ ಮ।
ಗಗಣಿತ ಮೆಲೆಸಖಿಯೆ ಜೀವಿಪಂದಮದೆಂತೋ ॥೭೨॥

**ಮಂದಾಕ್ರಾಂತ॥**

ಚಂದ್ರಂ ಚೈತ್ರಂ ಸುರಭಿಪವನಂ ಕುಂದಮಲ್ಲೀವಿತಾನಂ।
ಮಂದ್ರಧ್ವಾನಂ ಮಧುಕರಕೃತಂ ಕಾಮಜಾ ಪ್ರೋತ್ಥನಾದಂ।
ಸಾಂದ್ರಂಗೀತಂ ಸುರಭಿ ಪವನಂ ವೇಣು ವೀಣಾ ನಿನಾದಂ।
ಕಂದರ್ಪಾನಾಶಂ ಶುಕಪಿಕರವಂ ಕೊಲ್ಲವೇ ಪ್ರಾಣಕಾಂತೇ ॥೭೩॥

ಮಂದಂ ಮಂದಂ ಶ್ವಸಿತ ಪವನಂ ಮಾನಿದಂ ಗ್ಲಾನಿದಂವಾ।
ಸ್ಯಂದಂ ಸ್ಯಂದಂ ಮೃದುಲ ಹೃದಯಂ ಕಾತರಂ ಸಾತುರಂತತ್।

ಸ್ಪಂದಂ ಸ್ಪಂದಂ ನಯನಯುಗಳಂ ಸಾದರಂ ಮೇದುರಂ ಮೆ।
ಸ್ಕಂದಂ ಸ್ಕಂದಂ ಕಲಿಸ ಕಲಿತಂ ಭಾವವದ್ವಿದ್ರುಮೋಷ್ಠಂ ॥೨೪॥

**ವಸಂತ॥**

ಸಾನಾತುರಾಃ ಜನಕಂ ಘನತಾಪಮೇಕಂ।
ಪೀನಜ್ವರಂ ವಿರಹವೇದನಜಂ ವಿಲೋಕಂ।
ಮಾನುಚ್ಯುತಂ ಮದನಕಾತರಮಾತ್ಮ ಜಾತಂ।
ನಾನರ್ತಿ ನರ್ತಯತಿ ತೇ ವನಿತೇ ವಿಶೇಷಾನ್ ॥೨೫॥

**ಉತ್ಪಲ॥**

ಈ ನವ ಯವ್ವನೋನ್ನತಿಕೆಯಂ ಬಗೆಯಿತ್ತುದ ದೇಕೆ ಕೆಮ್ಮನಿ।
ಮಾನವ ಜನ್ಮದೊಳ್ಪರಿದೆ ಪೋಪುದು ಮೋಹನಲಲ್ಲೆಕೈತವಂ।
ಮೀನವಿಲೋಚನಂ ಗಳಿಗವಿನ್ನೆಗ ಕಣ್ಬೊಲ ಮಾದುದಿಲ್ಲಮೆಂ।
ತಾನುಸಮಾಗಮಂ ದೊರೆಯಲರ್ಪಿಪೆವೀ ನೃಪಕಾಮದೇವನಂ ॥೨೬॥
ಚಂದನಪಂಕಮಂ ಪಸುರು ಕಪ್ಪುರಮಂ ಕುಳಿರ್ವಾಲಿ ನೀರ್ಗಳಂ।
ಕಂದೊಳ[ತಿ]ಕ್ಕಿ ತಂಗೊದರಿ...ರದ (?) ತಂದಲ ಮಲ್ಲಿಕಾಲತಾ।
ಬೃಂದದ ಮಧ್ಯದೊಳ್ ಕಮಲ ಕೋಮಲ ಪತ್ರದ ಶಯ್ಯೆಯೊಳ್ಕರಂ।
ಒಂದಿಸಿ ವೀಜನಂಗಳುವ ನಿಕ್ಕೆಲೆ ಕಾಮಿನಿ ಎಮ್ಮ ಬೇಗದಿಂ ॥೨೭॥
ಮಂದ ಮರಾಳಯಾನ ಭರ[ವ]ಂ ಮರೆದುಂ ಶ್ವಸಿತಪ್ರಪಂಚಮಂ।
ಕುಂದಿ ಕುರಂಗ ಲೋಚನಯುಗಂ ಮರವಟ್ಟಿರೆ ಹಸ್ತಕಂಜಮಂ।
ಚಂದಿರಗರ್ಪಿಪಂತೆ ಕವಪಿಂಗಿರದಿಟ್ಟು ಮನಸ್ಸ್ಥಿತೇಶನಂ।
ಒಂದೆ ಮನಸ್ಸಿನಿಂ ಬಿಡದೆ ಜಾನಿಪರಂತಿರೆ ಮೂರ್ಛೆಯೊಂದಿದರ್ ॥೨೮॥

**ಚಂಪಕ॥**

ವಿರಹಜ ವೇದನಾನುಭವ ಸಂಭವ ತಾಪವಿಕಾರದೇಳ್ಗೆಯಿಂ।
ಪರವಶ ಮಾದುದಿಂತಿವರ ಚಿತ್ತಮಿದೆಂದುರೆ ಕಾಂತೆಯರ್ಕ್ಕಳ್ ॥
ತರುಣಿಯರೀರ್ವರಂ ಸರಸಿಯೊತ್ತಿ(ಟ್ಟ)ನೊಳಿರ್ದ ಲತಾಗೃಹಂಗಳೊಳ್।
ನೆರೆದಿರಲಿಟ್ಟು ಶೀತಲದ ಕೃತ್ಯಗಳಂ ನೆರೆಮಾಡುತಿರ್ದಪರ್ ॥೨೯॥

**ಕಂದ॥**

ಪನಿ ನೀರ್ಸೂಸಿದರಂ ತದು।
ಮನಸಿಜನೆಸಗಿರ್ದ ಹವನ ಕಾಜ್ಯಾಹುತಿ[ಯೆಂ] ॥

[ಜ] ನಿತಾದುದೆಂದೊಡಿನ್ನಾ ।
ವನಿತಾ ಮಣಿಯುಗ್ಗ್ರ ವಿರಹತಾಪವಮದೆಂತೋ ॥೮೦॥

ಚೆಂದಳಿರಂ ಶಯ್ಯೆಗಳೊಳ್ ।
ಕೇಂದಾವರೆ ಯೆಸಳ್ಗಳೊಡನೆ ಪರವುತ್ತದರೊಳ್ ॥
ಚಂದಿರ ವದನೆಯುರಂತರ ।
ತಂದಿಡಲದು ಕರುಕು ವಡೆದುದಂತಾಕ್ಷಣವೊಳ್ ॥೮೧॥

ವೀಜನದೆಲರಿಂದಂತದು ।
ಮಾಜದೆ ದ್ವೈಗುಣ್ಯಮಾಗೆ ಮಿತ್ರನ ಯೋಗಂ ॥
ಮಾಜಿಪುದೆ ವೃದ್ಧಿ ಕಾರಣ ।
ನೈಜಂ ತರುಣಿಯುರ ವಿರಹ ವೈಶ್ವಾನರಗಂ ।೮೨॥

ಚಂದನಮಂ ಕರ್ಪುರದೊಳ್ ।
ಸಂಧಿಸಿ ಪನ್ನೀರೊಳರೆದು ಲೇಪಿಸಲುರದೊಳ್ ॥
ಕುಂದರದನೆಯುರ ತಾಪವ ।
ನಂದಿಸದದು ಬೆಟ್ಟಿತಾದುದಂತಾಕ್ಷಣದೋಳ್ ॥೮೩॥

ಸೋಮಶೇಖರ[ನ] ಬಂಧುರ ।
ನಾಮದ ಮಂತ್ರಗಳ ನುಚ್ಚರಿಸಲಾ ಪದದೊಳ್ ॥
ಕಾಮಗ್ರಹ ಪರಿಪಟ್ಟೊಡ ।
ನಾಮಹಿಳಾ ಮಣಿಗಳೊಡನೆ ಕಣ್ದೆರೆದೆದ್ದರ್ ॥೮೪॥

ಎಲೆಲೆ ನೃಪ ತಿಲಕ ನೆಲ್ಲಿಹ ।
ನೆಲೆ ಮಾನಿನಿ! ತಂದು ತೋರೆ ತೋರಲ್ಕಿನಗಂ ॥
ಬೆಲೆಯಿಲ್ಲದ ಪದಕಮುಮಂ ।
ವಿಲಸಿತದುಡುಗೊರೆಯುನಿತ್ತು ಮನ್ನಿಪೆವೆಂದರ್ ॥೮೫॥

**ಚಂಪಕ**॥

ಅಳಿಗಿಳಿ ಕೋಕಿಲಂಗಳಿರ! ಕೋಕ ಚಕೋರ ಮರಾಳಿ ಕಾದಿಸಂ।
ಕುಳವೆ! ವಿನೀಲ ಕೈರವವೆ! ಕೋಮಲ ಪದ್ಮವೆ! ಮಲ್ಲಿಕಾಲತಾ ॥
ವಿಳಸಿತ ವೇಷ್ಟನ ಪ್ರಜೆಯ ಬಂಧುರ ಚೂತ ಕುಜಾತ ಜಾಲಮೇ! ।
ಘಳಿಲನೆ ಸೋಮ ಶೇಖರ ನೃಪಾಲನ ಕಂಡಿಕೆ ಪೇಳ ಬೇಗದಿಂ ॥೮೬॥

ಕಂದ॥

ಅಳಲಿಸುವರೆ ಬಳಲಿಸುವಿರೆ।
ಘಳಿಲನೆ ನೃಪವರನ ತಂದು ತೋರದೆಯಿವೊರ್ಳ್॥
ಮುನಿಸಾಯ್ತೆ ನಿಮಗವೀಗಳ್।
ತೊಲಗಿಸದಿರಿ ಕರುಣವಿಲ್ಲವೇ? ಸಖಿಯರಿರಾ ॥೮೭॥
ಕನಸಿನೊಳಂ ಮನಸಿನೊಳಂ।
ಜನಪತಿಯುಂ ನೆನೆದು ಕದುಪಿ ಕಾತರಿಸುತ್ತಂ॥
ವನಿತಾ ಕುಲ ತಿಲಕೆಯರಾ।
ತನಸಾಮೋಚ್ಚರಣ ಮಂತ್ರಮಂ ಜಪಿಸಿದರ್ಗರ್ ॥೮೮॥

ಉತ್ಪಲ॥

ಕತ್ತುರಿಯಿಟ್ಟು ಕಂಠದೆಡೆಯೊಳ್ ನವಚಂಪಕ ದಿವ್ಯಧಾಮಮಂ।
ಸುತ್ತಿ ನಖಾಗ್ರದಿಂ ಸರಿದ ನೀಲವಿಭಾಸುರ ಕುಂತಳಂಗಳಂ॥
ಬಿತ್ತಿ ಸಿಣಿಲ್ದು ಪೂಸಿ ಪುಣುಗಂ ಕಡುಸೂಕ್ಷ್ಮದ ರೋಮರಾಜಿಯೊಳ್।
ಚಿತ್ತಜ ತಾಪಮಂ ಕಳೆವರೆಂದೊಡೆ ಕಾಂತೆಯರೇಂ ವಿಚಿತ್ರಮೋ! ॥೮೯॥

ಕಂದ॥

ಮೀನಾಕ್ಷಿ ಪೋಗಿಯುಸಿರ್ದಳ್।
ಮಾನಿತ ಶುಭಲಕ್ಷಣಂಗಳಿಂ ಚೆಲ್ವಿಕೆಯಿಂ॥
ಮೇನಕೆ ರಂಭೆಯದಲ್ಲದೆ।
ಮಾನಿಸರಲ್ಲಿವರೆ ದೇವಿಯರ್ ನೃಪತಿಲಕಾ! ॥೯೦॥
ಬೆರಳುಗಳುಂಪುರ್ಬುಗಳುಂ।
ವರ ಪದಯುಗಮುಂ ಕರ್ಣಯುಗ್ಮಮುಂ ನಡುಕಂಠಂ।
ನೆರೆಸಣ್ಣ ಮಾದುದಾರಂ [ರುಂ]।
ತರುಣೀ ಮಣಿಯರ್ಗೆ ನೋಡಲತಿ ಬಂಧುರಮಂ ॥೯೧॥
ದಂತನಖಗುಹ್ಯ ಮಧರಂ।
ಕಾಂತಿಯುತಂ ಕದಪು ಬಸಿರೊಳಂತೆಳ್ಪೆ[ಸ]ಗುಂ।
ಕಾಂತೆಯರೊಳೇ[ದೊ]ಡಿನ್ನದ।
ನೆಂತೆಂದುಸಿರಲ್ಕೆ ಯೆನಗೆ ಬಂದಪುದೆಲ್ಲಂ? ॥೯೨॥
ರಚಿಸಿದ ಕೇಶದ ಬಂಧಂ।
ಕುಚಯುಗ್ಮಂ ನೇತ್ರಬಾಹು ನಾಸಿಕ ತೊಡೆಗಳ್।

ವಿಚಕಿಲ ಕುಟ್ಮಲದಂತ[ದ] ।
ಸುಚರಿತೆಯರೊಳಂತೆ ವಾರು ದೊಡ್ಡಿತು ನೋಡಲ್ ||೯೩||
  ಲಕ್ಷಣಗಳಿಲ್ಲ ಶುಭವಂ ।
ಈಕ್ಷಿಸಲಳವಲ್ಲ ರೂಪಿ ನತಿಶಯದಿರವಂ ।
ಈಕ್ಷಣ ಸಹಸ್ರ ಮು[ಳ್ಳವ] ।
ಪಕ್ಷ್ಮಸ್ಪಂದನವ ಮರೆತು ನೋಡಿವ ನಿವರಂ ||೯೪||
  ಶಂಬರರಿಪು ವಲತಿಗೆಯೊಳ್ ।
ಚೆಂಬೊನ್ನ ನಸಿಯುಲಿಕ್ಕಿ ರಚಿಸಿದ ನದರಿಂ ।
ಬಿಂಬಫಲಾಧರೆಯರ್ಕಳ್ ।
ಕೆಂಬಚ್ಚೆಗೆ ಕಠಿನಕೂರ್ಮಗಳ್ಪಡಿಯುದುವೇ? ||೯೫||
  ಬೆರಲ್ಗಳ್ಮದನನ ಸರಳ್ಗಳ್ ।
ಶರಧಿಗಳೆನೆ ಜಂಘೆಯೊಪ್ಪುಗುಂ ತರುಣಿಯರೊಳ್ ।
ಮಿರುಗುವ ರಂಭಾಸ್ತಂಭಗ ।
ಳಿರವಂ ಕೈಕೊಂಡು ಮೆರೆದುವೂರುಯುಗಂಗಳ್ ||೯೬||
  ಮದನ ನೃಪಾಲನೇಹದೊ ।
ಳೊದವಿದ ಕಂಭಗಳೊಳಿಟ್ಟ ನಿಗಡಗಳಂತೀ ।
ಮದವತಿಯರ ಜಘನಯುಗಂ ।
ಪುದವುಂ ಕಣ್ಣೀವುದೆಂಬೆ ಪಡಿಯಿಡಲರಿಯೆಂ ||೯೭||
  ಲಾವಣ್ಯ[ರ] ಸಾವೃತದಿಂ ।
ತೀವಿದ ಕಾಸಾರ ಮಾಡುದಂಗಜನ[ದ]ರೊಳ್ ।
ಪ್ಲಾವನ ವಿಧಿಯುಂ ತೀರ್ಚುವ ।
ನೇವೇಳ್ವೆಂ ನಾಭಿಯುಂಡವುಂ ಸುದತಿಯರಾ ||೯೮||
  ನಿಬಿಡ ಕುಚಾದ್ರಿಯು ಪೊರೆಯಂ ।
ಕಬರೀ ಗುರುತರದ ಭಾರವುಂ ಧರಿಸಿರ್ದೀ ।
ಕಬಲೆಯರ ಕಟಿಗೆ ಕೃಶತೆಯು ।
ಮಬಲತ್ವಂ ಬಂದುದಲ್ಲದಿನ್ನೇಣೆಯುಂಟೇ? ||೯೯||
  ಕುಟ್ಮಲಿತ ಕುಹಳಿ(?)ಯಂತಿರೆ ।
ಹೆಟ್ಟುಗೆಯರ ತೆಳ್ಪುವಡೆದ ಜಠರದ ಪರಿಯಂ ।

ಸಿಟ್ಟಿಸೆ ಸದ್ಯ್ಯತವಿವರೊಳ್ ।
ಘಟ್ಟಿಸಿತಿಲ್ಲಜನು ದೇವ ಶಾಂತಿಯೂರೊಳಗಂ ॥೧೦೦॥
ಕುಂಭಕುಚಯುಗ್ರವೊಳ್ಗಿರೆ ।
ದುಂಬಿಸಿದ ಯುವ್ವನ ಸುರತ್ನವುಂ ಪೂಣ್ದ ಜನಿ ।
ದರ್ಂಭಪಿ ಕಾಯುಲ್ಕಿಟ್ಟ ವಿ ।
ಜೃಂಭಿತ ಕಾಳಾಹಿಯಂತೆ [ಬಡಬಾಸೆ]ಯುವುಂ ॥೧೦೧॥
ಮದನನರಮನೆಯ ಸೌಧಾ ।
ಗ್ರದ ಹೇಮದ ಜೋಡು ಕಲಶದಿರವಂ ಪಡೆದೀ ।
ಸುದತಿಯ ಕುಚಯುಗಂಗಳ್ ।
ಒದವಿಪುವತಿ ಮೋಹಪರಕವುಂ ಪದಪಿಂದಂ ॥೧೦೨॥
ಪಂಚಫಣಾಹಿಗಳಂತೆ ವಿ ।
ರಿಂಚಿಯ ವರ ಬಾಹುಯುಗ್ಮವುಂ ರಚಿಸಲೊಡಂ ।
ಕಾಂಚನವಲ್ಲರಿ ಸದೃಶವೆ ।
ಪಂಚಶರ[ಂ]ಪಿಡಿವ ಪಾಶವೆ[ನ್ನ]ದರೊಳರೇ ॥೧೦೩॥
ಅಂಬರಾಲಕನ ರಾಣಿಯ ।
ರೆಂಬಂತಿರದೆಸೆವವಸಿ[ತ್ತೆ]ಯುಕ್ಕ್ಗಳ ಕಂಠ॥
ಕ್ಕೆಂಬರೆ ಹರಿ[ಸೇವಿಸಿದೀ] ।
ಕಂಬುವ(?) ಮನಸಿಜನ ಶಯ್ಯಾಕಂಠಗಳೆಂಬೆಂ ॥೧೦೪॥
ನಿಶಿತ ಮತಿಗಳ ಮುಖಾಬ್ಜಕೆ ।
ಶಶಿಯುಂ ಪಡಿಯಿಡಲದೇಕೆ ವೈರಿಯನದರಿಂ ।
ಕುಶಜ ಶರ ನೋಳ್ಪ ರತ್ನದ ।
ವಿಶದ[ಂ] ಪಡೆದಿರ್ದ ದರ್ಪ[ಣ]ಂಗಳಿವೆಂಬೆಂ ॥೧೦೫॥

ಭಾವಿನಿ॥

ಕುಂದಕುಟ್ಮಲ ರದನ ವಿದ್ರುಮ ।
ದಂದವಡೆದಧರಗಳ ಮಣಿ ಮುಕು ।
ರಂದಲೊಪ್ಪುವ ಕದಪುಗಳ ತಿಲಕುಸುಮನಾಸಿಕದ ॥
ಅಂದವೆತ್ತ ಕುರಂಗ ನೇತ್ರದ ।
ಬಂಧುರದ ಭ್ರೂಮದನ ಚಾಪದ ।
ಕುಂದದೊಪ್ಪುವ ಪೆರೆನೊಸಲ ನೀಲಾಹಿಕುಂತಳದ ॥೧೦೬॥

ಚಂದನದೊಳಿಡೆ ಪೆರೆವ ಮೆಯ್ಯ ಸು।
ಗಂಧವದನದ ವೀಟಿ ಕಾದಿಯ।
ಗಂಧ ಕೊಲ್ತೆರ ಪಳಿಯೆ ಪೀಲಯ ತಳಿಯೊಲಿಸಿದಿಪುದು॥
ಮಂದ ಮದಗಜ ಗಮನೆಯರ ಗಣ।
ವೃಂದ ರಾಜಿತ ಚಾರು ಚರಿತೆಯ।
ರಂದವನು ನುತಿಸಲ್ಕೆ ಫಣಿಪತಿಗಲ್ಲದೆನ್ನಳವೇ? ॥೧೦೭॥
ಘನ ನಿತಂಬಗಳಡಿರೆ ಪೀನ।
ಸ್ತನ ತಟದ ಹಾರಗಳೊಲೆಯೆ ನೆರೆ।
ಜನಿಸಿ ಮೊಗದೊಳು ಘರ್ಮಬಿಂದುಗಳಿಸೆಯಲ್ಕೆತಂದು॥
ಮನಸಿಜನ ಕೇತನದ ನಯನವ
ವನಿತೆ ಪೇಳ್ವವಸರದೊಳಂಗಜ।
ಜನಿಯಿಸಿದ ನೃಪ ವರನ ಚಿತ್ತದೊಳಂ ವಿಮೋಹನವ॥೧೦೮॥
ಮತ್ತೇಭ॥
ಪಿರಿದಾಳೋಚಿಸಿ ಚಿಂತಿಸುತ್ತೆ ಮನದೊಳ್ತ ದ್ವಿಸ್ತರ[ಂ]ತಾಳ್ದುಕಾ।
ತರಿಸುತ್ತಂ ವಿರಹೋತ್ಥ ವೇದನ ಭರಂ ಕೈಗಣ್ಮೆ ಸಂತಾಪದಿಂ।
ಮರೆದಾಹಾರಮುಮಂ ನಿರಂತರತ ದೀರ್ಘೋಚ್ಛ್ವಾಸಮಂ ಮೌನಮಂ।
ಧರಿಸಿರ್ದಂ ವರಸೋಮಶೇಖರ ನೃಪಂ ಸಂಕ್ರಾಂತ ಸಮ್ಮೂರ್ಛೆಯಿಂ
॥೧೦೯॥
ಉತ್ಪಲ॥
ಒರ್ಮೆ ಲತಾಗೃಹಂಗಳೊಳಗೊರ್ಮೆ ಸುಶೀತಳವಾರಿ ಕೇಳಿಯಿಂ।
ದೊರ್ಮೆ ಸುಮಪ್ರತಾನಕೃತ ಶಯ್ಯೆಗಳಿಂ ಮೃದುಪಲ್ಲವಂಗಳಿಂ।
ದೊರ್ಮೆ ಪಯಃಕಣ ಪ್ರಚಯ ಸೇಚನವಲ್ಲಿಯ[ಮಂ]ಟಪಂಗಳಿಂ।
ದೊರ್ಮೆ ನೃಪಾಲಕಂ ವಿರಹಮಂ ನೆರೆತೀರ್ಚಿದ ನಿಂತು ಸಂತತಂ
॥೧೧೦॥
ಚೆಂದಿರನೈದೆ ಬಂದು ಬಿಸಿಲಂ ನೆರೆಬೀರುವನೆಂತುಮಾನ್ನೃಪಂ।
ಗೊಂದಿದ ಬಾಹುರಾಹುಯುಗಳಂಗಳಿರಲ್ಕವ ಮಂದಮಾರುತಂ।
ಬಂದಪುದಿಲ್ಲಿ ಭೃಂಗ ಶುಕ ಕೋಕಿಲಮುಂ ನವಪುಷ್ಪರಾಗಸಂ।
ಬಂಧಿಕದುಂಗುರಕ್ಕಗಿದು ಚಂಪಕನಾಸಿಕದೊಂದು ಭೀತಿಯಿಂ ॥೧೧೧॥

ಕಂದ॥

ಕರಿಗೊರಲನ ನಾಮಮಪೊಂ।
ಒರೆ ನೃಪನಂ ಕೃಪನ[ದ]ಂತು ಭಾಧಿಪನಿವನಂ॥
ಎರೆಯಂಗಾರದುಪೆ ಮಗಂ।
ಸ್ವರಿಸಲ್ಕವಿಲ್ಲಪಳಿದುದಂತಾ ಬಳಗಂ॥೧೧೩॥

ಮತ್ತೇಭ॥

ಪಿರಿದಂ ಚಿಂತಿಸುತಾನೃಪಂ ಪುರಮುಮಂ ಸ್ವಾತ್ಮೀಯ ಸೌಧಂಗಳಂ।
ವರರತ್ನ ಪ್ರಕರಂಗಳಿಂ ನವರಸ ಪ್ರಸ್ಯಂದಿ ಚಿತ್ರಂಗಳಿಂ।
ಪರಮಶ್ರೀಯುತ ಗೋಪುರ ಧ್ವಜಗಳಿಂ ದೇದೀಪ್ಯಮಾನಪ್ರಭಾ।
ಸುರ ಕಾರ್ತಸ್ವರ ಕೋಟಿ ಸತ್ಕಲಶದಿಂ ಕೈಗೈಸಿದಂ ಭೂವರಂ॥೧೧೪॥
ನವವಸ್ತ್ರಾಂಚಿಕ ದಿವ್ಯ ತೋರಣಗಳಿಂ ಕಂಕೇಳಿಮಾಕಂದ ಸಂ।
ಭವ ಸತ್ಕೋಮಲ ಶೋಣಪಲ್ಲವಲತಾ ಸಂಕ್ರಾಂತ ಸತ್ಕೇತುವಿಂ।
ಪವಣಲ್ಲಿಂದೆನಲೊಪ್ಪುತಿರ್ಪ ನವಮುಕ್ತಾ ಜಾಲಿ[ಜಾಲ]ಂಗಳಿಂ।
ದಿವಮಂ ಚುಂಬಿಸುತಿರ್ಪ ಹೇಮಕಲಶ ವ್ರಾತಂಗಳಿಂ ರಂಜಿಕುಂ॥೧೧೫॥

ಚೂರ್ಣಿಕೆ॥

ಅಂತು ಚತುರ್ಗೋಪುರ ದ್ವಾರಾಗ್ರಿಮ ಪ್ರದೇಶ ಸಂಕ್ರಾಂತ ಕರ್ಕೇ
ತನ ದಂಡ ಪರಿಮಂಡಿತ ದೋಧೂಯಮಾನಕೇತು ಪತಾಕ ಹಸ್ತ
ಸಮಾಹೂತ ಸಮಸ್ತ ವಿಬುಧವಂದಿವೃಂದ ವೃಂದಾರಕ ಜೇಗೀಯ
ಮಾನ ಕೀರ್ತನಾರಾವ ವಿಸ್ತೃತ ಶಬ್ದಾದ್ವೈತ ಪ್ರಪಂಚಮುಂ। ಸೋಮ
ಸೂರ್ಯ ವೀಥಿಕಾ ಮಧ್ಯವಿರಚಿತ ವಿಚಿತ್ರತರ ಮೇರು-ಶಿಖರ ಸಂಲಗ್ನ
ಚಕಚಕಾಯಮಾನ ಶೋಣರತ್ನಮಯ ಕಲಶಭಾಸುರ ಗಭಸ್ತಿ ಚೋ
ಚುಂಬ್ಯಮಾನ ನಾಕಿನಿಲಯಮುಂ। ಮಂತ್ರಿ ಮಾಂಡಲಿಕ ಸಾಮಂತ
ಸಂದೋಹ ದಂಡಾಕ್ಷ ಪ್ರಭೃತಿ ನಾನಾಗೇಹ ಸಂಬಂಧ ಕಿಂಕಿಣೀಕ್ವಣ
ಪರಿರಂಜಿತ ನಿರಂತರಿತ ಮುಕ್ತಾರಾಮವಿಲಂಬಿತ ಮದನ ಮಾಲಾ
ಪ್ರಚಯ ಶೋಭಿತಮುಂ। ಪೂಗ ಪುನ್ನಾಗ ಕದಳೀ ಮಂಡಿತ ಸಮಸ್ತ
ಫಲಪಲ್ಲವ ಪ್ರಕಾರ ಬಂಧುರಮುಂ। ಕಪೋತ ಪಾಲಿಕಾ ವಿಶಾಲಜಾಲ
ನೀಯಮಾನ ದಿವ್ಯಾಗರು ಪಿಂಡ ಧೂಪಧೂಮ ಲೇಖಾಪಟಲ ಪರಿನ
ರ್ತಿತ ಕೇಕಿ ತಾಂಡವಾಡಂಬರಮುಂ। ಕುಂದಾರವಿಂದ ಕೈರವ ಮಲ್ಲಿ

ಕಾದಿ ನಿಖಿಲ ಪುಷ್ಪಕದಂಬ ಸೌರಭ ಸಮಾಕೃಷ್ಟ ಷಟ್ಪಂಘಯು ಪ್ರಚು ರತರ ಸಾಂದ್ರಮಂದ್ರಧ್ವಾನ ಸಂಗೀತೋಪೇತಮುಂ। ಕುಂಕುಮ ಕರ್ಪೂ[ರ] ಚಂದನ ಕಸ್ತೂರಿಕಾದಿ ಪರಿಮಳದ್ರವ್ಯ ಪರಿಕಲಿತ ವಾರಿಧಾರಾ ಪ್ರಪೂರ ಪರಿಷಿಕ್ತ ವೀಧಿಕಾರಮ್ಯ ಪ್ರದೇಶಮುಂ। ಪರಿಗೃಹೀತನವನವ ವಸ್ತ್ರೂಪಿಕಾ ವ್ಯಾಸ ವೃತ್ತಾಕಾರ ಭಾಭಾಸ್ವಮಾನ ಪುಂಜೀಕೃತನೂತ್ನ ನವರತ್ನರುಚಿರ ರುಚಿತಮೇಚಕಿತ ಪುಷ್ಪಮಾಲಯುಮುಮೆನಿಸಿ ಮೆರೆವ ರಾಜಧಾನಿಯ ಮಧ್ಯದೊಳೊಪ್ಪುವೆತ್ತ ರಾಜಮಂದಿರಮುಂ। ನೀಲರತ್ನ ವಿನಿರ್ಮಿತ ವಿಸ್ತೀರ್ಣ ವಿಶ್ವಂ(ಭ)ರಾತಲ ಪಿಕೀರ್ಣಮಕರಂದ ಕಂಜ ಕಿಂಜಲ್ಕಪರಾಗ ಪುಂಜಶೋಣಿತ ಸಕಲ ಪ್ರದೇಶಮುಂ। ಹೀರ ತಾರ ತುಷಾರ ಪಟೀರ ತಾರಕಾಪ್ರಸರ ವಿಶದ ಗೌರಮರೀಚಿ ಸಂಚಯ ಸಮೇತ ಸ್ಫಟಿಕ ಶಿಲಾಸ್ತಂಭ ಸಂಭೃತ ಹಾಟಕ ಪಟ್ಟಿಕೋಭಯ ಪಾರ್ಶ್ವ ಸಂಲಗ್ನ ಸ್ವಚ್ಛ ಮೌಕ್ತಿಕಾದಿ ಗುಚ್ಛಪರಿಶೋಭಿತಮುಂ। ವಿಚಿತ್ರಕರಚಿತ್ರ ಚಿತ್ರಿತ ರಸೋಚಿತ ಭಾವಚಿತ್ರ ವಿಶ್ಲಿಷ್ಟಚತುರಶೀತಿ ಬಂಧಬಂಧುರ ಪ್ರಬಂಧ ಸಂದೋಹ ಸಂಬಂಧದ್ಯೋತಿಕ ಕಾಂತ ಚಂದ್ರಕಾಂತೋಪಲೈಡೂಕ ಭಾಗ ವಿಭ್ರಾಜಿತಮುಂ। ಕುಂದಮಂದಾರಕಲ್ಹಾರ ವೃಂದ ಪರಿಕಲ್ಪಿತ ಮಾಲ್ಯ ಸಂಕುಲಾಕೀರ್ಣ ಕರ್ಕೇತನ ದ್ವಾರ ತೋರಣೋಭಯತಟ ಘಟಿತಘಂಟಾ ಜಾಲಪಟುತರ ಕಟುರಟನ ನಿವೇದಿತ ಘಟಿಕಾದಿ ಸಂಖ್ಯಾವಿಭಾಗಭಾಸುರಮುಂ। ಕರಿತುರಗ ವರೂಥ ಪಂಚಾನನ ಪ್ರಮುಖವಿದ್ಧ ಸಂಬದ್ಧ ವಜ್ರ ವೈಡೂರ್ಯಕೃತ್ತ ಮತ್ತವಾರಣೋಪಲಾಲಿತಮುಂ। ವಿಶಾಲಸಾಲ ಭಂಜಿಕಾ ಪಂಚಶಾಖ ವಿಧೃತಕಲಧೌತ ವಿದ್ರುತಪಾತ್ರ ಪರಿಪೂರ್ಣನೀರಾಜನಾದಿ ದ್ರವ್ಯರಾಜಿತಮುಂ। ಮಾಣಿಕ್ಯ ರತ್ನಖಚಿತ ದೀಪಿಕಾಪ್ರಕರಸಂದರ್ಶಿತನೂತನವಿಶೇಷ ರಚನಾ ಕೃತ್ಯಮುಂ। ಸಂಚೂರ್ಣಿ(ತ) ಪಂಚರತ್ನ ಸಂವಾಸಿತ ನವರಚನಾ ವಿಶೇಷ ಪರಂಪರಾ ಪರಿಸ್ಫುರಿತ ರಂಗವಲ್ಲ್ಯುಪಶೋಭಿತ ಚತ್ವರಾಭಿರಾಮಮುಂ। ಇಂತತ್ಯಂತ ಸೌಂದರ್ಯಂ ಬಡೆದೊಪ್ಪುವೆತ್ತ ರಾಜ್ಯಗೃಹಾಭ್ಯಂತರದೊಳು ಧರ್ಮನಿರ್ಮಿತ ಷೋಡಶ+ಸ್ತಂಭ ಸಂಲಗ್ನ ಪಟ್ಟಿಕಾಚತುಷ್ಟಯೋಪರಿ ವಿರಾಜಮಾನ ಸಹಸ್ರದಳ ಕಮಲ ಪರಿರಂಜಿತ ಹೀರಾಶ್ಮಕೂಟ ಕೋಟೀರ ಕೋಟಿ ಪರಿಘಟ್ಟಿತ ಪದಾರ್ಥ ಪದ್ಮರಾಗ ಕಲಶವಿಹಸಿತ ವಿಸಂಕಟ ವಿತರ್ಕನ ಸಮಗ್ರ ಮಂಡಲಮುಂ—

ಮ॥ ಸ್ರ॥

ಶುಭತಾರಾಯೋಗದಿಂದಂ ನೃಪತುಲತಿಲಕಂ ಮಾನ್ಯವಿಪ್ರೋ
[ಪ]ನ್ಯೈದಲ್ ।
ನವಮಂ ಕಸ್ತೂರಿಕಾದಿ ಪ್ರಮುಖ ಪರಿಮಳದ್ರವ್ಯ ಸಮ್ಮಿಶ್ರ ಗಂಗಾ।
ಪ್ರಭೃತಿ ಪ್ರಖ್ಯಾತ ತೀರ್ಥಂಗಳೊಳನುಪಮದಿಂ ಮಜ್ಜನಂಗೈದು ಕೈಸ್ಯೆ।
[ವಧಿನೀತಂ] ಕಾಮದೇವಂ ಜಗದೊಳೆನೆ ಪೆಸರ್ವೆತ್ತು ತಾನೊಪ್ಪುತಿರ್ದಂ। ॥೧೧೫॥

ಪದಕಂಮಂಜೀರಕಂಕುಂಡಲಕಟಕಯುಗಂತಾರಹಾರಂಕಿರೀಟಂ
ಪಿ[ಛಿ]ದುರಾದ್ಯುತ್ಕೃಷ್ಟ ರತ್ನಗ್ರಥಿತ ವರಮಹಾಬಾಹು ಪೂರಂಗಳಿಂ ಸಂ।
ಪದಮಂ ಕರ್ಣೀವ ನಾನಾಮಣಿ ವಿರಚಿತ ಸದ್ಭೂಷಣಂ ತತ್ತದಂಗಾ।
ಸ್ಪದದಿಂದೊಪ್ಪಿತ್ತು ತಾನೆಂಬೆನೆ ನೃಪವರನಂ ಬಣ್ಣಿಪಲ್ಲಿನಾಮಂ ॥೧೧೬॥

ಕಂದ॥

ವನಿತಾಕುಲತಿಲಕೆಯ[ರಂ
[ಅ]ನುನಯದಿಂ ಮ[ಜ್ಜ]ನ[ಂಗ]ಳೆಸಗಿದ ಬಳಿಕಂ।
ಕನಕಮಣಿ ಭೂಷಣಾಳಿಂ ।
ಘನತರವೆನೆ ಸಿಂಗರಿಸಿದರತ್ಯುತ್ಸವದಿಂ ॥೧೧೭॥

ವಾರ್ಧಿಕ॥

ಕ್ಷೋಣೀಶ್ವರಂ ಮಂಟಪಾಲಯಕೆ ಬಂದು ವರ।
ಏಣಲೋಚನದ ಕಾಂತಾಮಣಿಗಳಸ್ವರಂ ।
ಪಾಣಿಗ್ರಹಂ ಬೆತ್ತು ಶುಭಮುಹೂರ್ತದೊಳು ಕಲ್ಯಾಣ ಮಂಟಪದಿ
ಕುಳಿತು ।
ರಾಣಿಯರು ಸಹಿತಿಲ್ಲಿ ಧವಲ ಶೋಭನಗಳಂ ।
ಜಾಣತದಿಂ ಕೇಳಿ ಪರಕೆಯಂ ಕೈಕೊಂಡು ।
ಮಾಣಿಕ್ಯದಾರತಿಯ ನೆತ್ತಿ ಸೇಸೆಯು ತಳಿದು ಯಿರುತಿರಲ್ಕನಿತರೊಳಗೆ
॥೧೧೮॥

ವಚನ॥

ತದನಂತರಂ ಸಮಸ್ತ ಮಂತ್ರಿ ಮಾಂಡಲಿಕ ಪ್ರಭೃತಿ ವಿಪ್ರವಂದಿ ನಾನಾ ನಾಡಜನರೆಲ್ಲಂ ವಿಚಿತ್ರ ತರವಸ್ತು ವಾಹಂಗಳಂಜೀನೀ ಜೀನಾಂಬರ ವಸ್ತ್ರಂಗಳ ಮುಡುಗೊರೆಯಿತ್ತು ಮನ್ನಿಸಿ ಭೂರಿದಾನ ಭೋಜ

ನಾದಿ ವಿಧಿಯಿಂ ತೀರ್ಥ ಗಂಧ ಮಾಲ್ಯಾದಿ ಕರ್ಪೂರ ವೀಳ್ಯಂಗಳನಿತ್ತು ಮನ್ನಿಸಿ ಚತುರ್ಥ ದಿವಸದಲ್ಲಿ ನಾಗವಲ್ಲೀ ವಿಧಾನಮಂ ನಿರ್ವರ್ತಿಸಿ ಸುಖಸಂಭಾಷಾ ವಿನೋದದಿಂ ರಾಜ್ಯಮಂ ಪ್ರತಿಪಾಲನಂ ಮಾಡುತ್ತಿರಲು, ಆ ಸಮಯದೊಳ್ಚೆನ್ನಮ್ಮಾಜಿಯವರು ಪುಷ್ಪಿತೆಯಾಗಿ ಚತುರ್ಥ ಸ್ನಾನಾನಂತರಂ ಕೈಗೆಯ್ದು ಪತಿಯು ಸೊಳ್ಗ್ರದಿ ಮದನ ಕೇಳೀ ವಿಲೋಲರಾಗಿದುಂ ಗರ್ಭೋತ್ಪತ್ತಿಯಾಗಿ ನವಮಾಸ ದಂತ್ಯದೊಳ್ಸತ್ಪುತ್ರನಂ ಶುಭ ಮುಹೂರ್ತದಿಂ ಪಡೆದು ಬಾಲ ಕೇಳೀ ವಿನೋದಮಂ ಲಾಲಿಸಿ ವೀರಭದ್ರ ನಾಯಕರೆಂಬ ಪೆಸರಿಂ ಕರೆದು ಸುಖದಿಂದಿರುತ್ತಿರಲು, ಅಂತಾ ವೀರಭದ್ರ ನಾಯಕರು ಶೈಶವವ ಪಿಂತಿಟ್ಟು ಸಕಲ ವಿದ್ಯಾ ಪ್ರವೀಣರಾಗಿ ಷೋಡಶ ಪ್ರಾಯ ಭರಿತರಾಗಿ ಸುಖದಿಂದಿರಲನಂತರಂ ನಿಜಪತಿಯು ಸಾಳ್ಗೆಂದು ರತಿಸುಖ ಸಮುದ್ರದೊಳೋಲಾಡಿ ನಿದ್ರಾ ಮುದ್ರಿತೆ ಯಾಗಿ ಯಾಮ ತ್ರಯ ವಿರಾಮದೊಳ್ ಶುಭ ಸ್ವಪ್ನದಿಂದೆಚ್ಚೆತ್ತು ನಿತ್ಯ ನೈಮಿತ್ತಿಕಾದಿ ಕ್ರಿಯೆಯಂ ತೀರ್ಚಿಪಿನ ಮಾಸ ಮಯದೊಳ್ಗರ್ಭಚಿಹ್ನಂ ತಲೆದೋರಿ ನವಮಾಸಾಂತ್ಯದೊಳ್ಸುಪುತ್ರಿಯಂ ಪಡೆದು, ವೀರಮ್ಮಾಜಿಯರೆಂದು ಪೆಸರಿಟ್ಟು ಸಲಹುತ್ತಂ, ತದನಂತರದೊಳ್ದ್ವಿತಿಯ ಕುಮಾರಿಚನ್ನಮ್ಮಾಜಿಯಂ ಪಡೆದು ಸುಖದಿಂದಿರುತಿರಲುಮಾಸಮಯದಲ್ಲಿ ನೀಲಾಂಬೆಯು ಪುತ್ರವಾತ್ಸಲ್ಯದಿಂ ಚಿಂತಿಸಿದಳದೆಂತೆನೆ ॥೧೨೦॥

**ಕಂದ॥**

ನಂದನ ಮಧು ಮಾಕಂದನ।
ವೃಂದಾರಕ ವೃಂದ ವಂದ್ಯ ಶಿವವಿನುತಿ ಸಮಾ॥
ನಂದಿತ ಗುಣಮಣಿಭೂಷಣ।
ನೆಂದಾದಪನೆಂದು ಕಾಂತೆ ಚಿಂತಿಸುತಿರ್ದಳ್ ॥೧೨೧॥

ಕಂದ ಕುಂದಿದಳು ನೆರೆಸಿ।
ಕ್ಲೊಂದಿದಳ್ ತರುಣಿನೀಲಾಂಬಿಕೆಯುಂ॥
ತೆಂದು ನುಡಿನುಡಿಯೋ ಸಖಿಯರ್।
ಬಂದಂ ತಾಂ ನೃಪತಿ ಸೋಮಶೇಖರನಾಗಳ್ ॥೧೨೨॥

ಇಂದಿಂತು ಚಿಂ ಸಲ್ಲಿಸ
ದಿಂದಂ ಭೂಪಾಲರತ್ನ ಕೇಳದ ನೊಲವಿಂ॥
ಕುಂದಂದದ್ಯುತಿ ಪಸರಿಸ।
ಲಿಂದೀವರ ನೇತ್ರೆ ಪಾಸನವಂ ಕೈಕೊಂಡಳ್ ॥೧೨೩॥

ಪುತ್ರ [ನ] ದೋಹಳವೆಂಬುದು।
ಗಾತ್ರವು ನಾಮಾಂಕಿತೆಂದು ಪ್ರೈಕ್ಯಕ್ರಿಯೆಯಿಂ॥
ಕ್ಷಾತ್ರ ಶಿಖಾಮಣಿ ವರ್ತಿಸ।
ಸುತ್ತಿಸಿದಳ್ಕನದ ಪರಿಯ ನಿಜವಲ್ಲಭನೊಳ್ ॥೧೨೪॥

ವ್ಯಾದು ಮಧುರ ವಚನರಚನೆಯು।
ಚಪರಿಂಪಂ ಸುನತಿಯಿಂತೆ ಚಿಂತಿಸಲೇಕಿಂ॥
ತಿದು ಪೂರ್ವ ಸುಕೃತದಿಂದ।
ಪ್ಪುದು ತಾನೆಂದಿಂತು ನುಡಿದು ಮನ್ನಿಸಿ ಬಳಿಕಂ ॥೧೨೫॥

ಮತ್ತೇಭ॥

ಪರಮೋತ್ಸಾಹಪರಂ ಪರಾಸ್ಪದ ಮೆನಿಪ್ಪೀಕ್ಷಾತ್ರಸಂ ತಾನಮಂ।
ಹರಪುತ್ರಂ ವರವೀರಭದ್ರ ನೊಲಿದೀವಂ ತಾನೆಕಾರುಣ್ಯದಿಂ।
ಚರಣಸ್ವಂಸ್ವವ ಪೂಜೆಗೈವೆವೆನುತಂ ತತ್ಪೂಜನಾದ್ರವ್ಯಮುಂ॥
ಬೆರಸೈಸೂಂಗೆ ಪೋಗಿ ಪೂಜಿಸಿದರಂತಾ ರಾಜನುಂ ರಾಜ್ಞಿಯುಂ ॥೧೨೬॥

ಕಂದ॥

ಕೆಂಡದೊಳರ್ಚನೆಯುಮನು।
ದ್ದಂಡರ್ಾವೆಸಗಿ ಬಳಿಕ ದೇವರ ದೇವಂ।
ಖಂಡೇಂದು ಶೇಖರ [ನ] ಸುತ।
ಗಂಡರಗಂಡ ಪ್ರಚಂಡನಂ ಪೂಜಿಸಿದರ್ ॥೧೨೭॥

ಮಣಿ ಮಾಲಾದ್ಯಾಭರಣವ।
ಗಣನೆಯದಿಲ್ಲೆಂಬ ತೆರದಿ ದೇವಂಗಿತ್ತುಂ॥
ಫಣಿಮುಂ [ಡಲ] ಮಂಡನನಂ।
ಗುಣನಿಧಿಗಳ್ಪೂಜಿಸಲ್ಕೆ ವರಗಳ ನಿತ್ತಂ ॥೧೨೮॥

ಮತ್ತೇಭ॥

ತನಯಂ ತಾನೆ ಮಗನ್ಸೆಂದು ಮನದೊಳ್ಸಂತೋಷಿಸುತ್ತಾಗಳಾ।
ಜನನಾಥೋತ್ತಮ ಸೋಮಶೇಖರನು ಮೂಸೀಲಾಂಬಿಕಾದೇವಿಯುಂ।
ವಿನುತ ಶ್ರೀಯುತ ಸಂತಸಂದಳೆದು ತೂರ್ಯಧ್ವಾನ ಭೇರೀರವಂ।
ಘನ ಮಾರ್ಗಾಂಬರ ವ್ಯಾಪ್ತಿ ಪೊರ್ಕುರೊಲವಿಂದಾ ರಾಜಸದ್ಗೇಹಮಂ॥೧೯॥

ಕಂದ॥

ಸುಖಸಂಕಥಾ ವಿನೋದದಿ।
ಸಖಸಖಿಯುರ್ಗ್ಗಡಿ ರಾಜ್ಯಮಂ ಪಾಲಿಸುತಂ॥
ನಿಖಿಲ ಜಗವಿನುತ ನೃಪನಿರೆ।
ಸಖಿಯರೊಳುಡನಿರ್ದ ಸತಿಮುಪುಷ್ಪಿತೆಯಾದಳ್ ॥೧೩೦॥

ಮಾಣಿಕ್ಯದಲಂಕಾರಮ।
ನೇಣಾಕ್ಷ್ಯುರ್ಯಿದಿ ತೊಡಿಸಿ ಶೋಣಾಂಬರಮಂ॥
ಪಾಣಿಗೆ ವಿದ್ರುಮ ಲತಿಕೆಯ।
ಕಾಣಿಕೆಯಂ ಕೊಟ್ಟರೊಸೆದು ನೃಪಸತಿಗಾಗಳ್ ॥೧೩೧॥

ಅಂತುದಿನತ್ರಯಮಿರ್ದುನಿ।
ಗಂತರದಿಂ ಸ್ನಾನಗೈದು [ತುರ್ಯ] ದದಿನದೊಳ್ ॥
ಕಾಂತೆಗೆ ಮಜ್ಜನ ವೆಸಗಿದ।
ರೆಂತೆನೆ ಸದ್ಗಂಧಮಿಶ್ರಿತೋಷ್ಣೋದಕದಿಂ ೧೩೨॥

ಇಂಗಡಲಕುವರಿಯುಂಗವ।
ಭಂಗಿಯನನುಕರಿಪ ರಾಜ ಪತ್ನಿಗೆ ಮುದಮಂ॥
ಸಂಗೊಳಿಪ ನವ್ಯತರದೇ।
ವಾಂಗದ ವಸ್ತುಗಳೊಳಂಗದಟ್ಟಿಮನಿಟ್ಟರ್ ॥೧೩೩॥

ಮತ್ತೇಭ॥

ನವರತ್ನಾಂಕಿತ ಭೂಷಣೋನ್ನತ ನಿಕೇತಕ್ಕೈದಿಕಾಂತಾ ಜನಂ।
ವಿವಿಧೋತ್ತುಂಗಸುವರ್ಣಕಾಭರಣ ಮಂದೇವಾಂಗ ಚೇಲಂಗಳಂ।
ಶಿವಮುದ್ರಾಂಕ ಪವಿತ್ರ ದುಂಗುರಗಳಂ ತಂದಿತ್ತು ಕೈಗೆಯ್ದು ಭೂ।
ಧವ ಸತ್ಕಾಂತೆಯ ಗಂಧ ಪುಷ್ಪ ಚಯದಿಂ ಶೃಂಗಾರಮಂ ಮಾಡಿದರ್